# ವಾದಿರಾಜರ ಕನ್ನಡ ಕೃತಿಗಳು :

## ಒಂದು ಸಮಾಲೋಚನೆ


ಸಂಶೋಧಕರು

**ಎಚ್. ಜಿ. ಲೋಕೂರ**

ಪ್ರವಾಚಕರು

ಲಿಂಗರಾಜ ಮಹಾವಿದ್ಯಾಲಯ, ಬೆಳಗಾವಿ

ಮಾರ್ಗದರ್ಶಕರು

**ಡಾ. ಕೆ. ಜಿ. ಶಾಸ್ತ್ರಿ**

ನಿವೃತ್ತ ಪ್ರಾಧ್ಯಾಪಕರು

ಕನ್ನಡ ಅಧ್ಯಯನ ಪೀಠ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ


ಪಿಎಚ್. ಡಿ. ಪದವಿಗಾಗಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ

೧೯೮೬

<u>ಪ್ರಮಾಣ ಪತ್ರ</u>

ಶ್ರೀ ಎಚ್. ಜಿ. ಲೋಕಾಪುರ ಅವರು ಬರೆದು ಸಾದರಪಡಿಸಿದ "ವಾದಿರಾಜರ ಕನ್ನಡ ಕೃತಿಗಳು – ಒಂದು ಸಮಾಲೋಚನೆ" ಮಹಾಪ್ರಬಂಧ ಮೂಲ ಸಂಶೋಧನಾ ಕೃತಿಯಾಗಿದೆ. ಶ್ರೀಯುತರು ನನ್ನ ಮಾರ್ಗದರ್ಶನದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಸಂಶೋಧನೆ ಕೈಕೊಂಡಿದ್ದಾರೆ. ಈ ಮಹಾಪ್ರಬಂಧ ಇಡಿಯಾಗಿ ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಪ್ರಮಾಣ ಪತ್ರ ನೀಡುತ್ತೇನೆ.

15·3·1986

(ಡಾ. ಕೆ. ಜಿ. ಶಾಸ್ತ್ರಿ)
ಮಾರ್ಗದರ್ಶಕರು
ನಿವೃತ್ತ ಪ್ರಾಧ್ಯಾಪಕರು,
ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

# ಅರಿಕೆ

ಸೋದೆಯ ವಾದಿರಾಜರ ಮಠಕ್ಕೆ ನಡೆದುಕೊಳ್ಳುತ್ತಿದ್ದ ಗುರುಹಿರಿಯರಿಂದಾಗಿ ವಾದಿರಾಜರ ಆರಾಧ್ಯಮೂರ್ತಿ ಹಯವದನನ ಹೆಸರು ನನಗೂ, ಗುರುರಾಜಾದಿ ಅಭಿಧಾನ ತಮ್ಮಂದಿರಿಗೂ ಆಯಿತು. ವಾದಿರಾಜರ ವಿಷಯ ಸಂಶೋಧಿಸಬೇಕೆಂದೆನಿಸಿದರೂ ಲೌಕಿಕ ಪ್ರಯೋಜನಾ ಭಾವದಿಂದ ಉದಾಸೀನನಾಗಿದ್ದೆ. ಬೆಳಗಾವಿಗೆ ಸ್ನಾತಕೋತ್ತರ ಕೇಂದ್ರ ಬಂದು, ಅಧ್ಯಾಪನ ವಹಿಸಿಕೊಳ್ಳುವಾಗ ಸಂದರ್ಭವಶದಿಂದ ಪ್ರೇರಿತನಾಗಿ, ಲೇಖನವೊಂದರಲ್ಲಿದ್ದ ಈ ವಿಷಯದೊಡನೆ ಮಾರ್ಗದರ್ಶಿಗಳನ್ನು ಕಂಡೆ. ಅವರೂ ಒಪ್ಪಿದರು. ಅಧ್ಯಯನ ಪ್ರವೃತ್ತನಾಗಿ ಕನ್ನಡ ಜಿಲ್ಲೆಗಳ ಹೂವಿನಕೆರೆ, ಬಳಗಿ, ಸೋದೆಗಳಲ್ಲಿ ಕ್ಷೇತ್ರಕಾರ್ಯಗೈದು ಕರಡು ತಯಾರಿಸಿದೆ. ಅದರ ಬೆನ್ನಿಗೇ ಶುದ್ಧಪ್ರತಿಯೂ ಸಿದ್ಧವಾಯಿತು. ಹೀಗೆ ಹಿಡಿದ ಕಾರ್ಯ ಬಿಡದೆ ಪೂರೈಸುವಂತೆ ಪ್ರೇರಿಸಿ, ಅವಶ್ಯ ಸೇವೆ ಸ್ವೀಕರಿಸಿ ಅನುಗ್ರಹಿಸಿದವರು ವಾದಿರಾಜರೇ. ಇದಕ್ಕಿಂತ ಪರಮ ಫಲವೇನು?

ಇದರಲ್ಲಿ ನಾನೊಂದು ನಿಮಿತ್ತ, ಸಹಭಾಗಿ ನಿಮಿತ್ತ ಹಲವರು. ಮುಖ್ಯವಾಗಿ ಅಧ್ಯಯನಕ್ಕೆ ಅನುಕೂಲಿಸಿದ ಕರ್ನಾಟಕ ವಿಶ್ವವಿದ್ಯಾಲಯ ಹಾಗೂ ಮಾರ್ಗದರ್ಶನ ನಿರ್ವಹಿಸಿದ ಡಾ। ಕೆ.ಜಿ.ಶಾಸ್ತ್ರಿಗಳಂತೂ ಸರಿಯೇ; ಸೋದೆಯ ಶ್ರೀಗಳು ಮೊದಲಾಗಿ, ಡಾ। ವರದರಾಜ ರಾವ, ಡಾ। ಹಾವನೂರ, ಡಾ। ಕಾಪಸೆಯವರೂ ಪ್ರೋತ್ಸಾಹಿಸಿದ್ದರು. ಡಾ। ಸಿ.ವಿ. ರಂಗಸ್ವಾಮಿ, ಪ್ರಾ.ಬಿ.ಎಸ್.ಕಲ್ಲಾಪುರ, ಪ್ರಾ.ಯು.ಎಲ್.ಹಯವದನ ಆಚಾರ, ಶ್ರೀ ಪಿ.ಪಿ.ಕಟ್ಟಿ, ಶ್ರೀ ಪುಷ್ಕರ ಪ್ರಸಾದ, ಶ್ರೀ ಜಿ.ಜಿ.ಪುರಾಣಿಕ, ಶ್ರೀ ಗುರುರಾಜ ಜೋಶಿ, ಅಕ್ಕ ರಮಾಬಾಯಿ ಕುಪ್ಪಗಿ ಮೊದಲಾದವರು ಸಾಮಗ್ರಿ ಒದಗಿಸಿದರು. ಮನೆಯವರೆಲ್ಲ ಕರಡು ತಯಾರಿಸಲು ನೆರವಾದರು. ಶ್ರೀ ಗಿರೀಶ ಕುಲಕರ್ಣಿ ಬೆರಳಚ್ಚಿಟ್ಟರು. ಇನ್ನು ಮುಂದೂ ಕೆಲವರ ಸಹಭಾಗ ಇದರಲ್ಲಿರುವುದರಿಂದ, ಅವರಿಗೆಲ್ಲ ಮುಂದಾಗಿ ಕೃತಜ್ಞತೆ ಸೂಚಿಸುವೆ. ಪ್ರಸ್ತುತ ಅಧ್ಯಯನ ಇನ್ನೂ ಮುಂದಿನ ಅಧ್ಯಯನಕ್ಕೆ ನಾಂದಿಯಾಗಲೆಂದು ಹಾರೈಸುವೆ.

1587, ಮಾರುತಿ ಬೀದಿ,
ಬೆಳಗಾವಿ
14.3.1986.

ಎಚ್. ಜಿ. ಲೋಕೂರ

## ಒ ಳ ಪಿ ಡಿ

ಪುಟ

Introduction

## ಪ್ರಸ್ತಾವನೆ — ಅಧ್ಯಯನದ ಆವಶ್ಯಕತೆ

ಶ್ರೀ ವಾದಿರಾಜತೀರ್ಥರು ವಾಯುಪದಾರ್ಹ ಋಜುದೇವತೆಗಳಾಗಿದ್ದು, ಮಧ್ವ ಮತೋದ್ಧಾರಣ ವಿಸ್ತರಣಕ್ಕವತರಿಸಿ ವ್ಯಾಸ ದಾಸಕೂಟಗಳಲ್ಲಿ ಹಲವು ಕೃತಿ ರಚಿಸಿ ಹೆಸರಾದವರು. ಅವರ ಪವಾಡಪೂರ್ಣ ಮಹಾತ್ಮ್ಯಗಳನ್ನು ಹಲವರು ಬಣ್ಣಿಸಿದ್ದರೂ, ಮಾನವೀಯವಾಗಿ ಜೀವಿಸಿ ಗೈದ ಕಾರ್ಯವನ್ನು ಐತಿಹಾಸಿಕ ದೃಷ್ಟಿಯಿಂದ ಕೂಡ ಪರಿಶೀಲಿಸಬೇಕಿದೆ. ಅವರ ವ್ಯಕ್ತಿಮಹತ್ವ ಅಭಿನವ ಮಧ್ವರೆಂಬಂತೆ ವಿಖ್ಯಾತರಿಗಿಂತಲೂ (ಅವರ ಕೃತಿಗಳಿಗಿಂತಲೂ) ಹಿರಿದಾಗಿದ್ದು ಅದರ ಪರಿಚಯ ನಮ್ಮವರಿಗನ್ನೂ ಒದಗಬೇಕಿದೆ.

ಧರ್ಮಕಾರ್ಯಗಳೊಡನೆ ಸಮಾಜದ ಹಿತಕ್ಕಾಗಿಯೂ ದುಡಿದ ಅವರು ಪಂಡಿತರಿಗಾಗಿ ಸಂಸ್ಕೃತದಲ್ಲಿ ಮಾತ್ರವಲ್ಲ, ಜನಸಾಮಾನ್ಯರಿಗಾಗಿಯೇ ಕನ್ನಡದಂತೆ ತುಳುವಿನಲ್ಲೂ ಕೃತಿ ರಚಿಸಿ ಅನುಗ್ರಹಿಸಿದರು. ಆದರೆ ಅವರ ಅಸಾಧಾರಣ ಪ್ರತಿಭೆಯಿಂದ ಹೊಮ್ಮಿದ ಕೃತಿಗಳ ಅಧ್ಯಯನ ಮಾತ್ರ ಇದುವರೆಗೆ ಆಗಬೇಕಾದಷ್ಟು ಆಗಲಿಲ್ಲ. ಪಂಡಿತರು ಕೆಲ ಸಂಸ್ಕೃತ ಕೃತಿಗಳನ್ನು ಗಮನಿಸಿದ್ದರೂ, ಕನ್ನಡ ಕೃತಿಗಳತ್ತ ನಮ್ಮವರ ಲಕ್ಷ್ಯ ಹರಿದಿಲ್ಲ. ಹರಿದಾಸ ಸಾಹಿತ್ಯದಲ್ಲಿ ಹೆಚ್ಚು ಕೃತಿ ರಚಿಸಿದ ಪುರಂದರ— ಕನಕದಾಸರನ್ನು ಪರಿಚಯಿಸಿಕೊಂಡಿದ್ದರೂ, ಅವರ ಹಿಂದುಮುಂದಿನ ಕಾಲದಲ್ಲೂ ಬದುಕಿದ್ದು ಮಧ್ವ ಮತವನ್ನು ಇನ್ನೂ ಹೆಚ್ಚು ಚೆನ್ನಾಗಿ ಕನ್ನಡಿಸಿದ ವಾದಿರಾಜರ ಕೃತಿ ಪರಿಚಯ ಕನ್ನಡಿಗರಿಗೆ ತಕ್ಕಷ್ಟಾಗಿಲ್ಲ. ನಮ್ಮ ಲೇಖಕರು ಪುರಂದರ— ಕನಕದಾಸರ ತರುವಾಯ ವಾದಿರಾಜರ ಬಗ್ಗೆ ತುಸು ಬರೆದು ಇವರದು 'ಶಾಸ್ತ್ರ ಕಾವ್ಯ' ಎಂದುಬಿಡುವುದು ರೂಢಿಯಾಗಿದೆ. ಇದರಿಂದ "ಈ ಮಹಾಮುನಿವರ ಹಾಗೂ ಇವರ ಕೃತಿರತ್ನಗಳ ಪ್ರಚಾರ ಏನೇನೂ ಸಾಲದೆ ಬಹಳ ಅನ್ಯಾಯವೇ ಆಗಿದೆ. (ಅಥವಾ) ಮಹಾತ್ಮರಿಗೆ ಅನ್ಯಾಯವಾಗುವುದೆಂದರೇನು? ನಾವೇ ಬಹಳಷ್ಟು ವಂಚಿತರಾಗಿದ್ದೇವೆ. ಈ ದೊಡ್ಡ ಕೊರತೆಯನ್ನು ಕಂಡುಕೊಂಡು ಇದನ್ನು ತುಂಬುವ ದಿಶೆಯಲ್ಲಿ ಪ್ರಾಮಾಣಿಕ ಪ್ರಯತ್ನ ನಡೆಯುವುದು ಅತ್ಯಂತ ಶ್ರೇಯಸ್ಕರವಾಗಿದೆ." (— ಶ್ರೀ ವಾದಿರಾಜ ಸ್ತೋತ್ರ ಮಂಜರಿ, ಮುನ್ನುಡಿ — ಸುಬ್ರಹ್ಮಣ್ಯ ಮಠದ ವಿದ್ಯಾಭೂಷಣತೀರ್ಥರು).

ವಾದಿರಾಜರ ಕನ್ನಡ ಕೃತಿಗಳನ್ನು ಉಪಲಬ್ಧವಾದಂತೆ ಅಚ್ಚಿಸುವ ಕಾರ್ಯ ಬೆಳಗಾವಿ, ಉಡುಪಿ, ಬೆಂಗಳೂರುಗಳಲ್ಲಿ ಕಳೆದ ಶತಕದ ಕೊನೆಗೂ ಈ ಶತಕದ ಮೊದಲಿಗೂ ನಡೆದಿವೆ. ಆದರೆ 1964ರಲ್ಲಿ ಪುರಂದರದಾಸರ 400ನೆಯ ಪುಣ್ಯದಿನಾಚರಣೆ ನಿಮಿತ್ತ ಅವರ ಕೃತಿಗಳನ್ನು (ನಂತರ ಕನಕದಾಸರ ಕೃತಿಗಳನ್ನೂ) ಸಂಶೋಧಿಸಿ ಪ್ರಕಟಿಸಿದಂಥ ಪ್ರಯತ್ನ ವಾದಿರಾಜರ 500ನೆಯ ಜನ್ಮದಿನಾಚರಣ ಸಂದರ್ಭದಲ್ಲಿ ಸಾರ್ವಜನಿಕವಾಗಿ ನಡೆಯಲಿಲ್ಲ. ಕಾಕತಾಳೀಯ ವೆಂಬಂತೆ ಅದೇ ವರ್ಷ (1980) ಮೈಸೂರು ವಿಶ್ವವಿದ್ಯಾಲಯ ಸಂಶೋಧಿಸಿ ಪ್ರಕಟಿಸು ತ್ತಿರುವ ಸಮಗ್ರ ದಾಸಸಾಹಿತ್ಯ ಮಾಲೆಯಲ್ಲಿ 'ವಾದಿರಾಜರ ಕೃತಿಗಳು' ಬಂದಿವೆ. ಇದರಲ್ಲಿ 300ಕ್ಕೂ ಹೆಚ್ಚು ಕಿರು ಕೃತಿಗಳಿದ್ದರೂ 'ವೈಕುಂಠ ವರ್ಣನೆ ಲಕ್ಷ್ಮೀಶೋಭಾನೆ' ಯಂಥ ಬಿಡಿ ಕಾವ್ಯ ಸೇರಿಲ್ಲ. ಇವನ್ನೂ ಇನ್ನು ಕೆಲ ಬಿಡಿಕೃತಿಗಳನ್ನೂ ತತ್ವ ಪ್ರಮೇಯ ದೃಷ್ಟಿಯಿಂದ ವ್ಯಾಖ್ಯಾನಿಸುವ ಪ್ರಯತ್ನ ದಾವಣಗೆರೆಯ ದಿ.ಬಿ.ಭೀಮ ರಾಯರಿಂದ ನಡೆದಿವೆ. 1930ರಲ್ಲಿ ಅಚ್ಚಾದ 'ಶ್ರೀಕೃಷ್ಣ ಬಾಲಲೀಲೆ' ಎಂಬ ದೀರ್ಘ ಕಾವ್ಯ ಮಾತ್ರ 'ಕವಿಚರಿತ್ರೆ – ಸಾಹಿತ್ಯಚರಿತ್ರೆ'ಯ ಅವಲೋಕನಗಳಿಂದ ಕಣ್ತಪ್ಪಿಸಿಕೊಂಡು 'ಕನ್ನಡ ಗ್ರಂಥಸೂಚಿ'ಯಲ್ಲಿ ಉಲ್ಲೇಖವಾಗಿದೆ. ಅಲ್ಲದೆ ಬಿಡಿ ಪ್ರಕಟನೆ ಹಾಗೂ ತೋಂಡೀ ಸಂಪ್ರದಾಯದ ಕೆಲವು ಹೆಚ್ಚಿನ ಹಾಡು ಅವರ ಕೃತಿಗಳಿನ್ನೂ ಇವೆ ಎಂಬುದರತ್ತ ನಿಶ್ಚಿತ ತೋರ ಬೆರಳಾಗಿವೆ. ಇವನ್ನು ಸಂಪಾದಿಸಿ ಪ್ರಕಟಿಸುವುದು ಸಾಂಘಿಕವಾಗಿ ನಡೆಯ ಬೇಕಾದ ಅವಶ್ಯಕತೆಯೆನಿಸಿದೆ. ಮಧ್ವರ ತಾತ್ಪರ್ಯ ನಿರ್ಣಯಕ್ಕೆ ಇವರು ಕನ್ನಡ ಗದ್ಯದಲ್ಲಿ ರಚಿಸಿದರೆಂಬ ವ್ಯಾಖ್ಯಾನ ಭಾಷಾಶೈಲಿಯ ದೃಷ್ಟಿಯಿಂದ ವಿವಾದ್ಯವಾದರೂ 'ಮುದ್ರಾ ಮಂಜೂಷ'ದಂತೆ ಆಕರ್ಷಕವಾಗಿರುವುದರಿಂದ ಇನ್ನೂ ಸಂಶೋಧಿಸಿ ಪ್ರಕಟಿಸಬೇಕಿದೆ.

ವಾದಿರಾಜರ ಸಂಸ್ಕೃತ ರಚನೆ ಬಹಳವಾದ್ದರಿಂದಲೂ, ಕೆಲವು ಪಂಡಿತರಿಂದ ಅಭ್ಯಸಿತ ವಾದ್ದರಿಂದಲೂ, ಪ್ರಸ್ತುತ ಕನ್ನಡ ಕೃತಿಗಳನ್ನಷ್ಟೇ ಒಂದು ಅಧ್ಯಯನ ವಿಷಯವಾಗಿಟ್ಟು ಕೊಂಡು ಕಾವ್ಯ – ತತ್ವಗಳೆರಡರ ದೃಷ್ಟಿಯಿಂದಲೂ ಅವುಗಳ ಆಂತರ್ಯ ಸಮಾಲೋಚಿಸುವ ಪ್ರಯತ್ನ ಇಲ್ಲಿದೆ. ಅದಕ್ಕೆ ಮುನ್ನ ಹರಿದಾಸ ಸಾಹಿತ್ಯದ ಹಿನ್ನೆಲೆ – ವಾದಿರಾಜರ ವ್ಯಕ್ತಿ ಮಹತ್ವ – ಸಂಸ್ಕೃತ ಕೃತಿಗಳ ಸ್ಥೂಲ ಸಮಾಲೋಚನೆಗಳೂ, ನಂತರ ಸಂಸ್ಕೃತ – ಕನ್ನಡ ಕೃತಿಗಳ ಸಹ ಸಮಾಲೋಚನೆ ಹಾಗೂ ಪ್ರಭಾವಗಳ ಹಿನ್ನೋಟ – ಮುನ್ನೋಟಗಳೂ, ಕೊನೆಗೆ ಅಧ್ಯಯನದ ಸಾಧನೆಯೂ ನಿರೂಪಿತವಾಗಿವೆ.

"ಇವರ ಕನ್ನಡ ಕೃತಿಗಳ ಬಗ್ಗೆ ವಿಶೇಷ ಅಧ್ಯಯನ ಮಾಡಿ ಪ್ರತ್ಯೇಕ ವಿವರಣಾತ್ಮಕ ವಿಮರ್ಶಾತ್ಮಕ ನಿಬಂಧ ಬರೆಯಬಹುದು, ಡಾಕ್ಟರೇಟ ಪಡೆಯಬಹುದು" ಎಂಬ ಸೂಚನೆ ವಿದ್ವಾನ ಕೆ. ವೆಂಕಟರಾಮಾಚಾರ್ಯರ 'ವಾದಿರಾಜರ ಕನ್ನಡ ಕೃತಿಗಳು' ಎಂಬ ಲೇಖನದಲ್ಲಿ (ಕನ್ನಡ ನುಡಿ, ಸಪ್ಟೆಂಬರ 1967) ಇದ್ದುದನ್ನು ಇಲ್ಲಿ ನೆನೆಯುವೆ.

# 1. ಹರಿದಾಸ ಸಾಹಿತ್ಯದ ಹಿನ್ನೆಲೆ

## (1) ಮಧ್ವಾಚಾರ್ಯರು (1238– 1317)

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್, ತತ್ವತಃ
ಭೇದೋ, ಜೀವಗಣಾ ಹರೇರನುಚರಾ, ನೀಚೋಚ್ಚಭಾವಂ ಗತಾಃ ।
ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

ವ್ಯಾಸರಾಯರು ಕಾಂಚಿಯಲ್ಲಿ ಹೇಳಿದರೆಂಬ ಶ್ಲೋಕವಿದು. ಅವರ ಗುರು ಶ್ರೀಪಾದರಾಯರ 'ವಾಗ್ವಜ್ರ' ಎಂಬ ಗ್ರಂಥದಲ್ಲುಕ್ತವಾಗಿದೆ. 1) ಹರಿಯೇ ಸರ್ವೋತ್ತಮ; 2) ಜಗತ್ತು ಸತ್ಯ; 3) ಜಡ ಜೀವ, ಜಡ– ಜಡ, ಜೀವ– ಜೀವ, ಜಡ– ಪರಮಾತ್ಮ, ಜೀವ– ಪರಮಾತ್ಮ ಎಂಬುವು ಪಂಚಭೇದ; 4) ಜೀವ (ಪ್ರತಿಬಿಂಬ)ರು ಹರಿ (ಬಿಂಬ) ಅಧೀನ; 5) ಹಾಗೂ ತಾರತಮ್ಯಯುಕ್ತರು; 6) ಅವರ ಸ್ವರೂಪಾನುಗುಣ ಸುಖ ಪ್ರಾಪ್ತಿ ಮೋಕ್ಷ; 7) ಶುದ್ಧ ಭಕ್ತಿಯೇ ಮುಕ್ತಿಸಾಧನ; 8) ಪ್ರತ್ಯಕ್ಷ ಅನುಮಾನ ಆಗಮ ಮೂರು ಪ್ರಮಾಣ; 9) ಎಲ್ಲ ವೇದಗಳಿಂದ ಮಾತ್ರ ಹರಿಯನ್ನು ಅರಿಯಬಹುದು. ಈ 9 ಮಧ್ವಮತ ಪ್ರಮೇಯಗಳನ್ನು ಚೈತನ್ಯ ಪಂಥದ ವಿದ್ಯಾಭೂಷಣ ಬಲದೇವನು ತನ್ನ 'ಪ್ರಮೇಯ ರತ್ನಾವಳಿ'ಯಲ್ಲಿ 'ನವಪ್ರಮೇಯ' ಎಂದಿದ್ದಾನೆ.

ಇವುಗಳಲ್ಲಿ ನಾಲ್ಕನೆಯದು ನಾವೆಲ್ಲ ಹರಿಯ ಅನುಚರ ಎಂದರೆ ದಾಸ ಎಂಬಂಶವನ್ನು ಸೂಚಿಸಿದೆ. ಲಕ್ಷ್ಮಿ ಕೂಡ ಹರಿಯ ದಾಸಿಯಾದರೂ ಆಕೆ ನಿತ್ಯಮುಕ್ತಳು. ಇನ್ನುಳಿದ ಜೀವರಲ್ಲಿ ಉತ್ತಮನಾದ ವಾಯು ದಾಸೋತ್ತಮ. ತ್ರೇತಾಯುಗದಲ್ಲೀತ ಹನುಮ, ದ್ವಾಪರದಲ್ಲಿ ಭೀಮ, ಕಲಿಯುಗದಲ್ಲಿ ಮಧ್ವ. ಅಂತೆಯೇ ವಾದಿರಾಜರು 'ಜಯ ಜಯತು ಶುಭಕಾಯ' ಎಂಬ ಕೀರ್ತನೆಯ ಕೊನೆಗೆ –

ಪನ್ನಂಗಶಯನ ಶ್ರೀ ಹಯವದನದಾಸರೊಳು
ನಿನ್ನ ಪೋಲುವರುಂಟೆ ಮಧ್ವಮುನಿರಾಯ ॥

ಎಂದು ಉದ್ಗರಿಸಿದ್ದಾರೆ. ಪುರಂದರದಾಸರು ಕೂಡ –

ಮಹಾಭಾಷ್ಯಕಾರರೇ ಗುರು ಮುಖ್ಯಪ್ರಾಣರು
ಗುರು ಮುಖ್ಯಪ್ರಾಣಪತಿ ನಮ್ಮ ಪುರಂದರವಿಠಲನ ದಾಸರಿಗೆ ನಮೋ

ಎಂದಿದ್ದಾರೆ. ಹೀಗೆ ಪಾರಮಾರ್ಥಿಕವಾಗಿ ಮಧ್ವರು ಹರಿದಾಸಾಗ್ರಣಿ.[1]

ಅಲ್ಲದೆ, ಹಡಗಿನಿಂದ ಮಲ್ಪೆಗೆ ಬಂದ ಕೃಷ್ಣಮೂರ್ತಿಯನ್ನು ಕ್ರಿ.ಶ.ಸು. 1264ರಲ್ಲಿ ಸಂಕ್ರಾಂತಿಯಂದು ಉಡುಪಿಗೆ ತರುತ್ತ ಅವರು ಹಾಡಿದ 'ದ್ವಾದಶಸ್ತೋತ್ರ' ಸಂಸ್ಕೃತದಲ್ಲಿದ್ದರೂ, 'ಆನಂದತೀರ್ಥ' ಎಂಬುದನ್ನೇ ಅಂಕಿತದಂತೆ ಹೊಂದಿ, ಸುಂದರವಾದ 12 ಗೀತಗಳ ಮಾಲಿಕೆಯಾಗಿದ್ದು 'ಹರಿಗೀತೆ' (5— 9) ಎನಿಸಿ ಹರಿದಾಸರ ಹಾಡುಗಳಿಗೆ ಪ್ರೇರಣೆ ಒದಗಿಸಿದೆ. 'ಮಧ್ವ ಸಂಪ್ರದಾಯದ ಕೀರ್ತನೆಗಳಿಗೆ ಮೂಲ ಪ್ರೇರಣೆ ಮಧ್ವಾಚಾರ್ಯರ ದ್ವಾದಶಸ್ತೋತ್ರದಲ್ಲಿದೆ ಎಂಬುದು ಅನೇಕ ವಿದ್ವಾಂಸರ ಮತ'. (ಎಚ್.ಎಸ್.ವೆಂಕಟೇಶಮೂರ್ತಿ, ಕೀರ್ತನಕಾರರು, ಪು.14). ಈ ರಚನೆಯ ಪ್ರೇರಣಾ ದೃಷ್ಟಿಯಿಂದಲೂ ಮಧ್ವರು ಮೊದಲ ಹರಿದಾಸರು.

ಇನ್ನು, ವೈದಿಕ— ವೈಷ್ಣವ ಧರ್ಮ ಪುರಾತನವಾದರೂ, ನಾಸ್ತಿಕವಾದವನ್ನು ಹೂಡಿದ ಚಾರ್ವಾಕ, ಅವೈದಿಕ ಮತಗಳೆನಿಸಿದ ಬೌದ್ಧ ಜೈನ, ವೇದಾಂತಿಕವಾದರೂ ಜೀವ ಬ್ರಹ್ಮೈಕ್ಯ ಹೇಳಿದ ಅದ್ವೈತ ಇಲ್ಲ ಭೇದವೆಂದರೂ ಮುಕ್ತಿಯಲ್ಲಿ ಅವರಿಗೆ ಬಹಳ ಭೇದವಿಲ್ಲೆಂದ ವಿಶಿಷ್ಟಾದ್ವೈತ, ಮತ್ತು ಹರಿಹರಾದಿ ಸಾಮ್ಯ ಸೂಚಿಸಿದ ಭಾಗವತ — ಈ ಎಲ್ಲ ಪಂಥಗಳನ್ನು ವಿಮರ್ಶಿಸಿ ಮಧ್ವರು ಮತ್ತೆ ಮೂಲ ಮತವನ್ನು ದ್ವೈತ ಎಂಬಂತೆ ಪುನರುಜ್ಜೀವಿಸಿದರು.[2] ಇದನ್ನೇ ಪುರಂದರದಾಸರು ಹೀಗೆ ಹಾಡಿದರು ಸುಳಾದಿಯಾಗಿ—

ಒಬ್ಬ ಆಚಾರ್ಯನು ದೈವವೇ ಇಲ್ಲವೆಂದ ( = ಚಾರ್ವಾಕ)
ಒಬ್ಬ ಆಚಾರ್ಯನು ದೈವಕೆ ಎಂಟೆ ಗುಣವೆಂದ ( = ನೈಯಾಯಿಕ— ಕಣಾದ ಗೌತಮ)
ಒಬ್ಬ ಆಚಾರ್ಯನು ನಿರ್ಗುಣ ನಿರಾಕಾರ ನಿರವಯವನೆಂದ
ಕಡೆಯಲಿ ತಾನೆ ದೈವವೆಂದ ( = ಅದ್ವೈತ )

---

1. 'ತದ್ದಾಸಾನುಕ ವಾದಿರಾಜ ರಚಿತ' (ರುಕ್ಮಿಣೀಶ ವಿಜಯ 19,38) ಎಂಬಲ್ಲಿ ತದ್ದಾಸ = ಮಧ್ವರು. 'ಹರಿ ಭಕ್ತಾಗ್ರಣೀ ಮಧ್ವೋ ಗುರುಶ್ಚಪ್ರೀಯತಾಂ ಮಮ' (ಭಾವಪ್ರಕಾಶಿಕಾಂತ್ಯ). 'ವಿಷ್ಣುದಾಸ' ಮಧ್ವನಾಮ, 40.

2. With prophetic vision Madhva rose to strengthen the national conscience by turning it once more towards the buoyant realism of the Vedas, the Upanishads and the Puranas (S.Mahishi, ಸಂಕೀರ್ಣ, iii).

ಒಬ್ಬರೂ ವೇದಾರ್ಥವನರಿತೂ ಅರಿಯರು
ಒಬ್ಬ ಮಧ್ವಾಚಾರ್ಯರೇ ಪುರಂದರವಿಠಲ
ನೊಬ್ಬನೇ ದೈವವೆಂದು ತೋರಿಸಿಕೊಟ್ಟರಾಗಿ ‖ 1 ‖ ( = ದ್ವೈತ)

ವೈದಿಕ ಮತದಲ್ಲಿ ನಡೆವೆಂದು ತಾವು
ವೈಷ್ಣವವಂ ಬಿಟ್ಟುಕೊಟ್ಟರು ಕೆಲವರು ( = ಮೀಮಾಂಸಕ, ಶೈವ)
ವೈಷ್ಣವ ಮತದಲಿ ನಡೆದವೆಂದು
ವೈದಿಕವಂ ಬಿಟ್ಟುಕೊಟ್ಟರು ಕೆಲವರು ( = ವಿಶಿಷ್ಟಾದ್ವೈತ)

ವೈದಿಕ ವೈಷ್ಣವ ಒಂದೇ ಎಂದು
ಮಧ್ವಮುನಿ ಪ್ರತಿಪಾದಿಸಿದ ಪುರಂದರವಿಠಲ ಮೆಚ್ಚ ‖ 5 ‖ ( = ದ್ವೈತ)

ಈ ಸುಳಾದಿಯ ಚರಣಾಂತ್ಯಗಳಲ್ಲಿ ಹರಿಸರ್ವೋತ್ತಮತ್ವ ಸೂಚಿತವಾಗಿದೆ. ಆದರೆ 'ಶಿವಾನಂದಲಹರಿ– ಭಜಗೋವಿಂದಂ' ಸ್ತೋತ್ರ ಮಾಡಿದ ಶಂಕರಾಚಾರ್ಯರ ಕಾಲದಿಂದಲೂ, ಹರಿಹರ ಅಭೇದ್ಯಸೂಚಕ ಪಂಥವನ್ನು ಭಾಗವತ ಪಂಥವೆನ್ನುವ ಶಿಥಿಲಾರ್ಥಕ ಸಂಪ್ರದಾಯ ಒಂದಿತ್ತು. ಶಂಕರರು ವಿಷ್ಣುಪುರಾಣವನ್ನಲ್ಲದೆ, ಬಹುಶಃ ತರುವಾಯದ್ದಾಗಿ ಭಾಗವತವನ್ನು ಲಕ್ಷಿಸಿಲ್ಲವೇನೊ![3] ರಾಮಾನುಜರು ಭಾಗವತವನ್ನುಲ್ಲೇಖಿಸದಿದ್ದರೂ ಅಲ್ಲಿಂದಲೇ ತಮ್ಮ ತತ್ವಗಳಿಗೆ ಪ್ರೇರಣೆ ಪಡೆದಂತಿದೆ. ಮಧ್ವರು ಹುಟ್ಟಿ ದೀಕ್ಷೆ ಪಡೆದುದು ಹಳೆಯ ಭಾಗವತ ಸಂಪ್ರದಾಯದಲ್ಲಿ.[4] (ಆ ಪಂಥಕ್ಕೇ ಸೇರಿದವರು ನಮ್ಮ ಆದ್ಯರು, ಆರಾಧ್ಯರು, ಕುಮಾರವ್ಯಾಸಾದಿ ಕವಿಗಳು ಹಾಗೂ ದಾಸದೀಕ್ಷೆ ವಹಿಸುವ ಮೊದಲಿನ ಪುರಂದರರು). ಆದರೆ ಭಾಗವತಕ್ಕೆ 'ತಾತ್ಪರ್ಯನಿರ್ಣಯ' ಮಾಡಿದ ಮಧ್ವರು ಪ್ರಪಂಚಕ್ಕೆ ಅದರ ಮಹತ್ವವನ್ನೊರೆದು ಮೊದಲಿಗರಾದರು. 'Its greatness was first recognised and proclaimed to the world boldly by Sri Madhva' (-U.Venkata Krishnarao, Thus sung Vadiraja, p.48). ಮತ್ತು ಈ ಭಾಗವತ ಧರ್ಮವೇ ವೈಷ್ಣವ ಧರ್ಮ ಎಂದು ಸ್ಪಷ್ಟವಾಗಿ ಸಾರಿದರು. (ಭಾರತ ತಾತ್ಪರ್ಯ ನಿರ್ಣಯದ 18ನೆಯ

---

3. ಹಸ್ತಾಮಲಕರು ಶಂಕರಾಜ್ಞೆಯಂತೆ ಪಂಚಮುದ್ರೆಯ ವಿಪ್ರರನ್ನೂ ಕೃಷ್ಣನನ್ನೂ ಉಡುಪಿಯಲ್ಲಿರಿಸಿದಂಶವಿರುವ ಆನಂದಗಿರಿಯ 'ಶಂಕರ ವಿಜಯ' ಈಚಿನ ಗ್ರಂಥವಾಗಿ, ಪಂಚಮುದ್ರೆಯ ಪ್ರಸ್ತಾಪಯುಕ್ತ.

4. ಅನಂತೇಶ್ವರ– ಚಂದ್ರಮೌಳೀಶ್ವರ ದೇಗುಲಗಳ ಶಿವಬೆಳ್ಳಿ > ರಜತ ಪೀಠಪುರ ಉಡುಪಿಯಾಗಿ ವೈಷ್ಣವ ಕ್ಷೇತ್ರವೆನಿಸಿತು.

ಅಧ್ಯಾಯದ ಆದಿಯಲ್ಲಿ ಶುದ್ಧ ಭಾಗವತಧರ್ಮೀಯನೆಂದ ಭೀಮನನ್ನು 21–105ರಲ್ಲಿ ವೈಷ್ಣವಾಗ್ರಣಿ ಎಂದರು)· 'Bhagavatadharma is essentially identical with Vaishnava Theism in its broadest philosophical sense.' ( B. N. K. Sharma, ಮಹಾಭಾರತ, ii)· ಮಧ್ವರ 'ಬ್ರಹ್ಮಸೂತ್ರ–ಗೀತಾ–ಋಗ್ ಭಾಷ್ಯ'ಗಳು ಹರಿಯು ಸರ್ವನಾಮವಾಚ್ಯ ಎಂಬ ವೈದಿಕ ಪ್ರಮೇಯಾನುಸಾರ, ಅಂತೂ ದೇವತಾನಾಮಪದವಾಚ್ಯ ಅಂತರ್ಯಾಮಿಬಿಂಬತ್ವೇನ, ದೇವತಾರ್ಚನೆಯ ಸಮನ್ವಯ ಸಾಧಿಸಿದ್ದು, ಭಾಗವತಧರ್ಮದ ಗೆಲುವೆನಿಸಿತು· ಜೊತೆಗೆ, ಕರ್ಮವು ನಿಷ್ಕಾಮವಾದೊಡನೆ ಜ್ಞಾನಯುಕ್ತವಾಗಿ ಭಕ್ತಿಯಿಂದರ್ಪಿತವಾಗುವ ಸಮನ್ವಯವೂ ಸಿದ್ಧಿಸಿತು· 'ಭಾರತ ತಾತ್ಪರ್ಯ ನಿರ್ಣಯ'ವು ಮಾಹಾತ್ಮ್ಯ ಜ್ಞಾನಯುಕ್ತ ಸುದೃಢ ಸ್ನೇಹವೇ ಭಕ್ತಿ ಎಂದೂ, ಮುಕ್ತಿಗದೇ ಮಾರ್ಗವೆಂದೂ ಘೋಷಿಸಿತು·

ಮಾಹಾತ್ಮ್ಯ ಜ್ಞಾನಪೂರ್ವಸ್ತು ಸುದೃಢ: ಸರ್ವತೋಧಿಕ:
ಸ್ನೇಹೋ ಭಕ್ತಿರಿತಿ ಪ್ರೋಕ್ತ: ತಯಾ ಮುಕ್ತಿರ್ನಚಾನ್ಯಥಾ ॥ 1, 86·

ಈ ಭಗವನ್ಮಹಿಮೆ ಅರ್ಥಪೂರ್ಣವೆನಿಸಲು ಜಗತ್ಸತ್ಯತ್ವವೂ, ಭಕ್ತಿಗೆ ಅನ್ವರ್ಥಕತೆಯೊದಗಲು ದ್ವೈತವೂ ಅನಿವಾರ್ಯ·[5] ಅಂತೆಯೇ ತುಕಾರಾಮನೂ ಅದ್ವೈತವನ್ನಲ್ಲಗಳೆಯುವಂತಾಯಿತು·

ಅದ್ವೈತೀ ತೋ ಮಝೇ ನಾಹೀ ಸಮಾಧಾನ
ಗೋಡ ಹೇ ಚರಣ ಸೇವಾ ತುಝೀ ।

(ಜ್ಞಾನದೇವ–ಚೈತನ್ಯ–ವಲ್ಲಭಾಚಾರ್ಯರೂ ಅಷ್ಟೇ)· ಇಂಥ ಪರಿಶುದ್ಧ ಭಾಗವತ ಧರ್ಮವನ್ನು ಆಂಶಿಕವಾಗಿ ಅಭಿವ್ಯಕ್ತಿಗೊಳಿಸಿದ್ದೇ ಹರಿದಾಸರ ಸಾಹಿತ್ಯ· ಅದನ್ನವರು ಜನತೆಗೂ

---

5. In advaitic, monistic or absolutistic systems of thought there is absolutely no room or scope for any devotion or worship, as the finite is in face timelessly identical with the Infinite. It is only in the system of Madhva that there is fullest metaphysical scope and satisfaction, spiritual sanction and religious rationalism in the planned program of Bhakti as the only means of securing Mukti. (Dr.R.Nagaraja Sharma, ಜಗನ್ನಾಥದಾಸರು, ಮುನ್ನುಡಿ, 13)

ಮುಟ್ಟಿಸಲು ಮುಂದಾದುದು ಅದರ ಸಾಮಾಜಿಕ ಮೌಲ್ಯಕ್ಕೆ ಹೆಗ್ಗುರುತು. 'ಈಗ ಕನ್ನಡವನ್ನು ಮತ್ತು ಕೀರ್ತನ ಪ್ರಕಾರವನ್ನು ಧರ್ಮಪ್ರಚಾರ ಮತ್ತು ಸಮಾಜ ಸುಧಾರಣೆಗೆ ಸಾರ್ಥಕವಾಗಿ ಬಳಸಿದವರು ದ್ವೈತ ಸಂಪ್ರದಾಯದ, ಮಧ್ವಮತಾನುಯಾಯಿಗಳಾದ, ಭಾಗವತ ಮನೋಧರ್ಮದ ಹರಿದಾಸರು' (ಎಚ್.ಎಸ್.ವೆಂಕಟೇಶ ಮೂರ್ತಿ, ಕೀರ್ತನಕಾರರು, ಪು.13). ಹರಿಯ ಮತವನ್ನಿಂತು ಜನತೆಗೆ ಮುಟ್ಟಿಸಿ ಸಾರ್ಥಕತೆ ಪಡೆದ ಹರಿದಾಸವರೇಣ್ಯರು ಮಧ್ವರು. 'ಅವರನ್ನು ಪ್ರಥಮ ಹರಿದಾಸರೆಂದು ಕರೆಯುವುದು ಎಲ್ಲ ರೀತಿಯಿಂದಲೂ ಸಮರ್ಪಕ' (ಎಸ್.ಆರ್. ಎಕ್ಕುಂಡಿ, ಹರಿದಾಸ ಸಾಹಿತ್ಯ ಸಮೀಕ್ಷೆ, ಪು.97). ಆ ದೇವತಾ ಪುರುಷರ 37 ಸರ್ವಮೂಲಗ್ರಂಥಗಳು ದೇವವಾಣಿಯಲ್ಲಿದ್ದರೂ ಅವುಗಳ ಸಾರ ಮಿಕ್ಕ ಹರಿದಾಸರಿಂದ ಕನ್ನಡ ಜನವಾಣಿಗೆ ಭಟ್ಟಿ ಇಳಿಯಿತು, ಸಂಪೂರ್ಣ ಸಾರ್ಥಕವೆನಿಸಿತು.

### (2) ನರಹರಿತೀರ್ಥರು (1243 – 1333)

ಮಧ್ವ ಸಿದ್ಧಾಂತವನ್ನು ಕನ್ನಡಿಸುವ ಕಾರ್ಯ ಅವರ ಶಿಷ್ಯ ನರಹರಿತೀರ್ಥರಿಂದಲೇ ಮೊದಲಾಯಿತು. 'The regular history of Haridasa Kuta as at at present traceable is thus only from the time of Narahari Tirtha (B.N.K.Sharma, History of Dvaita Vedanta II- 317). ಕನ್ನಾಡಿನ ಶಿವಶರಣರೂ ಮಹಾರಾಷ್ಟ್ರದ ಸಂತರೂ ಮತ ಪ್ರಸಾರಕ್ಕೆ ಜನವಾಣಿಯನ್ನು ಆಗಲೇ ಬಳಸತೊಡಗಿದ್ದರಿಂದ, ಮಧ್ವಮತ ನಿರೂಪಣೆಗೆ ಕನ್ನಡವನ್ನು ಬಳಸಲು ಹರಿದಾಸರು ತಡಮಾಡಲಿಲ್ಲ.

ಮಧ್ವರ ಸಾಕ್ಷಾತ್ ಶಿಷ್ಯರಲ್ಲಿ 2ನೆಯವರಾದ ನರಹರಿತೀರ್ಥರು ಪೂರ್ವಾಶ್ರಮದಲ್ಲಿ ಶಾಮಶಾಸ್ತ್ರಿ. ಪ್ರಾಯದಲ್ಲಿ 12 ವರ್ಷ ಕಳಿಂಗಾಧಿಪನ ಅಧಿಕಾರಿಯಾಗಿದ್ದರು. ಮಧ್ವರು 1263ರ ಸುಮಾರು ತಮ್ಮ ಮೊದಲ ಬದರೀಯಾತ್ರೆಯಿಂದ ಮರಳುವಾಗ ತೋರಿದ ವಾದವೈಖರಿಗೆ ಶರಣಾಗಿ ಶಿಷ್ಯರೆನಿಸಿದರು. ಹಂಸನಾಮಕ ಪರಮಾತ್ಮನಿಂದ ಬ್ರಹ್ಮ–ಇಕ್ಷ್ವಾಕುಗಳ ಕೈಗಿಳಿದ ಮೂಲ ಸೀತಾ–ರಾಮ ಮೂರ್ತಿ ಮೇಲುಪಲ್ಲಿಯಲ್ಲಿ

ಭೂಗತನಾಗಿದ್ದು, ನಂತರ ಗಜಪತಿ ಅರಸರ ಬೊಕ್ಕಸ ಸೇರಿತ್ತು. ಗುರ್ವಾಜ್ಞೆಯಂತೆ ಉಡುಪಿಯಿಂದ ಅಲ್ಲಿ ಹೋದ ನರಹರಿತೀರ್ಥರು ಆನೆ ಮೂಲೆಯಿಕ್ಕಲು ರಾಜಕುಮಾರನ ಪರವಾಗಿ ಕೆಲಕಾಲ ರಾಜ್ಯಭಾರ ಮಾಡಿ, ಮರಳುವಾಗ ಮಹಾರಾಣಿಯಿಂದ ಆ ಮೂರ್ತಿಯನ್ನು ಕಾಣಿಕೆ ಪಡೆದು ಕೂರ್ಮಮಾರ್ಗವಾಗಿ ಉಡುಪಿಗೈತಂದು ಆಚಾರ್ಯರಿಗಿತ್ತರು (23.10.1317). 80 ದಿನ ಮಧ್ವ ಗುರುಗಳ ಹಸ್ತಪೂಜೆ ನಡೆದು, ಪದ್ಮನಾಭ ತೀರ್ಥರಿಗೆ ಸಂಸ್ಥಾನವಾಗಿ 1324ರಲ್ಲಿ ನರಹರಿತೀರ್ಥರು ಪೀಠ ವಹಿಸಿದರು. ಉತ್ತರದಲ್ಲಿ ವಿಶೇಷ ಸಂಚರಿಸಿದರೂ ಇವರ ಮಠ ಮುಂದೆ ಉತ್ತರಾದಿಮಠವೆನಿಸಿತು.

ಹೊರಗಿನಿಂದ ಕನ್ನಡನಾಡಿಗೆ ಬಂದು ಪೀಠಾಧಿಪರಾಗಿಯೂ (15 ಸಂಸ್ಕೃತ ಕೃತಿ ರಚಿಸಿದ) ಇವರು ಕಲಿತ ಕನ್ನಡದಲ್ಲಿ ಹಾಡು ಕಟ್ಟಿದ್ದು ಗಮನಾರ್ಹ ಸಾಧನೆ ಎನ್ನಬೇಕು. 'ನರಹರಿ– ರಘುಪತಿ' ಅಂಕಿತಗಳ ಅವರ 3– 4 ಪದ[6] ಸಿಕ್ಕಿದ್ದು ಅವು 'ಹರಿದಾಸ ಸಾಹಿತ್ಯದ ಅರುಣೋದಯದ ಕಿರಣಗಳಂತಿವೆ' (ವರದರಾಜರಾವ್, ಹರಿದಾಸ ಹೃದಯ, 134). 'ಹರಿಯೇ ಇದು ಸರಿಯೇ' ಎಂಬಂತೆ 'ನರಹರಿ' ಅಂಕಿತದಲ್ಲಿ ಆತ್ಮನಿವೇದನೆ ಮಾಡಿಕೊಂಡು, 'ರಘುಪತಿ' ಅಂಕಿತದಿಂದ 'ಎಂತು ಮರುಳಾದೆ ··· ಮಾತಿನಲ್ಲಿ ಹರಿದಾಸತನ ನೀತಿಯಲ್ಲಿ ಪ್ರಭುದಾಸತನ' ಎಂದು ಪಶ್ಚಾತ್ತಾಪಪಟ್ಟು, ವೈರಾಗ್ಯಭಾವದಿಂದ 'ತಿಳಿಕೋ ನಿನ್ನೊಳಗೆ ನೀನೆ' ಎಂದು ಹಾಡಿದ್ದಾರೆ; 'ಎದುರ್ಯಾರೊ ಗುರುವೆ ಸಮರ್ಯಾರೋ' ಎಂದು ಮಧ್ವರನ್ನು ಕೀರ್ತಿಸಿದ್ದಾರೆ. ಹೀಗೆ ಮಾತಿನಲ್ಲಿ ಹರಿದಾಸತನವೆಂದು ಪರಿತಪಿಸಿದ "ನರಹರಿತೀರ್ಥರು ಹರಿದಾಸ ಕೀರ್ತನ ಪರಂಪರೆಯ ಆದ್ಯ ಕೃತಿಕಾರರಾದರೆಂಬುದರ ಬಗ್ಗೆ ಈಗ ವಿದ್ವಾಂಸರಲ್ಲಿ ಯಾವುದೇ ಅಭಿಪ್ರಾಯ ಭೇದ ಉಳಿದಿಲ್ಲ" (ಎಚ್.ಎಸ್.ವೆಂ.ಮೂರ್ತಿ, ಕೀರ್ತನಕಾರರು, 5).

ಇಲ್ಲಿಂದ ಮುಂದೆ ಸುಮಾರು ಒಂದುನೂರು ವರ್ಷ ಈ ಸಾಹಿತ್ಯವು ಹರಿಗಡಿದಂತೆನಿಸಲು ಮುಖ್ಯ ಕಾರಣ, ದೊಡ್ಡ ಕೃತಿಕಾರರು ಕಾಣದಿರುವುದು. ಆದರೆ ಬೇಲೂರು ಕೇಶವದಾಸರು

---

6. 17 ಕೃತಿ ನೋಡಿದ್ದಾಗಿ ಗೋರಬಾಳರ ಹೇಳಿಕೆ (ಹರಿದಾಸರ ಪದ ಸುಳಾದಿಗಳು, ಪು.1–8).

'ಕರ್ನಾಟಕ ಭಕ್ತ ವಿಜಯ' (ಭಾಗ 1, ಪು.7–10) ದಲ್ಲಿ 9ನೆಯ ಶತಕದವರೆಂದು ಪ್ರತಿಪಾದಿಸಿದ ಅಚಲಾನಂದವಿಠಲಾಂಕಿತ ನರಸಿಂಹದಾಸರೂ ಅವರ 60 ಅನುಯಾಯಿಗಳೂ (ಗೋರಬಾಳರಂತೆ) ಈ ನರಹರಿತೀರ್ಥ– ಶ್ರೀಪಾದರಾಯರ ನಡುವಿನ ಅವಧಿಯಲ್ಲಿದ್ದು, ಹರಿದಾಸ ಸಾಹಿತ್ಯವನ್ನು ಮುನ್ನಡೆಸಿದಂತಿದೆ. ಬೆಂಗಳೂರು ಜಿಲ್ಲೆಯ ಹೈಗಣಪುರದ ಅಚಲಾನಂದದಾಸರಿಗೆ ವಿಠಲ ದರ್ಶನವಾದ ಕಾರ್ತೀಕ ಸಂಖ್ಯಾ ಸಂಜ್ಞೆಯನ್ನು ಹುಲಗೂರ ಕೃಷ್ಣಾಚಾರ್ಯರೂ (ಕರ್ನಾಟಕ ಸಂಗೀತ ದಾಸಕೂಟ, 59) ಎಚ್.ಕೆ.ವೇದವ್ಯಾಸಾ–ಚಾರ್ಯರೂ (ಕರ್ನಾಟಕದ ಹರಿದಾಸರು, ಪು.249) ಹೇಳಿದಂತೆ ಶಾ.ಶ.(801 ಎಂದಲ್ಲದೆ) 1281 ಎಂದು ಅರ್ಥೈಸಿದರೆ, ಅದು ಕ್ರಿ.ಶ.1359ಕ್ಕೆ ಸಮನಾಗಿ, ಅವರು ನರಹರಿತೀರ್ಥರ ಉತ್ತರಕಾಲೀನರಾಗುವರು.[7] ಈ ವೇಳೆಗೆ ಉತ್ತರಾದಿಮಠದ ಮಾಧವತೀರ್ಥ – ಅಕ್ಷೋಭ್ಯತೀರ್ಥ– ಜಯತೀರ್ಥರ ಚಟುವಟಿಕೆ ವಿದ್ಯಾರಣ್ಯರ ವಿಜಯನಗರದಿಂದ ಪಂಢರಿಗೆಯ ಪರಿಸರಕ್ಕೆ ಸರಿದು, ಮಧ್ವರ ಭಾಗವತ ಧರ್ಮ ಸ್ವೀಕರಿಸಿದ ಆರಾಧ್ಯ ಅಚಲಾನಂದಾದಿಗಳೇ ಆದ್ಯರೆನಿಸಿ ವಿಠಲನತ್ತ ಆಕರ್ಷಿತರಾದಂತಿದೆ. ಅಂತೆಯೆ ಇವರಲ್ಲಿ ಅಚಲಾನಂದವಿಠಲ–ಮುದ್ದುವಿಠಲ– ಪಾಂಡುರಂಗಾದಿ ಹೆಸರು ಕಾಣಬರುತ್ತವೆ. ಅಲ್ಲದೆ ಅಚಲಾನಂದರ 'ಮಧ್ವಮತವನನುಸರಿಸಿ ಸುಖಿಸೋ' ಎಂಬ ನುಡಿ, ಹಾಗೂ 'ಇದಕ್ಯಾರಂಜುವರೊ ಗೋಪಾಲ ... ನಾಳೆ ಬಾಹೋದು ನಮಗಿಂದೇ ಬರಲಿ' ಎಂಬ ಉಗಾಭೋಗ ಅವರು ಬಸವ– ಮಧ್ವರ ನಂತರದವರೆಂಬುದನ್ನು ಸಾರುತ್ತವೆ; ಇನ್ನೊಬ್ಬರು 'ಅದ್ವೈತ ದ್ವಿಜಾರಾಧ್ಯನಾಗಿರೆ ಉದ್ಧರಿಸಿದೆ ಮಧ್ವಮತದವನೆನಿಸಿ' ಎಂದು ಹಾಡಿದ್ದೂ ಇವರ ಕಾಲ–ದೇಶ– ಮತಗಳನ್ನು ಸ್ಪಷ್ಟಪಡಿಸುತ್ತದೆ. ಮಹಿಪತಿಸುತ ಕೃಷ್ಣರಾಯರು ಸ್ತುತಿಸಿದ ಹಾಗೂ ವಿಜಯದಾಸರ ಸುಳಾದಿಯ ಆದ್ಯ ದಾಸರು ಇವರೇ ಎಂದು ತೋರುತ್ತದೆ. ಕೆಲ ಮಠಾಧೀಶರನ್ನೊಳಗೊಂಡ ಇವರು ಅರಗ ರಾಜ್ಯದವರಾಗಿದ್ದು, 15ನೆಯ ಶತಕದ ಆದಿಯಲ್ಲಿದ್ದರೆಂದೂ ಶಾಸನಾಧಾರಗಳಿಂದ ಶಂಕಿಸಿ ಹೇಳಲಾಗಿದೆ (ಪ್ರ.ಕ. 46–1). ಇದರಿಂದ ದಾಸ ಸಾಹಿತ್ಯಕ್ಕೆ ವಿಚ್ಛಿತ್ತಿ ಒದಗಿದಂತಿಲ್ಲ. "12ನೆಯ ಶತಮಾನದಿಂದ ಮೊದಲಾದ ಹರಿದಾಸ ಸಾಹಿತ್ಯ ಸುಮಾರು 200 ವರ್ಷಗಳ ವರೆಗೆ ಅವಿಚ್ಛಿನ್ನವಾಗಿ ಹರಿದು

---

7. 15ನೆಯ ಶತಕದ ಒಂದು ಕಾಗದವೂ 801ನೆಯ ಶಕ ಹೇಳಿದ್ದರಿಂದ, ಅಚಲಾನಂದರಿಬ್ಬರಿರಬೇಕೆಂದರು ವರದರಾಜರಾಯರು (ಶ್ರೀಪಾದರಾಯರ ಕೃತಿಗಳು, ಮುನ್ನುಡಿ, 8).

ಬಂದಿದೆ" (ಎಸ್.ಆರ್.ಎಕ್ಕುಂಡಿ, ಹರಿದಾಸ ಸಾಹಿತ್ಯ ಸಮೀಕ್ಷೆ, ಪು.93).

## (3) ಶ್ರೀಪಾದರಾಜರು (1406–1504)

'ನರಹರಿತೀರ್ಥರು ಕೀರ್ತನೆ ಬರೆದ ಮೊದಲ ಹರಿದಾಸರಾದರೂ ಕೀರ್ತನ ಸಾಹಿತ್ಯವನ್ನು ಒಂದು ಪರಂಪರೆಯಾಗಿ ಬೆಳೆಸಿದವರು ಶ್ರೀಪಾದರಾಯರೆ' (ಎಚ್.ಎಸ್.ವೆಂ. ಮೂರ್ತಿ, ಕೀರ್ತನಕಾರರು, 23). ಪೌರಾಣಿಕವಾಗಿ ಪುರಂದರದಾಸರೆಂದಂತೆ 'ನಾರಾಯಣನಾಮದ ಬೀಜವ ನಾರದ ಬಿತ್ತಿದ ಧರೆಯೊಳಗೆ' ಐತಿಹಾಸಿಕವಾಗಿಯೂ ಅದು ಧ್ರುವಾಂಶ ಶ್ರೀಪಾದರಾಜರಿಂದಂಕುರಿಸಿ ಪ್ರಹ್ಲಾದಾಂಶ ವ್ಯಾಸರಾಯರಿಂದ ಮೊಳಕೆಯೊಡೆಯಿತು, ನಾರದಾಂಶ ಪುರಂದರದಾಸರಿಂದ ಫಲ ನೀಡಿತು.

ಬೆಂಗಳೂರು ಜಿಲ್ಲೆಯ ಚನ್ನಪಟ್ಟಣದ ಬಳಿಯ ಅಬ್ಬೂರಿನ ಕರಣಿಕ ಶೇಷಗಿರಿಯಪ್ಪನ ಮಗನಿಗೆ ಲಕ್ಷ್ಮೀನಾರಾಯಣನೆಂಬ ಹೆಸರಾಗಿತ್ತು. ಮಧ್ವ ಶಿಷ್ಯ ಪದ್ಮನಾಭತೀರ್ಥರ ಪ್ರತ್ಯೇಕ ಮಠದಲ್ಲಿ 7ನೆಯವರಾದ ಸ್ವರ್ಣವರ್ಣತೀರ್ಥರು ಅಬ್ಬೂರಿಗೆ ಬಂದಾಗ ಮಗುವಿಗೆ 'ಲಕ್ಷ್ಮೀನಾರಾಯಣಯೋಗಿ' ಎನಿಸುವ ಯೋಗ ಒದಗಿತು (1412). ಮುಂದೆ ಇವರ ವಿದ್ವತ್ತು–ವಿನಯ ವೀಕ್ಷಿಸಿ ಉತ್ತರಾದಿಮಠದ ರಘುನಾಥತೀರ್ಥರು 'ಶ್ರೀಪಾದರಾಜ' ಎಂದು ಕರೆದರು. ಇವರ ಮುಳುಬಾಗಿಲುಮಠಕ್ಕೂ ಮುಂದೆ ಇದೇ ಹೆಸರಾಯಿತು. ಅದೊಂದು ವಿದ್ಯಾಪೀಠವೆನಿಸಿ 'ವ್ಯಾಸರಾಯರಿಗೆ ವಿದ್ಯಾಭ್ಯಾಸವ ಮಾಡಿಸುವ' ಅಂಶ ವಾದಿರಾಜರ 'ಶ್ರೀಪಾದರಾಯರ' ಎಂಬ ಪದದಲ್ಲಿದೆ. 'ಮಹಿಮೆ ಸಾಲದೇ' ಎಂಬ ವ್ಯಾಸರಾಯರ ಪದವೂ ಹೇಳುವಂತೆ 'ಶಂಖೋದಕದಿ ವಿಪ್ರಹತ್ಯೆ ಕಳೆಯೆ' ಎನ್ನುವ ಮಹಿಮೆ ಕೇಳಿದ ಸಾಳುವ ನರಸಿಂಹ ತಾನೂ ಶ್ರೀನಿವಾಸಾರ್ಚಕ ಹತ್ಯೆ ಕಳೆದುಕೊಂಡು ಚಂದ್ರಗಿರಿಯ ಸ್ವರ್ಣಸಿಂಹಾಸನದಲ್ಲಿ ಇವರಿಗೆ ರತ್ನಾಭಿಷೇಕಗೈದ (1471). ಆಗ 'ಮುತ್ತಿನ ಕವಚ ಮೇಲ ಕುಲಾವಿ ನವರತ್ನ ಕೆತ್ತಿದ ಕರ್ಣಕುಂಡಲ ಕಸ್ತೂರಿ ತಿಲಕ ಶ್ರೀಗಂಧ ಲೇಪನ ವಿಸ್ತಾರದಿಂದ ಮೆರೆದು ಬರುವ' ಇವರು ಸುಖಪ್ರಾರಬ್ಧಭೋಗಿ ಎನಿಸಿದರೂ, ಅದೆಲ್ಲವನ್ನು ಹರಿಗರ್ಪಿಸಿದ ವೈರಾಗಿಗಳೂ ಅಹುದು.

ಮಧ್ವರ ದ್ವಾದಶಸ್ತೋತ್ರ ಪೂಜಾ ಕಾಲಕ್ಕೆ ಪಠಿತವಾಗುತ್ತಿದ್ದುದೂ, ನರಹರಿ ತೀರ್ಥರು ಕನ್ನಡ ಕೃತಿಗೈದುದೂ, ಗುರುಗಳೊಡನೆ ಶ್ರೀರಂಗದಲ್ಲಿದ್ದಾಗ ಅರಿತಂತೆ ಆಳ್ವಾರಗೀತಗಳಿಗೆ ಸಿಕ್ಕ ಪ್ರಾಶಸ್ತ್ಯವೂ, ಕನ್ನಡ ಶಿವಶರಣರ ವಚನ ಪಠಿಯುತ್ತಿದ್ದ ಜನಮೆಚ್ಚುಗೆಯೂ ಇವರಿಂದ ದೇವರ ನಾಮ ಬರೆಯಿಸಿ ಪೂಜೆಯ ವೇಳೆಗೆ ಹಾಡಿಸಹಚ್ಚಿತು. 'ವಾಗ್ವಜ್ರ'ದಂಥ ನ್ಯಾಯಸುಧಾ ವ್ಯಾಖ್ಯಾನದಿಂದ ವ್ಯಾಸಪೀಠ ತುಂಬಿದ ಇವರು 'ದಾಸರ ನಾಮಗಳಿಂದ ಲೇಸು ಲೇಸೆನಿಸಿಕೊಂಬಂತೆ'[8] ಪದ–ಸುಳಾದಿ–ಉಗಾಭೋಗ–ವೃತ್ತನಾಮಾದಿ ಛಂದೋರೂಪಗಳನ್ನೆಲ್ಲ ಬಳಸಿ ದಾಸ ಸಾಹಿತ್ಯವನ್ನಲಂಕರಿಸಿದ್ದು, ಕನ್ನಡವನ್ನು ಸಂಸ್ಕೃತ ಮಂತ್ರದ ಮಟ್ಟಕ್ಕೇರಿಸಿತು; 'ಸುಧಾ ಓದಿ ಪದಹೇಳುವ' ಪೆಂಪು ಕನ್ನಡದ್ದಾಯಿತು. ಅಂತೆಯೇ ದಾಸಕೂಟಸ್ಥರು 'ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ' ಎಂದು ನಮಿಸುವ ಸಂಪ್ರದಾಯವೇರ್ಪಟ್ಟಿತು. ಮೊದಲು 'ಗೋಪೀನಾಥ' ಅಂಕಿತದಿಂದ ಹಾಡಿದ ಶ್ರೀಪಾದರಾಯರೂ ಹಾಗೂ ವ್ಯಾಸರಾಯರೂ ಪಂಢರಪುರದಲ್ಲಿರುತ್ತ ಉಪಲಬ್ಧವಾದ ಸಂಪುಟಸ್ಥ ಪ್ರತಿಮೆಗಳಿಂದ ಅವರಿಗೆ ಕ್ರಮವಾಗಿ 'ರಂಗವಿಠಲ–ಶ್ರೀಕೃಷ್ಣ' ಎಂಬುವೇ ಅಂಕಿತವೆನಿಸಿದವು (1475).[9]

ಶ್ರೀಪಾದರಾಜರ ನೂರಾರು ರಚನೆಗಳಲ್ಲಿ 'ಕಂಗಳಿದ್ಯಾತಕೋ', 'ನಾ ನಿನ್ನೊಳನ್ಯ ಬೇಡುವುದಿಲ್ಲ', 'ಒಲ್ಲನವ್ವ ನಮ್ಮ ನಲ್ಲ ಬಾರದಿರೆ' ಎಂಬಂಥ ಸುಮಧುರ ಗೀತಗಳಿವೆ. 'ರಂಗ ಕೊಳಲನೂದುತ ಬಂದ', 'ಎಲ್ಲಾಡಿ ಬಂದೆ ಕೃಷ್ಣಯ್ಯ', 'ಭೃಂಗ ನಿನ್ನಟ್ಟಿದನೇ' ಎಂಬ ವೇಣುಗೀತ ಗೋಪೀಗೀತ–ಭ್ರಮರಗೀತಗಳು ಭಾಗವತದಶಮಸ್ಕಂಧದ ಗೀತಭಾಗವನ್ನು

---

8. ಶ್ರೀಪಾದರಾಯರ ಕನ್ನಡ ಕೃತಿ ರಚನೆಯನ್ನು ಪ್ರಥಮತಃ ಸೂಚಿಸುವ ಶ್ರೀ ವಾದಿರಾಜರ ಪದ ದೇವರನಾಮವನ್ನು 'ದಾಸರನಾಮ'ವೆಂದುದೂ ಗಮನೀಯ.

9. ವಿಟ್ಠಲ ಶಬ್ದವು ವಿಷ್ಣುವಿನ ತದ್ಭವವಾದರೂ ರುಕ್ಮಿಣೀಪತಿ (ರುಕ್ಮಾಯಿ) ವಿಟ್ಠಲನು (ಪಾಂಡುರಂಗ) ಕೃಷ್ಣನೇ ಎಂಬುದಿಲ್ಲಿ ಗಮನಾರ್ಹ. ಶ್ರೀಪಾದರಾಯರ 'ರಂಗವಿಠಲ' ಅಂಕಿತದಲ್ಲಿಬ್ಬರೂ ಉಂಟು. ಕಲಿಯುಗದ ಶ್ರೀನಿವಾಸನ ತಾಯ್ತಂದೆ ಯಾರೆಂದ ಆಕಾಶರಾಜನಿಗೆ ವಸುದೇವ–ದೇವಕಿ ಎಂದಳು ಬಕುಳಾವತಿ. ವಿಷ್ಣು ಭಕ್ತಿಯೇ ಕೃಷ್ಣಭಕ್ತಿಯಾಗಿ ಹರಿದಾಸ ಸಾಹಿತ್ಯವನ್ನು ತುಂಬಿದೆ, ಪೂರ್ಣಾವತಾರಿಯಾಗಿ ಉಡುಪಿಗೂ ಬಂದು ನೆಲಸಿದನಾಗಿ.

ಸೊಗಸಾಗಿ ಕನ್ನಡಿಸಿವೆ. 'ಲಕ್ಷ್ಮೀನೃಸಿಂಹ ಪ್ರಾದುರ್ಭಾವ ದಂಡಕ' ಭಕ್ತಪ್ರಹ್ಲಾದನ ಪ್ರಾರ್ಥನೆಯನ್ನು ಭಟ್ಟಿ ಇಳಿಸಿದೆ. ಮಧುರಗೈದುವ ಮಾಧವನನ್ನು ಅಧ್ಯಯಿಸಿದ 'ಗೋಪಿಯರ ವೃತ್ತನಾಮ'ವಲ್ಲದೆ, ಜೀವೋತ್ತಮನ ಅವತಾರತ್ರಯದ 'ಮಧ್ವನಾಮ'ವೂ ಇವರ ರಚನೆಯಾಗಿದೆ. ಹೀಗೆ, ಪದ ಸುಳಾದಿ ಉಗಾಭೋಗ ವೃತ್ತನಾಮಾದಿಗಳಿಂದ ಹರಿದಾಸರ ಸತತ ಪರಂಪರೆಗೆ ಶ್ರೀಕಾರ ಹಾಕಿದ ಶ್ರೀಪಾದರಾಜರಿಂದಲೇ ಇಂಥ ಮಧುರ ಫಲ ಬಂದಿರುವುದು ಶುಭಸೂಚಕವಾಗಿದೆ.

## (4) ವ್ಯಾಸರಾಯರು (1446–1539)

ಉತ್ತರಾದಿಮಠದ ಜಯತೀರ್ಥ ಶಿಷ್ಯ ವಿದ್ಯಾಧಿರಾಜರು ವೃಂದಾವನ ಹೊಂದುವಾಗ, ರಾಜೇಂದ್ರತೀರ್ಥರು ಸಂಚಾರದಲ್ಲಿದ್ದ ಕಾರಣ, ಕವೀಂದ್ರತೀರ್ಥರಿಗೆ ಪೀಠವಾಗಿ ರಾಜೇಂದ್ರತೀರ್ಥರ ಕವಲು ಸೋಸಲೆಯ ಮಠವೆನಿಸಿತು. ಈ ಪೀಳಿಗೆಯಲ್ಲಿ ಶ್ರೀಪಾದರಾಜರ ದೊಡ್ಡಮ್ಮನ ಮಗನೂ ಸನ್ಯಾಸ ವಹಿಸಿ ಬ್ರಹ್ಮಣ್ಯತೀರ್ಥರೆನಿಸಿದಾಗ, ಅವರ ಆಶೀರ್ವಾದದಿಂದ ಬನ್ನೂರಿನ ಬಾಲಣ್ಣ ಸುಮತಿಯ 3ನೆಯ ಮಗುವಾಗಿ ಹುಟ್ಟಿದ್ದ ಯತಿರಾಜ, 20ರ ಪ್ರಾಯಕ್ಕೆ (1467) ಬ್ರಹ್ಮಣ್ಯತೀರ್ಥರಿಂದ ದೀಕ್ಷಿತರಾಗಿ 'ವ್ಯಾಸರಾಜ' ಎನಿಸಿದರು; ಮಠಕ್ಕೂ ಮುಂದೆ ಇದೇ ಹೆಸರಾಯಿತು. ಉತ್ತರ–ದಕ್ಷಿಣ ದಿಗ್ವಿಜಯಗೈದು ಮಿಥಿಲೆಯ ಪಕ್ಷಧರ ಮಿಶ್ರನನ್ನು ಗೆದ್ದು ಬಂದ ವ್ಯಾಸರಾಯರು, ಶ್ರೀಪಾದರಾಜರ ಮುಳಬಾಗಿಲ ವಿದ್ಯಾ ಕೇಂದ್ರದಲ್ಲಿ ಅಧ್ಯಯನಕ್ಕೆ ನಿಂತರು (1475). ಅವರಾಜ್ಞೆಯಂತೆ ರಾಜಗುರು ಪಾಗಲೊಪ್ಪಿ ಸಾಳ್ವ ನರಸಿಂಹನ ಚಂದ್ರಗಿರಿಗೈದಿ, ಅವನ ಸೇನೆಯೊಡನೆ ಶ್ರೀರಂಗ – ಉಡುಪಿಗಳತ್ತ ಯಾತ್ರೆ ಮಾಡಿಕೊಂಡು ಬಂದರು (1476–81). ನಂತರ ಸಾಳ್ವಹತ ತಿರುಪತಿಯ ಅರ್ಚಕನ ಮಗ ಬೆಳೆಯುವನಕ (ಒಂದು ತಪ) ಶ್ರೀನಿವಾಸನ ಅರ್ಚನೆಗೈದರು (1486–98). ಮರುವರ್ಷ ರಾಜಗುರುವಾಗ ತುಳುವ ನರಸನಾಯಕನ ರಾಜಧಾನಿಯಾದ ವಿಜಯನಗರಕ್ಕೆ ತೆರಳಿ, ದೊರೆಯಿಂದ ಚಿನ್ನದ ಪಲ್ಲಕ್ಕಿಯ ಸ್ವಾಗತ ಪಡೆದರು. ಇದೇ ಸುಮಾರಿಗೆ ಯಂತ್ರೋದ್ಧಾರಾದಿ 732 ಪ್ರಾಣದೇವರನ್ನು ನಾಡಿನಲ್ಲೆಲ್ಲ[10]

10. 372 ಪ್ರತಿಮೆ ಪೆನುಗೊಂಡೆಯಲ್ಲಿವೆ.

ಪ್ರತಿಷ್ಠಾಪನೆ ನಡೆಸಿದ ಅವರು ವಿಜಯವಿಠಲ ದೇವಾಲಯದ ಪಕ್ಕದಲ್ಲೇ 'ಸರಸ್ವತೀ ವಿದ್ಯಾಪೀಠ' ಸ್ಥಾಪಿಸಿ ತಾವೇ ಕುಲಪತಿ ಎನಿಸಿದರು. ಅದರ ಬಾಗಿಲಲ್ಲಿ ಆಗ ಯುವರಾಜನಾಗಿದ್ದ ಕೃಷ್ಣದೇವರಾಯನೂ ಅಪ್ಪಣೆ ಕೇಳಬೇಕಿತ್ತು. ಅಂಥ ವಿದ್ಯಾನಗರಕ್ಕೆ ಅಧ್ಯಯನ ಮಾಡಬಂದವರಲ್ಲಿ ರಘುನಾಥ— ರಘುನಂದನ— ರಘುವರ್ಯ— ಜಿತಾಮಿತ್ರ ಸುರೇಂದ್ರ— ವಿಜಯೀಂದ್ರತೀರ್ಥರು, ಅಕ್ಷೋಭ್ಯಮಠದ ನಾರಾಯಣಯತಿ, ಗೋವಿಂದತೀರ್ಥ— ಬಂಗಾಲದ ಲಕ್ಷ್ಮೀತೀರ್ಥ ಮೊದಲಾದವರು ಪ್ರಮುಖರು. 1509ರಲ್ಲಿ ಕೃಷ್ಣದೇವರಾಯ ಪಟ್ಟವೇರಿ, 1521ರಲ್ಲಿ ಕುಹುಯೋಗ[11] ಒದಗುವ ಮೊದಲೇ ರಾಜಗುರುಗಳಿಗೆ ನಯವಾಗಿ ರತ್ನಗಳಿಂದಭಿಷೇಕಿಸಲಾಯಿತು. ಕುಹುಯೋಗದಲ್ಲಂತೂ ವ್ಯಾಸರಾಯರು 'ಕರ್ನಾಟಕ ಸಿಂಹಾಸನಗತ ಪ್ರಭು'ವಾಗಿ 'ರಾಜ್ಯ, ವೇದಾಂತ ಸಾಮ್ರಾಜ್ಯ ಒಟ್ಟಿಗೇ ಆಳಿದರು' (ಕೆ.ಎಂ.ಕೃಷ್ಣರಾವ್, ಜಗನ್ನಾಥದಾಸರು, ಪು.94). 'ದೇಶಾಧಿಪಗೆ ಬಂದ ಕುಹುಯೋಗವನು ನೂಕಿ ನೀ ಸಿಂಹಾಸನವೇರಿ ಮೆರೆದೆ' ಎಂದು ಈ ಸಂದರ್ಭ ವರ್ಣಿಸಿದ ಪುರಂದರದಾಸರು, ಇದಕ್ಕೆ ಮೊದಲೇ (ಸು.1520) ವ್ಯಾಸರಾಯರಿಂದ ದಾಸ ದೀಕ್ಷೆ ವಹಿಸಿರಬೇಕು. 1525ರಲ್ಲಿ ದೊರೆಯಿಂದ ದಾನ ಪಡೆದ ವ್ಯಾಸ ಸಮುದ್ರದಲ್ಲಿ 'ವ್ಯಾಸಾಬ್ಧಿಯನು ಕಟ್ಟಿಸಿದೆ' ಎಂದೂ ಪುರಂದರದಾಸರೇ ವರ್ಣಿಸಿದ್ದಾರೆ. ಆ ವರ್ಷವೇ ರಾಜಕುಮಾರ ತಿರುಮಲನೂ ಮಂತ್ರಿ (ಅಪ್ಪಾಜಿ) ತಿಮ್ಮರಸ ತೀರಿ, ಅಚ್ಯುತರಾಯನೊಡನೆ ಅಳಿಯ ರಾಮರಾಯ ಪ್ರಬಲಿಸಲು ವ್ಯಾಸರಾಯರ ವಿದ್ಯಾಪೀಠವೂ ವ್ಯಾಸಸಮುದ್ರದತ್ತ ಸರಿದಂತಿದೆ. ಮರುವರ್ಷವೇ ವ್ಯಾಸರಾಯರು ಆ ಗ್ರಾಮ ಭೂಮಿಯನ್ನು ಪುರಂದರದಾಸಾತ್ಮಜಾದಿ ವಿಪ್ರರಿಗೆ ದಾನವಿತ್ತರೆಂದು ಕಮಲಾಪುರ ತಾಮ್ರಶಾಸನ ಘೋಷಿಸಿದೆ (1526). 1530ರಲ್ಲಿ ಪಟ್ಟವೇರಿದ ಅಚ್ಯುತರಾಯನೊಡನೆ, ವ್ಯಾಸರಾಯರು ವಾದಿರಾಜರ 1532—33ರ ಪರ್ಯಾಯಕ್ಕೆ ಹೋಗಿ ಬಂದರು. 1535ರ ವೇಳೆಗೆ ಪಂಡಿತ ಕವಿ ಸೋಮನಾಥನ 'ವ್ಯಾಸಯೋಗಿ ಚರಿತ' ಚಂಪೂ ಕಾವ್ಯ ರಚಿತವಾದುದನ್ನಾಲಿಸಿ ಅದರ ಕಥಾನಾಯಕರು ತಲೆದೂಗಲು, ಕವಿಗೆ ನೂರಾರು ಮೇರುಸದೃಶ ಸಂಪದಕ್ಕೂ ಮೀರಿದ ಬಹುಮಾನವೆನಿಸಿತು.

---

11. ಅಮಾವಾಸ್ಯೆಯಂದು ಜನ್ಮನಕ್ಷತ್ರಕ್ಕೆ ರವಿ ಮಂಗಳ ಗುರು ಶನಿ ಗ್ರಹಗಳು 12ನೆಯ ಮನೆಯಲ್ಲಿ ಸಂಧಿಸುವ ದುರ್ಯೋಗ.

ಮಧ್ವ– ಜಯತೀರ್ಥ– ವ್ಯಾಸರಾಯರು ಮುನಿತ್ರಯರೆನಿಸಿ ಮಧ್ವಮತವನುದ್ಧರಿಸಿದರು. "ಇವರು ವ್ಯಾಸ– ದಾಸಕೂಟ ಆರಂಭಿಸಿ ಮಧ್ವಮತ ಪ್ರಚಾರಕ್ಕೆ ಪ್ರಧಾನ ಕಾರಣರಾದರು. ವ್ಯಾಸರಾಯರಿಗೆ ವಿಜಯನಗರದ ಆಸ್ಥಾನದಲ್ಲಿದ್ದ ಗೌರವ ಪ್ರಶಸ್ತಿಗಳು ಈ ದಿಶೆಯಲ್ಲಿ ತುಂಬ ಸಹಾಯವಾಗಿರಬೇಕು" (ಎಚ್.ಎಸ್.ವೆಂ.ಮೂರ್ತಿ, ಕೀರ್ತನಕಾರರು, ಪು.14).

ವ್ಯಾಸಂಗ ನಿಮಿತ್ತ ವ್ಯಾಸರ ಬಳಿ ಬಂದ ವಾದಿರಾಜರು ವಿಜಯನಗರದಲ್ಲಿ ಮಧ್ವ ಸಿದ್ಧಾಂತಧರಣೀಧರ ಗಜಗಳಿದ್ದುವೆಂದುದ್ಗರಿಸಿದ್ದಾರೆ —

ರಾಜಧಾನೀ ಜಯತಿ ಸಾ ಗಜಗಹ್ವರಸಂಜ್ಞಿತಾ (= ಆನೆಗೊಂದಿ)
ಯತ್ರ ಭಾಂತಿ ಗಜಾ ಮಧ್ವರಾದ್ಧಾಂತ ಧರಣೀಧರಾ: ॥
(ತೀರ್ಥಪ್ರಬಂಧ, ಪೂರ್ವ)

'ಆನೆ ಬರುತ್ತಿದೆಕೋ' ಎಂಬ ಕೀರ್ತನದಲ್ಲಿಯೂ ರೂಪಕ ಮಾಡಿ ವರ್ಣಿಸಿದ್ದಾರೆ ವ್ಯಾಸರನ್ನು. ಇಂಥ ವ್ಯಾಸರಾಯರು ವಿದ್ವದ್ವಿದ್ಯಾರ್ಥಿಗಳಿಗೋಸುಗ ಸಂಸ್ಕೃತದಲ್ಲಿ 'ನ್ಯಾಯಾಮೃತ– ತರ್ಕತಾಂಡವ– ಚಂದ್ರಿಕಾ' ಗ್ರಂಥ ರಚಿಸಿ ವ್ಯಾಸಕೂಟವನ್ನು ಪೋಷಿಸಿದರು. ಜೊತೆಗೆ ಲೋಕಶಿಕ್ಷಣಾರ್ಥ ವಿಶ್ವವಿದ್ಯಾಲಯದ ಪ್ರಸಾರಾಂಗ ಎಂಬಂತೆ ಜನಸಾಮಾನ್ಯರಿಗಾಗಿ ಕನ್ನಡದಲ್ಲಿ ಹಾಡು ಬರೆದು, ಪುರಂದರ– ಕನಕದಾಸರಂಥ ಗೃಹಸ್ಥರಿಂದ ಕೂಡಿ ದಾಸಕೂಟ ಕಟ್ಟಿದರು. (ಆದರಿಂದ ಅವರು ಈ ಕೂಟಗಳ ಪ್ರವರ್ತಕರೂ ಹೌದು ಸಮನ್ವಯ ಸಾಧಕರೂ ಹೌದು). 1514ರಲ್ಲೇ ಕೃಷ್ಣದೇವರಾಯ ಕಳಿಂಗದ ಉದಯಗಿರಿಯಿಂದ ತಂದ ಕೃಷ್ಣ ಪ್ರತಿಮೆಯನ್ನು ಕುರಿತು 'ಕಂದನಿಗೆ ಕಾಲಿಲ್ಲ' ಎಂಬ ಹಾಡಿನಲ್ಲಿ ವರ್ಣಿಸಿದ್ದಾರೆ —

ಧರೆಗಧಿಕವೆಂದೆನಿಪ ವಿದ್ಯಾನಗರ ಒಳಿತೆಂದು ಉದಯ
ಗಿರಿಯಿಂದ ಬಂದ ಮುದ್ದು ಬಾಲಕೃಷ್ಣನಮ್ಮ ॥

ಹೇಮಕೂಟದಲ್ಲಿ ಅಂದು ದೇವಾಲಯ ಕಟ್ಟಿಸಿಕೊಂಡು ಪೂಜಿತನಾದ ಕೃಷ್ಣಮೂರ್ತಿ ಇಂದು ಮದ್ರಾಸ ವಸ್ತುಸಂಗ್ರಹಾಲಯ ಸೇರಿದ್ದಾನೆ. 'ನಿನ್ನ ನೋಡಿ ಧನ್ಯನಾದೆನೋ ಹೇ ಶ್ರೀನಿವಾಸ' ಎಂಬುದು ಕುಹುಯೋಗ ನಿವಾರಣಾರ್ಥ ತಿರುಪತಿಯಲ್ಲೇ ಮಾಡಿದ ಪ್ರಾರ್ಥನೆ. ಇವರ ಚಿಕ್ಕ ಕೃತಿಗಳಲ್ಲಿ 'ಎಂದೆಂದೆನ್ನ ಮನದಿಂದಗಲದಿರೋ', 'ಕೊಳಲನೂದುವ ಚದುರನ್ಯಾರೇ', 'ರಂಗಯ್ಯ ಮನೆಗೆ ಬಂದರೆ ಅಂತರಂಗದಿ ಗುಡಿ ಕಟ್ಟಿ ಕಾಣುವೆನೋ'

ಎಂಬಂಥ ಸೊಗಸಾದ ಹಾಡುಗಳಿವೆ, ಸುಳಾದಿ–ಉಗಾಭೋಗಗಳಿವೆ, ವೃತ್ತನಾಮದಲ್ಲಿ ಸಂಗ್ರಹಿಸಿದ ಭಗವದ್ಗೀತೆಯಿದೆ. "ಇವರ ಸಂಸ್ಕೃತ ಶಾಸ್ತ್ರ ಗ್ರಂಥಗಳಲ್ಲಿ ಎಂತಹ ಪ್ರೌಢಿಮೆ ಇದೆಯೋ, ಕನ್ನಡ ಭಾಷೆಯಲ್ಲಿ ಅಷ್ಟೇ ಸರಳತೆ ಇದೆ" (ಎಚ್.ಕೆ. ವೇದವ್ಯಾಸಾಚಾರ, ಕರ್ಣಾಟಕದ ಹರಿದಾಸರು, ಪು.263).

ವ್ಯಾಸರಾಯರ ವ್ಯಕ್ತಿತ್ವ ಅವರ ಕೃತಿಗಳಿಗಿಂತ ಘನವಾದುದು. ತಾವು ಸ್ವತಃ ಬರೆದುದಕ್ಕಿಂತ ಪುರಂದರ– ಕನಕರಂತಹ ದಾಸರನ್ನು ಕನ್ನಡಕ್ಕೆ ನೀಡಿದ್ದು ಅವರ ದೊಡ್ಡ ಕೊಡುಗೆ. 'ದಾಸರೆಂದರೆ ಪುರಂದರದಾಸರು, ಅವರ ಸಾಹಿತ್ಯ ಪುರಂದರೋಪನಿಷತ್' ಎಂದು ಗುರುಗಳೇ ಪ್ರಶಸ್ತಿ ನೀಡಿದ್ದು ಸಾಮಾನ್ಯವಲ್ಲ. ಇಂತಹ ಗುರು ವ್ಯಾಸರಾಯರು ಪೂಜೆಯ ವೇಳೆಗೆ ಸಾಲಿಗ್ರಾಮಗಳನ್ನೇ ತಾಳ ಬಾರಿಸಿಕೊಂಡು 'ಹರಿಯೇ ಕಣ್ಣ ಎಂದು ಕುಣಿಸಿದರಯ್ಯ' ಎಂದು ಪುರಂದರದಾಸರು ಬಣ್ಣಿಸುವುದೂ ಹೆಚ್ಚಲ್ಲ. (1475ರಷ್ಟು ಹಿಂದೆ ನಡೆದ ಈ ಘಟನೆಯಲ್ಲಿ ವ್ಯಾಸರಾಯರೆದುರು ಕುಣಿದ ಕೃಷ್ಣನಿಂದಾಗಿಯೇ ಅವರ ಕೃತಿಗಳಲ್ಲಿ 'ಶ್ರೀಕೃಷ್ಣ' ಅಂಕಿತನಾಗಿದ್ದಾನೆ). ಶಿಷ್ಯರು ಗುರುಗಳನ್ನು ಕೊಂಡಾಡುವುದು ಸಹಜ; ಆದರೆ ಗುರುಗಳೇ ಶಿಷ್ಯರನ್ನು ಕೊಂಡಾಡುವುದು ವಿಶೇಷವಲ್ಲವೇ? ಶ್ರೀಪಾದರಾಜರು 'ಸಾಸಿರ ಜಿಹ್ವೆಗಳುಳ್ಳ ಶೇಷನ ಕೊಂಡಾಡಬೇಕು ವ್ಯಾಸಮುನಿರಾಯರ ಸನ್ಯಾಸದಿರವ' ಎಂದು ಹಾಡಿದ್ದು ಈ ದೃಷ್ಟಿಯಿಂದ ಗಮನಾರ್ಹ. ಇದೇ ದೃಷ್ಟಿಯಿಂದ ವ್ಯಾಸರಾಯರು ವಾದಿರಾಜರನ್ನು ಕುರಿತು 'ವಾದಿಗಳೆಲ್ಲರನೇ ಗೆದ್ದ ವಾದಧೀರನೇ ... ನಿನಗೆ ಎಣೆಗಾಣೆ ... ಮಧ್ವಮುನಿಯ ಮನದೊಡೆಯ' ಎಂದುಸುರಿದ್ದು ಇನ್ನೂ ಮಹತ್ವದ್ದು. ಕಾರಣ, ವಾದಿರಾಜರ ವಿಷಯ ಈಗ ಪ್ರಸ್ತುತವಾದದ್ದು.

## 2. ವಾದಿರಾಜರ ವ್ಯಕ್ತಿ ಮಹತ್ವ (1480–1600)

### (1) ಅವತಾರದ ಪೂರ್ವೋತ್ತರ

ಪ್ರಪಂಚದ ಪ್ರಾಚೀನತಮ ದಾಖಲೆ ಎನಿಸಿದ ವೇದಗಳ ಮೊದಲ ಮಂತ್ರದ್ರಷ್ಟಾರನೆಂದರೆ ಹರಿಯು ಹಯಗ್ರೀವ ರೂಪ. ಅಂತೆಯೇ ಮಧು–ಕೈಟಭರನ್ನು ಕೊಂದು ಅಪಹೃತ ವೇದಗಳನ್ನುಳಿಸಿದ ಜ್ಞಾನರೂಪವದು. ಅನಂತರದ ಇನ್ನೂರು ಯೋಗಿಜೀವರೂ ಸರ್ವಜ್ಞರಾಗಿದ್ದು ತಮ್ಮ ತ್ರಿಕರಣ ಶುದ್ಧಿಯಿಂದ 'ಋಜು' (ಎಂದರೆ ನೇರ ನಡೆಯ) ಎಂಬ ಅನ್ವರ್ಥಕ ಹೆಸರುಳ್ಳವರು. ಅವರಲ್ಲಿ ಸಾಧನಕಲ್ಪಕ್ಕೆ ಬಂದ ನೂರ್ವರು ಸ್ವಧರ್ಮನಿಷ್ಠರಾಗಿದ್ದು ನೂರು ಜನ್ಮವೆತ್ತಿ ಬ್ರಹ್ಮಪದವಿಗೇರಿ ಹರಿ ಪದ ಹೊಂದುವವರೆಂದು ಹರಿಯೇ ಹೇಳಿದ್ದಾನೆ–

ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್
ವಿರಿಂಚತಾಮೇತಿ ತತಃ ಪರಂ ಹಿ ಮಾಂ ॥ (ಭಾಗವತ 4, 24, 29)

ಇವರಲ್ಲಿ ಮೊದಲ ಋಜು ಸೃಷ್ಟಿಕರ್ತ ಬ್ರಹ್ಮನಿಗೆ ಭೂಮಿಯಲ್ಲವತಾರವಿಲ್ಲವೆಂದೂ ಮಿಕ್ಕವರು ಅವಶ್ಯವಿದ್ದಾಗ ಅವತರಿಸಬಹುದೆಂಬುದೂ ಹರಿಯ ಆಜ್ಞೆ (ಪ್ರಕಾಶಸಂಹಿತಾ). ಎಂದರೆ 2ನೆಯ ವಾಯುವಿನಿಂದಾರಂಭಿಸಿ 3ನೆಯ ಲಾತವ್ಯ, 4ನೆಯ ಗವ್ಯ, 100ನೆಯ ಕಲ್ಕಿಯ ವರೆಗೂ ಇರುವ ಋಜುಗಳು ಅವತರಿಸಬಹುದೆಂದಾಯಿತು. (ಉಳಿದವರ ಪುರಾಣೋಕ್ತ ಹೆಸರು: 5–ವಕ್ತವ್ಯ, 6–ಜ್ಞಾತವ್ಯ, 7–ಭಾವ್ಯ, 8–ಸ್ವರ್ಗವ್ಯ, 9–ಸುಭವ್ಯ, 10–ಸೇವ್ಯ, 11–ಸ್ಮರ್ತವ್ಯ, 12–ಕ್ರವ್ಯ, 13–ಗಂತವ್ಯ, 14–ಸಖ್ಯ, 15–ದ್ರಷ್ಟವ್ಯ, 16–ಕವ್ಯ, 17–ಮಂತವ್ಯ, 18–ಸಂಕೀರ್ತ, 19–ಶ್ರೋತವ್ಯ, 20–ದಶಕುಲ, 21–ಜ್ಞಾನ, 22–ಗಮ್ಯ, 23–ಸದಾಕಪಿ, 24–ಸಹ, 25–ಸುಬಲ, 26–ಸದಾರತ, 27–ಸ್ವಾಮರೇತ, 28–ಕಾಲ, 29–ಕಲಿ, 30–ಕಲಿಸಂಹರ್ತ, 31–ಕಾಲಸೂಚಕ, 32–ಸುಕಾಲಜ್ಞ, 33–ಸುಕರ್ತ, 34–ಕಾಲಕ್ರೀಡ, 35–ತಾರಕ, 36–ಉಪದೇಷ್ಟ, 37–ಅಮುಮುಷಿ, 38–ತ್ರಾಣ, 39–ಪ್ರಾಣ, 40–ಯೋಗವರ್ತಕಯುಜ್ವ, 41–ಸುಕರ್ತ, 42–ಯಜ್ಞ, 43–ಸುಶೀಲ, 44–ದಾನಶೀಲ, 45–ತೇಜಸ್ವಿ, 46–ಸುತಪಸ್ಕ, 47–ಶಾರದೇಜ, 48–ವಿನೀತ, 49–ಧರ್ಮ, 50–ಪಾಪವಿನಾಶಕ, 51–ಮಿತ್ರ, 52–ಸರ್ವಜಿತ, 53–ಸರ್ವಜ್ಞ,

54– ಅಲಂಪಟ, 55– ಕಪಿಸ, 56– ಪ್ರಾಜ್ಞ, 57– ಸುವೀರ, 58– ಸಾರಸ್ವತ, 59– ಸುಲೋಚನ, 60– ಚಾರುಪದ, 61– ಸುಬಾಹು, 62– ಚಾರು, 63– ಚಾರ್ವಂಗ, 64– ಸಂತುಷ್ಟ, 65– ಆನಂದ, 66– ಸಂತ, 67– ಪ್ರಮೋದ, 68– ಮೋದ, 69– ಮನು, 70– ಜಯ, 71– ವಿಜಯ, 72– ಮೇಧಾವಿ, 73– ಸುವೀರ್ಯ, 74– ಮಹತ್ತ್ವ, 75– ಜಯ, 76– ಮಹಾಬುದ್ಧಿ, 77– ಕಥ್ಧನ, 78– ಸಂಕೀರ್ಣ, 79– ಕೀರ್ತನ, 80– ವಿಜ್ಞಾನ, 81– ಜ್ಞಾನ, 82– ಸಾಧ್ಯಾನ, 83– ಶ್ರದ್ಧಾಲು, 84– ಖರ್ಪಟ, 85– ನರ್ಷಪ, 86– ಅಂಜನ, 87– ವೈಕೃತ, 88– ಶಾಟಿ, 89– ಸಂಪೂರ್ಣ, 90– ಧರ್ಮಜ, 91– ಸದ್ಧರ್ಮ, 92– ಮಹೀಪತಿ, 93– ಸಾಧು, 94– ಖಷಾ, 95– ವರ್ಚಸ್ವಿ, 96– ಅಧರ್ಮಖಂಡನ, 97– ಧರ್ಮ, 98– ದಾಸ, 99– ಸುತೇಜ). ಇವರೆಲ್ಲ 32 ಲಕ್ಷಣಯುಕ್ತ ದಿವ್ಯದೇಹಿಗಳು, ಅಷ್ಟಯೋಗಸಿದ್ಧಿಯುಳ್ಳವರು.[1] ಬ್ರಹ್ಮಪದವಿ ಇವರಿಗಲ್ಲದೆ ಬೇರಾರಿಗೂ ಸಲ್ಲದು ಎಂಥ ಸಾಧನೆಗಳಿಂದಲೂ; ದೋಷರಹಿತರೂ ಸರ್ವಜೀವಗಣಗುಣಾಧಿಕರೂ ವಾಯುತ್ವಕ್ಕೇರುವವರೂ ದೇವತೆಗಳಿಗೆ ದೇವತೆಗಳೂ ಆದವರು ಈ ಋಜುಗಳು. ಸ್ವತಃ ಋಜುವಾದ ವಾಯುವೇ ಮಧ್ವಾವತಾರದಲ್ಲಿ[2]

---

1. 32 ದೈವೀ ಲಕ್ಷಣ: ಭುಜನೇತ್ರಹ ಜಾನು ನಾಸಾಸ್ಥಾನೇಷು ದೈರ್ಘ್ಯಾಣಿ, ತ್ವಕ್ ಕೇಶಾಂಗುಲಿ ದಂತಾಂಗುಲಿ ಪರ್ವಸು ಪಂಚಸು ಸೂಕ್ಷ್ಮಾಣಿ ಪಾಣಿಪಾದತಲದ್ವಯ ನೇತ್ರಾಂತೇ ತಾಲುಸ್ಥಾನೇ ಜಿಹ್ವಾಯಾಂ ಅಧರೋಷ್ಠೇ ನಖೇಷು ರಕ್ತಾನಿ, ಕಕ್ಷಕುಕ್ಷಿ ವಕ್ಷೋಘ್ರಾಣ ಸ್ಕಂಧಲಲಾಟೇಷು ಚೇತಿ ಷಟ್ಸು ಔನ್ನತ್ಯಂ, ಲಲಾಟ ಕಟಿ ವಕ್ಷಸ್ಸು ತ್ರಿಷು ಸ್ಥಾನೇಷು ಗಂಭೀರತ್ವಾನಿ.

8 ಯೋಗಸಿದ್ಧಿ: ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ವಶಿತ್ವ, ಈಶತ್ವ.

2. ಮಧ್ವರು ಅವತರಿಸುವ ಮುನ್ನ ಜಾತವ್ಯ ಋಜು ಮಧ್ಯಗೇಹಸತಿ ವೇದವತಿಯಲ್ಲಿ ಶುಕ್ಲಶೋಣಿತ ಸಂಪರ್ಕವಿರದ ದಿವ್ಯದೇಹ ಧರಿಸಿ ಹುಟ್ಟಿ ವಾಯು ದೇವ ಬಂದೊಡನೆ ಆ ದೇಹವನ್ನಿತ್ತು ಮೂಲರೂಪಕ್ಕೆ ಮರಳಿದ ಉಕ್ತಿ ಸ್ಕಾಂದಪುರಾಣದ್ದು (ಅ.4) —

ವೇದವಾತ್ಯಾಖ್ಯಭಾರ್ಯಾಯಾಂ ತಸ್ಮಾಜ್ಜಾತೋಭವತ್ಪ್ರಭುಃ
ಯದುಪುತ್ರ್ಯಾಂ ಯಥಾ ಭೀಮಃ ಪ್ರಜಾತಃ ಸ್ಪರ್ಶ ಮಾತ್ರತಃ
ಜಾತವ್ಯಸ್ಯ ಋಜುಸ್ಥಸ್ಯ ಕ್ಲಪ್ತಂ ಪ್ರತಿಯುಗೇ ಯುಗೇ
ವಾಯೋಃ ಪ್ರವೇಶ ಪರ್ಯಂತಂ ತತ್ರ ಸ್ಥಿತ್ವಾರ್ಥ ಗಚ್ಛತಿ ।
ರಜೋಧಿಕೇನ ಸತ್ವೇನ ನಿರ್ಮಿತಂ ತತ್ ಶರೀರಕಂ
ತತ್ ಶರೀರಂ ತು ವಾಯುಹಿನ ನಿಷ್ಕಾಸ್ಯ ಪ್ರವಿಶ್ಯತಿ ॥

ಮಧ್ವ ವಿಜಯದಲ್ಲೂ ಇದಕ್ಕೆ ಪೋಷಕ ವರ್ಣನೆ ಇತ್ತಿದೆ (2ನೆಯ ಸರ್ಗ); ವಾದಿರಾಜರ ಕನ್ನಡ ತಾ.ನಿರ್ಣಯ ಟೀಕೆಯೂ ಸಂವಾದಿ (ಸಂ.1, ಪು.37).

ಭಾವಿ ವಿರಂಚಿಯೆನಿಪಾನಂದತೀರ್ಥರ ನೆನೆವೆನನುದಿನವು
(ಜಗನ್ನಾಥದಾಸರ ಹರಿಕಥಾಮೃತಸಾರ)

ಈ ಲಕ್ಷಣಗಳನ್ನು ಒಕ್ಕಣಿಸಿದ್ದಾರೆ, ಭಾರತ ತಾತ್ಪರ್ಯ ನಿರ್ಣಯದ ಮೂಲಕ —

ಬ್ರಹ್ಮತ್ವಯೋಗ್ಯಾ ಋಜವೋ ನಾಮದೇವಾಃ ಪೃಥಗ್ಗಣಾಃ
ತೈರೇವಾಪ್ಯಂ ಪದಂ ತತ್ತು ನೈವಾನ್ಯೈಃ ಸಾಧನೈರಪಿ ॥ 1, 94 ॥

ಅನಾದಿ ಕಾಲತಃ ಸರ್ವ ದೋಷಹೀನಾ ಗುಣಾಧಿಕಾಃ
ಸರ್ವದೇವಗಣೇಭ್ಯೋ ಯೇ ತೇ ಹಿ ವಾಯುತ್ವಮಾಪ್ನುಯುಃ ।

ಋಜವೋ ನಾಮ ದೇವಾ ದೇವಾನಾಮಪಿ ದೇವತಾಃ ॥ 32, 80 ॥

ಪ್ರಥಮೋ ಹನುಮನ್ನಾಮ ದ್ವಿತೀಯೋ ಭೀಮ ಏವ ಚ । ಪೂರ್ಣಪ್ರಜ್ಞಃ ತೃತೀಯಸ್ತು ಭಗವತ್ಕಾರ್ಯಸಾಧಕಃ ॥ ಎಂದು 2—127ರಲ್ಲಿ ಹೇಳಿ, ಭೀಮನೇ ತಾವಾಗಿ ಅವತರಿಸಿದ್ದನ್ನು 32, 131—176ರಲ್ಲಿ ಸೂಚಿಸಿದ್ದಾರೆ —

ಅಪ್ರನಿಶ್ಚಯಾರ್ಥಜಾತಃ ಪುನರ್ವಿಪ್ರತನುಃ ಸ ಭೀಮಃ ।
ದೈತ್ಯೈರ್ನಿಗೂಢಂ ಹರಿತತ್ತ್ವಮಾಹ ।
ತನುಸ್ತೃತೀಯಾ ಪವನಸ್ಯ ಸೇಯಂ ಸದ್ವ್ಯರತಾರ್ಥ ಪ್ರತಿಪಾದನಾಯ ॥

3ನೆಯ ಅವತಾರ ಋಜುವೇ ದ್ವಾಪರದಲ್ಲಿ ವಿದರ್ಭದ ರಾಜಧಾನಿ ಕುಂಡಿನಪುರದ ರಾಜಪುರೋಹಿತನಿಗೆ ಸುದೇವ ಎಂಬ ಹೆಸರಿನ ಸುತನಾಗಿ ಅವತರಿಸಿದ್ದು, ಎಲ್ಲ ದೇವತೆಗಳು ಆಗ ಕೃಷ್ಣನ ಸೇವಾ ಸಾಧನೆಗವತರಿಸಿದಂತೆ (ಪ್ರಕಾಶ ಸಂಹಿತೆ, 868). ಧಿಷಾದರ್ಯದಿಂದ ಭೀಷ್ಮಕನ ಮಗಳು ರುಕ್ಮಿಣಿಯ ಅಂತಃಪುರ ಪ್ರವೇಶಿಸಿ, ಅವಳು ಕೃಷ್ಣನಿಗಿತ್ತ ಪತ್ರವನ್ನು ವಾಯುವೇಗದಿಂದ ದ್ವಾರಕೆಗೆ ಕೊಂಡೊಯ್ದು, ಅವನನ್ನು ಕುಂಡಿನಪುರಕ್ಕೆ ಕರೆತಂದು ರುಕ್ಮಿಣೀಹರಣ— ಕಲ್ಯಾಣ ನೆರವೇರುವ ಸೇವೆ ಸಲ್ಲಿಸಿದ ವಿಪ್ರ ಈತನೆಂದು ಶುಕ ಸಂಹಿತಾ, ವಾಮನಪುರಾಣಾದಿಗಳಲ್ಲಿ ಉಕ್ತವಾಗಿದೆ. (ಇದನ್ನು ಕಳೆದ ಶತಮಾನದ ಹರಪನಹಳ್ಳಿ ಶ್ರೀಪತಿದಾಸ ಬಾದರಾಯಣ ವಿಠಲಾಂಕಿತದಾಸರೂ ಪದಿಸುಡಿದಿದ್ದಾರೆ). ವಾದಿರಾಜರೇ 'ಸ್ವಪ್ನವೃಂದಾವನಾಖ್ಯಾನ'ದಲ್ಲಿ ತಮ್ಮ ಹಿಂದಿನ ಅವತಾರ ಕಾರ್ಯವಿದನ್ನು ಪರಾಂಬರಿಸುತ್ತ ಅಪೂರ್ವ ಸಂಗತಿಯೊಂದನ್ನರುಹಿದ್ದಾರೆ —

ವೈದ್ಯೋ ಧನ್ವಂತರಿಶ್ಶಾಪಂ ವೈದ್ಯಶಾಪಾಖ್ಯರೋಗಹಾ (7, 32—33)

ರುಕ್ಮಿಣಿಯ ಕೈಹಿಡಿಯಲೆಳಸಿದ್ದ ಶಿಶುಪಾಲನು ತನಗೆ ವಿಘ್ನವನ್ನುಂಟುಮಾಡಿದ ವಿಪ್ರನಿಗೆ ವಿವಾಹವಿಲ್ಲದಂತಾಗಲು ಶಪಿಸಿದ. ಆದರೆ ಇಂದ್ರನು ಅರ್ಜುನನಿಗೊದಗಿದ ಊರ್ವಶೀ ಶಾಪವನ್ನು

ಬೃಹನ್ನಳೆಯಾಗಿ ಕಳೆಯಲು ತಿಳಿದಂತೆ, ಧನ್ವಂತರಿಯಾದ ಹರಿಯು ಅವಿವಾಹ ಶಾಪ ವಾದಿರಾಜಯತಿಯ ಅವತಾರದಲ್ಲಿ ಕಳೆದುಹೋಗಲೆಂದು ಹರಸಿದನು! ಶಾಪ ತಿರಸ್ಕಾರದ ಸಾಮರ್ಥ್ಯವಿದ್ದರೂ ಅವರ ಕೃಷ್ಣಸೇವಾ ಪುಣ್ಯ ಅಭಿವೃದ್ಧಿ ಹೊಂದಿ, ಶಿಶುಪಾಲನ ಪುಣ್ಯ ಹ್ರಾಸವಾಗಲೆಂದೇ ಪರಮಾತ್ಮ ಹೀಗೆ ಅನುಗ್ರಹಿಸಿದ್ದು.

ಮಧ್ವರ ನಂತರ ಸು.100 ವರ್ಷ ಪೋಷಣೆ ಪಡೆದ ತತ್ವವಾದಕ್ಕೆ 15ನೆಯ ಶತಮಾನದ ಆದಿಯಲ್ಲಿ ಮತ್ತೆ ಅನ್ಯ ಮತೀಯರಿಂದ ಧಕ್ಕೆಯೊದಗಿತು. "ದುಷ್ಟರಲ್ಲಿ ಅಭಿಮಾನ, ವೈರಾಗ್ಯಾಭಾವ, ಶಾಸ್ತ್ರದಲ್ಲಿ ಫಲೋಪಲಬ್ಧ್ಯಭಾವದಿಂದ ಅಪ್ರಾಮಾಣ್ಯಶಂಕಾ, ದೀಕ್ಷಾಭಾವಾದಿಗಳು ಹೆಚ್ಚಿ ಯಾರಿಗೂ ಏನೂ ಕಾಣದಂತಾಯಿತು. ಸುಜನರು ಮಲಿನ ಚಿತ್ತರಾದರು ... ಹೀಗೆ 1475ರ ವರೆಗೆ ಬಹಳ ಅಜ್ಞಾನ ಪ್ರಚಾರ, ಶಾಸ್ತ್ರಾಭ್ಯಾಸದ ಕಾಲ, ವಿದ್ಧ ಏಕಾದಶ್ಯಾದಿ ಅನುಕ್ತ ವ್ರತಾನುಷ್ಠಾನ ಬಂದು ಸಜ್ಜನರು ಮಾಡಿದ್ದೆಲ್ಲಾ ಹಾಳು ಆಯಿತು ... ಶ್ರೀ ಮಧ್ವಾಚಾರ್ಯರು ಉಡುಪಿಯಲ್ಲಿ ಮಾಡಿದ 2 ತಿಂಗಳ ಪರ್ಯಾಯ ವ್ಯವಸ್ಥೆ, ಅನ್ನ ತೀರ್ಥಗಳ ದಾನ, ಕೃಷ್ಣನ ಉತ್ಸವಗಳೂ ಸಹ ಸುಗಮವಾಗಿ ನಡೆಯಲಿಕ್ಕೆ ತುಂಬಾ ಕಷ್ಟ ಒದಗಿತು. ವೈಷ್ಣವರಲ್ಲಿ ಪರಸ್ಪರ ಕಲಹ ಹೆಚ್ಚಾಯಿತು" (ಎಚ್.ಸುಬ್ಬರಾವ್, ಸ್ವಪ್ನವೃಂದಾವನಾಖ್ಯಾನ ಕೈಪಿಡಿ, ಪು.17). ದೇವತಾ ಪ್ರಾರ್ಥಿತ ಹಯಗ್ರೀವನು ವಾಯು, ನಂತರದ ಲಾತವ್ಯರೇ ಈಗ ಅವತಾರಯೋಗ್ಯರೆಂದರಿತು ಅಧಿಕಾರವಿತ್ತು, ಬ್ರಹ್ಮ-ವಾಯುಗಳ ವೈಭವವನ್ನೂ ಅವರಿಗೆ ಕೊಡಿಸಿ ಅವತರಿಸಲಪ್ಪಣೆಯಿತ್ತ —

ದತ್ವಾ ಸರ್ವಾಧಿಕಾರಂ ಸ್ವಂ ಲೋಕೋದ್ಧರಣ ಹೇತವೇ
ಬ್ರಹ್ಮ ವಾಯೂ ಅಪಿ ತಥಾ ಲಾತವ್ಯಾಯ ಸ್ವ ವೈಭವಂ॥

ಶೇಷಾಯಾ ರಮಾಕಾಂತೋ ಹರಿರ್ಲಾತವ್ಯಮಬ್ರವೀತ
ಭಿನಾ ವಾಣೀಪತಿತ್ವಂ ಮೇ ದತ್ತವಂತೇ ಚ ಕಿಂ ವದೇ ॥ (ಸ್ವಾ.ವೃ.ಆ.21,10)

ಮಧ್ವಮತ ವಿಘ್ನಗಳನ್ನು ನಿವಾರಿಸಿ, ಅವರ ಸಿದ್ಧಾಂತವನ್ನು ಇನ್ನಷ್ಟು ದೃಢಪಡಿಸಿ ವಿಸ್ತರಿಸಲು ಸಮಾಲೋಚಿಸಿ, ಲಾತವ್ಯರು ಅವತರಿಸಲು ಸಿದ್ಧರಾದರು.[1]

---

21. If what one Bhavi Brahma has done becomes upset, another Bhavi Brahma himself must set right. Thus the double purpose of his life, the reforms of the Mutt customs, and the strengthening of Madhvaism were both achieved by his presence and works. (ಎಚ್.ಸುಬ್ಬರಾವ್, ಲಕ್ಷಾಲಂಕಾರ, ಪು.6,7).

ಮಧ್ವಾವತಾರದ ಸನ್ನಿವೇಶ ಇನ್ನೂ ಮಹತ್ತರವಾಗಿದ್ದರಿಂದ ತಮ್ಮ ಅಭಿನಿಶ್ಚಯಕ್ಕಾಗಿ ಅವರು ಸ್ವಸ್ವರೂಪವನ್ನು ಅಪವಾದಾತ್ಮಕವಾಗಿ ಘೋಷಿಸಿಕೊಂಡರು. ಅದರಿಂದ ಈ ಭೂಮಿಯಲ್ಲಿ ಪೂರ್ತಿ 100 ವರ್ಷವೂ ಅವರು ಕಾಣಿಸಿರಲಿಲ್ಲ. ಆದರೆ ಅಷ್ಟು ಮಹತ್ವದಲ್ಲದ ಲಾತವ್ಯಾವತಾರದಲ್ಲಿ ವಾದಿರಾಜರು 120 ವರ್ಷಗಳ ತಮ್ಮ ಪೂರ್ಣಾಯುಷ್ಯ ಮುಗಿವವರೆಗೂ ಸ್ವಸ್ವರೂಪವನ್ನು ಬಚ್ಚಿಡಬೇಕಾಯಿತು. ದೇವತೆಗಳು ಭೂಮಿಯಲ್ಲಿದ್ದಾಗ ಮಾನವರಂತಿರುವರು —

ಮಾನುಷಂ ಮಾನುಷೋ ಧರ್ಮೋ ದೇವಾ ಅಪಿ ಹಿ ಮಾನುಷೇ
ಮನುಷ್ಯವತ್ಪ್ರವರ್ತಂತೇ ನೈವೈಶ್ವರ್ಯ ಪ್ರಕಾಶಿನಃ ॥ (ತೈತ್ತಿರೀಯ ವ್ಯಾಖ್ಯಾನ, ಮಧ್ವ)

ನ ಧರ್ಮೋ ದೇವತಾನಾಂ ಪ್ರಕಾಶನಂ ಪರಂ ನೃಷು। (ಮ.ಭಾ.ತಾ.ನಿ. 11—42)

ಪ್ರಜಾಯತೇ ಹಿ ಯತ್ಕಾಲೇ ಯಥಾಯೋಗಂ ಯಥಾವಯಃ
ತಥಾಪ್ರವರ್ತನಂ ಭವೇದ್ದೇವಕಾನಾಂ ಸಮುದ್ಯತೇ ॥ (ಮ.ಭಾ.ತಾ.ನಿ.13,9)

ಧರ್ಮೋ ಹಿ ಸರ್ವವಿದುಷಾಮಪಿ ದೇವತಾನಾಂ
ಪ್ರಾಪ್ತೇ ನರೇಷು ಜನನೇ ನರವತ್ಪ್ರವೃತ್ತಿಃ ॥ (ಮ.ಭಾ.ತಾ.ನಿ.14,4)

"Sri Madhvacharya kept the ideal of Vayu and his manifestations (Hanuman and Bhima) before Men's eyes, and though he claimed to be an incarnation of Vayu he acted only like a human being on earth, and said that that was the rule of conduct of the Devas while on earth (B.Venkoba Rao, Life of Vyasaraja, xxii).

ಅಹಂ ತು ಮಾನುಷಃ ಕುರ್ಯಾಂ ಮಹಾಕಾರ್ಯಂ ಕಥಂ ಮತಿಃ॥ ಎಂದೇ ಹೇಳಿ 'ಪರೋಕ್ಷ ಪ್ರಿಯಾ ಹಿ ದೇವಾಃ' ಎಂಬ ಐತರೇಯೋಕ್ತಿಯನ್ನು ನಿಜ ಮಾಡಿದ್ದಾರೆ. ಹೀಗೆ ಸ್ವರೂಪಗೂಹನವು ದೇವತೆಗಳ ಮುಖ್ಯ ವರ್ತಿಸುವ ಧರ್ಮವಾಗಿರುವುದರಿಂದ, ಅವರ ಮಾನುಷಾವತಾರವನ್ನು ನಾವು ಕೂಡ ಮಾನವೀಯವಾಗಿಯೇ ಪರಿಶೀಲಿಸುವುದಗತ್ಯ.

ಆದರೆ ವಾದಿರಾಜರ "ಜೀವನಕ್ಕೆ ಸಂಬಂಧಿಸಿದ ಐತಿಹಾಸಿಕ ಘಟನೆಗಳು ಐತಿಹ್ಯಗಳಾಗಿ ಪರಿಣಮಿಸಿರುವುದರಿಂದ, ಅವರ ನೈಜ ಜೀವನದ ರೂಪುರೇಷೆಗಳನ್ನು ಚಾರಿತ್ರಿಕವಾಗಿ ಗುರುತಿಸುವುದು ಬಹು ಕಷ್ಟಸಾಧ್ಯವಾದ ಕೆಲಸವೇ ಸರಿ" (ಜಿ.ವರದರಾಜರಾವ್, ವಾದಿರಾಜರ ಕೃತಿಗಳು, ಪೀಠಿಕೆ, 1). ನಮ್ಮಲ್ಲಿ ಹೆಚ್ಚಿನ ಮಹನೀಯರ ಬಗ್ಗೆ ಚಾರಿತ್ರಿಕ ವಿವರಗಳೇ ಸಿಕ್ಕದಿರುವಾಗ ವಾದಿರಾಜರ ಬಗ್ಗೆ ಒಂದೆರಡು ಒಳ್ಳೆಯ ಗ್ರಂಥಗಳಿರುವುದು ಮಾತ್ರ ನಮ್ಮ ಪುಣ್ಯವೆನ್ನಬೇಕು. ವಾದಿರಾಜರ ಶಿಷ್ಯ ರಾಘವಾರ್ಯಸುತ ರಘುನಾಥಾಚಾರ್ಯರು ಅವರ ಜೀವನದ ಪ್ರತ್ಯಕ್ಷ ದರ್ಶಿಗಳಾಗಿದ್ದು ಸು.1590ರಲ್ಲಿ ರಚಿಸಿದ 'ವೃತ್ತರತ್ನಸಂಗ್ರಹ' 187 ಶ್ಲೋಕಗಳ – 3 ಪ್ರಬಂಧಗಳನ್ನೊಳಗೊಂಡ ಅಧಿಕೃತ ದಾಖಲೆಯಾಗಿದೆ; ಆದರೆ ಆಗಲಿನ್ನೂ ವಾದಿರಾಜರು ಬದುಕಿದ್ದ ಕಾರಣ, ಅವರ ಕೊನೆಯ ಪರ್ಯಾಯವಾಗಲಿ,– ವೃಂದಾವನ ಪ್ರವೇಶವಾಗಲಿ – ಸ್ವರೂಪ ವಿಚಾರವಾಗಲಿ ಅದರಲ್ಲಿ ಪ್ರಸ್ತಾಪಗೊಂಡಿಲ್ಲ. 1640ರ ಸುಮಾರು ಶಿಷ್ಯವಿಪ್ರನ ಸ್ವಪ್ನದಲ್ಲಿ ವಾದಿರಾಜರು ತಮ್ಮ ಸ್ವರೂಪ ಘೋಷಿಸಿಕೊಂಡ ಮೇಲೆ, ಅವರ ಪ್ರಶಿಷ್ಯ ವೇದನಿಧಿಗಳ ಶಿಷ್ಯ ರಾಮಚಂದ್ರಾಚಾರ್ಯರು, ಸು.1645ರಲ್ಲಿ ಇವೆಲ್ಲ ವಿಷಯಗಳನ್ನೊಳಗೊಂಡ 501 ಶ್ಲೋಕ – 9 ಖಂಡಗಳ 'ವಾದಿರಾಜ ಗುರುವರ ಚರಿತಾಮೃತ' ರಚಿಸಿದರು; ಈ ಸರಳ ಸುಂದರ ಕೃತಿ ಸರ್ವಸಂಗ್ರಾಹಕ ಹಾಗೂ ಸಂಗ್ರಾಹ್ಯವಾಗಿದೆ. ಈಚಿನ ಶಠಾಪುರಾಚಾರ್ಯರ 'ವಾದಿರಾಜ ಗುಣರತ್ನ ಮಾಲಾ' ಮಾತ್ರ ಕೆಲ ಅಂಶಗಳನ್ನು ತಿದ್ದಿಕೊಂಡುದರಿಂದ ಅಷ್ಟು ಅಧಿಕೃತವೆನಿಸದು. (ಈ ಮೂರೂ ಸಂಸ್ಕೃತ ಶ್ಲೋಕ ಗ್ರಂಥ).

## (2) ಜನನ, ಬಾಲ್ಯ

ಉಡುಪಿಯ ಉತ್ತರಕ್ಕೆ ಹೆದ್ದಾರಿಯಲ್ಲೇ 18 ಮೈಲು ದೂರದ ಕುಂಭಾಸಿ (ಕುಂದಾಪುರ ತಾಲೂಕು) ಕುಂಭೇಶ್ವರನಿರುವ ಶೈವ ಕ್ಷೇತ್ರ.[2] ಭೀಮನ ಖಡ್ಗದಿಂದ ಹತನಾದ ಕುಂಭಾಸುರನಿಂದ ಇದು ಕುಂಭಾಸಿ ಎನಿಸಿತು – ಯತ್ರ ಕುಂಭಾಸುರಸ್ಯಾಸಿರಾ ಭಾಸೀತೆ ದ್ರುಪದೀಪತಿಃ ॥ (ತೀರ್ಥಪ್ರಬಂಧ, 47). ಹರಿಹರ ಸಾನ್ನಿಧ್ಯದ ಅಂಗದ ಎದುರು

---

2. ರೌಪ್ಯ ಪೀಠ ಕುಮಾರಾದ್ರಿಃ ಕುಂಭಾಸೀ ಚ ಧ್ವಜೇಶ್ವರಃ
ಕ್ರೋಡ ಗೋಕರ್ಣ ಮೂಕಾಂಬಾಃ ಸಪ್ತೈತಾ ಮೋಕ್ಷದಾಯಕಾಃ ॥

ಸೂರ್ಯ—ಚಂದ್ರ ಪುಷ್ಕರಿಣಿಗಳಿದ್ದು, ಬರಗಾಲದಲ್ಲಿ ಬಂದಿದ್ದ ಗೌತಮರಿಂದಾಗಿ ಇದು ಗೌತಮ ಕ್ಷೇತ್ರವಾಗಿದೆ. ಇದರ ಈಶಾನ್ಯದಲ್ಲಿ ಆನೆಯ ಗುಡ್ಡವೂ ವಿಶ್ವಂಭರ ಗಣಪತಿಯ ಗುಡಿಯೂ, ಅದರಾಚೆ 6 ಮೈಲು ಅಂತರಕ್ಕೆ ಹೂವಿನ ಕೆರೆಯಿರುವ ಗ್ರಾಮವೂ ಇವೆ. ಅಲ್ಲಿಯ ಬತ್ತದ ಗದ್ದೆಗಳ ಮಧ್ಯೆ ಮನೆ ಮಾಡಿಕೊಂಡಿದ್ದ ತೌಳವ ಕುಲದ ಸಾಮವೇದೀ ವಿಪ್ರ ರಾಮಾಚಾರ್ಯ—ಸರಸ್ವತೀ (ದಂಪತಿಯನ್ನು ದೇವಭಟ್ಟ—ಗೌರೀದೇವಿ ಎನ್ನುವುದು ರೂಢಿ. (ಮಧ್ಯಗೇಹಭಟ್ಟರಂತೆ ಅವರಿಗೊಬ್ಬ ಮಗಳಿದ್ದರೂ) ಮಗನಿಲ್ಲದ ಕೊರತೆ —

ಸಂತಾನವಾನ ಕನ್ಯಕಯಾ ಅಪ್ಯಃ ಸುಗುಣಮಾತ್ಮಜಂ (ವಾ.ಗು.ವ.1,7)

ಕೃಷ್ಣನ ಪರ್ಯಾಯ ಪೂಜೆಗೆ ಮಧ್ವರು ನಿರ್ಮಿಸಿದ 8 ಮಠಗಳಲ್ಲಿ ಅವರ ಸೋದರ ವಿಷ್ಣುತೀರ್ಥರಿಂದಾರಂಭವಾದ[3] ವಿಷ್ಣುತೀರ್ಥ ಮಠ 19ನೆಯ ವಾಗೀಶತೀರ್ಥರ ಕಾಲಕ್ಕೆ ಕುಂಭಾಸಿ ಮಠವೆನಿಸಿತು. ಅವರೊಮ್ಮೆ ಕುಂಭಾಸಿಯಲ್ಲಿದ್ದಾಗ ರಾಮಾಚಾರ್ಯ ದಂಪತಿ ಅವರ ಅನುಗ್ರಹಕ್ಕೆ ಬಂದರು. ಗೌರೀದೇವಿ ಮಗನಾದರೆ ಲಕ್ಷಾಭರಣದಿಂದ ಭೂವರಾಹನನ್ನು ಸೇವಿಸುವ ಹರಕೆ ಹೊತ್ತಳು. ಅವತಾರಿ ಮಗುವಿನ ಕನಸು ಕಂಡ ಗುರುಗಳು ಪುತ್ರವಂತರಾಗಲು ಹರಸಿ ಮಂತ್ರಾಕ್ಷತೆ ಕೊಡುತ್ತ, ಮಗುವನ್ನು ಭೂವರಾಹನ ಸೇವೆಗೆ ಕೇಳಿದರು. ದಂಪತಿ ಖಿನ್ನರಾಗಲು 'ಮನೆಯಲ್ಲಿ ಹುಟ್ಟಿದರೆ ನಿಮಗಿರಲಿ, ಹೊರಗೆ ಹುಟ್ಟಿದರೆ ನಮಗೆ ಬರಲಿ' ಎಂದು ಸಂತೈಸಿ ಕಳಿಸಿದರು.

ಗರ್ಭಿಣಿಯಾದ ಗೌರೀದೇವಿಗೆ ಸಚ್ಛಾಸ್ತ್ರ ಕೇಳುವ, ತೀರ್ಥಕ್ಷೇತ್ರಗಳಲ್ಲಿ ಮಿಂದು ಸೇವೆಗೈವ ವಿಚಿತ್ರ ಬಯಕೆಯಾಗಿದ್ದುವು. ಒಂಬತ್ತು ತಿಂಗಳಾಗುತ್ತ ಆಕೆ ಮನೆಯಾಚೆ ಹೋಗದಂತೆ ಕಟ್ಟಪ್ಪಣೆಯಾಯಿತು. ಕ್ರಿ.ಶ.1480ರ ಶಾರ್ವರೀ ಸಂವತ್ಸರ ಮಾಘ ಶುದ್ಧ ದ್ವಾದಶಿ ಪಾರಣೆಯ ಹೊತ್ತಿಗೆ ಹಸುವೊಂದು ಕೆರೆಯಾಚೆಯ ಗದ್ದೆಯಲ್ಲಿ ಪೈರು

---

3. ತೇಷು ಮುಮುಕ್ಷು ವಿಷ್ಣುತೀರ್ಥ ಪದ್ಮನಾಭಾಖ್ಯ ಯೋಗಿನೇ
ಆತ್ಮಕ್ತ ದೇಹಸ್ತತ್ರಾದ್ಯೋ ವರ್ಣಯಿಷ್ಯತಿ ತನ್ಮತಂ (— ಪದ್ಮಪುರಾಣ)

ವಿಷ್ಣುತೀರ್ಥರೂ ಮುಮುಕ್ಷುಯೋಗಿಯಾಗಿ ಕುಮಾರಪರ್ವತದಲ್ಲಿದ್ದು, ಮುಂದೆ ಕಲಿಯಲ್ಲಿ ಗ್ರಂಥ ತೆಗೆದು ಮಧ್ವಮತ ಉದ್ಧರಿಸುವರೆಂಬ ನಂಬಿಕೆಯಿದೆ. ಇವರ ಪೂರ್ವಾಶ್ರಮ ನಾಮ ತಿಳಿದಿಲ್ಲ.

ತಿನ್ನತೊಡಗಲು ಆಚಾರ್ಯರ ಅಪ್ಪಣೆಯಂತೆ[4] ಅಬ್ಬಹೋದ ಗೌರೀದೇವಿ ಅಲ್ಲೇ ತೇಜಸ್ವಿ ಮಗುವನ್ನು ಹೆತ್ತಳು. ವಾಗೀಶರು ಇದನ್ನೆಲ್ಲ ಮೊದಲೇ ಅರಿತು ಕಳಿಸಿದ ಶಿಂಗನರ ನೆರವಿನಿಂದ ಮಗು ಚಿನ್ನದ ಹರಿವಾಣಕ್ಕಿಳಿದಿತ್ತು.[5] ಬಳಿಕ ತಾಯಿ–ಮಗುವನ್ನು ಮನೆಗೂ ಸುದ್ದಿಯನ್ನು ಗುರುಗಳಿಗೂ ಮುಟ್ಟಿಸಲಾಯಿತು. ಅವರು ಬಂದು (32 ಲಕ್ಷಣಗಳ) ದಿವ್ಯ ದೇಹದ ಮಗುವನ್ನು ಕಂಡು 'ಭಾವಿ ಸಮೀರ, ನಿಮಗೆ ನಮನ' ಎಂದುಕೊಂಡು ಆದರದಿಂದ ಮುಟ್ಟಿದರು —

ಭಾವಿ ವಾಯೋ ನಮಸ್ತುಭ್ಯಂ ಬಾಲವರ್ಯಪ್ರಸೀದ ನಃ (ವಾ.ಗು.ಚ.1,27)

5 ವರ್ಷ ಹೀಗೇ ಆಡಿಸಿ ಬೆಳೆಸಿರೆಂದ ಗುರುವಾಕ್ಯ ಹೆತ್ತವರಿಗೆ ಹರ್ಷ ನೀಡಿತು. 11ನೆಯ ದಿನ ತಂದೆ ಜಾತಕರ್ಮ ಮಾಡಿ ಭೂವರಾಹನ ಕೃಪೆಯಿಂದ ಹುಟ್ಟಿದನಾಗಿ ವರಾಹನೆಂದು ಹೆಸರಿಟ್ಟರು. ಅನಂತರ ಅಕ್ಷರಾಭ್ಯಾಸದಲ್ಲಿ ಅಲೌಕಿಕ ಪ್ರಗತಿದೋರಿದ ಮಗು ಅಸಾಮಾನ್ಯ ವೆಂದರಿತರು. 5ನೆಯ ವರ್ಷಕ್ಕೇ ಈ ದಿವ್ಯ ಮಗುವಿಗೆ ಮುಂಜಿಯೂ ಆಯಿತು (1485). ಗುರ್ವಾಜ್ಞೆಯಂತೆ ಉಡುಪಿಗೆ ಬಂದ ದಂಪತಿಗೆ ಮಗುವನ್ನರ್ಪಿಸುವಲ್ಲಿ ದುಗುಡವಾದರೂ, ಕೆಲ ಕಾಲ ಅವರೂ ಅಲ್ಲೇ ಇರಬಹುದೆನ್ನಲು ಸಂತಸಪಟ್ಟರು.

ವಾಗೀಶರ ಪೂರ್ವಾಶ್ರಮ ಬಂಧು ಶ್ರೀನಿವಾಸಾಚಾರ್ಯರು ಮಗನನ್ನು ಕಳೆದುಕೊಂಡು ವೈರಾಗ್ಯ ಹೊಂದಿ ಸನ್ಯಾಸ ಪಡೆದು ವಿದ್ಯಾನಿಧಿತೀರ್ಥರೆನಿಸಿ[6] ಅಲ್ಲೇ ಇದ್ದರು.

---

4. ಇದರಿಂದ ಮಗಳು ಮದುವೆಯಾಗಿ ಹೋಗಿದ್ದಳೆಂದು ಊಹಿಸಬೇಕಿದೆ. ಮಧ್ವ ಸೋದರಿಯಂತೆ ಇವಳ ಹೆಸರೂ ತಿಳಿದಿಲ್ಲ.

5. ಈ ಅಂಶ 'ವೃತ್ತರತ್ನ ಸಂಗ್ರಹ'ದಲ್ಲಿಲ್ಲ. ಆದರೆ ವ್ಯಾಸರಾಯರ ಸೋದರಳಿಯ ಹಾಗೂ ಶಿಷ್ಯ ಶ್ರೀನಿವಾಸತೀರ್ಥರಿಂದ 'ವ್ಯಾಸವಿಜಯ'ದಲ್ಲೂ ಕಲ್ಪಿತವಾಗಿದೆ. ಇಲ್ಲಿ ಭೂಸ್ಪರ್ಶವಾಗಬಾರದೆಂಬ ಭಾವವಿದ್ದರೂ 'ಋಜುದೇವಃ ಸ ಜಾತಮಾತ್ರೋಧರಣ್ಯಾಮವತೀರ್ಣವಾನ ಎಂಬ ಸಾಲು ಇದರ ಬೆನ್ನಲ್ಲೇ ಬರುತ್ತದೆ (ವಾ.ಗು.ಚ.1,31). ಅವತಾರ ಸ್ಥಳವಿದು 'ಗೌರೀ ಗದ್ದೆ' ಎನಿಸಿ ಇಂದಿಗೂ ವಾದಿರಾಜರ ಉತ್ಸವಕ್ಕೆ ಅಕ್ಕಿಯನ್ನು ನಿವೇದಿಸುತ್ತದೆ. ಗದ್ದೆಯಲ್ಲಿ ವಿಶ್ವಪ್ರಿಯರು ಕಟ್ಟಿಸಿದ್ದ ಚಿಕ್ಕ ಗುಡಿಯನ್ನು ನವೀಕರಿಸಿ ವಿಶ್ವೇಂದ್ರತೀರ್ಥರು ಕಾರ್ಕಳದಲ್ಲಿ ಕೆತ್ತಿಸಿದ ಶಾಲಿಗ್ರಾಮ ಶಿಲೆಯ ಒಂದೂವರೆ ಅಡಿ ವಾದಿರಾಜ ಪ್ರತಿಮೆಯನ್ನು 6.3.1941ರಂದು ಸ್ಥಾಪಿಸಿದೆ. ಜೀರ್ಣ ಮನೆ ಹಾಗೆಯೇ ಇದೆ.

6. ಉತ್ತರಾದಿಮಠದ ವಿದ್ಯಾನಿಧಿ 1444ರಲ್ಲಿಯೇ ಕಾಲವಾಗಿದ್ದರು.

ವರಾಹನ ವಿದ್ಯಾಭ್ಯಾಸ ಅವರಿಗೆ ಒಪ್ಪಿಸಲಾಯಿತು. ಜನ್ಮತಃ ಸರ್ವಜ್ಞನಾದರೂ ಮಾನವರಂತೆ ನಟಿಸಿ 3 ವರ್ಷಗಳಲ್ಲಿ ವರಾಹನು ವಿದ್ಯೆಗಲಿತ. ವಾಗೀಶರಿಂದ ಸನ್ಯಾಸ ಪಡೆಯಲೆಳಸಿದಾಗ, ಮತ್ತೆ ದುಃಖಿತರಾದ ತಾಯಿತಂದೆಗಳಿಗೆ ಅಂಥವನೇ ಇನ್ನೊಬ್ಬ ಮಗ ಹುಟ್ಟುವನೆಂದರು ಗುರುಗಳು. ಅದರಂತೆ ಸು.1487ರಲ್ಲಿ ವರಾಹನಿಗೊಬ್ಬ ತಮ್ಮ ಹುಟ್ಟಿದ.[7] ಬಳಿಕ ವಾಗೀಶರು ವರಾಹನಿಗೆ 8ನೆಯ ವಯಸ್ಸಿನಲ್ಲಿ (1488) ದೀಕ್ಷೆಯಿತ್ತು, ವಾದಿಗಳನ್ನು ಸೋಲಿಸುವವರಾಗಿ "ವಾದಿರಾಜ" ಎಂದೂ, ಗುರುಗಳಲ್ಲಿ ರಾಜರಂತಾಗುವುದರಿಂದ 'ಗುರುರಾಜ' ಎಂದೂ ಕರೆದರು. ವಾದಿರಾಜರ ಸಮಕಾಲೀನ ರಘುನಾಥಾಚಾರ್ಯರು ಈ ಹೆಸರನ್ನು ಹೀಗೆ ಸಮರ್ಥಿಸಿದ್ದಾರೆ —

ನಿಜೀತವೇಷ್ಯನಾಭೂವಮಾ ಯಂ ನಮಂತಿ ಹಿ ವಾದಿನಃ
ತಸ್ಯೈವ ವಾದಿರಾಜತ್ವಂ ಯುಕ್ತಮನ್ವರ್ಥಕಂ ಹಿತಾ ॥ 45 ॥

ಕವೀಂದ್ರವಿದ್ವತ್ಪ್ರವರಾಃ ಪೃಥಿವ್ಯಾಂ
ಗ್ರಾಮಣಿವರ್ಯಾಃ ಪ್ರಭವೋ ನಮಂತಿ।
ಯಂ ಭೂಪವರ್ಯಾ ಅಪಿ ಸರ್ವರಾಜಃ
ನ ವಾದಿರಾಜೋ ನ ತು ನಾಮಮಾತ್ರಾತ್ ॥ 46 ॥ (ವ್ಯ.ರ.ಸಂ.1)

ವಾದಿರಾಜರು ವಿದ್ಯಾನಿಧಿಗಳ ಕಾಲಾನಂತರ ವಾಗೀಶರಿಂದಲೂ ವೇದಾಂತ ಓದಿದರು.[8] ತರುವಾಯ (ಸು.1492) ಹದಿವಯದಲ್ಲಿ ಹೂವಿನಕೆರೆಯ ತಮ್ಮ ಮನೆಗೆ ಹೋದವರು

---

7. ಇವರೇ ಮುಂದೆ ಸುರೋತ್ತಮತೀರ್ಥರೆನಿಸಿದರು. ಭಂಡಾರಕೇರಿ ಮಠಕ್ಕೆ. (ಇದು ಮಧ್ವ ಸ್ಥಾಪಿತ ಭೀಮನಕಟ್ಟೆಯ ಮಠದ ಕವಲಾಗಿ, ಬಹುಶಃ ವಾದಿರಾಜರು ತಮ್ಮ ತಮ್ಮನನ್ನರ್ಹಿಸಿದಾಗ ದ್ವಂದ್ವ ಮಠವಾದಂತೆ ತೋರುವುದು. ಅಲ್ಲದೆ ಇತ್ತೀಚೆ ಅಷ್ಟಮಠಗಳಲ್ಲಿ ಒಂದಾದ ಪಲಿಮಾರು ಮಠದೊಡನೆ ಸಂಲಗ್ನಗೊಂಡಿದೆ). ಇವರ ಪೂರ್ವಾಶ್ರಮನಾಮ ತಿಳಿದಿಲ್ಲ, ಮಧ್ವ ಸೋದರರಂತೆ.

8. ಓದುವ ಪ್ರಾಯದಲ್ಲೇ ಇವರು ರಚಿಸಿದರೆಂಬ ಉಗಾಭೋಗ —

ಗುರುಭಕುತಿ ಬೇಕು, ಹಿರಿಯರ ಕರುಣ ಬೇಕು
ಹರಿಕಥೆಗಳ ನಿತ್ಯ ಕೇಳುತಿರಬೇಕು
ವಿರಕುತಿ ಬೇಕು, ವಿಷ್ಣುವಿನಾರಾಧನೆ ಬೇಕು
ವರಮಂತ್ರ ಜಪ ಬೇಕು, ತಪ ಬೇಕು
ಪರಗತಿಗೆ ಸಿರಿ ಹಯವದನನ ಪರಮಾನುಗ್ರಹ ಬೇಕು,
ವಿಷಯ ನಿಗ್ರಹಿಸಬೇಕು ॥

ನಿಜಕ್ಕೂ 'ಅರಳಿದ ಕೆಂದಾವರೆಯ' ಎಂಬ ಸುಳಾದಿಯ 4ನೆಯ ನುಡಿಯಾಗಿದೆ. (ವಾ.ಕೃ.ಪು.16).

ತಾಯಿಗೆ ವಿಯೋಗವೆನಿಸದಿರಲೆಂದು ತಮ್ಮ ಕಂಚಿನ ಪ್ರತಿಮೆ ಮಾಡಿಸಿಕೊಟ್ಟರು. (32 ದಿವ್ಯ ಲಕ್ಷಣವುಳ್ಳ ಪ್ರತಿಮೆಯಿಂದಿಗೂ ಸೋದೆಯ ಮಠದಲ್ಲಿದೆ). ಜೊತೆಗೆ ಲಕ್ಷಾಭರಣದ ಅವಳ ಹರಕೆಯನ್ನೂ ಪೂರೈಸುವುದಾಗಿ ತಿಳಿಸಿ, ಗುರ್ವಾಜ್ಞೆಯಿಂದ ತಮ್ಮ ಹೆಸರನ್ನು ಸಾರ್ಥಕಗೊಳಿಸಲೆಂಬಂತೆ ದೇಶ ಸಂಚಾರ ಹೊರಟರು[9]—

ನ ನಿರ್ಜಗಾಮ ಸ್ವಗುರೂಕ್ತ್ಯವಾದಿ
ರಾಜೇತಿ ನಾಮಾರ್ಥಯುತಂ ಹಿ ಕುರ್ವನ್ ।
ತೀರ್ಥಾಟನ ವ್ಯಾಜತ ಏವ ಜೇತು
ಮಿಯಾಯ ವಾದಿ ಸಮೂಹಮಾಶು ॥ 15 ॥ (ವ್ಯ.ರ.ಸಂ.1)

ತಾವು ಸಂದರ್ಶಿಸಿದ ತೀರ್ಥ ಕ್ಷೇತ್ರಗಳನ್ನೆಲ್ಲ ವರ್ಣಿಸಿ 'ತೀರ್ಥಪ್ರಬಂಧ'ದಲ್ಲಿ ಒಟ್ಟುಗೂಡಿಸಿದರು.[10]

## (3) ತೀರ್ಥಾಟನ

ಮಾರ್ಗಮಧ್ಯೆ ಮದುವೆಯ ಸಂಭ್ರಮವೊಂದರಲ್ಲಿ ವರನ ಹಾಗು ಸೇರಿದ್ದ ವಿಧಿ ನಾಗರ ಅವನ ತಲೆ ಕಚ್ಚಿ ವಿಪತ್ತು ಒದಗಿತ್ತು. ಕಿಂಕರ್ತವ್ಯಮೂಢನಾದ ಕನ್ಯಾಪಿತೃ ತರುಣ ಯತಿ ವಾದಿರಾಜರು ಸನಿಹದಲ್ಲಿರುವುದನ್ನು ಕೇಳಿ ಮೊರೆ ಹೊಕ್ಕನು. ಅವರು ದಯೆದೋರಿ ವರನ ದೇಹಕ್ಕೆ ತೀರ್ಥ ಪ್ರೋಕ್ಷಿಸಿ ವರನನ್ನೂ ನಿಬ್ಬಣವನ್ನೂ ಉಜ್ಜೀವಿಸಿದರು. ಮದುಮಕ್ಕಳ ಕಲ್ಯಾಣಾರ್ಥ ಹಯವದನಾಂಕಿತದಲ್ಲಿ ತಾವು ಕಟ್ಟಿದ 'ಲಕ್ಷ್ಮೀ

---

9. ವಾಗೀಶರು 1518ನೆಯ ಇಸ್ವಿ ಚೈತ್ರ ಬಹುಳ ಬಿದಿಗೆಯಂದು ಉಡುಪಿಯಲ್ಲಿ ಕಾಲವಾಗುವತನಕ ವಾದಿರಾಜರಿಗೆ 2 ತಿಂಗಳ ಪರ್ಯಾಯ ತೊಡಕಾಗದೆ, ಸು. 1500ಕ್ಕೆ ಮೊದಲೇ ತೀರ್ಥಾಟನ ಕೈಗೊಂಡಿರಬೇಕು.
About 1500 Vadiraja visited Badri. (H.Subbarao, Strength of Madhvaism, p.120).

10. ವಾದಿರಾಜರು ತೀರ್ಥಾಟನಗೈದಂತೆ ಈ ಕೃತಿ ಶತಮಾನದ ಆದಿಯಲ್ಲಾಯಿತೆಂದು ಕೆಲವರೂ, ಶತಮಾನಾಂತ್ಯದ ಘಟನೆಗಳ ಉಲ್ಲೇಖವಿರುವುದರಿಂದ ಕೊನೆಗಾಯಿತೆಂದು ಕೆಲವರೂ ಅಭಿಪ್ರಾಯಿಸಿದ್ದಾರೆ. ತತ್ಕಾಲಕ್ಕೆ ಶ್ಲೋಕ ರಚಿಸಿ ನಂತರ ಸಂಕಲಿಸಿರಬೇಕು.

ಶೋಭಾನೆ'ಯ ಹಾಡನ್ನು ಹೇಳಿಕೊಟ್ಟರು.[11] (ಅದನ್ನಿಂದಿಗೂ ಹಾಡುವ ರೂಢಿಯಿದೆ, ವಿಶೇಷತಃ ವಿವಾಹದಲ್ಲಿ).

ಇನ್ನೊಂದೆಡೆ ಸಿರಿವಂತನೊಬ್ಬ ಸಂತಾನಾರ್ಥ ಅವರನ್ನು ಪ್ರಾರ್ಥಿಸಿಕೊಳ್ಳಲು 'ಈ ಜನ್ಮದಲ್ಲಿದು ಶಕ್ಯವಿಲ್ಲ, ಧನವನ್ನು ಧರ್ಮಕ್ಕೆ ವಿನಿಯೋಗಿಸು' ಎಂದರು. ಇದರಿಂದಾತ ವ್ಯಾಕುಲಗೊಂಡರೂ, ಕಾಲಾಂತರ ತುರಾಕ ಮಂತ್ರವಾದಿ ಇತ್ತ ಹಣ್ಣು ತಿಂದ ಮಡದಿಯಲ್ಲಿ ಮಗನನ್ನು ಪಡೆದು ಸಂತಸಪಟ್ಟ. ನಂತರ ಮತ್ತೊಮ್ಮೆ ಬಂದಾಗ ವಾದಿರಾಜರು ಇದನ್ನಾಲಿಸಿ ಅವನನ್ನು ಸಕುಟುಂಬ ಕರೆಸಿಕೊಂಡರು. ಮಗುವನ್ನು ನೋಡಿ ನಕ್ಕು 'ಈತ ನಿನಗರ್ಹನಲ್ಲ' ಎಂದರು. ಏಕೆಂದು ಪ್ರಶ್ನಿಸಲು 'ಇಗೋ ನೋಡು' ಎಂದು ತೀರ್ಥ ಪ್ರೋಕ್ಷಿಸಿದರು. ಹುಡುಗನ ಭೂತಾಕಾರ ನೋಡಿ ತಂದೆ ಮೂರ್ಛೆ ಹೋದ. ಎಚ್ಚತ್ತು 'ಮಗನೆಲ್ಲಿ?' ಎನ್ನಲು, ಗುರುಗಳೇ ಭೂತಕ್ಕೆ ಆಜ್ಞಾಪಿಸಿದರು – 'ಯಾರು ನೀನು, ಬೇಗ ಹೇಳು.' ಅದು ಅಂಜಿ 'ಮಾಂತ್ರಿಕನಪ್ಪಣೆಯಂತೆ ಮಗುವಾಗಿದ್ದು 6 ವರ್ಷಗಳಲ್ಲಿ ಹೆತ್ತವರ ಕೊಂದು ಹೋಗಲಿದ್ದೆ. ದಯವಿಟ್ಟು ಕ್ಷಮಿಸಿ' ಎನ್ನಲು ವಾದಿರಾಜರು 'ನಿನಗೆ ಬಲ ನೀಡುವೆ, ಆ ಕೃತಘ್ನ ಮಾಂತ್ರಿಕನನ್ನು ಕೊಂದು ಸ್ವೇಚ್ಛೆಯಾಗಿರು, ಹೋಗು' ಎಂದುಸುರಿ, ಸಿರಿವಂತನನ್ನೂ ಸಂತೈಸಿದರು. ಆತ ಸಾವಿರ ರೂಪಾಯಿ ಅಪಹರಿಸಿದ ಮಾಂತ್ರಿಕನನ್ನು ಶಪಿಸಿ, ಗುರುಗಳೆಂದಂತೆ ಸದ್ಧರ್ಮಪರನಾದ.

ವಾದಿರಾಜರು ಭೀಮಾ ತೀರದ ಪಂಢರಪುರದಲ್ಲಿ ವಿಠಲನನ್ನು ಸೇವಿಸುತ್ತ ಇರುವಲ್ಲಿ, ಒಂದಿರುಳು ಕಳ್ಳರು ವಾದಿರಾಜರ ಸೇವಕರನ್ನು ಬಂಧಿಸಿದರು; ಆಗ ಏಕಾಕಿಯಾದರೂ

---

11. ಯಾತ್ರಾರಂಭ ದಕ್ಷಿಣ ಕನ್ನಡದಿಂದ – ಹಾಗೂ ಹೇಳಿಕೊಟ್ಟ ಹಾಡು ಕನ್ನಡದ್ದು. ಕಾರಣ ಈ ಘಟನೆ ಕನ್ನಡ ನೆಲದಲ್ಲೇ ಸಂಭವಿಸಿದ್ದೆನ್ನಬಹುದು, 1500ರ ಸುಮಾರು. ಯೋಗಸಿದ್ಧಿಯುಳ್ಳವರಿಂದ ಇಂಥ ಘಟನೆ ನಡೆವುದೂ, ಹತ್ತನೆಯ ವಯಸ್ಸಿಗೇ ಹಾಡು ರಚಿಸತೊಡಗಿದ ಆ ಮಹಾಯೋಗಿಗಳ ಕನ್ನಡ ಹಾಡಿಗೆ ಕೂಡ ಮಂತ್ರಶಕ್ತಿ ಒದಗುವುದೂ ಅಚ್ಚರಿಯಲ್ಲ. ಈ ಘಟನೆ ನಂತರ ಬೇರೆ ಬೇರೆ ಕಥಾಸಂದರ್ಭಗಳ ರೂಪ ತಾಳಿದಂತಿದೆ.

ನಿರ್ಭೀತರಾಗಿದ್ದ ಗುರುಗಳನ್ನು ಕಂಡು ಕಳ್ಳರೇ ಅಂದು ಶರಣಾಗತರಾದರು.[12] ವಾದಿರಾಜರು ಅಲ್ಲಿಂದಲೇ ಇರುತ್ತ, ಜಮೀನುದಾರನೊಬ್ಬ ಬಿಳಿಯ ಕುದುರೆ ತನ್ನ ಕಡಲೆಯ ಹೊಲ ಮೇಯುತ್ತಿರುವುದನ್ನು ನೋಡಿ ಬೆನ್ನಟ್ಟಿ ಬಂದ. ಅದು ಇವರ ಬಿಡಾರ ಸೇರಲು ಸಿಟ್ಟಾಗಿ ಗುರುಗಳಿಗೆ 'ನಿಮ್ಮ ಕುದುರೆ ನನ್ನ ಹೊಲದ ಕಡಲೆಯನ್ನೆಲ್ಲ ತಿಂದಿದೆ' ಎಂದ. ಅವರು 'ನಮ್ಮಲ್ಲಿ ಕುದುರೆಯೇ ಇಲ್ಲ' ಎಂದರೂ ತುಸು ಹೊತ್ತು ಕಾದ. ಕುದುರೆ ಕಾಣದೆ ಆಶ್ಚರ್ಯಗೊಂಡು 'ಸ್ವಾಮೀ, ನನ್ನ ಸಂದೇಹ ಪರಿಹರಿಸಿ' ಎಂದ. ಅವರು 'ನಮ್ಮ ಆರಾಧ್ಯಮೂರ್ತಿ ನಿನ್ನ ಮೇಲೆ ಅನುಗ್ರಹಿಸಿದ. ನೀನೇ ಪುಣ್ಯವಂತ. ನಾಳೆ ಮತ್ತೆ ಹೋಗಿ ನೋಡು' ಎಂದರು. ಮರುದಿನ ಮುಂಜಾನೆ ಹೊಲವೆಲ್ಲ ಬಂಗಾರದ ಕಡಲೆಯ ಗೊಂಚಲು. ಆಶ್ಚರ್ಯಾನಂದಗಳಿಂದ ಜಮೀನುದಾರ ಗುರುಗಳಿಗೆ ಶರಣಾಗಿ ಹೊಲವನ್ನು ದೇವರಿಗರ್ಪಿಸಿದ.[13]

ತರುವಾಯ ವಾದಿರಾಜರು ಪುಣೆ ಪಟ್ಟಣಕ್ಕೈತಂದರು. ಅಲ್ಲಿಯ ಪಂಡಿತರು —

ಉಪಮಾ ಕಾಳಿದಾಸಸ್ಯ ಭಾರವೇರರ್ಥಗೌರವಂ
ದಂಡಿನಃ ಪದಲಾಲಿತ್ಯಂ ಮಾಘೇ ಸಂತಿ ತ್ರಯೋಗುಣಾಃ ॥

ಎಂದುಕೊಂಡು 'ಶಿಶುಪಾಲವಧ'ವನ್ನು ಆನೆಯ ಮೇಲಿಟ್ಟು ಮೆರೆಸುವ ಡಂಗುರ ಕೇಳಿ ಸಭಾಪತಿ[14]ಗೆಂದರು 'ನಮ್ಮವರಲ್ಲೊಂದು ಶ್ರೇಷ್ಠ ಕಾವ್ಯವಿದೆ, ಸ್ವಲ್ಪ ಕಾಲಾವಕಾಶವಿತ್ತರೆ ತರಿಸಿ ತೋರುವೆವು, ಪರೀಕ್ಷಿಸಬಹುದು.' ಸಮ್ಮತಿ ಸಿಕ್ಕಿತು. ವಾದಿರಾಜರು 19 ದಿನಗಳಲ್ಲಿ

---

12. 'ಭಾರತದ ಯೋಗಿಗಳು ವೈದ್ಯನಿಯಮಗಳನ್ನತಿಶಯಿಸಿದ ಮಟ್ಟಕ್ಕೆ ದೇಹವನ್ನು ತರಬೇತುಗೊಳಿಸಿರುವರು. ಅವರಿಗೆ ಪವಾಡ ಸಣ್ಣ ಯೋಗ ತಂತ್ರ. ಇದು ವಿಜ್ಞಾನದ ಪರಿಧಿಯಾಚೆ.' (ಪಿ.ಸಿ.ಸರ್ಕಾರ, ಸುಧಾ, 25.9.1983). ಇನ್ನು ಸ್ವಾಭಾವಿಕ 8 ಸಿದ್ಧಿಯುಳ್ಳ ಋಜುಯೋಗಿಗಳ ಸಾಮರ್ಥ್ಯಕ್ಕೆಣೆಯೇ?

13. ವಿಶ್ವಪ್ರಿಯರ ಕಾಲದ ವರೆಗೂ ಇದರ ಕಡಲೆ ಮಠಕ್ಕೆ ಬರುತ್ತಿತ್ತು. ಇಂಥ ಘಟನೆ ಇನ್ನೂ 2—3 ಕಡೆ ನಡೆದಂತೆ ಕಥಾಂತರಗಳಿವೆ. 'ವಾದಿರಾಜರ ಉಪಾಸ್ಯ ದೇವತೆಯ ಹಿರಿಮೆಯನ್ನು ತಿಳಿಸುವ ಸಲುವಾಗಿ ಇಂಥ ಪ್ರಯತ್ನ ನಡೆದಿದೆ ಎಂದು ಭಾವಿಸಬಹುದು.' (ವಾ.ರಾ.ಕೃತಿಗಳು, ಪೀಠಿಕೆ vi ).

14. ಈತ 'ಹರಿದಾಜಿ' ಎಂದು ಎಂ.ವಿ.ನಾಗರಾಜರಾವ್, 'ದಾದಾಜಿ ಭೋಸಲೆ' ಎಂದು ಕೊರಟಿ ಹೆಸರಿಸಿದ್ದಾರೆ.

— ದಿನಕ್ಕೊಂದು ಸರ್ಗದಂತೆ — 19 ಸರ್ಗಗಳ ಸರಸವಾದ 'ರುಕ್ಮಿಣೀಶ ವಿಜಯ' ಮಹಾ ಕಾವ್ಯ ರಚಿಸಿ, ವಿದ್ವತ್ಸಭೆಯ ಅವಗಾಹನೆಗೆ ಕಳಿಸಿದರು.[15] ಗುಣಗ್ರಾಹಿ ಸಭೆ ಅದನ್ನು ಪರಿಶೀಲಿಸಿ ಆಶ್ಚರ್ಯಾನಂದ ಹೊಂದಿ, ಶಿಶುಪಾಲವಧೆಗಿಂತ ಉತ್ತಮವೆಂದು ಸಾರಿ, ಅದು ವಾದಿರಾಜರದೆಂದರಿತು ಅವರನ್ನು 'ಕವಿಕುಲತಿಲಕ' ಬಿರುದಿನಿಂದ ಸನ್ಮಾನಿಸಿತು.

ಕಾಶಿಯ ಗಂಗಾತೀರದಲ್ಲಿ ರಾತ್ರಿ ಪೂಜೆ ಮಾಡಿ ಮಲಗಿದಾಗ ಮೊಸಳೆ ಆವರಿಸಿದುವು. ವಾದಿರಾಜರು ಒಂದು ಗೆರೆ ಎಳೆದು ಅಂಜಿದ ಸೇವಕರನ್ನು ಪೊರೆದರು; ಗೆರೆ ಮೀರಲಾರದೆ ಮರಳಿದುವು ಮೊಸಳೆ.[16]

ಇಂದ್ರಪ್ರಸ್ಥಕ್ಕೆ (ದೆಹಲಿಗೆ) ಬಂದು ಯವನ ರಾಜಕುಮಾರನ ಗೋರಿಯಾದಲ್ಲಿ ತಮ್ಮ ದೇವರ ಪೆಟ್ಟಿಗೆಯಿಟ್ಟರು; ಅಲ್ಲಿಯ ಆಳು ಅಡ್ಡಿಪಡಿಸಿದರೂ.

ಇಂದ್ರಪ್ರಸ್ಥೇ ತುರುಷ್ಕೇಂದ್ರ ಮೃತಪುತ್ರಸ್ಯ ಗೋರ್ಯುಪರಿ
ದೇವಪೇಟೀಂ ನ್ಯಧಾದ್ಯೋಗೀ ನಿಷಿದ್ಧೋ ಯವನೈರ್ಜನೈ ॥ ವಾ.ಗು.ಚ.3,13.

ಬಳಿಕ ನಗುತ್ತ ರಾಜಕುಮಾರ ಜೀವಂತನಿರುವಲ್ಲಿ ದೋಷವೇನೆಂದರು. ಇದನ್ನಾಲಿಸಿ ಅಚ್ಚರಿಗೊಂಡು ಬಂದ ದೊರೆ 'ನೀವೆಂದಂತಾಗಲಿ' ಎಂದು ಅಗೆಸಿ ನೋಡಿದರೆ ಮಗ ಜೀವಂತನಾಗಿದ್ದ —

ಶ್ರೀಮದುಕ್ತಂ ತಥ್ಯಮಸ್ತು ಪರೀಕ್ಷಾ ಕ್ರಿಯತೇ ಮಯಾ
ಇತ್ಯಾಕರ್ಣ್ಯೋತ್ಖಾನಯನ ಪುತ್ರಂ ಜೀವಂತಂ ವೀಕ್ಷ್ಯ ವಿಸ್ಮಿತಃ ॥
ವಾ.ಗು.ಚ.3,15.

'ಕಂದಾ ನಿನಗೆ ಜೀವದಾನಗೈದ ಮಹಾಮಹಿಮರಿಗೆ ವಂದಿಸು' ಎಂದು ನಮಸ್ಕಾರ ಮಾಡಿಸಿ ಧನರಾಶಿಯನ್ನರ್ಪಿಸಿದ. ಅವರು ಬೇಡವೆಂದರೂ ಒಂಟೆಗಳ ಮೇಲೆ ಹೇರಿ ಕಳಿಸಿದ.

---

15. ಸರ್ಗಾಂತ್ಯ ಪದ್ಯ — ಗದ್ಯ ಅನಂತರ ಸೇರಿಸಿರಬೇಕು. ಘಟನೆ ನೋಡಿಯದೆಂದು ಕಲ್ಪಿಸಿದೆ.

16. ಅವರ ಮಂತ್ರಶಕ್ತಿಯುದಕ್ಕೆ ವ್ಯ.ರ.ಸಂ.1—22ರಲ್ಲಿ ಸಂವಾದಿ ನುಡಿಯಿದೆ. ಹನುಮಾನ ಘಾಟದ ಹನುಮದ್ವಿಗ್ರಹವನ್ನು (ಸ್ಪಷ್ಟವಾಗಿ) ನೆಲದಡಿಯಿಂದೆತ್ತಿ ನಿಲ್ಲಿಸಿದ ಐತಿಹ್ಯವಿದೆ. (ಹರಿಭಕ್ತ ವಿಜಯ, ಪು.21, ಎಂ.ಆರ್.ಗೋವಿಂದರಾವ್).

ಆ ವಿರಕ್ತಶ್ರೇಷ್ಠರು ಮುತ್ತುರತ್ನಗಳ ಆ ರಾಶಿಯನ್ನು ಗಂಗೆಗರ್ಪಿಸಿದರು.[17]

ಈ ಮೊದಲು ಪ್ರಯಾಗ (ಅಲಹಾಬಾದ)ದ ಬ್ರಹ್ಮನ ಸಂಧ್ಯಾ ಮಠದಲ್ಲಿ ವಾದಿರಾಜರು ಜಪನಿರತರಾಗಿರಲು ಮುನಿವೇಷದ ವೇದವ್ಯಾಸರು ಪ್ರತ್ಯಕ್ಷರಾಗಿ 'ಕಂದಾ, ನಿನ್ನ ತಾಯಿ ಲಕ್ಷಾಲಂಕಾರದ ಹರಕೆ ಹೊತ್ತಿದ್ದಾಳೆ. ಸುಪುತ್ರನಾದ ನೀನು ಮಹಾಭಾರತದ ಲಕ್ಷ ಕಠಿಣ ಶಬ್ದಗಳಿಗೆ ಅರ್ಥ ಬರೆದು ನನಗರ್ಪಿಸು, ತಾಯಿಯ ಹರಕೆ ಪೂರೈಸುವುದು' ಎಂದಿದ್ದರು. ಆದರಿಂದ ವಾದಿರಾಜರು ಹರ್ಷಪೂರ್ವಕ ವ್ಯಾಸಾಜ್ಞೆಯನ್ನು ಶಿರಸಾವಹಿಸಿ, ಮಧ್ವರಂತೆ ಈಗ ತಮ್ಮ ಯೋಗ ಬಲದಿಂದ ಬದರಿಗೆ ಹೋಗಿ ವ್ಯಾಸ–ಮಧ್ವರಿಗೆ ವಂದಿಸಿ, ಅವರ ಪ್ರೇರಣೆಯಂತೆ 'ಲಕ್ಷಾಲಂಕಾರ' ರಚಿಸಿ ಅರ್ಪಿಸಿದರು. ಹಾಗೆಯೇ ಮುಂದಣ ಕಾರ್ಯ ಯುಕ್ತಿಮಲ್ಲಿಕಾದಿ ಗ್ರಂಥ ರಚನೆಗೆ ಅಪ್ಪಣೆ ಪಡೆದು ಹಿಂದಿರುಗಿದರು.[18]

ಮರಳಿ ಬರುತ್ತ ತಾಪೀ–ನರ್ಮದೆಗಳಲ್ಲಿ ಮಿಂದು, ಪ್ರಭಾಸಕ್ಷೇತ್ರ ಸಂದರ್ಶಿಸಿ, ದ್ವಾರಕೆಗೈತಂದು ಹರಿಪ್ರೀತ್ಯರ್ಥ 6 ತಿಂಗಳು ನಿರಶನ ತಪವೆಸಗಿದರು. ಆಗಲೇ ಭಕ್ತಾಭೀಷ್ಟಾರ್ಥ ಸಾಧಿಸಿ ಕೊಡುವ 'ಮಧ್ವಾಷ್ಟಕ' ರಚಿಸಿದರು.[19] ಅಲ್ಲಿಯ ಜ್ವರಗ್ರಸ್ತ ಕೃಷ್ಣಯತಿಗಳು ಈ ಅಷ್ಟಕ ಜಪದಿಂದ ಜ್ವರಪರಿಹಾರವಾಗುವುದನ್ನು ಸ್ವಪ್ನದಲ್ಲರಿತು, ವಾದಿರಾಜರ ಮೊರೆ ಹೊಕ್ಕು, ಜ್ವರಮುಕ್ತರಾದರು. ವಾದಿರಾಜರ ತಪಸ್ಸಿನಲ್ಲಿ ಕಾಣಿಸಿಕೊಂಡ ಹಯಗ್ರೀವನು 'ಬಂಡಾರಕ ಗುಹೆಯಲ್ಲಿನ ನನ್ನ ಸಾಲಿಗ್ರಾಮ ತಂದು ಪೂಜಿಸಿ ಅನುಗ್ರಹಿತನಾಗು' ಎನ್ನಲು,

---

17. ವ್ಯಾ.ರ.ಸಂ.1–25ರಲ್ಲಿ ಇದಕ್ಕೆ ಸಮಾನ ಉಕ್ತಿ, ಪೋಷಕವಾಗಿದೆ. ಸಿಕಂದರ ಲೋದಿ (1489–1516) ಆಗಿನ ಸುಲ್ತಾನನಾಗಿದ್ದು, ಅರ್ಥಂ–ಹುಮಾಯೂನ–ಜಲಾಲ–ಇಬ್ರಾಹಿಂ–ಇಸ್ಮಾಯಿಲ–ಹುಸೇನ ಎಂಬ 6 ಮಕ್ಕಳನ್ನು ಪಡೆದಿದ್ದ. ನಂತರ ಆಳಿದ ಇಬ್ರಾಹಿಮನನ್ನುಳಿದು ಒಬ್ಬನಿಗೆ ಈ ಘಟನೆ ಸಂಬಂಧಿಸಿರಬೇಕು. ದಿ.ಕೊರಬಯವರು ಈ ಯಾತ್ರೆಯನ್ನು ತಡವಾಗಿ ಕಲ್ಪಿಸಿ, ನಿರ್ಧರಿಸಲು ಆಧಾರ ದೊರೆತಿಲ್ಲವೆಂದಿದ್ದಾರೆ (ಶ್ರೀ ವಾದಿರಾಜರು, ಪು.139).

18. ಹಿರಿ ಬದರಿಯಿಂದ ಬರುವಾಗ ಭೀಮಖಂಡದಿಂದ ತಂದ ನೃಸಿಂಹ ಇಂದಿಗೂ ಮಠದಲ್ಲಿ ಪೂಜಿತ.

19. ಹೀಗೆಯೇ 'ಹಲವಾರು ಸ್ತುತಿಗಳನ್ನು ತಮ್ಮ ತೀರ್ಥಯಾತ್ರಾ ಕಾಲದಲ್ಲಿಯೇ ರಚಿಸಿರಬೇಕೆಂದು ಊಹಿಸಬಹುದು. (ವಾದಿರಾಜರ ಕೃತಿಗಳು, ಪೀಠಿಕೆ, ಪು. iv).

ಅಲ್ಲಿ ಹೋಗಿ ಇನಾಧಿಕ ತೇಜದ ಸಾಲಿಗ್ರಾಮ ಕಂಡು, ಭಕ್ತಿಯಿಂದ ತಂದರ್ಶಿಸಿ ಹರ್ಷಿಸಿದರು.[20] ಹೀಗೆ ಗುಜರಾತಾದಿಗಳಲ್ಲಿ ಸಂಚರಿಸುತ್ತ ಅನೇಕರನ್ನು ವಾದಿರಾಜರು ತಮ್ಮ ಶಿಷ್ಯರನ್ನಾಗಿಸಿ ಕೊಂಡರು.[21]

> ಗಾರ್ಜರಾದಿಷು ದೇಶೇಷು ಸ್ವಶಿಷ್ಯಾನ ಕೃಪಯಾಯುತ:
> ತತ್ರತ್ಯಾನೇವ ಕೃತವಾನ ವಿಷ್ಣುದೀಕ್ಷಾ ಪ್ರವರ್ತಕಾನ॥ ವ್ಯ.ರ.ಸಂ.1,56.

ಅಲ್ಲಿಂದ ವಾದಿರಾಜರು ಉಡುಪಿಗೆ ಬಂದಂತೆ ತೋರುವುದು —

> ಆಗಾತ್ ಪುನಃ ತೌಳವ ಮಂಡಲಸ್ಥಂ
> ಶ್ರೀ ಮಧ್ವನಾಥಂ ರಜತಾಸನಸ್ಥಂ ॥ ವ್ಯ.ರ.ಸಂ.1,60.

ನಂತರ ಮತ್ತೆ ತುಳುನಾಡಿನಲ್ಲಿ ಸಂಚರಿಸುವಾಗ, ಒಮ್ಮೆ ಮೂಡಬಿದರೆಯ (ಸಾವಿರ ಕಂಬದ) ಬಸದಿಯ ಬಳಿ ಬಂದರು. ಬಂಗ ವಂಶದ ಜೈನ ದೊರೆ ತಿರುಮಲರಸ ಚೌಟ ಸೊಗಸಾದ ವಿಗ್ರಹಗಳ ಬಸದಿಯ ನೋಡ ಬನ್ನಿರೆನ್ನಲು 'ನಾವು ನೋಡಿದಲ್ಲಿ ಧನ್ನಾಕಾರ ತಳೆವ ದೇವರನ್ನು ಒಪ್ಪಿಸುವುದಾದರೆ ಬರುವೆವೆಂ'ದು ಒಪ್ಪಿಸಿ ಪ್ರವೇಶಿಸಿದರು. ಪಚ್ಚರತ್ನದ ಜಿನಬಿಂಬದಲ್ಲಿ ವಿಠಲನ ಧ್ಯಾನಿಸಲು ಅದು ಹಾಗೆಯೇ ಆಗಿ ದೊರೆಯಿಂದರ್ಪಿತ ವಾಯಿತು.[22] (ಅದೀಗಲೂ ಮಠದ ಪೂಜೆಯಲ್ಲಿದೆ.) 'ನೀಲವರ್ಣ ವಿಠಲ ನಾ ನಿನ್ನ

---

20. ಈ ಸಾಲಿಗ್ರಾಮವೀಗ ಸೋದೆಯ ಮಠದಲ್ಲಿ ಪೂಜೆಗಿದೆ.

21. 'ಗುಜರಾಥ, ಗೋವಾ, ಕೊಂಕಣ, ಕೇರಳ ಮುಂತಾದ ಪಶ್ಚಿಮ ತೀರದ ಪ್ರಾಂತಗಳಲ್ಲಿ ತಮಗೆ ಶಿಷ್ಯರಾದವರನ್ನೇ ಮುಂದೆ ಪ್ರಚಾರಕ್ಕಾಗಿ ಅಲ್ಲಲ್ಲಿ ನಿಲ್ಲಿಸಿದರು ... ಅಲ್ಲದ್ದವರನ್ನೇ ವಿಷ್ಣು ದೀಕ್ಷೆಯ ಪ್ರವರ್ತಕರಾಗುವಂತೆ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು.' (ಎನ್.ಕೆ.ನರಸಿಂಹಮೂರ್ತಿ, ಮಧ್ವಮತ ಪ್ರಸಾರ, ಪು.167).

    'ಪರಮತ ಖಂಡನೆಯೊಂದಿಗೆ ಸ್ವಮತ ಪ್ರತಿಷ್ಠಾಪನೆಯೂ ಅವರ ಪರಮ ಕರ್ತವ್ಯಗಳಲ್ಲಿ ಒಂದಾಗಿತ್ತಷ್ಟೆ. ಅದೇ ವೇಳೆಗೆ ಅವರು ಮಹಾರಾಷ್ಟ್ರದಲ್ಲಿ ನೆಲಸಿದ್ದ ಕೆಲವು ಸಾರಸ್ವತರಿಗೆ ಮಾಧ್ವ ಮತ ದೀಕ್ಷೆಯನ್ನಿತ್ತು ಪುರಸ್ಕರಿಸಿದ ರೆಂದು ವ್ಯಕ್ತವಾಗುತ್ತದೆ. ಇಂದಿಗೂ ಸಾರಸ್ವತ ಮತೀಯರಲ್ಲಿ ಕೆಲವು ಶಾಖೆಗಳವರು ಮಾಧ್ವ ಸಂಪ್ರದಾಯ ಅನುಸರಿಸುವುದನ್ನು ದ.ಕ.ದಲ್ಲಿ ಕಾಣುತ್ತೇವೆ.' (ವಾ.ರಾ.ಕೃತಿಗಳು, ಪೀಠಿಕೆ, iv).

22. 'ವಾದಿರಾಜರ ಧಾರ್ಮಿಕ ಕಾರ್ಯ ತಮ್ಮ ಮತದ ಮಟ್ಟಿಗೇ ಸೀಮಿತವಾಗಿದೆ, ಸಂದರ್ಭೋಚಿತವಾಗಿ ಇತರ ಮತೀಯರ ಕ್ಷೇತ್ರಕ್ಕೂ ವಿಸ್ತರಿಸಿದ ಕೆಲವು ನಿದರ್ಶನ ಗೋಚರಕ್ಕೆ ಬರುತ್ತವೆ.' (ವಾ.ರಾ. ಕೃತಿಗಳು, ಪೀಠಿಕೆ, iv).
    'ಇಂಥ ಘಟನೆಗಳನ್ನು ಪರಿಶೀಲಿಸಿದಲ್ಲಿ, ಅನ್ಯಮತೀಯರಿಗೂ ವಾದಿರಾಜರ ಮಹತ್ವದಲ್ಲಿದ್ದ ಗೌರವ ಭಾವನೆಯೂ, ಶ್ರೀಪಾದಂಗಳವರು ತಮ್ಮ ನೀತಿ ನಿಯಮಗಳಿಗೆ ಚ್ಯುತಿಯಾಗದಂತೆ ಇತರರಲ್ಲಿಯೂ ಹೇಗೆ ಬೆರೆಯುವ ಸ್ವಭಾವದವರೆಂಬುದೂ ವಿದಿತವಾಗುತ್ತವೆ. (ಅದೇ, ಪು. vii).

ಮೆಚ್ಚಿದೆ' ಎಂಬ ಮಧುರ ಭಾವದ ಕೀರ್ತನೆಯ ವರ್ಣನೆ-ಈ ಪ್ರತಿಮೆಯದೆಂದು ಕೊರಟಿಯವರ ಕಲ್ಪನೆ.—(ಪು. 159).

ವಾದಿರಾಜರು ಧರ್ಮಸ್ಥಳದ ಬಳಿ ಬರಲು ದೇವರಾಜ ಹೆಗ್ಗಡೆಯಿಂದ ಪ್ರಾರ್ಥಿತರಾದರೂ 'ಭೂತದೆಡೆ ನಮಗೆ ವಾಸಯೋಗ್ಯವಲ್ಲ'ವೆಂದರು. ಬಳಿಕ ಆಗ್ರಹಿತರಾಗಿ ಮಂಗಳೂರ ಕದ್ರಿ ಬೆಟ್ಟದ ಸಪ್ತರ್ಷಿಕುಂಡದೆಡೆಯಿದ್ದ ಸ್ವಯಂವ್ಯಕ್ತ ಶಿವಲಿಂಗವನ್ನು[23] ತರಿಸಿ ವಿಧಿವತ್ತಾಗಿ ಸ್ಥಾಪಿಸಿ, ಅದರ ಮೇಲೆ ನರಸಿಂಹ ಸಾಲಿಗ್ರಾಮವಿರಿಸಿ, ಕುಡುಮವನ್ನು ಧರ್ಮಸ್ಥಳವೆನಿಸುವಂತೆ ನಿತ್ಯಾನ್ನದಾನಕ್ಕೆ ಹರಸಿದರು.

ಕುಮಾರಧಾರಾ— ನೇತ್ರಾವತಿ ಸಂಗಮದ ಸಮೀಪ, ಸಾಮೂರು (ಉಪ್ಪಿನಂಗಡಿ) ಅಗ್ರಹಾರದ ಕಟಿಪಾಲಯದಲ್ಲಿ ಸಾವಿರಲಿಂಗ ಒಡಮೂಡಿದ್ದನ್ನು ನೋಡಿ ವಾದಿರಾಜರು ಅಲ್ಲಿಯ ಒಡೆಯನಿಗೆ ಲಿಂಗಾಭಿಷೇಕ ಆಗತ್ಯವೆಂದರೆ. ಆದರೆ ಎತ್ತರದಲ್ಲಿರುವ ಅವಕ್ಕೆ ಅಭಿಷೇಕ ಹೇಗೆ ಸಾಧ್ಯವೆನ್ನಲು, ಗುರುಗಳು ತಮ್ಮ ದಂಡದಿಂದ ಗೆರೆ ಕೊರೆದು ನಿರುಕ್ಕಿಸಿದರು; ಲಿಂಗಾಭಿಷೇಕವಾಗಿ ಆ ಪ್ರವಾಹದಿಂದ ಊರು ಮುಳುಗದಂತಾಗಲು, ಮತ್ತೆ ಪ್ರಾರ್ಥಿತರಾಗಿ ಅದನ್ನೊಂದು ಕೊಳವಾಗಿ ಮಾರ್ಪಡಿಸಿದರು. ಪ್ರು(ಂ)ಡಿ ಬೈಲೆನಿಸಿದ ಅಲ್ಲಿಯ ದಂಡತೀರ್ಥ ಇಂದಿಗೂ ಸೋದೆಯ ಮಠಕ್ಕೆ ಸೇರಿದೆ.[24]

---

23. ಇದನ್ನು ಮೊದಲು ಬೌದ್ಧರು ಬೋಧಿಸತ್ವರೂಪಾಂತರ ಮಂಜುಶ್ರೀ ಎಂದೂ ನಾಥಪಂಥೀಯರು ಮಂಜುನಾಥನೆಂದೂ ಆರಾಧಿಸಿದ್ದು; 968ರಲ್ಲಿ ಕೇರಳ ರಾಜಕುಮಾರಿ ಪ್ರಮೀಳೆ (ಮಂಗಳಾದೇವಿ) ಮತ್ಸ್ಯೇಂದ್ರನಾಥನೊಡನೆ ನಾಸಿಕದತ್ತ ಹೋಗುವಾಗ ಬೋಲಾರಿನಲ್ಲಿ ಸಮಾಧಿಯಾಗಿ ಮಂಗಳೂರು ಮೂಡಿತೆಂದು ಐತಿಹ್ಯ. ಧರ್ಮಸ್ಥಳದಲ್ಲಿಂದಿಗೂ ಮಂಜುನಾಥನ ಅರ್ಚಕರು ವೈಷ್ಣವರು, ಧರ್ಮದರ್ಶಿಗಳು ಜೈನರು. ಎಂಥ ಧರ್ಮಸಮನ್ವಯ!

24. ವಾದಿರಾಜರು ಕುಮಾರಧಾರಾ ಪರ್ವತವೇರಿ ತಪಗೈಯುತ್ತಿರುವ (ಮುಜು ಯೋಗಿ) ವಿಷ್ಣುತೀರ್ಥರ ಸಂದರ್ಶನದಲ್ಲಿ ಪಡೆದರೆಂಬ ಕೃಷ್ಣ— ಹಯಗ್ರೀವ ಮೂರ್ತಿ ಇಂದಿಗೂ ಮಠದಲ್ಲಿ ಪೂಜೆಗೊಳ್ಳುತ್ತವೆ.

ವಾದಿರಾಜರು ಮಧ್ಯವಾಟ ಪಾಜಕಗಳ ನಡುವಿನ ಎಲ್ಲೂರಿಗೆ (ಉಡುಪಿಯಿಂದ 15 ಮೈಲು) ಬಂದಾಗ, ಅಲ್ಲಿಯ ವಿಶ್ವನಾಥಾರ್ಚಕರಿಂದ ಪ್ರಾರ್ಥಿತರಾಗಿ ಅಲ್ಲಿಯೂ ನರಸಿಂಹ ಸಾಲಿಗ್ರಾಮವಿಟ್ಟು 'ಶಿವಾಂತರ್ಯಾಮಿ ನರಸಿಂಹ ಪೂಜೆ' ವಿಧಿಸಿ, ಭಕ್ತೋದ್ಧಾರಾರ್ಥ ಶಿವನನ್ನು ನಂದಿಯು ಕೋರಿಕೆಯಂತೆ ಅವನನ್ನು ಕೊಂಡಾಡಿದರು.[25]

ಶಿವಮನ್ನೋಪೇತ ಪೂಜಕೋದ್ಧಾರ ಹೇತವೇ ॥ ವಾ.ಗು.ಚ.5,42.

ವ್ಯಾಸರಾಯರು ಒಮ್ಮೆ[26] ಉಡುಪಿಗೆ ಬಂದು ಕೃಷ್ಣನನ್ನು ಕಂಡು (52 ಮೈಲು ದೂರದ) ಮಧ್ಯವಾಟ[27] ಮಠಕ್ಕೆ ಹೋದರು. ಅಲ್ಲಿಯ ಮಧ್ವಾರ್ಚಿತವೂ ಅಷ್ಟಯತಿಪೂಜಾರ್ಹವೂ ಆದ ವ್ಯಾಸಮುಷ್ಟಿಯನ್ನು ತೆಗೆದುಕೊಂಡು ಬೇರೆ ಒಂದನ್ನಿರಿಸಿದರು.[28] ಇದು ಗಮನಕ್ಕೆ ಬಂದಾಗ ಅರ್ಚಕರು ಉಡುಪಿಯಲ್ಲಿದ್ದ

---

25. ಋಜುಗಳಾದರೂ ಸ್ವರೂಪ ಸಂರಕ್ಷಣಾರ್ಥ ಹಾಗೂ ಲೋಕಶಿಕ್ಷಣಾರ್ಥ ಮತ್ತು ಲೋಕ ಮರ್ಯಾದಾನುಸಾರ ಈ ನಮನ —
    ಪ್ರತ್ಯಕ್ಷೇ ಭೂತದೇವೇಷು ಬಂಧು ಜ್ಯೇಷ್ಠೇಷು ವಾ ನ ಹಿ
    ಮರ್ಯಾದಾಸ್ಥಿತಯೇ ಶಾಸದ್ಭಗವಾನ ಪುರುಷೋತ್ತಮಃ ॥
    ಮ.ಭಾ.ತಾ.ನಿ.18,15.
    ಧರ್ಮೋ ದೇವಾನಾಂ ಪರಮೋ ಮಾನುಷತ್ವ
    ಸ್ಥಿತ್ಯೇ ರೂಪೇಷ್ವನ್ಯವದೇವ ವೃತ್ತಿಃ ॥ ಮ.ಭಾ.ತಾ.ನಿ.22,292.

    ಇದನ್ನೊರೆದ ಮಧ್ವರೇ ಸನ್ಯಾಸ ಸ್ವೀಕಾರ ನಿರ್ಧರಿಸಿದಾಗ ಮನೆಯ ಎಲ್ಲ ವಸ್ತುಗಳಿಗೂ ಎರಗಿದರು (ಮ.ವಿ.4); ಕೃಷ್ಣನೂ ಮರ್ತ್ಯಾನುಕಾರಿ (ರು.ವಿ.19,21). ಜೊತೆಗೆ ಅಂತರ್ಯಾಮಿ ಪರಮಾತ್ಮನ ವ್ಯಾಪ್ತೋಪಾಸನೆಯೂ ಇಲ್ಲಿ ಸೂಚಿತವಾಗಿ 'ಕಂಡ ಕಂಡಲ್ಲಿ ವಿಶ್ವರೂಪ ಕಾಂಬರೋ' ಎಂಬ ಜಗನ್ನಾಥದಾಸರ ವಾಣಿ ಕೂಡ ದಿಟವೆನಿಸಿದೆ.

26. ವ್ಯಾಸರಾಯರು ಅನೇಕ ಸಲ ಉಡುಪಿಗೆ ಬಂದಿದ್ದರೂ ವ್ಯಾಸಾಪಹಾರಲೀಲೆ 1500ರ ನಂತರ ನಡೆದಂತಿದೆ. '1500ರಲ್ಲಿ ದ.ಕ.ದಲ್ಲೆಲ್ಲ ಸಂಚರಿಸಿ ಧರ್ಮ ಪ್ರಚಾರ ಮಾಡಿ ··· ಪ್ರಾಣದೇವರ ವಿಗ್ರಹ ಪ್ರತಿಷ್ಠಿಸಿದರು' (ಕರ್ನಾಟಕದ ಹರಿದಾಸರು, ಪು.259). ಆಗ ವಾದಿರಾಜರು ಸಂಚಾರದಲ್ಲಿದ್ದುದೂ ಇದಕ್ಕೆ ಹೊಂದುವುದು. ಆದರೆ 'ವ್ಯಾಸಯೋಗಿ ಚರಿತ'ದ ಪೀಠಿಕೆಯಲ್ಲಿ ಬಿ.ವೆಂಕೋಬರಾಯರೂ (ಪ್ಯಾರಾ 96—105), ಅವರನ್ನನುಸರಿಸಿ 'ವ್ಯಾಸರಾಯರು' ಪುಸ್ತಿಕೆಯಲ್ಲಿ ಜಯತೀರ್ಥ ರಾಜಪುರೋಹಿತರೂ (ಪು.36) ಹೇಳುವ 1480ರ ಕಾಲ ಹಾಗೂ ಕಲ್ಪಿಸಿದ ಕಥಾರೂಪ ಇಲ್ಲಿ ಹೊಂದವು. ಆಗಿನ್ನೂ ವಾದಿರಾಜರು ಜನಿಸಿದ್ದರಿಂದ, ಸಂಚಾರದಲ್ಲಿಲ್ಲದ್ದರಿಂದ ಇಂದಿನವರಿಗಿಂತ 1645ರ ಗ್ರಂಥ (ವಾ.ಗು.ಚ). ಹೆಚ್ಚು ಅಧಿಕೃತ.

27. ಮಧ್ವರು ಸುಬ್ರಹ್ಮಣ್ಯಕ್ಕೆ ಹೋಗುವ ಮಾರ್ಗಮಧ್ಯೆ ತಂಗುತ್ತಿದ್ದ ಇಲ್ಲಿ ತಮ್ಮ ಕುಲದೇವರಾದ ನರಸಿಂಹನನ್ನಿರಿಸಿದ್ದರು. (ಮಧ್ಯತಾಲಮ— ನಡ್ವಂತಾಡಿ ಮಠವೆಂದರೂ ಇದೇ).

28. ಮಧ್ವವಿಜಯದ 'ಪ್ರಾಪಸ ನಾರಾಯಣತಃ' (ಸರ್ಗ 10) ಹಾಗೂ ವಾಯು ಪುರಾಣದ 'ಇಷ್ಟ್ವಾವ್ಯಾಸಾಶ್ರಮಂ ಗತ್ವನ' ಇತ್ಯಾದಿ ಪದ್ಯಗಳ ಪ್ರಮಾಣದಂತೆ,

ಉಡುಪಿಯಲ್ಲಿದ್ದ ಪರ್ಯಾಯದವರಿಗರುಹಿದರು. ಅವರು ಸಂಚಾರದಲ್ಲಿದ್ದ ವಾದಿರಾಜರಿಗೆ 'ಅದನ್ನು ಮರಳಿ ತರಲು ನೀವೇ ಸಮರ್ಥರು, ತಂದು ನಿಮ್ಮದಾಗಿಸಿಕೊಳ್ಳಬಹುದು' ಎಂದು ಹೇಳಿ ಕಳಿಸಿದರು. ವಾದಿರಾಜರು ವ್ಯಾಸಂಗದ ವ್ಯಾಜದಲ್ಲಿ ವ್ಯಾಸರಾಯರ ಬಳಿ ಸಾರಿದರು —[29]

ವ್ಯಾಸಂಗ ವ್ಯಾಜಮುಪಾಸಾದ್ಯ ವ್ಯಾಸಾರ್ಯಂ ಸಮುಪಾಗತಃ ॥ ವಾ·ಗು·ಚ· 4,21·

ಆಗೊಮ್ಮೆ ವ್ಯಾಸರಾಯರು ವಾದಿರಾಜರಿಗೆ ತಮ್ಮ ಬೆಳಗಿನ ನಿರ್ಮಾಲ್ಯ ವಿಸರ್ಜನ ಪೂಜೆಯೊಪ್ಪಿಸಲು, ವಾದಿರಾಜರು ವ್ಯಾಸಮುಷ್ಟಿಯನ್ನು ತೆಗೆದುಕೊಂಡು ಮಧ್ಯವಾಟ ಮಠಕ್ಕೆ ಒಯ್ದರು. ಶಿಷ್ಯರಿಂದಿದನ್ನಾಲಿಸಿ, ವಿನೋದದಿಂದ ವ್ಯಾಸರಾಯರು 'ನಾವು ತಂದಂತೆ ಅವರೂ ಒಯ್ದರು, ಇದರಲ್ಲೇನೂ ತಪ್ಪಿಲ್ಲ. ಇಷ್ಟು ದಿನ ಆ ವ್ಯಾಸ ಪೂಜೆಯ ಪುಣ್ಯ ನಮಗೊದಗಿದ್ದೇ ಸಾಕು' ಎಂದರು. ಅಂದಿನಿಂದ ಆ ವ್ಯಾಸಮುಷ್ಟಿ ಮಧ್ಯವಾಟ ಮಠದಲ್ಲಿದ್ದು, ಆ ಮಠವು ಅಷ್ಟಮಠಾಧೀಶರಿಂದ ವಾದಿರಾಜರ ಮಠಕ್ಕೆ ಹೋದಂತಾಯಿತು.[30]

---

ವ್ಯಾಸರು ಬದರಿಯಲ್ಲಿ ಮಧ್ವರಿಗೆ 8 ಮುಷ್ಟಿ ಕೊಟ್ಟಿದ್ದರು. ಅವರು ವಿಷ್ಣುತೀರ್ಥರಿಗಿತ್ತ 6ರಲ್ಲಿ 1 ಸುಬ್ರಹ್ಮಣ್ಯ ಮಠದಲ್ಲಿ ಪೂಜೆಗೊಳ್ಳುತ್ತ ಬಿಟ್ಟ 5 ಅಭೇದ್ಯ ಸಂಪುಟದಲ್ಲಿವೆ; ಅಷ್ಟಮೂರ್ತಿ ಪೂಜೆಗೊಂಡದನ್ನು ಮಧ್ಯವಾಟದಲ್ಲಿರಿಸಿ, ತಾವು ಪೂಜಿಸುತ್ತಿದ್ದುದನ್ನು ಪದ್ಮನಾಭತೀರ್ಥರಿಗಿತ್ತರು. ಇದೇ ಉತ್ತರಾದಿ ಮಠಕ್ಕೆ ಸಾಗಿ ಬೇರೊಂದು ಪ್ರತೀಕ = ಕಾವಣ ಎಂದು ಆಖ್ಯಾನೋಕ್ತವಾದದ್ದು (5,41) ರಾಜೇಂದ್ರತೀರ್ಥರಿಂದ ವ್ಯಾಸರಾಯ ಮಠಕ್ಕಾಗಿ ಈ ಮುಷ್ಟಿಗಳ ವಿನಿಮಯ ವಿನೋದ ಲೀಲೆ ನಡೆದಿರಬೇಕು. (ವ್ಯಾಸವಿಜಯ, 129—31, ಸ್ವಾಪ್ನ ವೃಂದಾವನಾಖ್ಯಾನ 4—64ರಲ್ಲಿ ಈ ಘಟನೆಗೆ ಸಂವಾದಿ ನುಡಿ ಉಂಟು).

29. ಚಂದ್ರಿಕಾಚಾರ್ಯರಲಿ ಶಿಷ್ಯರಂದದ ಚರಿಸಿ ··· ವ್ಯಾಸ ಪ್ರತೀಕವನು ತಂದು (ವೇಣುಗೋಪಾಲದಾಸರ ಪದ); ವ್ಯಾಸೇ ವ್ಯಾಸಂಗ ಸುವ್ಯಾಜಾದ್ವ್ಯಾಸಂಚೋಪ ಚಚಾರ ಯಃ ॥ ಜಂಬಂಡಿ ವಾದಿರಾಜಾಚಾರ್ಯ, ವಾದಿರಾಜ ಚರಿತ್ರೆ; ಸ ಗತ್ವಾಧ್ಯಯನ ವ್ಯಾಜಾತ್ ವ್ಯಾಸರಾಜಾಂತಿಕೇವಸತ ॥ ವಾದಿರಾಜ ಗುಣರತ್ನ ಮಾಲಾ ॥ 9,6; ಇಷ್ಟಾದರೂ ವಾದಿರಾಜರು ವ್ಯಾಸರಾಯರಲ್ಲಿ ನಿಜವಾಗಿ ವ್ಯಾಸಂಗ ಮಾಡಿದರೆಂದು ಅನೇಕರು ಬರೆಯುವರು. ಸಿದ್ಧಪುರುಷರಿಗೆಂಥ ಶಿಷ್ಯತ್ವ? ಸ್ವಯಂ ವಾದಿರಾಜರು ಹಾಗೂ ವಿಜಯೀಂದ್ರರು ಶ್ರೀಪಾದರಾಜಾಷ್ಟಕದಲ್ಲಿ ಸೂಚಿಸಿದ ಕಾರಣ, ಮತ್ತು 1521ರ ಕುಹುಯೋಗ ಬಣ್ಣಿಸುವ ಪುರಂದರದಾಸರೂ ವ್ಯಾಸರಾಯ ಸುಳಾದಿಯಲ್ಲಿ 'ಧರೆಯೊಳು ವಿಜಯೀಂದ್ರ ವಾದಿರಾಜರೆಂಬ ಪರಮ ಶಿಷ್ಯರ ಪಡೆದು ಮೆರೆದೆ' ಎಂದ ಕಾರಣ, ಈ ಪ್ರಸಂಗ ತತ್ಪೂರ್ವ ಕಾಲದ್ದು.

30. ವಿಶ್ವಪ್ರಿಯರು ಮುಂದೆ ಈ ವ್ಯಾಸ ಮುಷ್ಟಿಯನ್ನು ಉಡುಪಿಯ ಸೋದೆ ಮಠಕ್ಕೇ ತಂದುಕೊಂಡರು.

ರಾಮನು ರಾವಣ ಸಂಹಾರದ ಪಾಪಲೇಪರಹಿತನಾದರೂ,[31] ಬ್ರಾಹ್ಮಣಹತ್ಯೆ ಪಾಪವೆಂದು ಲೋಕಕ್ಕೆ ತೋರಿಸಲು ರಾಮೇಶ್ವರಲಿಂಗ ಸ್ಥಾಪಿಸಿ 'ನನ್ನ ಪಾಪ ಸ್ವೀಕರಿಸುವ ಬ್ರಾಹ್ಮಣ ನನ್ನುದ್ಧರಿಸುವೆನೆಂ'ದ. ಲೋಕಮೋಹಕ ವಾಕ್ಯಾರ್ಥವರಿಯದ ಬ್ರಾಹ್ಮಣನೊಬ್ಬ ಪ್ರತಿಷ್ಠೆಯಿಂದ 'ನಾನು ಸ್ವೀಕರಿಸುವೆ'ನೆಂದ. ಕೃಪಾಳು ರಾಮನು 'ನಿನಗೆ ಬ್ರಹ್ಮ ರಾಕ್ಷಸ ಜನ್ಮವಾಗಿ ಭಾವಿ ವಾಯುಸೇವೆಯಿಂದ ಭಾವಿ ರುದ್ರನೆನಿಸಿ ಲೋಕಪೂಜ್ಯನಾಗುವಿ' ಎಂದ. ಬ್ರಾಹ್ಮಣನು ಬ್ರಹ್ಮರಕ್ಕಸನಾಗಿ ಬದರಿಯಲ್ಲಿದ್ದರೂ, ಕಲಿಯುಗದಲ್ಲಿ ಒಂದಂಶ ದಿಂದ ಮಂಗಳೂರು ತಾಲೂಕಿನ ನಾರಳದಲ್ಲಿ ಹುಟ್ಟಿ ನಾರಾಯಣಾಚಾರ್ಯನೆನಿಸಿ ವಾದಿರಾಜರ ಶಿಷ್ಯನಾಗಿದ್ದ. ವ್ಯಾಸರಾಯರು ಒಂದು ಸಾಧನ ದ್ವಾದಶಿ ಊಟಕ್ಕೆ ದಾರಿ ಕಾಯುವು ದನ್ನಾಲಿಸಿದ ವಾದಿರಾಜರು, ಹಿಂದು ಬಂದುಂಡವರೇ ನದಿಗೆ ಸಾಗಿ, ಉಂಡುದನ್ನು ಹೊರಗೆ ತೆಗೆದಿರಿಸಿ ಶುದ್ಧ ಹೊಟ್ಟೆಯಲ್ಲಿ ಸ್ನಾನಾಹ್ನಿಕವೆಸಗಿದರು.[32] ಗುರುಚರ್ಯೆ ಪರೀಕ್ಷಿಸಲು ನಾರಾಯಣಾಚಾರ್ಯರು ಮರವೇರಿ ಕುಳಿತುದು ಮರಳುವಾಗ ವಾದಿರಾಜರ ಕಣ್ಣಿಗೆ ಬಿತ್ತು. ಮತ್ತೆ ಬ್ರಹ್ಮರಕ್ಕಸನ ನೀರಲು ಶಪಿಸಿ, ಕಡು ಕೇಳಲು 'ಆಕಾಮಾದ್ಯೈ ನ ಕಃ ಸ್ನಾತಃ' ಎಂಬ ನಿನ್ನ ಪ್ರಶ್ನೆಗುತ್ತರಿಸಿದವರಿಂದ ಮುಕ್ತನಾಗುವಿ' ಎಂದರು. ಪುನಃ ಕಾಲಾಂತರದಲ್ಲಿ ತಾವು ಬದರಿಗೈದುವಾಗ ಅತ ಕೇಳಿದ ಪ್ರಶ್ನೆಗುತ್ತರಿಸಿದರು —

ಆಷಾಢೇ ಕಾರ್ತಿಕೇ ಮಾಘೇ ವೈಶಾಖೇ ಸ್ನಾನತತ್ಪರಃ
ಬ್ರಹ್ಮರಾಕ್ಷಸ ಪೈಶಾಚ ಯೋನೇರ್ಮುಕ್ತೋ ಭವೇದ್ಧ್ರುವಂ ॥
ವಾ.ಗು.ಚ. 4,40.

---

31. ಇದನ್ನು ತೀರ್ಥ ಪ್ರಬಂಧದಲ್ಲಿ 'ಕಲ್ಪಾಂತೇ' ಇತ್ಯಾದಿ ಪದಗಳಿಂದ ವಾದಿರಾಜರೇ ವಿವರಿಸಿದ್ದಾರೆ. (ದ.ಪ್ರಬಂಧ).

32. ವ್ಯಾಸರಾಯರು ಶ್ರೀಪಾದರಾಯರ ಬಗೆಗಿನ 'ಮಹಿಮೆ ಸಾಲದೇ' ಎಂಬ ಹಾಡಿನಲ್ಲಿ —
ಹರಿಗರ್ಪಿಸಿದ ನಾನಾಪರಿಯ ಶಾಕಂಗಳನು ಭುಂಜಿಸಿ
ನರರು ನಗಲು ಶ್ರೀಕೃಷ್ಣನ ಕರುಣದಿಂದ ಹಸಿಯ ಮಾಡಿದ
ಮಹಿಮೆ ಬಂದಿದೆ. ಸ್ವಾಮಿಗಳಿಗೇಕೆ ಸುಖದೂಟವೆಂದವರಿಗೆ ಈ ಮಹಿಮೆದೋರಿ ಆಹಾರ ಪದಾರ್ಥವಿನ್ನೂ ಹಸಿಯಾಗಿರುವುದನ್ನು ಪ್ರದರ್ಶಿಸಿದಾಗ ಕುಹಕಿಗಳು ತಣ್ಣಗಾದ ಕಥೆಯಿದೆ. ಪುರಂದರದಾಸರೂ ಉಡುಪಿಯ ಮಧ್ವ ಸರೋವರದಲಿ ಇರಲಿ ಪವಾಡದೋರಿದ ಐತಿಹ್ಯವಿದೆ; ಭಕ್ತರು ಭಾವಾವೇಶದಲ್ಲಿಂಥ ಕಥೆ ಕಟ್ಟುವುದುಂಟು.

ಈ ಅಮೃತೋಕ್ತಿಯಿಂದ ರಾಕ್ಷಸ ಜನ್ಮ ನೀಗಿ ದಿವ್ಯರೂಪದಲ್ಲಿ ನಮಿಸಿ ನಿಂತವನಿಗೆ 'ಇನ್ನು ಮುಂದೆ ಭೂತರಾಜನೆನಿಸಿ ನನ್ನ ಪಲ್ಲಕ್ಕಿಯ ಮುಂಭಾಗ ಹೊತ್ತಿರು, ಭಾವಿ ರುದ್ರನಾಗುವಿ' ಎಂದರು.[33] ರಾಮನ ಕೃಪೆ ಹಾಗೂ ಭಾವಿ ವಾಯುವಿನ ಅನುಗ್ರಹದಿಂದ ಭಾವಿ ರುದ್ರರಿಂತು ಶಾಪಮುಕ್ತರಾದರು.[34]

ಮಧ್ವರು ಏರ್ಪಡಿಸಿದ್ದ 2 ತಿಂಗಳ ಕೃಷ್ಣನ ಪರ್ಯಾಯ ಪೂಜೆಯನ್ನು ವಾದಿರಾಜರು 2 ವರ್ಷಕ್ಕೇರಿಸಿ (ಉಳಿದ 14 ವರ್ಷ) ಅಷ್ಟಯತಿಗಳ ಸಂಚಾರ (ತತ್ತ್ವಪ್ರಸಾರ — ಧರ್ಮ ಸಂಗ್ರಹ)ಕ್ಕೆ ಅನುಕೂಲಿಸಿ ಕೊಟ್ಟರು. (ಕೃಷ್ಣ ಮಠದಲ್ಲೇ ಇರುತ್ತಿದ್ದ) 8 ಯತಿಗಳಿಗೂ ರಥಬೀದಿಯ ಸುತ್ತ ಪ್ರತ್ಯೇಕ ಮಠ ಕಟ್ಟಿಸಿಕೊಟ್ಟರು. (ದೈನಂದಿನ ಕೃಷ್ಣಪೂಜೆಯನ್ನೂ ಸುವ್ಯವಸ್ಥೆಗೊಳಿಸಿದರು). ಆಗಿನಿಂದ ಪರಿಷ್ಕೃತ ಪರ್ಯಾಯೋತ್ಸವ ಅತಿ ವಿಜೃಂಭಣೆಯಿಂದ ನಡೆದುಬರುತ್ತಿದೆ.[35]

---

33. ಈ ಭಾವಿ ರುದ್ರಾನುಗ್ರಹದಿಂದ ವಾದಿರಾಜರು ತಮ್ಮ ಋಜುತ್ವ—ಭಾವಿ ವಾಯುತ್ವ ಸೂಚಿಸಿದರು —

ಭಾವಿರುದ್ರಾನುಗ್ರಹಸ್ಯ ಕರಣಾದೃಜುತಾಂ ಸ್ವಯಂ
ಭಾವಿ ವಾಯುತ್ವಮಪಿ ಚ ಸ್ವಾಮಿನ್ಯೂಚಿತವಾನ್ಗುರುಃ ॥

ವಾ.ಗು.ಚ.4, 43.

34. ಭೂತರಾಜ ನಾರಳತ್ತಾಯ ತುಳುನಾಡ ದೈವ, ಭೂತಾರಾಧನೆ ದ್ರಾವಿಡ ಸಂಪ್ರದಾಯ. 'ವಾದಿರಾಜರು ಭೂತರಾಜರನ್ನು ಶಿಷ್ಯರಾಗಿಸಿಕೊಂಡು, ಅವರಿಗೆ ದೇವಾಲಯ ಕಟ್ಟಿಸಿ, ಭೂತಾರಾಧನೆಯನ್ನು ನಯಗೊಳಿಸಿದರು, ಸ್ವಮತಕ್ಕೆ ಹೊಂದಿಸಿದರು' (ಕೆ.ಟಿ.ಪಾಂಡುರಂಗಿ, ಸಮಗ್ರ ಕ.ಸಾ.ಚರಿತ್ರೆ,)

35. ಈ ಸುಧಾರಣೆ 1518ರಲ್ಲಿ ವಾಗೀಶತೀರ್ಥರು ವೃಂದಾವನಸ್ಥರಾದೊಡನೆ ನಡೆದಂತಿದೆ. Formerly Paryaya was of 1½ months, and all eight used to have a turn every year. (K.T. Pandurangi, Introduction to Yuktimallika, p.xxvi). (ಸ್ಥೂಲವಾಗಿ ಇದನ್ನು 2 ತಿಂಗಳ ಪರ್ಯಾಯ ಎನ್ನುತ್ತಿರಬೇಕು). ಸಂಕ್ರಾಂತಿಯಿಂದ 4ನೆಯ ದಿನ ನಡೆವಂತೆ 1518ರಲ್ಲಿ ಕಾಣಿಯೂರು ಮಠದವರ ಪ್ರಥಮ ದ್ವೈವಾರ್ಷಿಕ ಪರ್ಯಾಯ ಒದಗಿ, 1530ರಲ್ಲಿ ಶಿರೂರು ಮಠದವರು ಪ್ರಥಮ ದ್ವೈವಾರ್ಷಿಕ ಉತ್ಸವ ಆರಂಭಿಸಿ, 1532ರಲ್ಲಿ ಸೋದೆ ಮಠದವರಿಗೆ ದ್ವೈವಾರ್ಷಿಕದ ಪ್ರಥಮ ಪರ್ಯಾಯ ಪೂಜಾಧಿಕಾರವನ್ನು ವಹಿಸಿಕೊಟ್ಟರು... 1518ನೆಯ ವರ್ಷದ ಹಿಂದಿನ ಚರಿತ್ರೆ ಪರಾಮರ್ಶಿಸಿದರೆ ಉಡುಪಿ ಮಠೀಯರು ಯಾರೂ ಶಿವಮೊಗ್ಗ ಉತ್ತರಕ್ಕೆ ಸಂಚಾರ ಬಂದಿದ್ದರ ಗುರುತಿಲ್ಲ.' (ಎಚ್.ಸುಬ್ಬರಾವ್, ಋಜುತ್ವ ಸಿದ್ಧಾಂತ, ಪು.236). (ಇಲ್ಲಿ ವಾದಿರಾಜರ ಸಂಚಾರ ಹೊರತುಪಡಿಸಬೇಕು).

ತಮ್ಮ ಕಾರ್ಯವನ್ನು ಬದರಿಯಲ್ಲಿರುಹಲೆಂಬಂತೆ, ಸು.1538ರಲ್ಲಿ ಮತ್ತೆ ಭರತ ಖಂಡದ ದ್ವಿತೀಯ ಸಂಚಾರ ಹೊರಟ ವಾದಿರಾಜರು ಅಯೋಧ್ಯೆಗೈತಂದಿರಲು, ಅಲ್ಲಿ ಸಿಕ್ಕ ಹನುಮ[36] ಹಾಗೂ ಗರುಡ ವಿಗ್ರಹಗಳನ್ನು ನಂತರ ಉಡುಪಿಗೆ ತಂದು, ಕೃಷ್ಣನ ಎದುರು ಚಂದ್ರಶಾಲೆಯಲ್ಲಿ ಎಡ–ಬಲಬದಿಗೆ ಸ್ಥಾಪಿಸಿದರು.

ವಾದಿರಾಜರು ಸಂಚಾರದಲ್ಲಿರುತ್ತ, ಪರ್ಯಾಯದ ಯತಿಗಳು ಮಧ್ವಾರ್ಚನೆಗೆಂದು (ಅವರ ಅದೃಶ್ಯ ಸ್ಥಳವಿದ್ದ) ಅನಂತಾಸನ ಮಠಕ್ಕೆ ಬಂದರೆ, ಆ ಮಠದವರು ದಾರಿಯಲ್ಲಿ ಎಂಜಲು ಚೆಲ್ಲಿ ಆತಂಕಪಡಿಸುತ್ತಿದ್ದರು. ಇದನ್ನು ಕೇಳಿ ಬಂದ ವಾದಿರಾಜರು ಕೃಷ್ಣ ಮಠದ ಉತ್ತರ ದ್ವಾರದಲ್ಲಿ ನಿತ್ಯಾರ್ಚನೆಗಾಗಿ (ತಾವು ಕಂಡಂಥ) ಅಪರೂಪದ ಮಧ್ವರ ಪ್ರತಿಮೆ ಮಾಡಿಸಿ ಸ್ಥಾಪಿಸಿದರು. ಪೂಜೆ ನಿರಾತಂಕ ಸಾಗಲೆಂದು —

ಕೊಲ್ಲು ಬೇಗ ಕಳ್ಳರಾ ಸಿರಿನಲ್ಲ ಮಧ್ವವಲ್ಲಭ (ಪ)
ಎಲ್ಲ ಕೂಡಿ ನನ್ನ ಪೂಜೆಗೆ ಕಲ್ಲು ಹಾಕುತಿದ್ದರು ॥

ಎಂಬ ಪದ ಕಟ್ಟಿ ಪ್ರಾರ್ಥಿಸಲು ದುರುಳರು ಇಲ್ಲದಂತಾದರು.[37]

ವಾದಿರಾಜರು ಕುಂಭಕೋಣಕ್ಕೆ ಹೋಗಿ ಶಾರ್ಙ್ಗಪಾಣಿಯನ್ನು ವಂದಿಸಿ, ಅಲ್ಲಿಯ ಪಂಡಿತರನ್ನೆಲ್ಲ ವಾದದಲ್ಲಿ ಗೆದ್ದು ಶಿಷ್ಯರನ್ನಾಗಿಸಿಕೊಂಡರು. ಅಲ್ಲಿಂದ ತಿರುಪತಿಗೆ ಬಂದು, ಬೆಟ್ಟದ ಮೆಟ್ಟಲು ಅವರ ದಿವ್ಯದೃಷ್ಟಿಗೆ ಸಾಲಿಗ್ರಾಮವಾಗಿ ಕಂಡ ಕಾರಣ, ಮೊಣಕಾಲಿಂದ ಬೆಟ್ಟವೇರಿ ವಿಮಾನ ಶ್ರೀನಿವಾಸನನ್ನು ಸಂದರ್ಶಿಸಿ —

---

36. 'ಕಂಡೆ ನಾ ಉಡುಪಿಯ ಕೃಷ್ಣನ' ಎಂಬ ಪುರಂದರ ಕೀರ್ತನೋಕ್ತವಾಗಿ, 1564ರ ಮುನ್ನ ಸ್ಥಾಪಿತವಾಗಿತ್ತೆಂಬುದು ನಿರ್ವಿವಾದ.

37. ನಂತರ ಮಧ್ವರ ಇನ್ನೊಂದು ಪ್ರತಿಮೆ ಮಾಡಿಸಿ ಸೋದೆಯಲ್ಲಿರಿಸಬೇಕೆಂದಿರಲು, ಕಾಣಿಯೂರು ಮಠಾಧೀಶರ ಕೇಳಿಕೆಯಂತೆ ಪಾಜಕದ ಆಚಾರ್ಯ ಪಾದಗಳ ಹಿಂದೆ ಸ್ಥಾಪಿಸಿದರು. (ಪಾಜಕದ ಆಡಳಿತ ಕಾಣಿಯೂರು ಮಠದ್ದು). ಮಧ್ವರ ನಿತ್ಯಾರ್ಚನೆ ಕೃಷ್ಣ ಮಠದಲ್ಲಿ ನಡೆದರೂ, ಮಧ್ವನವಮಿಯ ಉತ್ಸವ ಅನಂತೇಶ್ವರ ಮಠದಲ್ಲೇ ನಡೆವುದು.

ನೋಡಿದೆನೋ ನಿನ್ನ ವೆಂಕಟರನ್ನ

ಎಂಬ ಹಾಡಿನಿಂದ ಸ್ತುತಿಸಿ, ಮರುದಿನ ಅರ್ಚಿಸಿ, 108 ಸಾಲಿಗ್ರಾಮಗಳ ಮಾಲೆಯನ್ನರ್ಪಿಸಿದರು. (ಅದು ಇಂದಿಗೂ ಶ್ರೀನಿವಾಸನ ಕೊರಳಲ್ಲಿದೆ). ಆಗ ಸ್ವಪ್ನಾದೇಶದಂತೆ ಮಹಂತರಿಂದ ವಾದಿರಾಜರಿಗೆ ಕಾಣಿಕೆಯಾಗಿ ಬಂದ ಶ್ರೀಭೂಸಮೇತ ಸುವರ್ಣ ಶ್ರೀನಿವಾಸಮೂರ್ತಿ ಸೋದೆಯ ಮಠದಲ್ಲಿದೆ.

ವಾದಿರಾಜರು ಹಲವು ಸಲ ಹಂಪೆಗೆ ಹೋಗಿದ್ದರು. ಕೃಷ್ಣದೇವರಾಯನ ಕಾಲದಲ್ಲಿ ಇನ್ನೊಮ್ಮೆ ಬಂದಾಗ (1529) ಕೃಷ್ಣದೇವರಾಯ—ಅಚ್ಯುತರಾಯರು ಆರ್ಥಿಕ ದುಃಸ್ಥಿತಿಯಲ್ಲಿದ್ದರು —

ತತ್ರ ಕೃಷ್ಣಾಚ್ಯುತೇ ಭೂಪೇ ಬಹುದಾರಿದ್ರ್ಯಪೀಡಿತೇ ॥ ವಾ.ಗು.ಚ.2, 35.

ಅವರದನ್ನರಿಯಲು ವಾದಿರಾಜರು ಅಭಯವಿತ್ತು, ವಾಲೀಗುಹೆ ಹೊಕ್ಕು ಬಂಡೆಯನ್ನೊಡೆಯಿಸಲು, ಪೆಟ್ಟಿಗೆಯಂತಿದ್ದ ಅದರಲ್ಲಿ ಹಿಂದಿನವರು ಹೂತಿಟ್ಟ ಮುತ್ತು ರತ್ನಗಳ ರಾಶಿಯೇ ಕಂಡಿತು. ಅದನ್ನು ಅರಸರಿಗಿತ್ತು, ತಾವು ವಾಲಿ—ಸುಗ್ರೀವ ಪೂಜಿತ ರಜತ ವಿಠಲ—ರಾಮಮೂರ್ತಿಗಳನ್ನಷ್ಟೇ ಇರಿಸಿಕೊಂಡರು. (ಅವೀಗಲೂ ಮಠದಲ್ಲಿವೆ). ರಾಜರು ತಮ್ಮ ಸೇವೆ ಸ್ವೀಕರಿಸಿ ಅನುಗ್ರಹಿಸಿರೆನ್ನಲು, ಅವರನ್ನು ಪರ್ಯಾಯಕ್ಕೆ ಆಹ್ವಾನಿಸಿ ಕೃಷ್ಣಮಠ—ಅನಂತೇಶ್ವರ ಮಠ—ಚಂದ್ರಮೌಳೀಶ್ವರ ಮಠ—ಮಧ್ವ ಸರೋವರಗಳನ್ನು ಈಗಿರುವಂತೆ ಜೀರ್ಣೋದ್ಧಾರ ಮಾಡಿಸಿ ನವೀಕರಿಸಿಕೊಂಡರು.[38] (1532ರ ಅಂತ್ಯ ಹಾಗೂ 1533ರ ಆದಿಯಲ್ಲಿ ಅಚ್ಯುತರಾಯ ಈ ಕಾರ್ಯ ನಡೆಸಿಕೊಟ್ಟ, ಮಠಕ್ಕೆ ಬಿಟ್ಟ ದಾನ ದತ್ತಿಯ ದ್ವಾರಸ್ಥ ಶಾಸನ ಬರೆಸಿದನು; ಅವನೊಡನೆ ವ್ಯಾಸರಾಯರೂ ಬಂದಿದ್ದರು.)

---

38. 'ವ್ಯಾಸಯೋಗಿ ಚರಿತ' ಟೀಕೆಯ ವಾಕ್ಯಾವಳಿ 162, 175ರಲ್ಲಿ ಕೆಲ ವಿವರಗಳಿವೆ; ವ್ಯ.ರ.ಸಂ. 1, 63ರಲ್ಲಿ ಸಂವಾದಿ ಉಕ್ತಿಯಿದೆ.

ಇಷ್ಟರಲ್ಲಿ ಪಟ್ಟವೇರಿದ ಅಚ್ಯುತದೇವರಾಯ (1530–42) ವೈದ್ಯರೂ ಗುಣಪಡಿಸದ ರೋಗಕ್ಕೀಡಾದುದನ್ನು ಕೇಳಿ, (1535ರ ಸುಮಾರು) ಅಲ್ಲಿಗೈತಂದ ವಾದಿರಾಜರು ತೀರ್ಥಪ್ರಾಶನದಿಂದಲೇ ಅವನನ್ನು ಗುಣಪಡಿಸಿದರು.[39] ಸಂತುಷ್ಟ ದೊರೆ ಅವರನ್ನು ಸಿಂಹಾಸನದಲ್ಲಿ ಕೂರಿಸಿ ಛತ್ರ–ಚಾಮರ–ಮುತ್ತಿನ ಗದ್ದುಗೆ–ಕಿರೀಟಗಳನ್ನಿತ್ತು ಮರ್ಯಾದಿಸಿದ.[40] ಅವನ್ನಿಂದಿಗೂ ವಾದಿರಾಜರ ಪುಣ್ಯದಿನ ಪೂಜಿಸಿ ಪ್ರದರ್ಶಿಸುವರು.[41]

ಅಚ್ಯುತರಾಯನ ಬಳಿಕ ಅವನ ಮಗ 1ನೆಯ ವೆಂಕಟ (1542–43), 2ನೆಯ ಮಗ(ರಂಗ)ನ ಮಗ ಸದಾಶಿವ (1543–67)ರ ಆಳಿಕೆ ಮುಂದುವರಿದರೂ, ಕೃಷ್ಣದೇವರಾಯನಳಿಯ ರಾಮರಾಯನೂ ಅವನ ತಮ್ಮ ತಿರುಮಲರಾಯನೂ (1568–72) ಪ್ರಬಲಿಸುತ್ತ ಹೋಗಿ ಅರವೀಡು ವಂಶದಾಡಳಿತ ಬಂತು. ತಿರುಮಲಸುತ ಶ್ರೀರಂಗರಾಯನ (1573–85) ನಂತರ ಶ್ರೀರಂಗನ ತಮ್ಮ ವೆಂಕಟಪತಿರಾಯ (1585–1614) ಪೆನುಗೊಂಡೆಯಲ್ಲಿ ಪಟ್ಟವೇರಿದ. ಪೂರ್ವಕ್ಕೆ ಪಯಣಿಸಿ ಬರುತ್ತಿದ್ದ ವಾದಿರಾಜರನ್ನು ತಾನೇ ಹೋಗಿ ಪಲ್ಲಕ್ಕಿಯ ಮೆರವಣಿಗೆಯಲ್ಲಿ ಕರೆತಂದ. ಅಲ್ಲಿಯ ಸಭೆಯಲ್ಲಿ ಅನೇಕರೊಡನೆ ಶಾಸ್ತ್ರಾರ್ಥ ನಡೆದು ಎಲ್ಲ ಪ್ರಸಂಗಗಳಿಗೂ ಉತ್ತರಿಸಿ ವಾದಿರಾಜರು ವಿದ್ವಾಂಸರ ತಲೆದೂಗಿಸಿದರು. ದೊರೆ 'ಪ್ರಸಂಗಾಭರಣ' ಬಿರುದಿನಿಂದ ಸನ್ಮಾನಿಸಿದ–[42]

---

39. ಜಗನ್ನಾಥ–ಭೀಮೇಶದಾಸರುಕ್ತಿ ಇಲ್ಲಿ ಸಂವಾದಿಯಾಗಿವೆ.

40. ವಾ.ಗು.ಚ.3, 44ಕ್ಕೆ ಸಂವಾದಿ ಶ್ಲೋಕವೊಂದಿದೆ – ಬಿ.ಶ್ರೀನಿವಾಸಭಟ್ಟರ ವಾ.ರಾ.ಗುರುವರ ಚರಿತ್ರೆ, ಪು.35ರಲ್ಲಿ.

41. ವಾ.ಗು.ಚ.6, 29–31ರಲ್ಲಿ ಅರಸಪ್ಪನಾಯಕನಿತ್ತ ಇಂಥವೇ ವಸ್ತುಗಳ ಪ್ರದರ್ಶನ ಪುನರುಕ್ತ. ಆದರೆ 1539ರ ಮೊದಲಿನ ವ್ಯಾಸರಾಯರ ಪದ 'ಹತ್ತಿದೆ ಮುತ್ತಿನ ಗದ್ದಿಗೆಯನ್ನು' ಎಂಬುದರಿಂದ, ಇವು ಅಚ್ಯುತರಾಯನಿತ್ತುವು ಆಗಿರುವ ಸಾಧ್ಯತೆಯಿದೆ.

42. ಈ ಬಿರುದು ವೆಂಕಟಪತಿರಾಯನಿತ್ತರೂ ಬೇಲೂರ ಕೇಶವದಾಸ, ಕೆ.ಎಂ. ಕೃಷ್ಣರಾವ್, ಎಚ್.ಕೆ.ವೇದವ್ಯಾಸಾಚಾರ, ಸಿ.ಆರ್.ರಾವ್ ತಮ್ಮ ಗ್ರಂಥಗಳಲ್ಲಿ ಕೃಷ್ಣದೇವರಾಯನಿತ್ತ ಎಂದುದಪ್ಪರಿ! (ಪು.120, 96, 263, 17) 'ತಪಶ್ಶಕ್ತಿ–ಮಂತ್ರಸಿದ್ಧಿ–ತತ್ತ್ವಜ್ಞಾನ ಸಂಗಮವಿದ್ದ ಇವರಿಗೆ ರಾಜಮಹಾರಾಜರು ತಲೆವಾಗಿದರು' (ಪ್ರಭಂಜನ, ಅಂಭ್ರಣೀ ಸೂಕ್ತ, ix). 'ಕವಿಕುಲತಿಲಕ, ಸರ್ವಜನಕಲ್ಪ, ಷಟ್ತರ್ಕ ಷಣ್ಮುಖ, ಜಗದೇಕಮಲ್ಲವಾದಿ ಗುರುಸಾರ್ವಭೌಮಾದಿ ಇತರ ಬಿರುದು 'ಎಪಿಗ್ರಾಫಿಯಾ ಕರ್ನಾಟಿಕಾ'ದ ಮುನ್ನುಡಿಯಲ್ಲಿ ಉಕ್ತವಾಗಿವೆ. 'ಪ್ರಸಂಗಾಭರಣ' ಬಿರುದನ್ನುಲ್ಲೇಖಿಸಿದ ವ್ಯ.ರ.ಸಂ. 1585ರ ನಂತರ ರಚಿತವೆಂಬುದು ಸ್ಪಷ್ಟ.

ಕುರ್ವನ ಪ್ರಸಂಗಂ ಕಿಲ ರಾಜಧಾನ್ಯಾಂ
ರಾಜ್ಞಃ ಸಭಾಯಾಂ ಬಹುಶಾಸ್ತ್ರವಿದ್ಭಿಃ ।
ಪ್ರತೋಷ್ಯಭೂಪಂ ಬಹು ವಾದಿರಾಜಃ
ಪ್ರಾಪ್ತಃ ಪ್ರಸಂಗಾಭರಣಾಭಿಧಾನಂ ॥ ವ್ಯಾ.ರ.ನಂ. 1,47.[43]

ಪ್ರಸಕ್ತೇ ಬಹುಧಾಸ್ತತ್ರ ಪ್ರಸಂಗೇ ವಾದಿರಾಟ್ಸುಧೀಃ
ಸರ್ವಾನುತ್ತರದಾನೇನ ಪ್ರೀಣಯಾಮಾಸ ಪಂಡಿತಾನ್॥ ವಾ.ಗು.ಚ.

ಶ್ರೀ ವೆಂಕಟಪತಿರ್ವೀರಪ್ರತಾಪಸ್ತುಷ್ಟಮಾನಸಃ
ಪ್ರಸಂಗಾಭರಣಂ ನಾಮ ಬಿರುದಂ ಗುರವೇ ದದೌ ॥ 3,2–3.

ಕೆಲವು ಮತ್ಸರಿಗರು ಒಬ್ಬ ಹುಡುಗನನ್ನು ಕೊಲ್ಲೂರ ಮೂಕಾಂಬಿಕೆಯ ಹಿಂದೆ ಅಡಗಿಸಿಟ್ಟು, ವಾದಿರಾಜರು ಕೊಲ್ಲಿಸಿದರೆಂದಾರೋಪಿಸಿದರು. 'ಇದೆಲ್ಲ ಮೂಕಾಂಬಿಕೆಗೆ ಗೊತ್ತು' ಎಂದ ವಾದಿರಾಜರು ಕೃಷ್ಣನ ಮಹೋತ್ಸವದಲ್ಲಿ ಮುಳುಗಿದ್ದರು. ಆ 'ಏಕಾಂತ ಭಕ್ತಪ್ರಿಯೆ' ಬಾಲಕನನ್ನು ಬೆದರಿಸಿ ಗುರುಗಳೆಡೆ ಕಳಿಸಿದಳು –

ಸೈವ ದೇವೀ ವಟುಂ ತಂ ಹಿ ನಿರ್ಭರ್ತ್ಸ್ಯಕ ಗುರುಸನ್ನಿಧಿಂ
ಪ್ರೇಷಯಾಮಾಸ ಕೃಪಯಾ ಹ್ಯೇಕಾಂತಿಜನಪ್ರಿಯಾ ॥ ವಾ.ಗು.ಚ.4,65.

ಅತ ಶರಣು ಬಂದು ಗುಟ್ಟು ರಟ್ಟಾಗಲು ವೈರಿಗಳ ಮುಖ ಕಪ್ಪಿಟ್ಟಿತು –

---

43. 48–53ರ ವರ್ಣನೆ ಮಧ್ವವಿಜಯ 15ನೆಯ ಸರ್ಗದ ಶ್ಲೋಕಗಳ ಸ್ಮರಣೆ: ವಾದಿರಾಜರ ವಾಗಮೃತವು ಅವರ ಮುಖದ ವಿನೋದ–ಆಖ್ಯಾನ–ಮಂದನಗೆ–ಸುಸ್ವರಯುಕ್ತವಾಗಿ ಶಾಸ್ತ್ರರಹಸ್ಯವನ್ನು ಸಪ್ರಮಾಣ ಪ್ರತಿಪಾದಿಸುವುದು; ಸಂಪ್ರದಾಯಾನುಗುಣ ತತ್ವನಿರ್ಣಯಭರಿತ ನಿಸ್ಸಂಶಯವಾಗುವಂತೆ ನುಡಿದದ್ದು ಪಂಡಿತಾಗ್ರ್ಯರಿಂದಲೂ ನಿಷೇಧಿಸಲಾಗದ್ದು; ಪ್ರತಿ ಪ್ರಶ್ನೆಗೆ ಉತ್ತರಗರ್ಭಿತ, ಮನೋಹರ ಶಿರಃಕಂಪಯುತವಾದದ್ದು; ಸಭಿಕರಿಗಾನಂದ ತುಂಬತಕ್ಕದ್ದು; ಅರಳಿದ ಶ್ರೋತ್ರ ಮುಖ, ಕಾಂತಿಯುಕ್ತ ಕಣ್ಗಳಿಂದ ಸಹಿತವಾಗಿ ನುಡಿದದ್ದು; ರೋಮಾಂಚನ ಹುಟ್ಟಿಸತಕ್ಕದ್ದು; ಸಭಿಕರ ಕಿವಿ ಮನಸ್ಸೆಲ್ಲವನ್ನೂ ತಮ್ಮ ಶರೀರದತ್ತ ಆಕರ್ಷಿಸತಕ್ಕದ್ದು; ಸುಲಭವಾಗಿ ಗೊತ್ತಾಗತಕ್ಕದ್ದು; ಸಜ್ಜನರಿಗೆ ಪುಣ್ಯಪ್ರದ ಹರಿವಾಯು ಕಾರುಣ್ಯ ಸಮುದ್ರಜನಿತವಾದ ಅವರ ಉಪನ್ಯಾಸ ಲಕ್ಷ್ಮಿ ಯಾವನಿಗಾನಂದಪ್ರದವಾದದು? ಹರಿಯ ಅದ್ಭುತ ಕಥೆ ಕೇಳಿ ಅವನ ಪಾವನ ಸಾಮೀಪ್ಯ ಸುಖ ತಂದುಕೊಡುವ ಅದರಲ್ಲೂ ವಿದ್ವತ್ಸಭೆಯಲ್ಲಿ ಪಾನಗೈಸುವ ಜ್ಞಾನಿಶ್ರೇಷ್ಠರನ್ನು ನನ್ನಂಥವನೆಂತು ಬಣ್ಣಿಸಿಯಾನು? (ಋಜುತ್ವ ಸಿದ್ಧಾಂತ, ಪು.238).

ಮಯಾಹೀ ದಕಾರ ತತ ಶತ್ರೂನ್ ತತಸ್ತೇನ ಸ್ವತಾಭವತ॥ ವ್ಯ.ರ.ಸಂ.1,65

ಮಯಾಕಾಂಚಿಕಾ ಕೃಪಾಲೋಕಾದಾಕಾಂಕ್ಷಿತ ಫಲಪ್ರದಾ
ಮಯಾನಶ್ಯತ ಮೇ ಶತ್ರೂನ್ ಏಕಾಂತಿಕ ಜನಪ್ರಿಯಾ ॥ ಪಶ್ಚಿಮ ಪ್ರಬಂಧ 56.

ವಾದಿರಾಜರು(ಉಡುಪಿಗೆ 8 ಮೈಲಾಗುವ) ಇನ್ನಂಜೆಗೆ ಸೇರಿದ ಉಂಡಾರು ವಿಷ್ಣುಮೂರ್ತಿ ಮಠದಲ್ಲಿದ್ದು ತಂಗಿರುತ್ತ, ಅಲ್ಲಿಯ ಒಡೆಯ ರಾಮಕೃಷ್ಣಪ್ರಭು[44] ರಾತ್ರಿ ಸೈನಿಕರಿಂದ ಮುತ್ತಿಗೆ ಹಾಕಿಸಿದನು. ವಾದಿರಾಜರ ತಪಃಪ್ರಭಾವದಿಂದ ಅವರಿಗೇನೂ ಕಾಣದೆ ಮಠ ಸುತ್ತುತ್ತಿದ್ದರು. ಬೆಳಿಗ್ಗೆ ಅವರಿಗೇ ಕಾಣದಂತೆ ವಾದಿರಾಜರು ಹೊರಬರಲು ಅಂಜಿ ಓಡಿದರು—

ಅದೃಶ್ಯ ಏವಾಥ ಸ ನಿರ್ಜಗಾಮ ತನ್ಮಧ್ಯತೋ ದಂಡಧರಂ ವಿಜಿತ್ಯಂ ॥
ವ್ಯ.ರ.ಸಂ.1,32

ಅಕ್ಕಸಾಲಿಯೊಬ್ಬ ಗಜಾನನ ಮೂರ್ತಿ ಮಾಡಲೆಂದು ಪಂಚಲೋಹದ ಎರಕ ಹೊಯ್ಯಲು ಅದು ಹಯವದನಮೂರ್ತಿ[45] ಆಯಿತು. ಅದನ್ನು ಸುತ್ತಿಗೆಯಿಂದಲೂ ಒಡೆಯಲಾಗದೆ ಆಶ್ಚರ್ಯ–ವಿಷಾದಗೊಂಡ ಅವನ ಕನಸಿನಲ್ಲಿ ವಿಪ್ರನೊಬ್ಬ ಬಂದು 'ದೈವ ಸಾನ್ನಿಧ್ಯದ ವಿಗ್ರಹವನ್ನು ಸುಮ್ಮನೆ ಹೊಡೆಯದೆ, ಬೇಡಬಂದವರಿಗಿತ್ತುಬಿಡು' ಎಂದನು. (ಅತ್ತ ಹಯಾಸ್ಯ ಸೂಚಿಸಿದಂತೆ) ವಾದಿರಾಜರು ಬಂದು ಅದನ್ನು ಪಡೆದು ಅಭಿಷೇಕದಿಂದ ಪರಿಶೋಧಿಸಿ ಅರ್ಚಿಸಿದರು. ಅಕ್ಕಸಾಲಿಯ ಪರಿವಾರ ಅಂದಿನಿಂದ (ದೈವಜ್ಞ ಬ್ರಾಹ್ಮಣರಾಗಿ)

---

44. ಈ ಚಿನ್ನಭಂಡಾರ ರಾಮಕೃಷ್ಣಪ್ರಭುವೇ ಮುಂದೆ ಪಶ್ಚಾತ್ತಾಪ ಹೊಂದಿ ಪ್ರಾಯಶ್ಚಿತ್ತವೆಂಬಂತೆ, ವೇದವೇದ್ಯರ 2ನೆಯ ಪರ್ಯಾಯದಲ್ಲಿ(1612–13) ಕೃಷ್ಣನಿಗುಂಬಳಿಯಿತ್ತುದು 21.41613ರ ಕೃಷ್ಣಮಠದ ಗೋಡೆಯ ಶಾಸನದಲ್ಲಿದೆ (ತುಳುನಾಡ ಶಾಸನ, ಪು.236). ಇದೇ ಶಾಸನದಲ್ಲಿ ಕೆಳದಿಯ ವೆಂಕಟಪ್ಪನಾಯಕ (1582–1629) ವೇದವೇದ್ಯರಿಗೆ ಹೂವಿನಕೆರೆ ಗ್ರಾಮ ದತ್ತಿ ಇತ್ತುದೂ ಉಕ್ತವಾಗಿದೆ (ವೀರವೆಂಕಟಪತಿಯ ಅಪ್ಪಣೆಯಂತೆ). ವಾದಿರಾಜರ ನಂತರವೂ ಅವರ ಪುರಸ್ಕಾರ ಸೇವೆಗಳು ಮುನ್ನಡೆದುದರ ದ್ಯೋತಕವಿದು.

45. ವಿಷ್ಣು ಲಕ್ಷ್ಮಿಯ ನೋಡಿ ನಗಲು ಶಿರ ಉರುಳುವ ಶಾಪ ಹೊಂದಿ, ತಲೆದಿಂಬು ಗಿಟ್ಟುಕೊಂಡ ಬಿಲ್ಲು ಗೆದ್ದಲು ಕತ್ತು ಹಾರಿಸಿದ ತಲೆಗೆ ಬದಲು ಹಯಮುಖ ಇರಿಸಿದರು ಸುರರು (ಪು.ನಾ.ಚೂ. 678).

ವಾದಿರಾಜ ಮಠದ ಶಿಷ್ಯರೆನಿಸಿದರು. (ಇಂದು ಪ್ರತ್ಯೇಕ ಮಠ ಮಾಡಿಕೊಳ್ಳುತ್ತಿದ್ದಾರೆ).

ಭಕ್ತಿಪಾಶಗಳಿಂದ ದೃಢವಾಗಿ ಬಂಧಿಸಿ ಹೂರಣವನ್ನು ಹರಿವಾಣದಲ್ಲಿ ಹೊತ್ತು ಸಮರ್ಪಿಸಿದರೆ ಅದನ್ನು ತಿನ್ನಬಂದ ಹಯಸ್ವಾಮಿಯನ್ನು (ಹನುಮಂತನಂತೆ) ಹೆಗಲಮೇಲೆ ಹತ್ತಿಸಿಕೊಳ್ಳುವರು! ಅವನನ್ನಾಶ್ರಯಿಸಿ ವಿಜ್ಞಾನಾಸ್ತ್ರದಿಂದ ವಾಗ್ಬಾಣ ಬಿಟ್ಟು ವಾದಿಗಳನ್ನು ಗೆಲ್ಲುತ್ತ ವಾದಿರಾಜರು ಒಳ–ಹೊರ ಶತ್ರುಗಳನ್ನೂ ಸೋಲಿಸಿದ್ದಾರೆ –

ಭಕ್ತಿಪಾಶೈರ್ದೃಢಂ ಬದ್ಧ್ವಾ ಚಣಕಾದೀನ್ ಸಮರ್ಪಯನ್
ಸ್ವಯಂ ವಹತ್ಯಯಂ ನಿತ್ಯಂ ಅಶ್ವಾಸ್ಯಂ ವಾದಿರಾಡಹೋ ॥ 1, 40.

ತುರಂಗಾಂಗಂ ಸಮಾಶ್ರಿತ್ಯ ಜ್ಞಾನಾಸ್ತ್ರೇಣ ಜಯದ್ರಿಮಾನ
ಅಂತರ್ಬಹಿಸ್ಥ ಗೋಪ್ತ್ರಾತ್ಯೈಃ ವಾದಿರಾಜೋ ಜಯದ್ರಿಪೂನ ॥
1, 41; ವ್ಯ.ರ.ಸಂ.

ಬೇಯಿಸಿದ ಕಡಲೆಬೇಳೆಗೆ ಸಕ್ಕರೆ, ಒಣಗಿದ ದ್ರಾಕ್ಷಿ, ಗೋಡಂಬಿ, ಏಲಕ್ಕಿ, ತುಪ್ಪ, ಕೊಬ್ಬರಿ, ಬಾಳೆಹಣ್ಣು ಸೇರಿಸಿ — ಹೀಗೆ ಸ್ವಹಸ್ತಗಳಿಂದ ನಿತ್ಯವೂ ಹಯಗ್ರೀವ ನೈವೇದ್ಯವಾಗುತ್ತಿರಲು, ಅಶ್ವಧಾಟಿಯ ಸಂಸ್ಕೃತ ದಶಾವತಾರ ಸ್ತೋತ್ರವೂ 'ಆವ ಕಡೆಯಿಂದ ಬಂದೆ ವಾಜಿ ವದನನೆ' ಎಂಬ ಕನ್ನಡ ಹಾಡೂ ಪಠಿತವಾಗುತ್ತಿರಬೇಕು. ಅಹೋಬಲದಲ್ಲಿ ಕೆಲ ಅಸೂಯಾಪರರು ಹೂರಣಕ್ಕೆ ವಿಷವಿಕ್ಕಲು ಕುದುರೆಯೇ ಅದನ್ನೆಲ್ಲ ತಿಂದು ವಾದಿರಾಜರಿಗೆ ಉಳಿಸದೆ ಅವರನ್ನು ಉಳಿಸಿತು; ಶತ್ರುಗಳ ನಾಶವಾಯಿತು –[46]

ವಿಷಂ ಪ್ರದತ್ತಂ ಪರಿಪಂಥಿಭಿಃ ಕ್ವಚಿತ್
ಹಂತುಂ ಕಿಲೈನಂ ತದಭೂದಿಹ ನಿಷ್ಫಲಂ।
ತದತ್ರ ದೇವಸ್ಯ ಮಹಾನನುಗ್ರಹಃ
ಶ್ರೀವಾದಿರಾಜೇ ಪ್ರತಿತರ್ಕ್ಯತೇ ಮಯಾ ॥ 1, 54.

ಕಲೌ ದುಷ್ಟ ಜನಾಕೀರ್ಣೇ ವರ್ಧಯನ್ಮಧ್ವದರ್ಶನಂ।
ವಾದಿರಾಜಂ ವಿನಾ ಕೋಗೋಕ್ಯೇದುಷ್ಟಾನ್ ದಮಯಿತುಂ ಕ್ಷಮಃ ॥
1, 55; ವ್ಯ.ರ.ಸಂ.

ಉಡುಪಿಯ ಹತ್ತಿರ ಉದ್ಯಾವರದ ಪಾಪನಾಶಿನೀ — ಚಕ್ಷುಷ್ಮತೀ ನದಿಗಳ ನಡುವಿನ ಮಟ್ಟು ಗ್ರಾಮದ ಬ್ರಾಹ್ಮಣರು ಬೇಸಾಯ ಅವಲಂಬಿಸಿ ಬಹಿಷ್ಕೃತರಾಗಿರಲು, ವಾದಿರಾಜರು

---

46. ಜಗನ್ನಾಥದಾಸ ಹಾಗೂ ವೇಣುಗೋಪಾಲದಾಸರ ಹಾಡುಗಳಲ್ಲಿ ಈ ಪ್ರಸಂಗದ ಹೊಳಹಿದೆ.

ಮುದ್ರಾಂಕನದಿಂದವರನ್ನುದ್ಧರಿಸಿದ್ದು ಕೆಲವರಿಗೆ ಸಹಿಸಲಿಲ್ಲ. ಪುನಃ ಅಡುಗೆಯವನಿಂದ ವಿಷ ಪ್ರಯೋಗಿಸಲು ಹೂರಣವನ್ನೆಲ್ಲ ತಿಂದ ಕುದುರೆಯ ಕಾಯ ಹಸಿರೇರಿ, ಮಟ್ಟು ಬ್ರಾಹ್ಮಣರಿಂದ ಬೆಳೆಸಿದ (ಬದನೆಯಂತಹ) ಗುಳ್ಳ ತಿಂದು ಕುತ್ತಿಗೆಯಲ್ಲಷ್ಟೇ ಹಸಿರುಳಿದಿರುವುದನ್ನು ಮಠದ ವಿಗ್ರಹ ಸಹ ತೋರಿಸುತ್ತಿದೆ. (ವಾದಿರಾಜ ಗುಳ್ಳ ಇಂದಿಗೂ ಹೆಸರಾಗಿದೆ).

ಇದರಂತೆ, ಕುಂದಾಪುರ ತಾಲೂಕಿನ ಕೋಟ–ಕೋಟೇಶ್ವರಗಳ ಬ್ರಾಹ್ಮಣರಲ್ಲಿ ಗಡಿವಿವಾದ ಒದಗಿ, ಕೋಟೇಶ್ವರದವರು ಮೋಸದ ಆಕಾಶವಾಣಿಗೈಸಿ ಗಡಿ ಸಾಧಿಸಿ ಬಹಿಷ್ಕೃತರಾಗಿರಲು, ವಾದಿರಾಜರು ಮುದ್ರಾಂಕನವಿತ್ತು ಉದ್ಧರಿಸಿದರು.[47]

ದೆಹಲಿಯ ಯವನ ದೊರೆ ಮತ್ತು ಕಳಿಸಿದ್ದ ಹೊನ್ನುಗಳಿಂದ ಕೃಷ್ಣ ಮಠಕ್ಕೆ ಬಂಗಾರದ ಮಾಡು ಹೊದಿಸಲೆಳಸಿದಾಗ ಬೇಡವೆಂದು ಸ್ವಪ್ನವಾಗಿ, ವಾದಿರಾಜರು ಆ ಸಂಪತ್ತನ್ನು ಮಠದ ಉತ್ತರದ ಗೋಶಾಲೆಯಡಿಯಲ್ಲಿ ಹುಗಿಸಿ ಅದರ ಮೇಲೆ ಸುಬ್ರಹ್ಮಣ್ಯನನ್ನಿರಿಸಿ ಪೂಜಿಸುವಂತೆ ಮಾಡಿದ್ದು ಇನ್ನೂ ನಡೆಯುತ್ತಿದೆ.[48] ಇದಕ್ಕಿನ್ನೊಂದು ಕಾರಣವೂ ಕೇಳಬರುತ್ತದೆ. ಗೋಕರ್ಣದಲ್ಲಿ ಕರ್ಕೋಟಕನ, ಸುಬ್ರಹ್ಮಣ್ಯದಲ್ಲಿ ವಾಸುಕಿಯ, ಉಡುಪಿಯಲ್ಲಿ ತಕ್ಷಕನ ಬಿಲವಿರುವ ಪ್ರಸಿದ್ಧಿ. ಉಡುಪಿಯ ನಡುವಿನ ಬಿಲದ

---

47. 'ಇಲ್ಲಿನ ಪ್ರಸಂಗಗಳ ಐತಿಹ್ಯದ ಬಗ್ಗೆ ವಿಚಾರಮತಿಗಳು ಹೇಗೇ ಭಾವಿಸಲಿ, ಸಂಪ್ರದಾಯನಿಷ್ಠರಾದ ಶ್ರೀ ವಾದಿರಾಜರು ಸಂದರ್ಭಾನುಸಾರವಾಗಿ ಹೇಗೆ ತಮ್ಮ ಹೃದಯ ವೈಶಾಲ್ಯ ಪ್ರವೃತ್ತಿಯಿಂದ ಇತರ ಸಣ್ಣಪುಟ್ಟ ವರ್ಗದವರನ್ನು ಸಹ ತಮ್ಮ ಮಠಕ್ಕೆ ಸೇರಿಸಿಕೊಂಡರೆಂಬುದನ್ನು ಗಮನಿಸಿದಲ್ಲಿ ಅವರ ಸುಧಾರಣಾ ದೃಷ್ಟಿ ಮೆಚ್ಚಬೇಕಾದದ್ದು' (ವಾ.ರಾ.ಕೃತಿಗಳು, ಪೀಠಿಕೆ vi).

48. ಈ ಪ್ರಸಂಗ 1532–33ರ ಪರ್ಯಾಯದ್ದೆಂದು ಬಿ.ಜ.ಪುರಾಣಿಕರೂ, 1548–49ರ ಪರ್ಯಾಯದ್ದೆಂದು ಹಂಡೆ ಶ್ರೀಪಾದದಾಸರೂ ಅಭಿಪ್ರಾಯಿಸಿದ್ದಾರೆ. ಆದರೆ 'It was in the Paryaya of 1564-65 that the battle of Talikota was fought. It was evidently the subversion of the Vijaynagar empire that induced Sri Vadirajaswami not to put a gold roof on the temple of Sri Krishna' (B.Venkoba Rao, Vyasayogi Charita, Introduction, para 162) ಎಂಬ ಅಭಿಪ್ರಾಯದಲ್ಲಿ ಹೆಚ್ಚು ಸಮಂಜಸವೆನಿಸುತ್ತದೆ.

ವಿಷಪ್ರಾಯಬಾಧಿತ ನಾಗರಿಕರು ವಾದಿರಾಜರನ್ನು ಕೇಳಿಕೊಳ್ಳಲು, ಅವರು ಬಿಲದ ಮೇಲೆ ಕಲ್ಲುಚಪ್ಪಡಿ ಹೊದಿಸಿ ನಾಗಮೂರ್ತಿಯನ್ನು ಸ್ಥಾಪಿಸಿದರು. ಹೀಗೆ ದ್ರವ್ಯಾಕ್ಷಣೆ — ಜನರಕ್ಷಣೆಯೆರಡನ್ನೂ ವಾದಿರಾಜರು ನಾಗಪ್ರತಿಷ್ಠೆಯಿಂದ ಸಾಧಿಸಿದರು. ಅಲ್ಲದೆ ಇನ್ನೂ ಹಿಕ್ಕ ದ್ರವ್ಯವನ್ನು ರಥಬೀದಿಯ ತಮ್ಮ ಮಠದ ಬಳಿ ಹುಗಿದು ಅದರ ಮೇಲೆ ಭೂತರಾಜರನ್ನಿರಿಸಿದರು.

ಯಮಾವತಾರಿ ಕನಕದಾಸರು (1487—1585) ಬೇಡರಾದರೂ ಕೃಷ್ಣನನ್ನು ಹಾಡಿ ಕೊಂಡಾಡುತ್ತ ಆಗ ಉಡುಪಿಯಲ್ಲಿದ್ದರು.[49] ಅವರ ಯೋಗ್ಯತೆಯರಿತ ವಾದಿರಾಜರು ಅವರನ್ನು ಉದಾರವಾಗಿ ಮರ್ಯಾದಿಸಿದರೂ, (ವಾದಿರಾಜರಿಲ್ಲದಾಗ) ಕುಹಕಿಗಳಿಂದ ನೈವೇದ್ಯಾನ್ನ ಸಿಗದೆ ಕನಕದಾಸರು ಕೃಷ್ಣನ ಮೊರೆಹೊಕ್ಕರು. ರಾತ್ರಿ ಕಾಣಿಸಿಕೊಂಡು ಕೃಷ್ಣ ಒಂದೊಂದೇ ಒಡವೆ ಕೊಡತೊಡಗಿದ. ಕನಕದಾಸರು ಅವನ್ನು ಒತ್ತೆಯಿಟ್ಟು ಹೊಟ್ಟೆ ಹೊರೆದರು. ಒಡವೆ ಕಾಣೆಯಾದ ಸುದ್ದಿ ಕೇಳಿ ವಾದಿರಾಜರು ಕನಕದಾಸರನ್ನೂ ವ್ಯಾಪಾರಿಯನ್ನೂ ವಿಚಾರಿಸಿ ಹಣ ತೆತ್ತು ಒಡವೆ ಬಿಡಿಸಿಕೊಂಡರು; ಮಠದವರನ್ನು ಬೈಯ್ದು ನೈವೇದ್ಯಾನ್ನ ಕೊಡಿಸಿದರು. ಇನ್ನೊಮ್ಮೆ ಅಡುಗೆಮನೆಯಿಂದ ಹರಿದುಬಂದ ಗಂಜಿಯ ನೀರು ಹಿಡಿದು ಕನಕದಾಸರು ಹಿಟ್ಟಿನ ರೊಟ್ಟಿ ತಟ್ಟಿ

---

49. ಕನಕದಾಸರು ಪುರಂದರದಾಸರೊಡನೆ ಹತ್ತಾರು ವರ್ಷ ವ್ಯಾಸರಾಯರಲ್ಲಿದ್ದುದರಿಂದಲೂ, ಜ್ವರ ಪರಿಹಾರಾರ್ಥ ವಾದಿರಾಜರಲ್ಲಿಗೈದುವಂತೆ ವ್ಯಾಸರಾಯರೇ ಸೂಚಿಸಿದ ಐತಿಹ್ಯವಿರುವುದರಿಂದಲೂ, ಸು.1535ರ ನಂತರ ಉಡುಪಿಗೆ ಬಂದಿರಬಹುದು. ಅವರು ಮೊದಲು ಆನೆಗೊಂದಿಯ ತಿರುಮಲೆ ತಾತಾಚಾರ್ಯರ ಪ್ರಭಾವದಲ್ಲಿ ಶ್ರೀ ವೈಷ್ಣವ ಮತವನ್ನು ಮೆಚ್ಚಿದ್ದು, ವ್ಯಾಸರಾಯ—ವಾದಿರಾಜರ ಪ್ರಭಾವದಲ್ಲಿ ಬಂದು ಮಾಧ್ವ ಮತವನ್ನನುಸರಿಸಿರಬೇಕು. 'ಮೋಹನ ತರಂಗಿಣಿ'ಯ ಸಂಧಿ 26ರ ಆದಿಯಲ್ಲಿ 'ತ್ರಿವಿಕ್ರಮ ದಾಸನ್ಯದಾಸ' ಎಂದು ಹೇಳಿಕೊಂಡಿದ್ದಾರೆ; ವಾದಿರಾಜರಿಂದ ಮುದ್ರಾಂಕನವಾಗಿರಬೇಕು. (ಮಜುತ್ವ ಸಿದ್ಧಾಂತ, ಪು.202, ಕ.ಹರಿದಾಸರು, 284). ಆದರೂ ಮುಂದಿನ ನುಡಿ 'ರಾಮಾನುಜಾಗಮವ ಸ್ಮರಿಸಿ ಕಥೆಯ ವಿಸ್ತರಿಸುವೆ' ಎಂದ ಕಾರಣ ಎರಡೂ ಮತಗಳ ಆದರವಿದ್ದಂತಿದೆ.

ಕೃಷ್ಣನಿಗರ್ಪಿಸಿದರು.[50] ವಾದಿರಾಜರು ನೈವೇದ್ಯಕ್ಕೆ ಬಂದ ಅನ್ನ ಆಗಲೇ ಅರ್ಪಿತವೆಂದು ಮನ್ನಿಸದೆ ಮತ್ತೆ ಅಡುಗೆ ಮಾಡಿಸಿ ನಿವೇದಿಸಿದರು. ಅದರ ನೆನಪಿಗೆ ಗಂಜಿ–ರೊಟ್ಟಿ ಕೃಷ್ಣನಿಗರ್ಪಿಸುವ ವ್ಯವಸ್ಥೆ ಮಾಡಿದರು.

ಅದ್ವೈತ ಪಂಡಿತನೊಬ್ಬ ವಾದಿರಾಜರನ್ನು ವಾದಕ್ಕಾಹ್ವಾನಿಸಿ ಪತ್ರ ಕಳಿಸಿದ. ಇಂಥ ದಿನ, ಈ ಎಡೆ ವಾದವೆಂಬುದನ್ನೋದಿ ವಾದಿರಾಜರು ಅಲ್ಲಿ ಹೋದೊಡನೆ, ಇಂದು ಬರಲಾಗುವುದಿಲ್ಲ ಇನ್ನು 3 ದಿನಕ್ಕೆ ಬನ್ನಿರೆಂದು ತಿಳಿಸಿದ್ದ. ಪರ್ಯಾಯ ಸಮೀಪಿಸಿದ್ದರಿಂದ ವಾದಿರಾಜರು ಅಲ್ಲಿಂದ ತೆರಳಿ, ಪಾಂಡುರಂಗಿ ಮನೆತನದ ಆನಂದಭಟ್ಟರನ್ನು ಆ ಕಾರ್ಯಕ್ಕೆ ನಿಯಮಿಸಿ 'ಆತ ಬರುವನಕ ಅಲ್ಲಿದ್ದು ಗೆದ್ದು ಬನ್ನಿ, ನಿಮ್ಮಿಷ್ಟ ನೆರವೇರುವುದು' ಎಂದು ಮಂತ್ರಾಕ್ಷತೆ ಇತ್ತರು.[51] ಅವರು ವಾದಿಯನ್ನು ಸೋಲಿಸಿ ಜಯಪತ್ರ ತಂದು ಪರ್ಯಾಯಸ್ಥ ವಾದಿರಾಜರಿಗರ್ಪಿಸಿದರು. ಗುರ್ವಾನುಗ್ರಹದಿಂದ ಒದಗಿದ ಮಗನಿಗೆ ಗುರುರಾಜ ಎಂದು ಕರೆದರು.[52]

---

50. 'ಕನಕದಾಸರಿಗೆ ಕೃಷ್ಣದರ್ಶನ ನಿರಾಕರಿಸುವುದು ಆಗಿನ ಸಾಮಾಜಿಕ ಪಟ್ಟಭದ್ರ ವ್ಯವಸ್ಥೆಗೆ ಒಂದು ಭಾರಿ ತಲೆನೋವಾಗಿ ಪರಿಣಮಿಸಿರಬಹುದು. ಹೀಗಾಗಿ ಕನಕದಾಸರ ದರ್ಶನಕ್ಕಾಗಿಯೇ ದೇವಾಲಯದಲ್ಲಿ ಒಂದು ಕಿಂಡಿಯನ್ನು ಮಾಡಿಸಿರಬೇಕು. ಹೊಸ ವಿಚಾರದ ಒಳ್ಳೆದರೊಂದಿಗೆ ಸಂಪ್ರದಾಯ ಜಡತ್ವ ಮಾಡಿಕೊಂಡ ಒಂದು ಬಗೆಯ ತಾತ್ಕಾಲಿಕ ಒಪ್ಪಂದದ ಗುರುತು ಈ ಕನಕನ ಕಿಂಡಿ ಎಂದು ಭಾವಿಸಬಹುದು' (ಕೀರ್ತನಕಾರರು, ಪು.36). 'ಬಾಗಿಲನು ತೆರೆದು ಸೇವೆಯನು ಕೊಡು' ಎಂದು ಕನಕದಾಸರು ಹಾಡುತ್ತಿದ್ದು, "ಏಕೆ ನಡುಗಿದೆ ಕಾಯ" ಎಂಬ ಪದ ಸೂಚಿಸುವಂತೆ ಭೂಕಂಪವಾಗಿ ಗೋಡೆಯೊಡೆದು ಕೃಷ್ಣ ತಿರುಗಿ ನಿಂತ ವಿವರಣೆಗಿಂತ (ಎಂ.ರಾಜಗೋಪಾಲಾಚಾರ್ಯ, ರಜತಪೀಠ, ಪು.100) ಇದು ವಿಹಿತ ವಿಚಾರ.

51. ಇದು ವಾದಿರಾಜರು ಪುನಃ ಪರ್ಯಟನೆಗೈದು 1564–65ರ ಪರ್ಯಾಯಕ್ಕೆ ಬರುತ್ತಿದ್ದ ಕಾಲ. ಏಕೆಂದರೆ ಇಲ್ಲಿಯ ಆನಂದಭಟ್ಟರ ಕಾಲ 1536–1605. ಇವರು ಗೋದಾ ತೀರದ ಅಹ್ಮದನಗರ ಜಿಲ್ಲೆಯ ಪುಣತಾಂಬಾ ಗ್ರಾಮ ಬಿಟ್ಟು ಪಂಢರಿಯಲ್ಲಿ ನೆಲಸಿ ಪಾಂಡುರಂಗಿ ಎನಿಸಿದರು; ಮಕ್ಕಳನ್ನು ಪಡೆವ ಪ್ರಾಯಸ್ಥರಾದಾಗ ಬಂದ ಪರ್ಯಾಯ ವಾದಿರಾಜರಿಗೆ ಮೂರನೆಯದು.

52. ಕಾಶಿಯ ಮಧುಸೂದನ ಸರಸ್ವತಿಯ 'ಅದ್ವೈತ ಸಿದ್ಧಿ'ಯನ್ನು ಖಂಡಿಸಲು ಆನಂದಭಟ್ಟರು ವ್ಯಾಸರಾಯರ ನ್ಯಾಯಾಮೃತಕ್ಕೆ 'ಕಂಟಕೋದ್ಧಾರ' ಎಂಬ ವ್ಯಾಖ್ಯಾನ ರಚಿಸಿದರು. (ಪುಣತಾಂಬಾ ವ್ಯಾಸ ಮನೆತನದ ವಿಶ್ವನಾಥಸೂರಿಯ ಮಕ್ಕಳಾದ 'ಅದ್ವೈತ ಕಾಲಾನಲ' ನಾರಾಯಣಾಚಾರ್ಯರು ವಾದಿರಾಜರನ್ನು ನುತಿಸಿದ್ದರೆ, ರಾಮಾಚಾರ್ಯರು ನ್ಯಾಯಾಮೃತಕ್ಕೆ 'ತರಂಗಿಣಿ' ವ್ಯಾಖ್ಯಾನಗೈದರು). ಆನಂದಭಟ್ಟರ ಮಕ್ಕಳಲ್ಲಿ ಶ್ರೀನಿವಾಸಾಚಾರ್ಯರು ತತ್ತ್ವಪ್ರಕಾಶಿಕಾ ಟಿಪ್ಪಣಿ ಇತ್ಯಾದಿ, ನರಸಿಂಹಾಚಾರ್ಯರು (ಉತ್ತರಾದಿ ಮಠದ ವಿದ್ಯಾಧೀಶತೀರ್ಥರು) ಸುಧಾ ಟಿಪ್ಪಣಿ, ವಾಕ್ಯಾರ್ಥಚಂದ್ರಿಕಾದಿ ಗ್ರಂಥ ರಚಿಸಿದ್ದಾರೆ; ಅಣ್ಣ ತ್ರಿವಿಕ್ರಮರ 4ನೆಯ ಮಗ ಕೇಶವಾಚಾರ್ಯರನ್ನು ಆಸ್ತಿಯಂತೆ ಸಮನಾಗಿ ಸ್ವೀಕರಿಸಿ 'ಗುರುರಾಜ' ಎಂದು ಕರೆದು ನರಸಿಂಹಾಚಾರ್ಯರಿಂದ ತರಬೇತುಗೊಳಿಸಿದರು (ಶೇಷ ವಾಕ್ಯಾರ್ಥ ಚಂದ್ರಿಕೆಯ ಜೊತೆಗೆ ಇವರು ಬರೆದ ವ್ಯಾಸತ್ರಯ ವ್ಯಾಖ್ಯಾನಗಳಿಗೂ ಗುರುರಾಜೀಯ ಅಭಿಧಾನವಿದೆ).

ವಾದಿರಾಜರು ತಮ್ಮ ಪಲ್ಲಕ್ಕಿಯನ್ನು ಮುಂದೆ ಭೂತರಾಜರಿಂದಲೂ ಹಿಂದೆ ಸೇವಕರಿಂದಲೂ ಹಿಡಿಸಿಕೊಂಡು ಹೋಗುವಾಗ, ಮುಂದೆ ಯಾರೂ ಕಾಣದೆ ಜನ ಆಶ್ಚರ್ಯಗೊಳ್ಳುತ್ತಿದ್ದರು. ಇದನ್ನು ಕಂಡು ಮಂತ್ರಸಿದ್ಧಿಯ ಮತ್ಸರಿಯೊಬ್ಬರು[53] ಭೂತಗಳಿಂದಲೇ ಎರಡೂ ಬದಿಗೆ ಪಲ್ಲಕ್ಕಿ ಹಿಡಿಸಿಕೊಂಡು 'ವಾದಿರಾಜರ ಪಲ್ಲಕ್ಕಿಯ ಮುಂದೆ ಮಾತ್ರ ಭೂತರಾಜರಿದ್ದರೆ, ನನ್ನ ಪಲ್ಲಕ್ಕಿಯ ಎರಡೂ ಬದಿಗೆ ಭೂತಗಳುಂಟು' ಎಂದು ಸಾರಿದರು. ಒಮ್ಮೆ ಎರಡೂ ಪಲ್ಲಕ್ಕಿ ಸಂಧಿಸಲು, ಭೂತರಾಜರ ರುದ್ರರೂಪಕ್ಕೆ ಭೂತಗಳು ಪಲಾಯನಗೈದುವು. ಪಲ್ಲಕ್ಕಿ ಭೂಮಿಗಿಳಿದು ಮಂತ್ರಸಿದ್ಧಿ ಅವಮಾನಗೊಂಡರು.[54]

(ಕಾರ್ತಿಕ ಶುದ್ಧ ದ್ವಾದಶಿಯಿಂದ 4 ದಿನ) ಉಡುಪಿಯಲ್ಲಿ ನಡೆವ ಲಕ್ಷ ದೀಪೋತ್ಸವದಲ್ಲೊಮ್ಮೆ ಮಳೆಯಿಂದಾತಂಕ ಒದಗಿತು. ಪರ್ಯಾಯ ಯತಿಗಳಿಂದ ಪ್ರಾರ್ಥಿತರಾಗಿ ವಾದಿರಾಜರು ಸ್ವತಃ

ಪಾಲಗಡಲೊಡೆಯ ಬಾರೊ ಎನ್ನ
ಮೇಲೆ ಕರುಣಾಮೃತದ ರಸಮಳೆಯ ಸುರಿವುತಲಿ ॥ ಪ ॥

ನೂಪುರ ಧ್ವನಿಯೆಂಬ ನೂತನದ ರಸಮಳೆಯ
ಪಾಪ ಹರ ನಖಕಾಂತಿಯ
ದೀಪಾವಳಿಯ ನಡುವೆ ದೀನೋಕ್ತಿಯ ಕೆಡದಂತೆ ॥ 2 ॥

ಎಂಬಿತ್ಯಾದಿ ಕೀರ್ತನ ಹಾಡುತ್ತ — ಮಳೆ ನಿಲ್ಲಲು — ರಥವೆಳೆದು ಕೃಷ್ಣನ ದೀಪೋತ್ಸವ ನಿರಾತಂಕ ನಡೆಸಿಕೊಟ್ಟರು.

---

53. ಇವರು ಕಾಣಿಯೂರು ಮಠಾಧೀಶ ವಾರಿಜಾಕ್ಷತೀರ್ಥರೆಂದು ಶಹಾಪುರಾಚಾರ್ಯರ ಮತ —

ತದ್ವೀಕ್ಷ್ಯ ವಾರಿಜಾಕ್ಷಾಹ್ವೋ ಯತಿಃ ಕಣ್ವಪುರಸ್ಥಿತಃ
ಗುರುರಾಜಾದಪಿ ಸ್ವಸ್ಯಾಧಿಕ್ಯಂ ದರ್ಶಯಿತುಂ ಭುವಿ ॥ ವಾ.ಗು.ರ.ಮಾ.7,3.

54. ಶ್ರೀಮೇಶವಿಠಲಾಂಕಿತ ಹೊನ್ನಾಳಿ ಶ್ರೀಮದಾಸರ ಹಾಡಿನಂತೆ ಇದು ಕುಂಭಕೋಣದಲ್ಲಿ ನಡೆಯಿತು —

ಮುಂದೆ ಭೂತವರನ ಪ್ರೇರಿಸಿ ಹಿಂದೆ ಒಬ್ಬ ನರನ
ನಂದದಿಂದ ಜನವೃಂದ ಮಧ್ಯದೊಳು
ಅಂದಣ ನಡೆಸಿರಿ ಕುಂಭಕೋಣಪುರದಿ ॥ 2 ॥

ಹೀಗೊಮ್ಮೆ ಬೇಲೂರ ಕೇಶವನ ರಥ ಹೊರಟು (ವಾದಿರಾಜರು ದೇಗುಲಕ್ಕೆ ತೆರಳು) ಕದಲದೆ ನಿಂತುಬಿಟ್ಟಿತು. ಆಗಲೂ ಪ್ರಾರ್ಥಿತರಾಗಿ ಹೋಗಿ –

ಬೇಗ ಬಾರೊ ಬೇಗ ಬಾರೊ ನೀಲಮೇಘವರ್ಣ
ಬೇಗ ಬಾರೊ ಬೇಗ ಬಾರೊ ವೇಲಾಪುರದ ಚೆನ್ನ ॥ ಪ ॥

ಎಂಬ ಹಾಡು ಹೇಳುತ್ತ ಎಳೆಯಲು, ರಥ ಸರಾಗ ಸಾಗಿತು. ಇಲ್ಲದೆ ಶ್ರೀಮಂತ ಕೇಶವ ಅಯ್ಯಂಗಾರ (ಶ್ರೀವೈಷ್ಣವ ಬ್ರಾಹ್ಮಣ)ರ ರೋಗ ನಿವಾರಿಸಲು ಹಯಗ್ರೀವ ಸಾಲಗ್ರಾಮವ ಒಂದನ್ನು ವಾದಿರಾಜರು ಅವರ ಬಳಿ ಇರಿಸಿದ್ದರು. ಅದನ್ನಾರಾಧಿಸುತ್ತ ಅವರು ರೋಗ ಬಿಟ್ಟು ಉದಾರ ಧರ್ಮಿಗಳಾದರು. ಕಾಲಾಂತರ ಬಂದ ವಾದಿರಾಜರು ಪ್ರಸನ್ನರಾಗಿ ಅವರನ್ನು ವೈಕುಂಠದಾಸರೆಂಬ (ವೈಕುಂಠಕೇಶವಾಂಕಿತ) ಹರಿದಾಸರನ್ನಾಗಿಸಿದರು–[55]

ವೈಕುಂಠದಾಸಂ ಧನಿನಂ ಹರಿಭಕ್ತಂ ಚಕಾರ ಹಿ ॥ ಪಾ.ಗು.ಚ. 3,33.

ಅನಂತರ ಮತ್ತೊಮ್ಮೆ ಬಂದಾಗ ಅವರು ತಮ್ಮ ತೊಡೆಯಲ್ಲಾಡುವ ಬಾಲ ಕೃಷ್ಣನನ್ನು ವಾದಿರಾಜರಿಗೆ ತೋರಿಸುತ್ತ –

ಮಗುವ ಕಾಣಿರಯ್ಯ ಮಾಂತುದ! ಮಗುವ ಕಾಣಿರಯ್ಯ ॥ ಪ ॥
ಸುಗುಣ ವಾದಿರಾಜರೆ ಮೂಜಗವನು ತನ್ನುದರದೊಳಿಟ್ಟ ॥ ಅ.ಪ. ॥

... ... ... ... ... ... ... ... ... ...

ಕ್ಷಿತಿಗಧಿಕ ವೇಲಾಪುರದ ಪತಿ ವೈಕುಂಠ ಕೇಶವನಾ
ರತಿಯಿಂದ ನೀ ನೋಡಯ್ಯ ಶರಣಾಗತನ ತೊಡೆಯಂ ಮಾಂತುವಾದ ॥ 5 ॥

ಎಂಬ ಕೀರ್ತನೆ ಹಾಡಿದರು.[56] ಆಗ ವಾದಿರಾಜರು ಅವರನ್ನು –

---

55. ಕನ್ನಡಕ್ಕೆ 15 ಪದ ಉಳಿಸಿರುವ ಇವರು ಇಂದ್ರಾಂಶರೆಂದು ಪ್ರತೀತಿ. 'ವ್ಯಾಸರಾಯ–ವಾದಿರಾಜ–ಪುರಂದರ–ಕನಕ–ವೈಕುಂಠದಾಸರು ದಾಸಕೂಟದ ಪಂಚರತ್ನ' (ಲಕ್ಷಾಲಂಕಾರ, 18) ಎನಿಸಲು ಸಮಕಾಲೀನತೆ ಕಾರಣವಿರಬೇಕು.

56. ಇಲ್ಲಿ ಸ್ಪಷ್ಟವಾಗಿ ವೈಕುಂಠಕೇಶವಾಂಕಿತವಿದ್ದರೂ ಇದನ್ನು 'ಕನಕದಾಸರ ಕೀರ್ತನೆ' (ಉಡುಪಿಯ ಮುದ್ರಣ, 1948)ಗಳಲ್ಲಿ ಸೇರಿಸಲಾಗಿದೆ. ಇದನ್ನು ಕನಕದಾಸರ ಕೃತಿ ಎಂದೇ ಭಾವಿಸಿ, ಕನಕದಾಸರು ಕೃಷ್ಣಮಠದಲ್ಲಿ ಅಂಬೆಗಾಲಿಟ್ಟು ಬಂದ ಕೃಷ್ಣನನ್ನು ತೋರಿದ ಕಥೆ ಹುಟ್ಟಿದೆ. (ವಾದಿರಾಜ ಗುರುಸಾರ್ವಭೌಮರು ಪು.198). ಇದೇ ಮಗು ಅಳುವುದನ್ನು ಕಂಡು ಪುರಂದರದಾಸರು 'ಅಳುವುದೇತಕೊ ರಂಗ' ಎಂಬ ಪದ ಹಾಡಿದಂತೆ ಕೋರಿಕೆ ಕಲ್ಪಿಸಿದ್ದಾರೆ. (ವಾದಿರಾಜರು, ಪು.183). ಆದರೆ ಈ ಪದ ವರದ ಪುರಂದರವಿಠಲರದೆನ್ನುತ್ತಾರೆ.ದಿವಾಣಜಿ. (ಪ್ರಸಾದ ಯೋಗ, 201).

ದಾಸೋತ್ತಮ ನೀನೆ ಶ್ರೀವೈಕುಂಠ
ದಾಸೋತ್ತಮ ನೀನೆ ॥ ಪ ॥

ಮಕ್ಕಳುಗಳಿಗೆ ಮೊಮ್ಮಕ್ಕಳುಗಳಿಗೆ ದೇ
ವಕ್ಕಳಿಗೆ ಮನು ಮುನಿಗಳಿಗೆ
ಸಿಕ್ಕದ ಪರಬೊಮ್ಮನ ಕಾಣ ಮಾಡಿ ತಂ
ದಿಕ್ಕು ತೋರಿಯು ಮುಕ್ತಿ ಅಡಿಸಿ ಮುದಿಂಸುತಿಹ ॥ 1 ॥

ವೇದಶಾಸ್ತ್ರಾದಿಗಳಿಗೆ ಮೈಯದೋರದ
ನಾದಿ ಪುರುಷನ ನೀನೊಲಿಸಿಕೊಂಡೆ
ಈ ಧರೆಯವರ ಪಾವನ ಮಾಡಲೋಸುಗ
ಸಾಧು ಸಜ್ಜನ ಅಪರೋಕ್ಷ ಜ್ಞಾನಿಯಾದೆ ॥ 2 ॥

ಹರಿಸರ್ವೋತ್ತಮ ಹಯವದನ ಮಾರುತಿ ವೇಲಾ
ಪುರಂದರಗೆ ಪ್ರತಿಬಿಂಬನಾದ
ವರವೈಕುಂಠದಾಸೋತ್ತಮ ಎನಗೆ ಹರಿಯ
ತೋರಿಸಿ ಪರಮ ಧನ್ಯನ ಮಾಡಿದ ॥ 3 ॥

ಎಂದು ಕೊಂಡಾಡಿದರು. ಕೂಡಲೇ ವೈಕುಂಠದಾಸರು ವಿನಯದಿಂದ —

ಕೊಂಡಾಡಬಹುದೆ ಯತೀಂದ್ರ ಎನ್ನ
. . . . . . . . . . . . . . . . . . . . . . . . .
ಕೈವಲ್ಯಾಂಗನೆಯನು ದಯೆ ಮಾಡಿದನಲ್ಲ ದಾನಕೊಳುತ್ತಮನೆ ॥ 4 ॥

ಎಂದುತ್ತರಿಸಿದರು. ಹೀಗೆ ಮಾತನಾಡುವಲ್ಲಿ ವೃದ್ಧ ವೈಕುಂಠದಾಸರ ಎಂಜಲು ಸಿಡಿವುದೆಂದು ಜನ ಆಡಿಕೊಳ್ಳಲು, ವಾದಿರಾಜರು ಹಾಡಿದ್ದು ಹೀಗೆ —[57]

---

57. ವೈಕುಂಠದಾಸರ ವೃದ್ಧಾಪ್ಯ ಸೂಚಿಸುವ ಈ ಸಂದರ್ಭ 16ನೆಯ ಶತಕದ ಉತ್ತರಾರ್ಧದ್ದಿರಬೇಕು. 'ವೈಕುಂಠದಾಸರು ತಮಗೆ ಮೋಕ್ಷ ಮಾರ್ಗದೋರಿದ ವಾದಿರಾಜರ ಸ್ವರೂಪವೇನೆನ್ನಲು 'ಮುಂದಿನ ಜನ್ಮದಲ್ಲಿ ತಿಳಿಯುವಿರಿ' ಎಂದುತ್ತರಿಸಿದ್ದು ವಾದಿರಾಜ ಗುಣ ರತ್ನಮಾಲಾ 11,17ರಲ್ಲಿ ಉಕ್ತ —

ವೇತ್ಸ್ಯಾಹಸಿ ಸಮ್ಯಕ್ ತ್ವಂ ಮತ ಸ್ವರೂಪಂ ಭವಾಂತರೇ ॥

ವೈಕುಂಠದಾಸರೇ ಅದವಾನಿಯ ದಿವಾನ ತಿಮ್ಮಣ್ಣನಾಗಿ ಜನಿಸಿ 18ನೆಯ ಶತಮಾನದ ಪೂರ್ವಾರ್ಧದಲ್ಲಿ ವಿಜಯದಾಸರ ಪ್ರಥಮ ಶಿಷ್ಯ ವೇಣುಗೋಪಾಲದಾಸರೆನಿಸಿದರು; ವಿಜಯ ದಾಸರಿಂದ 'ವಂಗನಾಮದ (3 ನಾಮದ) ತಿಮ್ಮಣ್ಣ' ಎಂದು ಕರೆಸಿಕೊಂಡು ಪೂರ್ವಭವ ನೆನೆದರು. ಅಂತೆಯೇ ಹಾಡಿದರು —

ಅಂಕದಲಿದ್ದ ಬಾಲಕನ ಬರುತಲೆ ಕಂಡು
ಶಂಖಚಕ್ರಾಂಕಿತನು ಈತನೆಂದು
ಶಂಕಿಸದೆ ಎನಗೆ ಪ್ರಾಗ್ಜನ್ಮದಲಿ ಪೇಳ್ದ ॥ (ಸಂತೈಸುತವದಾನ)

ಎಂಜಲೆನ್ನಲಿಬಹುದೆ ಮನುಜರಿದನ ಅಥವನ ಧ
ನಂಜಯ ಸುವೈಕುಂಠದಾಸರ ವದನದ ಕಣಿವ ॥ ಪ ॥

ವದನವೆಂಬಾಕಾಶದಲಿ ಭಕುತಿ ಜೀಮೂತ
ಪದುಮನಾಭನ ನಾಮಾಮೃತದ ಕಡಲ
ಮುದದಿಂದ ತಕೊಂಡು ಎನ್ನಂಗ ದೇಹದಲಿ
ಹದನರಿತು ಸುರಿದು ಮುಕ್ತಿಫಲವ ಬೆಳೆಸಿದುದನು ॥ 1 ॥

ಹೃದಯ ಕಾರಾಗೃಹದಿ ಶ್ರೀಹರಿಯನಾವಾಗ
ಹುದಾಗಿ ಆಗಲಿಸಿದ ಕಾರಣದೊಳಂಗುಟದಿ
ಉದಿಸಿ ಗಂಗೆಯು ಪೋಪೆಡೆಯು ಆಳಿದಿರೆ ಇವರ
ವದನದಲಿ ಪೊರಟೆನ್ನ ಮೂಕ್ಯಲೆ ಹರಿದುದನು ॥ 2 ॥

ಪರನನ್ನ ಹಯವದನ ಚರಣ ಸರಸಿಜ ಮಧು
ಕರ ಸುವೈಕುಂಠ ದಾಸೋತ್ತಮನ
ವರ ವದನದಲಿ ವೇದಶಾಸ್ತ್ರಾಗಮದ ತಾ
ತ್ಪರಿಯ ಬಿಂದುಗಳನ್ನ ಮೂಕ್ಯಲೆ ಹರಿದುದನ ॥ 3 ॥

ವಾದಿರಾಜರು 64 ವಿದ್ಯೆಗಳಲ್ಲಿ ನಿಷ್ಣಾತರೆಂದು ಖ್ಯಾತರಾಗಿದ್ದರೂ, ಅದು ಸುಳ್ಳು ಎಂದ ಸಮಗಾರನ ಮುಂದೆ ಕೃಷ್ಣಾಜಿನ ಕತ್ತರಿಸಿ, ಅವನ ಉಪಕರಣಕ್ಕೆ ಮೂಗಿನ ಬೆವರು ಹಚ್ಚಿ ತೋರಿದರು. (ತೊಗಲು ಹಸಿಯಾದರೆ ಹೊಲಿಯಲು ಹದಗೊಳ್ಳುವ ರಹಸ್ಯ ಅರಿತವರೆಂದು). ಅತ ಕ್ಷಮೆ ಕೇಳಿದ.

ಉಡುಪಿಯಿಂದ ಒಂದೂವರೆ ಮೈಲಿನಲ್ಲಿರುವ ಅಂಬಲಪಾಡಿಯ (ನಿಡಂಬೂರು) ಪಶ್ಚಿಮಾಲಯದ ಪಕ್ಷನಾಥ ಶ್ರೀಧರ. ಬಲ್ಲಾಳರನ್ನು ಅನುಗ್ರಹಿಸಿ ವರಾಹಮೂರ್ತಿ ಇತ್ತ ವಾದಿರಾಜರು, ಅವರ ಮನೆಯ ಬಳಿ ಭುಜಮಾಲಾಂಕೃತ ಹಾಗೂ ಮೂರವತಾರ ಸಂಕೇತ (ಗದಾ – ದಂಡ) ಸ್ವಪ್ರತಿಮೆಗಳಿರುವ ಮುಖ್ಯಪ್ರಾಣನನ್ನೂ, ಪಕ್ಕದಲ್ಲಿ ಭೂತ ರಾಜರನ್ನೂ ಸ್ಥಾಪಿಸಿದರು.[58]

---

58. ಚಿತ್ಪಾಡಿಯ ಪೂರ್ವಾಲಯದ ಶ್ರೀನಿವಾಸ ಬಲ್ಲಾಳರಿಗೆ ಲಕ್ಷ್ಮೀನಾರಾಯಣ ವಿಗ್ರಹ ಅನುಗ್ರಹಿಸಿದ ಮಧ್ವರೇ ಅಂಬಲಪಾಡಿಯ ಪಶ್ಚಿಮಾಲಯದ ಬಲ್ಲಾಳರಿಗೆ ವರಾಹಮೂರ್ತಿ ಇತ್ತವರೆಂದು ಬಿ.ಎನ್.ಕಮಲಾಪುರರ ನತ್ಯಧಾದಲ್ಲಿದೆ. ಆದರೆ ಪೂರ್ವಕಾಲದ ಉಕ್ತಿ ಹೆಚ್ಚು ಅಧಿಕೃತ. ಅಲ್ಲದೆ, ಸ್ಥಳೀಕರೂ ಪೂರ್ವೋಕ್ತಿಯನ್ನೇ ಸಮರ್ಥಿಸಿದ್ದಾರೆ. (ಎಂ. ರಾಜಗೋಪಾಲಾಚಾರ್ಯ, ವಾದಿರಾಜರ ಕೀರ್ತನೆಗಳು, ಮುನ್ನುಡಿ, 3).

ಕೆಮ್ಮಂಡಲು ಗ್ರಾಮದ ಬ್ರಾಹ್ಮಣರು ನೀರಿಲ್ಲದೆ ಗೋಳಾಡುತ್ತಿರಲು ವಾದಿರಾಜರು ಕಮಂಡಲು ಇರಿಸಿದಲ್ಲಿ ಬಾವಿ ತೆಗೆಯಿಸಿ, ಅವರ ಪೂಜೆಗೆ ಲಕ್ಷ್ಮೀನಾರಾಯಣ ಪ್ರತಿಮೆಯನ್ನಿತ್ತರು. (ಈ ಪ್ರಸಂಗದಿಂದಲೇ ಆ ಊರು ಕೆಮ್ಮಂಡಲು ಎನಿಸಿತು).

(4) ಮಹಿಮೆ

ವಾದಿರಾಜರ ಮಹಿಮೆಯಿಂದಾಗಿ ಜ್ವರವೇ ಅವರನ್ನೊಮ್ಮೆ ಪ್ರಾರ್ಥಿಸಿ ಅವರ ದೇಹದ ಆಶ್ರಯ ಪಡೆದಿತ್ತು; ಆದರೆ ಪೂಜಾವಧಿಯಲ್ಲಿ ಅದು ಸ್ಥಾನಾಂತರಗೊಂಡು ದಂಡದಲ್ಲಿ ನಡುಗುತ್ತಿರುತ್ತಿತ್ತು. ಇಂಥ ಮಹಿಮರಿಗೆ 120 ವರ್ಷಗಳ ನಿಡುಬಾಳಿನಲ್ಲಿ ಕಣ್ಣು ಮಂಜಾಗಲು ಕೃಷ್ಣ–ಲಕ್ಷ್ಮಿಯರನ್ನು ಪ್ರಾರ್ಥಿಸಿ ದೃಷ್ಟಿ ಪಡೆದುಕೊಂಡುದೊಂದು ಅದ್ಭುತವೇ?[59] ಹಾವು ಬೆನ್ನಟ್ಟಿ ಬಂದ ಇಲಿಗೆ ತಮ್ಮ ಆಸನದಡಿ ಆಸರೆಯಿತ್ತು, ಹಾವನ್ನು ದಂಡಕ್ಕೆ ಸುತ್ತಿಸಿದರು.[60] ಇನ್ನೊಮ್ಮೆ ಆ ಧ್ಯಾನಸ್ಥರ ಮೈ ಏರಿದ ಹಾವು ಹಾಗೆಯೇ ಇಳಿದುಹೋಯಿತು.[61]

ಅವರ ಶಿಷ್ಯ ರಾಘವಾಚಾರ್ಯರ ಮಗುವೊಂದು ತೀರಿದಾಗ ಅದರ ತಾಯಿ ತನ್ನೆದೆ ಹಾಲು ಇಂಗಿಸಿಕೊಂಡಿದ್ದು, ಮೊದಲ ಮಗು ಹಾಲು ಕೇಳಿದೊಡನೆ, ವಾದಿರಾಜರ ಮೃತ್ತಿಕೆ ಹಚ್ಚಿಕೊಂಡು ಹಾಲೂಡಿಸಿದಳು; ಅಲ್ಲದೆ ಆ ಮೃತ್ತಿಕಾಧಾರಣದಿಂದ ಮಗುವಿನ ಹಲ್ಲೂ ಗಟ್ಟಿಗೊಂಡುವು. ಅದೇ ಮಗಳು ರಘುನಾಥಾಚಾರ್ಯ ಎನಿಸಿ ಬರೆದ ಅನುಭವೋಕ್ತಿ ಇವು –

---

59. ಯದಿ ದಿಶಸಿ ನಯನಯುಗಳಂ ತರ್ಹಿ ಭವಚ್ಚರಣ ಸೇವಾರ್ಥ್ಯ
ಅಂಧೋನಾಥ ದಯಾಳೋ ಕೃಷ್ಣ ನಹೇತ ಪೂಜಯಾಮಿ ಕಥಮಂಧಃ ॥
ಉತ್ತಿಲಯ ಮನ್ಯಯನೇ ತ್ವಂ ಮನ್ಯೇ ಲಕ್ಷ್ಮಿ ಲೋಕಮಾನ್ಯಸಿ
— ಇತ್ಯಾದಿ.

60. ಅನೇಕ ದಾಸರ ಪದಗಳಲ್ಲಿ ಈ ಪ್ರಸಂಗ ಸೂಚಿತವಾಗಿದೆ.

61. ಪ್ರ.ರ.ಸಂ.2,5–7.

ಅಹೋ ಪ್ರತ್ಯಕ್ಷಮೇತಸ್ಯ ಮಾಹಾತ್ಮ್ಯಂ ಶ್ರೂಯತಾಂ ಜನಾಃ
ತತ್ಪಾದ ಮೃತ್ತಿಕಾಲೇಪಾದ್ವಧ್ಯೋ ದುಗ್ಧಮಭೂತ ಸ್ತನೇ ॥ 3,45

ದುಗ್ಧಧಾರಾನಹಂತ್ಯಾಪಿ ನಾಶಿತಂ ಯತ್ನತಃ ಸ್ತನೇ
ಪುನಸ್ತತ್ಪಾದ ಮೃತ/ಲೇಪಮಾತ್ರಾದ್ದುಗ್ಧಂ ಬಭೂವಹ ॥ 46 ॥

ಶ್ರೀ ವಾದಿರಾಜ ಶ್ರೀಪಾದ ಮೃದೋ ಧಾರಣತೋ ಮುಖೇ
ಶಿಥಿಲಾ ಅಪಿ ಮೇ ದಂತಾ ದಾರ್ಢ್ಯಮಾಪುರಹೋ ಪುನಃ ॥ 47, ವ್ಯ.ರ.ಸಂ.॥[62]

ವಾದಿರಾಜ ಎಂಬ ಶಬ್ದವೇ ವಿಚಿತ್ರ; ತದನುಗ್ರಹಮಾತ್ರದಿಂದ ಮೂರ್ಖನೊಬ್ಬ ದುರ್ವಾದಿಯನ್ನು ಗೆದ್ದಿದೆ. ಆ ಕೃಪಾಳು ರಾಜ ಪ್ರಜೆಯನ್ನುಳಿದು ಬಡ ಬ್ರಾಹ್ಮಣನ ಮನೆಗೈದಿ ಭಿಕ್ಷೆ ಸ್ವೀಕರಿಸಿದ್ದುಂಟು. ಅವರೊಂದೆಡೆ ಇರಿಸಿ ಬಂದ ನರಸಿಂಹ ಸಾಲಗ್ರಾಮ ಯೋಗ್ಯ ನೈವೇದ್ಯವಾಗದ ಕಾರಣ ಅವರಲ್ಲೇ ಮರಳಿದ ಸಂದರ್ಭವುಂಟು.[63]

(ಲಕ್ಷ್ಮೀಹೃದಯ ಪಠಿಸಿ ವಿದ್ಯಾರಣ್ಯರು ಸ್ವರ್ಣವೃಷ್ಟಿಗೈಸಿದ ಬಳಿಕ ಅದಕ್ಕೆ ಲಕ್ಷ್ಮಿಯ ಶಾಪ ಒದಗಿದ ಕಾರಣ) ವಾದಿರಾಜರು 'ಶ್ರೀಶಗುಣದರ್ಪಣ' ಸಂಸ್ಕೃತದಲ್ಲಿ ರಚಿಸಿ ಒಬ್ಬನ ದಾರಿದ್ರ್ಯ ಪರಿಹರಿಸಿದರು.[64] ಇನ್ನೋರ್ವನಿಗೆ ದಶಮಸ್ಕಂಧ ಭಾಗವತ ಪಾರಾಯಣ ಕಠಿಣವೆನಿಸಲು 'ಕವಿಕದಂಬಕಂಠಭೂಷಾ' ಸಂಸ್ಕೃತ ಕೃತಿಯನ್ನೂ 'ನೆನೆವೆನನುದಿನ ನೀಲಕಂಠದ ವರ್ಣನ ಗುಣರನ್ನನ' ಎಂಬ ಕನ್ನಡ ಕೀರ್ತನವನ್ನೂ ರಚಿಸಿಕೊಟ್ಟರು.

---

62. ಇನ್ನು ಹಸುವಿನ ಮೊಲೆಗೆ ಮೃತ್ತಿಕೆ ಹಚ್ಚಿ ಹಾಲು ಸುರಿಸಿದ್ದೂ ಪುನರ್ಲೇಪನದಿಂದ ನಿಲ್ಲಿಸಿದ್ದೂ ಅಚ್ಚರಿಯೇ? (ವಾ.ಗು.ರ.ಮಾ.8,56—61). ಇವರ ಪಾದೋದಕ—ಮೃತ್ತಿಕಾ ಮಹಿಮೆಯಿಂದ ರೋಗಮುಕ್ತರಾದವರ ವಿಷಯ ವ್ಯ.ರ.ಸಂ. 3,—7—15ರಲ್ಲಿವೆ.

63. ವ್ಯ.ರ.ಸಂ.1—42, 44, 28.

64. ವಾ.ಗು.ರ.ಮಾ. 8—55.

ಗಂಗಾ ತೀರದ ಪೈಠಣ ನಾರಾಯಣಾಚಾರ್ಯರು ರಚಿಸಿದ ಅನೇಕ ಕೃತಿಗಳನ್ನು ತೋರಿಸಿದಾಗ ವಾದಿರಾಜರು ಆಗಲೇ ತಮ್ಮ ಮಹಿಮೆ ಪ್ರಕಟವಾಗದಿರಲು ಅವನ್ನೆಲ್ಲ ನದಿಗರ್ಪಿಸಿದರು. 'ಹನುಮತ್ಕಿಂಕರಃ ಪಾತು' ಎಂಬ ಋಜು ಭೇದಕಲ್ಪಕ ಉಕ್ತಿಯಿಂದ 'ವಾದಿರಾಜ ಕವಚ' ಮಾತ್ರ ತೇಲಿ, ವಾದಿರಾಜರ ಕರಕೆ ಪಡೆದುಕೊಂಡಿತು.[65] ಅದರ ಪ್ರಸಿದ್ಧ ಪದ್ಯವಿದು —

ಕಾಮಧೇನುರ್ಯಥಾಪೂರ್ವಂ ಸರ್ವಾಭೀಷ್ಟ ಫಲಪ್ರದಾ
ತಥಾ ಕಲೌ ವಾದಿರಾಜ ಶ್ರೀಪಾದೋಭೀಷ್ಟದಃ ಸತಾಂ ॥ 29 ॥[66]

ಹಿಂದೆ ಕಾಮಧೇನು ಎಲ್ಲರ ಅಭೀಷ್ಟ ಫಲಗಳನ್ನಿತ್ತಂತೆ, ಈ ಕಲಿಯುಗದಲ್ಲಿ ವಾದಿರಾಜರು ಸಜ್ಜನರ ಅಭೀಷ್ಟಪ್ರದರಾಗಿದ್ದಾರೆ.

## (5) ಸಿದ್ಧ ಕ್ಷೇತ್ರ — ಸೋದೆ

ಸೋದಾ ರಾಜ್ಯದ ಅರಸಪ್ಪನಾಯಕನ[67] (1555—98) ಲಿಂಗಾಯತ ಗುರು

---

65. ವಾ.ಗು.ರ.ಮಾ.10, 11—19. ಈ ಸಂದರ್ಭವನ್ನು ವಿಶ್ಲೇಷಿಸಿದರೆ ಶ್ರೀ ವಾದಿರಾಜತೀರ್ಥರಿಗೆ ಯಾವ ಹೊಗಳಿಕೆಯೂ ಬೇಕಿರಲಿಲ್ಲವೆಂದು ವ್ಯಕ್ತವಾಗುತ್ತದೆ... ಮಹಿಮಾವಂತರಿಗೆ ಯಾರ ಪ್ರಶಸ್ತಿಯೂ ಬೇಕಾಗಿರುವುದಿಲ್ಲ. ಅವರು ನೆರವೇರಿಸಿದ ಮಹತ್ಕಾರ್ಯಗಳೇ [illegible] ರಚಿಸಿದ ಗ್ರಂಥಗಳೇ ಅವರ ಸ್ಮರಣೆಗೆ ಸರ್ವದಾ ಸಾಕ್ಷಿಗಳಾಗಿರಬಲ್ಲವು.' (ವಾದಿರಾಜರ ಕೃತಿಗಳು, ಪೀಠಿಕೆ, x).

66. ಈ ಪದ್ಯ ಸಾ.ವ್ಯ.ಆಖ್ಯಾನ 10—65ನೆಯದಾಗಿ ಪುನರುಕ್ತ—ವೇದ ವೇದ್ಯರಿಗೂ ಅನ್ವಯಿಸಿರಿ ಎನ್ನಲು; ಅಲ್ಲದೆ ಮುಂದೆ ಹಲವೆಡೆ ಸಂದರ್ಭತಃ ಸೂಚಿತ.

ಸು.1590ರಲ್ಲಿ ರಘುನಾಥಾಚಾರ್ಯರು 'ವೃತ್ತರತ್ನ ಸಂಗ್ರಹ' ಬಿತ್ತಿಯೂ, ಸಿ.ಆರ್. ರಾವ್ ಅವರು This Vadiraja Kavacha is the only work written about him during his life time (Sri Vadirajatirtha, p.39) ಎನ್ನುವುದೆಷ್ಟರಿ!

67. ಶಿರಸಿಯಿಂದ ಉತ್ತರಕ್ಕೆ ಯಲ್ಲಾಪುರದತ್ತ 13 ಮೈಲು ದೂರದ ಸೋಂದಾ [> ಸುಂದಾ (> ಸುಧಾ)] > ಸೋದಾ > ಸೋದೆ > ಸ್ವಾದೆ > ಸ್ವಾದಿ — 4ನೆಯ ಶತಮಾನದಲ್ಲಿ (ಕುಂತಳನಾಡಿನ ಬನವಸೆಯ ಕದಂಬ ಮಯೂರಶರ್ಮಾದಿಗಳ ಆಳ್ವಿಕೆಯಲ್ಲಿ) ಶೈವ ಬ್ರಾಹ್ಮಣರ ಸ್ವರ್ಣವಲ್ಲಿ ಮಠವನ್ನೂ, 8ನೆಯ ಶತಮಾನದಲ್ಲಿ ಜೈನರ ಅಕಳಂಕ ಮಠವನ್ನೂ, 12ನೆಯ ಶತಮಾನದಲ್ಲಿ ವೀರಶೈವರ ಗದ್ದಿಗೆಯ ಕಲಮಠವನ್ನೂ, 16ನೆಯ ಶತಮಾನದಲ್ಲಿ ಮಾಧ್ವ ವಾದಿರಾಜರ ಮಠವನ್ನೂ ಪಡೆಯಿತು. ವಿಜಯನಗರ ಸಾಮ್ರಾಜ್ಯದ ಇಳಿಗಾಲದಲ್ಲಿ ಮಲೆನಾಡಿನ ಕೆಳದಿ, ಬೀಳಗಿ, ಸ್ವಾದಿ ನಾಯಕರು ಪ್ರಬಲಿಸಿದರು. ಕೃಷ್ಣದೇವ ರಾಯನ ತಂದೆಯ ಸೋದರತ್ತೆಯ ಮಗ ಅರಸಪ್ಪನಾಯಕ. ಇವನು ತನ್ನ ತಾಯಿ ಭಂಗಮ್ಮನ ಹಿತಾರ್ಥ ಕೋಡಿಕೊಪ್ಪ ಅಗ್ರಹಾರವನ್ನು ಜೀರ್ಣೋದ್ಧಾರಗೈಸಿದ್ದು, ಕಾಶಿಕ ಗೋತ್ರದವನಾಗಿದ್ದು, ಸೋದೆಯ ನಾಳ್ಪ್ರಭುವೆನಿಸಿದ್ದು ಶಾಸನೋಕ್ತ (E.C.viii-Sb. 447-p.7, p.10. ಬನವಾಸಿ ಶಾಸನ 1571); 'ಸದ್ಧರ್ಮ ಸಿಂಹಾಸನಾಧೀಶ್ವರ,' 'ರಾಜಶೇಖರ'ನೆಂದೂ ವರ್ಣಿತ (1566ರ ಸ್ವರ್ಣವಲ್ಲಿ ಶಾಸನ,

....

ಮಂತ್ರಸಿದ್ಧಿಯಿಂದಾಕಾಶಗಾಮಿ ಎನಿಸಿ ಕೈಲಾಸಪತಿಯಿಂದನುಗ್ರಹೀತನಾದ ಕಾರಣ, ಶಿವಾಜ್ಞೆಯಂತೆ ಬ್ರಾಹ್ಮಣರನ್ನು ಲಿಂಗಾಯತರನ್ನಾಗಿಸುವೆನೆಂದೂ, ಮತಾಂತರಗೊಳ್ಳದವರನ್ನು ಆನೆಯ ಕಾಲಿಗೆ ತುಳಿಸಿ, ಶೂಲಕ್ಕೇರಿಸಿ, ಮೂಗು ತರಿದು ಶಿಕ್ಷಿಸಲಾಗುವುದೆಂದೂ ಸಾರಿದ. ಇದನ್ನು ಬ್ರಾಹ್ಮಣರಿಂದಾಲಿಸಿದ ಗುರುರಾಜರು ಸೋದೆಗೈತಂದು ಶಾಲ್ಮಲೀ ತೀರದ ತಪೋವನದಲ್ಲಿ ತಪಕ್ಕೆ ಕುಳಿತರು —[68]

ತತ್ರಾಸ್ಯ ಸೋಕ್ಷೀಷ್ಟಕರೋದಯಾಲಯ:
ಸೋದಾಪುರಸ್ಥೇಶ್ವ ನಿಮಂತ್ರಿತೋಭೂತ ॥ ವ್ಯ.ರ.ಸಂ.1,65.

ಶತ್ರುಗಳ ದಾಳಿಗೀಡಾದ[69] ಅರಸಪ್ಪನಾಯಕ ಓಡಿ ಅಡವಿಯ ದಾರಿ ಹಿಡಿದಾಗ,

---

ತಾಮ್ರಪಟದಂತೆ, 1567ರ ಜೈನಮಠದ ತಾಮ್ರಪಟ) ಚಾರುಕೀರ್ತಿ ಪರಂಪರೆಯ ಅಕಲಂಕನು ಹಾಡುವಳ್ಳಿ—ಸ್ವಾದಿ ಅರಸರ ಗುರುವಾಗಿದ್ದು, 1580ರ ಸುಮಾರು ಆ ಮಠದ ಸ್ವಾಮಿಯಾಗಿದ್ದ ಭಟ್ಟಾಕಳಂಕ ಶಬ್ದಾನುಶಾಸನವನ್ನಲ್ಲಿ 1604ರಲ್ಲಿ ರಚಿಸಿದಂತೆ (ರಾಜಾವಳಿ ಕಥೆ) ದೇವಚಂದ್ರನ ಹೇಳಿಕೆ. (ಅಂದಿನ ಸ್ವಾದಿಯಲ್ಲಿ 10,000 ಮನೆಗಳಿದ್ದು 4 ಲಕ್ಷ ಜನವಿತ್ತೆಂದೂ, ಹುಲಿಕಲ್ ವರೆಗಿನ 5 ಮೈಲುದ್ದ ಬೀದಿಯಲ್ಲಿ ಹಗಲಿರುಳೂ ವ್ಯವಹಾರವಿತ್ತೆಂದೂ, ಭಟ್ಕಳದಿಂದ ರಫ್ತಾದ ಮೆಣಸು 10 ಲಕ್ಷ ಪೌಂಡು ಆದಾಯ ತರುತ್ತಿತ್ತೆಂದೂ ವಿದೇಶೀ ಪ್ರವಾಸಿ ಬುಕಾನನ ಹೇಳುವ). ಅರಸಪ್ಪ ನಾಯಕನಿಗೆ ಲಿಂಗಾಯತ ಗುರು ಒದಗಿ ಪ್ರಬಲಿಸಿದ್ದು 1580ರ ನಂತರವೆಂದು ಇಲ್ಲಿ ಸ್ಪಷ್ಟ. ಇವನ ಹೆಸರು ರಂಭಾಸೇಟ (ಬಾಳೆಹಳ್ಳಿ) ಎಂದು ವಾ.ಗು.ರ.ಮಾ.5210; ಕಾಳಾಮುಖ ಪಂಥದ ಭೈರವೇಂದ್ರನೆಂದು ಕೊರಟಿಯವರ 'ವಾದಿರಾಜರು' ಕೃತಿಯಲ್ಲಿ ಕಲ್ಪಿತ.

68. 1580—81ರಲ್ಲಿ ವಾದಿರಾಜರು 4ನೆಯ ಪರ್ಯಾಯದಲ್ಲಿದ್ದು, 1582ರ ಆದಿಗೆ ಸೋದೆಯತ್ತ ಬಂದಿರಬೇಕು. 'ಏಕೆಂದರೆ ಆಗಲೇ ಕೆಳದಿಯ ಅರಸರು ರಾಜ್ಯ ವಿಸ್ತರಿಸುವ ಧೋರಣೆಯಿಂದ ಸೋದೆಯ ಮೇಲೆ ದಾಳಿ ಮಾಡಿದ್ದು, ವಾದಿರಾಜರ ಪ್ರಭಾವದಿಂದ ಅದು ನಿವಾರಿತವಾದ್ದು. (ಸೋದೆಯಿಂದ 2 ಮೈಲಿನಲ್ಲಿ 3 ದಿಕ್ಕಿನಿಂದ ಪ್ರದಕ್ಷಿಸುವ ಶಾಲ್ಮಲೆಯ ಉತ್ತರ ಪಾತ್ರದಲ್ಲಿ 'ಏಕಾಂತ ತಪೋವನವಿದೆ).

69. Chikke Sankenne Neyake who succeeded his elder brother Dodde Sankenne Nayake to the Keladi throne ruled from 1570-80(?). He governed the Kingdom successfully sometimes jointly with his nephew Remaraja Nayaka. The first impulse of the Keladi kingdom to expand set in not in the reign of Chikke Sankenne Nayaka (as Father Heras would have it), but even in the reign of Dodda Sankenna himself. Chikka Sankenna however quickened the tendency to grow and expand. He over ran the territories of Bhairadevi, defeated Salabat Khan of Bijapur, over powered the forces of Arasappa Nayaka of Sode (E.C.vii, Sb.301), and captured the fort of Udugani. (Keladi Polity, K.N. Chitnis, p.14).

....

ತೇಜೋರೂಪದ ತಪಸ್ವಿ ವಾದಿರಾಜರು ಕಂಡರು. ಭಕ್ತಿಯಿಂದ ಬಾಗಿ ದೀನನಾಗಿ 'ಕಾಪಾಡಿ' ಎಂದನು. 'ಯಾರು ನೀನು? ಏನಂಜಿಕೆ?' ಎನ್ನಲು, ನಾಯಕ ವಿಷಯ ತಿಳಿಸಿದ. ಗುರುಗಳು ಸಿಟ್ಟಾಗಿ 'ತೊಲಗಾಚೆ ವಿಪ್ರದ್ರೋಹಿ' ಎಂದೊಡನೆ, 'ಶರಣು ಬಂದಿರುವೆ, ಮನ್ನಿಸಿ ಕಾಪಾಡಿ' ಎಂದು ಪಶ್ಚಾತ್ತಾಪಪಟ್ಟು ಕೇಳಿದ. ವಾದಿರಾಜರು ಮಂತ್ರಾಕ್ಷತೆ ಇತ್ತು 'ಇದನ್ನು ತಕ್ಕೊಂಡು ಹಿಂದಿರುಗು, ಶತ್ರು ಪಲಾಯನಗೈದು ರಾಜ್ಯ ನಿನ್ನ ವಶಕ್ಕೆ ಬರುವುದು; ಬಳಿಕ ನನ್ನ ಮಾತು ನಡೆಸು' ಎಂದರು. ಆತ ನಮಿಸಿ ಹೊರಟ ಕೂಡಲೇ ಮುಂದೆ ಚಕ್ರಶಂಖಚಿಹ್ನಿತ ಬಿಳಿಯ ಕುದುರೆಗಳು ಕಾಣಿಯುತ್ತ ಸಾಗಿ, ಶತ್ರುಸೇನೆ ಪಲಾಯನ ಹೇಳಿತು. ಅರಸಪ್ಪನಾಯಕ ರಾಜ್ಯ ಪಡೆದುಕೊಂಡು, ಬಂಗಾರದ ಪಲ್ಲಕ್ಕಿಯೊಡನೆ ವಾದಿರಾಜರೆಡೆಗೈತಂದ. ಭಕ್ತಿಯಿಂದ ಬಾಗಿ 'ಅಪ್ಪಣೆಯಿತ್ತು ಅನುಗ್ರಹಿಸಿ' ಎಂದ. ವಾದಿರಾಜರು 'ವಿದ್ವತ್ಸಭೆ ಕರೆದು ನಿನ್ನ ಗುರುವಿನೊಡನೆ ನಮ್ಮ ವಾದ ಏರ್ಪಡಿಸು' ಎಂದರು. ನಾಯಕ ಸಭೆ ಸೇರಿಸಿ ಗುರುವನ್ನು ಬರಹೇಳಿದ. ಮಾಯೆಯಿಂದ ಆಕಾಶಮಾರ್ಗದಲ್ಲಿಳಿದು ಬರುತ್ತಿದ್ದ ಗುರು ಮಂತ್ರಬಾಧೆಯಾಗಿ ಸಭಿಕರ ಮಧ್ಯೆ ಬಿದ್ದು ಅವಮಾನಗೊಂಡ. ಎದ್ದು ನೋಡಿದರೆ ತೇಜಸ್ವಿ ಗುರುಗಳು. ಕಪಟ ಪ್ರಕಟವಾಗುವುದೆಂಬ ಚಿಂತೆಯನ್ನಡಗಿಸುತ್ತ ಕುಳಿತ. ವಾದ ಮೊದಲಾಗಲೆಂದ ನಾಯಕ. ವಾದಿರಾಜರು, "ಸಭಿಕರೇ, ಈ ಗುರು ಮಾಯಾ ವಿದ್ಯೆಯಿಂದ ಜನರನ್ನು ವಂಚಿಸಿ ಬ್ರಾಹ್ಮಣರನ್ನು ಪೀಡಿಸುವ. ಆ ಮಾಯೆಯನ್ನು ಪ್ರತ್ಯಕ್ಷ ನೋಡಿದ್ದಾಗಿದೆ. ಇನ್ನು ವಿಪ್ರಬಾಧೆ ಶಿವಸಮ್ಮತವೋ ಅಲ್ಲವೋ ನೋಡಬೇಕು. 7 ದಿನ ಈತ ವಾದಿಸಲಿ, 7 ದಿನ ನಾನುತ್ತರಿಸುವೆ. ಈತ ಗೆದ್ದರೆ ಇವನ ಮತ ಸ್ವೀಕರಿಸುವೆ. ಈತ ಸೋತರೆ

---

ಈ ಚಿಕ್ಕಸಂಕಣ್ಣನ ನಂತರ ವೆಂಕಟಪ್ಪನಾಯಕ 1582ರಲ್ಲಿ ಪಟ್ಟವೇರಿದ್ದರಿಂದ, 1582ರ ಆದಿಯಲ್ಲೂ ಚಿಕ್ಕಸಂಕಣ್ಣನೇ ಅಧಿಕಾರದಲ್ಲಿದ್ದು, ಸೋದೆಯ ದಾಳಿ ನಡೆದಿರಬೇಕು. ಈತ ತನ್ನ ತಂದೆ ಸದಾಶಿವನಾಯಕ ಶಿವೈಕ್ಯನಾಗಲೆಂದಾಶಿಸಿ 1571ರಲ್ಲಿ ಗೈದ ಭೂದಾನ ಶಾಸನ (E.C.vii, Sb.55) – ಉಡುಪಿಯ ಕೃಷ್ಣದೇವರಿಗಾಗಿ ಪರಮಹಂಸ ವಾದಿರಾಜತೀರ್ಥ ಶ್ರೀಪಾದ, ಬಂಕಾಪುರದ ರಘುನಿಧಿತೀರ್ಥ ಶ್ರೀಪಾದರಿಗೆ ಏಳೆನಾಡಿನ ಸೊರಬ ಸೀಮೆಯ ಬನವಸೆ 12000ದ ಚಂದ್ರಗುತ್ತಿವೆಂಠೆಯ ಕೆಂಚನಹಳ್ಳಿ ಅಗ್ರಹಾರ ವಿತ್ತನು; 5 ಭಾಗ ಕೃಷ್ಣಗೆ, 4 ವಾದಿರಾಜರಿಗೆ, 3 ರಘುನಿಧಿಗಳಿವೆ. (1800ರ ಲಿಂಗಣ್ಣ ಮಂತ್ರಿಯ ಕೆಳದಿ ನೃಪ ವಿಜಯ ಪು.64ರಲ್ಲಿ ಸೋದೆಯ ದಾಳಿ ನಡೆಸಿದವನು ಕಲ್ಲಪ್ಪ ದಳವಾಯಿ ಎಂದಿದೆ).

ನೂಕಿಯ ಒದೆ ತಿನ್ನುತಿ' ಎಂದು ಪಣ ಒಡ್ಡಿ ನೋಡಿಸಿ ಅವಮಾನಿಸಿದರು.[70] ಅತ ನಾಚಿ ಓಡಿಹೋದನು. ಬಸವನಗಂಟೆ ಜಯಸೂಚಕವಾಗಿ ವಾದಿರಾಜರಿಗೆ ಬಂತು. (ಇಂದಿಗೂ ಅದರ ಬಳಕೆಯಾಗುತ್ತದೆ). ನಾಯಕ ಸಂತೋಷದಿಂದಿತ್ತ ಮುತ್ತಿನ ಗದ್ದುಗೆ, ಛತ್ರ ಚಾಮರ ಕಿರೀಟಗಳನ್ನು; ರಾಜಗುರುಗಳನ್ನಾಗಿಸಿಕೊಂಡ ನೋಡೆಯಲ್ಲೇ ನಿಲ್ಲಿಸಿಕೊಂಡು.

ಅರಸಪ್ಪನಾಯಕನು ಅಳಿಯನನ್ನು[71] ಕಳೆದುಕೊಂಡು ವಾದಿರಾಜರನ್ನು ಮೊರೆ ಹೊಗಲು, ಅವರು ನಾರಾಯಣನ 108 ನಾಮದ (ದಶಾವತಾರ) ಕೀರ್ತನೆಯಿಂದ ಅವನನ್ನುಜ್ಜೀವಿಸಿ ಅವರ ಸಂತೋಷಪಡಿಸಿದರು —

ನಾರಾಯಣಾಷ್ಟೋತ್ತರ ಕೀರ್ತನೇನ[72]
ತಂ ಜೀವಯನ್ ಭೂಪಸುತಾಮಮೋದಯತ್ ॥ ವಾ.ಗು.ಚ.6,33

ನಾಯಕನು ಶ್ರೇಷ್ಠ ಜೇವಾಲಯಾರ್ಥ ನಮಿಸಿ ಕೇಳಿಕೊಳ್ಳಲು, ವಾದಿರಾಜರು ಭೂತರಾಜರಿಗೆಂದರು 'ಹೋಗಿ ವ್ಯಾಸ–ಮಧ್ವರಿಗೆ ವಂದಿಸಿ, ಮಧ್ವರು ಹೇಳುವ ಮೂರ್ತಿಯನ್ನು ತರಬೇಕು.' ಭೂತರಾಜರು ವ್ಯಾಸಾಶ್ರಮಕ್ಕೆತಂದರು. ಅಲ್ಲಿ ವ್ಯಾಸರು ಮಧ್ವಾದಿ ಮುನಿಗಳಿಂದ ಸಂಸೇವ್ಯರಾಗಿದ್ದರು.

---

70. ಬಿ. ಶ್ರೀನಿವಾಸಭಟ್ಟರ ವಾದಿರಾಜ ಚರಿತೆಯಲ್ಲಿದಕ್ಕೆ ಇನ್ನೊಂದು ಸಂವಾದಿ ಶ್ಲೋಕವಿದೆ (ಪು.52). ಮುತ್ತೈದೆಯರು ಕಣಕವನ್ನು ಒನಕೆ ಎಂಬ ಪಾದ ಸಂಕೇತದಿಂದ ಕುಟ್ಟುವರು, ಗುರುಗಳ ಪುಣ್ಯದಿನ, ಈಗಲೂ.

71. ಗೌರಾಂಬಿಕೆಯ ಕೃತಿಚಿದಿ ಬಳಗಿಯ ದೊರೆ ಸದಾಶಿವ ನಾಯಕನೆಂದು ಹೆಸರಿಸಿದ್ದಾರೆ ಕೋರಟಿ. ಆದರೆ ಈ ಅವಧಿಯಲ್ಲಿ ಬಳಗಿಯನ್ನಾಳುತ್ತಿದ್ದವನು 2ನೆಯ ಕಂಟೀಂದ್ರ (ಪದ್ಮಾಕರ ಮುದಗಾಂವಕರ, ಬಳಗಿ ಸಂಸ್ಥಾನದ ಗತವೈಭವ, ಸಾಧನೆ, 12,3).

72. ಸಂದರ್ಭ ಸಾಮ್ಯದಿಂದ ಈ ಹಾಡು ಲಕ್ಷ್ಮೀಶೋಭಾನೆ ಎಂದು ಬೇಲೂರು ಕೇಶವದಾಸ (ಕರ್ನಾಟಕ ಭಕ್ತವಿಜಯ), ಎಚ್.ಕೆ.ವೇದವ್ಯಾಸಾಚಾರ (ಕರ್ನಾಟಕ ಹರಿದಾಸರು, ಪು.285) ಮೊದಲಾದವರು ಹೇಳಿದ್ದರೂ '108 ನಾರಾಯಣನಾಮ'ವೆಂಬ ವರ್ಣನೆ ಅದಕ್ಕೆ ಹೊಂದುವಂತಿಲ್ಲ; ಮಾತ್ರವಲ್ಲ, ವಾದಿರಾಜರ ಉಪಲಬ್ಧ ಕೀರ್ತನಗಳಲ್ಲಿ ಕೆಲವು ನಾರಾಯಣ ನಾಮಯುಕ್ತವಾದರೂ 108 ಸಲ ಆವರ್ತಿತವಾಗುವುದಿಲ್ಲ. ಆದರೆ 'ನಾರಾಯಣ' ನಾಮ 8 ಸಲವೂ, 'ಹಯವದನ ದಯವಾಗೆ' ಎಂದೊಮ್ಮೆಯೂ ಬರುವ ಪಲ್ಲವಿಯ 11 ನುಡಿಗಳ ದಶಾವತಾರ ಕೀರ್ತನೆಯೇ ಇದಾಗಿರಬಹುದು.

ಇತ್ತ ವಾದಿರಾಜರ ಆಜ್ಞೆಯಂತೆ ಅರಸಪ್ಪನಾಯಕನು ಕಲ್ಲಿನ ಸೊಗಸಾದ ದೀಪಾಲಯ ಕಟ್ಟಿಸತೊಡಗಿದ. ಆಗ ಶಿಲ್ಪಿಗಳಿಗೆ ಒಡೆಯಲಾಗದ ಒಂದು ಹೆಬ್ಬಂಡೆಯನ್ನು ವಾದಿರಾಜರು ತಮ್ಮ ಕಾಲಬೆರಳು ತಾಗಿಸಿ ಒಡೆದುಕೊಟ್ಟರು; ಕೆಳಗುರುಳುವಂತಾದ ಕಲ್ಲಿನ ತೊಲೆ ಅವರ ಪಾದದಾಣೆಗೆ ಅಲ್ಲಿಯೇ ನಿಂತಿದ್ದು, ಸ್ವತಃ ವಾದಿರಾಜರೊಬ್ಬರೇ ಮೇಲಕ್ಕೇರಿಸಿದರು–[73]

ಪಸ್ಪರ್ಶ ಪಾದೇನ ನಿಜೇನ ವಾದಿರಾಟ್
 ಶಿಲಾಮಭೇದ್ಯಾಮಪಿ ಟಂಕಿಕೈರ್ಯದಾ ।
ಅತಿಪ್ರಯತ್ನೈಶ್ಚ ತದಾಲ್ಪಯತ್ನತಃ
 ಶೀರ್ಣಾಂ ನಿರೀಕ್ಷ್ಯಾತ್ರ ಸುವಿಸ್ಮಿತಂ ಜನೈಃ ॥ 3,4 ॥

ಸ್ತಂಭಾಯಮಾನ ವಿಸ್ತಂಭೇ ಕಶ್ಚಿದಪ್ಯಶಕ್ಯಕಃ
 ಊರ್ಧ್ವಾರ್ಪಿತಾಂತೀಂ ಮಹತೀಂ ಶಿಲಾಂ ಮಹಾಯಕ್ಷಯಾಕಿಲ ॥ 3,5
ವ್ಯಾ.ರ.ಸಂ.

ಭೂತರಾಜರು ಬದರಿಯಲ್ಲಿ ವ್ಯಾಸ–ಮಧ್ವರಿಗೆ ನಮಿಸಿ ವಾದಿರಾಜರ ಮಾತನ್ನರಿಕೆ ಮಾಡಿಕೊಳ್ಳಲು, ಋಜುಗಳು ಪೂಜಿಸತಕ್ಕ ತ್ರಿವಿಕ್ರಮನನ್ನು[74] ಕೊಂಡೊಯ್ಯಬೇಕೆಂದರು

---

73. ಮಧ್ವರೊಬ್ಬರೇ ಕಳಸದ ಬಳಿ (ತುಂಗ)ಭದ್ರಾನದಿಗೆ 20 ಅಡಿ ಉದ್ದ, 16 ಅಡಿ ಅಗಲ, 10 ಅಡಿ ಎತ್ತರದ ಭೀಮನ ಬಂಡೆ ಇರಿಸಿದ್ದು ಮಧ್ವವಿಜಯ 16,7–9ರಲ್ಲಿ ಉಕ್ತವಾಗಿದೆ. ಜನೋಪಯೋಗಕ್ಕಾಗಿ ಆ ಕಲ್ಲನ್ನೇಕೆ ಸರಿಯಾಗಿರಿಸಲಿಲ್ಲವೆಂದು ಮಧ್ವರು ಪ್ರಶ್ನಿಸಲು, ಜನರು ಭೀಮನಿಂದಲೂ ಅದು ಅಶಕ್ಯವೆಂದರಂತೆ. ಕೂಡಲೇ ಮಧ್ವರೊಬ್ಬರೇ (ಪ್ರಥಮಾವತಾರದಲ್ಲಿ ಬಿಟ್ಟು ಹೋತ್ತಂತೆ) ಎತ್ತಿಟ್ಟರು. ಚಿಕ್ಕಮಗಳೂರು ಜಿಲ್ಲೆ, ಮೂಡಗೆರೆ ತಾಲೂಕು, ಮಾವಿನಕೆರೆ ಗ್ರಾಮದ ಎಡೆಯಲ್ಲಿದ್ದು ಇಂದಿಗೂ 'ಶ್ರೀ ಮಧ್ವಾಚಾರ್ಯೈರೇಕೇನ ಹಸ್ತೇನಾನೀಯ ಸ್ಥಾಪಿತಾ ಶಿಲಾ' ಎಂಬ ವಾಕ್ಯಯುಕ್ತವಾಗಿದೆ. (E.C.VI, p.27, K.Stete Gazetteer, S.K.,73, p.726).

74. ತ್ರಿವಿಕ್ರಮನು ವಿಷ್ಣುವಿನ ವಿಶೇಷಣನಾಗಿದ್ದು ವೇದಕಾಲದಲ್ಲಿ ಸೌರ ವ್ಯಾಪ್ತಿ ಪಡೆದಂತಿದೆ; ಸೂರ್ಯನ ಉದಯ–ಮಧ್ಯಪಥ–ಅಸ್ತಮಾನಸೂಚಕ ತ್ರಿವಿಕ್ರಮ, ವ್ಯಾಪ್ತನು ವಿಷ್ಣು. ವ್ಯಾಪ್ತೋಪಾಸನೆ ವಿರಿಂಚಪದಾರ್ಹ ಋಜುಗಳದು (ವಿರಿಂಚಸ್ಯೈವ ನಾನ್ಯೇಷಾಂ ಬೃಹತ್ತಂತ್ರ). ದಕ್ಷಿಣ ಅರ್ಕಾಟ ಜಿಲ್ಲೆ ತಿರುಕೋಯಿಲೂರ ತ್ರಿವಿಕ್ರಮ ಬ್ರಹ್ಮ ಸ್ಥಾಪಿತ; ಸೋದೆಯದು ಭಾವಿ ಬ್ರಹ್ಮ ಸ್ಥಾಪಿತ.

(ಮಧ್ವರು). ಭೂತರಾಜರು (ಗರ್ಭಗುಡಿಯಲ್ಲಿರುವ) ರಥಸಹಿತ ತ್ರಿವಿಕ್ರಮನನ್ನು ತರುವಾಗ ದಾರಿಯಲ್ಲಿ ತರುಬಿದ ರಕ್ಕಸನನ್ನು ಒಂದು ಗಾಲಿಯಿಂದಲೇ[75] ಇಕ್ಕಿ, ನಿರ್ದಿಷ್ಟ ಮುಹೂರ್ತಕ್ಕೆ ಸರಿಯಾಗಿ (ಶಾ.ಶ.1504 ಚಿತ್ರಭಾನು ಸಂವತ್ಸರ ವೈಶಾಖ ಪೂರ್ಣಿಮಾ)[76]

---

75. ಅಂತೆಯೇ ಈ ತ್ರಿವಿಕ್ರಮ ರಥಕ್ಕೆಂದು ಮುರಿದ ಗಾಲಿ (ಈದಿಗಿನೊಂದೂ ಭಗ್ನವಾಗಿ ಬಿದ್ದಿದೆ). ‘ಶ್ರೀ ವಾದಿರಾಜರು ಲೋಕಕಲ್ಯಾಣಕ್ಕಾಗಿ ಈ ನಾರಾಯಣ ಭೂತದ ಮೂಲಕ ಎಷ್ಟೋ ಸಂಗತಿಗಳನ್ನು ನೆರವೇರಿಸುತ್ತಿದ್ದರೆಂಬುದೇ ಮೂಲ ಕಾರಣವಾಗಿ, ಕಾಲಕ್ರಮದಲ್ಲಿ ಅವರ ಮಹತ್ಕಾರ್ಯಗಳೆಲ್ಲ ಐತಿಹ್ಯವಾಗಿ ಪರಿಣಮಿಸಿದುವೆಂದು ತೋರಿ ಬರುತ್ತದೆ. ಅಸದೃಶ ಮೇಧಾವಿಗಳೂ, ಅತಿಶಯ ಕಾರ್ಯಸಾಧಕರೂ ಆದ ಶ್ರೀ ವಾದಿರಾಜ ತೀರ್ಥರು ಸ್ವಭಾವತಃ ಮಹಿಮಾಪುರುಷರೆಂಬುದಕ್ಕೆ ಯಾವ ಸಂಶಯವೂ ಇಲ್ಲ. (ವಾ.ರಾ.ಕೃ. ಪೀಠಿಕೆ ix).

76. 1582ಕ್ಕೆ ಸಮನಾಗುವ ಈ ಮುಹೂರ್ತ, ತ್ರಿವಿಕ್ರಮ ದೇಗುಲದ ದಕ್ಷಿಣಕ್ಕೆ 1593ರಲ್ಲಿ ಅರಸಪ್ಪನಾಯಕನಿಂದ ಸ್ಥಾಪಿತವಾದ ದಾನ ಶಾಸನದಲ್ಲಿ ಉಕ್ತವಾಗಿದೆ. ಶಾಸನ ಪಾಠ – ಸ್ವಸ್ತಿ ಶ್ರೀ ಜಯಾಭ್ಯುದಯ ನೃಪ ಶಾಲಿವಾಹನ ಶಕವರ್ಷ 1515ನೇ ವಿಜಯ ಸಂ1ರ ಕಾರ್ತಿಕ ಶುದ್ಧ 15ರಲ್ಲಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ಶ್ರೀ ವೀರಪ್ರತಾಪ ಶ್ರೀ ವೆಂಕಟಪತಿ ಮಹಾರಾಯರು ಸಮಸ್ತ ರಾಜ್ಯವನ್ನು ಸದ್ಧರ್ಮದಿಂದ ಪ್ರತಿಪಾಲಿಸುತ್ತಿದ್ದ ಸಮಯದಲ್ಲಿ ಅವರ ಆಜ್ಞಾಧಾರಕರಾದ ಸೋದೆಯ ಅರಸಪ್ಪನಾಯಕರು ಸೋದೆಯ ರಾಜ್ಯವನ್ನು ಸದ್ಧರ್ಮದಿಂ ಪ್ರತಿಪಾಲಿಸಿಕೊಂಡು ಬಹು ಕಾಲದಲ್ಲಿ ಅವರ ಗುರುಗಳು ಶ್ರೀ ಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣ ಶ್ರೀಮದ್ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದ ಶ್ರೀಮದ್ವಾಗೀಶತೀರ್ಥ ಶ್ರೀಪಾದ ಒಡೆಯರ ಕರಕಮಲ ಸಂಜಾತರಾದ ಶ್ರೀಮದ್ವಾದಿರಾಜತೀರ್ಥ ಶ್ರೀಪಾದಂಗಳವರು ತಮಗೆ ಪ್ರಸನ್ನರಾಗಿ ಕಾಶಿ ದೇಶದಿಂದ ಬಂದ ಶ್ರೀ ತ್ರಿವಿಕ್ರಮ ದೇವರಿಗೆ ದೇವಸ್ಥಾನವನ್ನು ಕಟ್ಟಿಸಿ ಅಲ್ಲಿ ಸ್ವಾಮಿಯ ಪ್ರತಿಷ್ಠೆಯನ್ನು ಮಾಡಿ ಸುತ್ತ ಬ್ರಾಹ್ಮರ ಮನೆಯನ್ನು ಕಟ್ಟಿಸಿ ದೇವರ ಸೇವೆಗೆ ಶ್ರೀ ತ್ರಿವಿಕ್ರಮಪುರದಲ್ಲಿ ಇರಿಸಿ ದೇವರ ಅಮೃತಪಡಿ ನಂದಾದೀಪ್ತಿ ತ್ರಿಬಲಿ ಪಂಚಪರ್ವ ರಥೋತ್ಸವ ಅಂಗೋಪಾಂಗ ವೈಭವ ಮೊದಲಾದ ಸೇವೆಗಳು ಅಚಂದ್ರಾರ್ಕವಾಗಿ ನಡೆಯುವ ಅಷ್ಟಾಂಗದಲ್ಲಿ ಕಟ್ಟು ಮಾಡಿ ತಾವು ತಮ್ಮ ವಿದ್ಯಾಬಲದಿಂದ ಪಡಿಸಿದ ಗ್ರಾಮ ಸೀಮೆಗಳು ಶಿಲಾಶಾಸನಪೂರ್ವಕವಾಗಿ ಶ್ರೀ ತ್ರಿವಿಕ್ರಮದೇವರ ಚರಣಾರವಿಂದದಲ್ಲಿ ಧಾರಾಪೂರ್ವಕವಾಗಿ ಸಮರ್ಪಿಸಿದ ಶಿಲಾಶಾಸನದ ಕ್ರಮವೆಂತೆಂದರೆ... ಇಂತಿ ಗ್ರಾಮಗಳಿಗೆ ಪ್ರಾಕಟ್ಟು ಪ್ರಮಾಣ ಸಲ್ಲುವ ಧಪ್ಪನ್ನ ಸೀಮೆ ಒಳಗುಳ್ಳ ಗದ್ದೆ ಮನೆ ತೋಟಗಳಿಗೆ ಏನು ಬಂದ ಅಷ್ಟು ಅಷ್ಟಭೋಗ ತೇಜ ಸಾಮ್ಯವನ್ನು ತಾವು ಪ್ರತಿಷ್ಠೆ ಮಾಡಿದ ಶ್ರೀ ತ್ರಿವಿಕ್ರಮದೇವರು ಲಕ್ಷ್ಮೀನಾರಾಯಣದೇವರು ತಿರುಮಲ್ಲದೇವರು ಉತ್ಸವಮೂರ್ತಿ ಧವಳಗಂಗೆ ಹನುಮಂತ ದೇವರು ಚಿನ್ನದ ವೃಂದಾವನ ಮೊದಲಾದ ದೇವರುಗಳ ಅಮೃತಪಡಿ ನಂದಾದೀಪ್ತಿ ನಿತ್ಯ ತ್ರಿಬಲಿ ಪಂಚಪರ್ವ ಕಾರ್ತಿಕ ಪೂಜೆ ರಥೋತ್ಸವ ಮೊದಲಾದ ಸೇವೆಗೆ ಅನುಕೂಲ ಮಾಡಿಕೊಂಡು ಅಚಂದ್ರಾರ್ಕವಾಗಿ ನಡೆಯುವಂತೆ ವಾದಿರಾಜ ತೀರ್ಥ ಶ್ರೀಪಾದಂಗಳವರು ತಮ್ಮ ಶಿಷ್ಯ ಪರಂಪರೆಯಾಗಿ ದೇವರ ಸೇವೆಯು ನಡೆಸಿಕೊಂಡು ಇಹುದು ಎಂದು ಕಟ್ಟು ಮಾಡಿದ ಶಿಲಾಶಾಸನ... ಅರಸಪ್ಪನಾಯಕರು ತ್ರಿವಿಕ್ರಮ ದೇವರಿಗೆ ಕಾಲಂಪ್ರತಿಯಲ್ಲಿ ಕೊಡುವ ಕಾಣಿಕೆಗೆ 150 ವರಹ ಹಣವನ್ನು ರಥೋತ್ಸವ ಸೇವೆಗೆ ಸಮರ್ಪಿಸಿದೆವು. ಈ ಧರ್ಮಗಳನ್ನು ಅಚಂದ್ರಾರ್ಕವಾಗಿ ವಾದಿರಾಜತೀರ್ಥ ಶ್ರೀಪಾದಂಗಳವರು ತಮ್ಮ ಶಿಷ್ಯ ಪರಂಪರೆಯಾಗಿ ನಡೆಸುವುದು... ಶಾಲಿ.ಶ.1504 ಚಿತ್ರಭಾನು ಸಂ1ರ ವೈಶಾಖ ಶು. 15ಯಲಿ ಬುಧವಾರದಲ್ಲು ಶ್ರೀ ತ್ರಿವಿಕ್ರಮದೇವರ ಪ್ರತಿಷ್ಠೆ ಮಾಡಿದ ಮುಹೂರ್ತ. (Bombay Gazetteer XIV, Pt.2, Kanara, p.345-8).

ವಾದಿರಾಜರಿಗೆ ತಂದೊಪ್ಪಿಸಿದರು. ವಾದಿರಾಜರು ನಾಯಕನಿಂದ ಕೂಡಿಕೊಂಡು ತ್ರಿವಿಕ್ರಮನನ್ನು ದೇಗುಲದಲ್ಲಿ ಪ್ರತಿಷ್ಠಾಪಿಸಿದರು. ಶಾಸ್ತ್ರೋಕ್ತ ಪೂಜಿಸಿ ರಾಜ ವೈಭವದಿಂದ ಉತ್ಸವ, ಅನ್ನಸಂತರ್ಪಣೆ ನಡೆಸಿದರು. ಹಯಗ್ರೀವ ತಟಾಕದಡೆ ರಮಾ ಸ್ಥಾಪನೆಯೂ ನೆರವೇರಿತು.[77] ಪ್ರತಿವರ್ಷ ಫಾಲ್ಗುಣ ನವಮಿಯಿಂದ ಹುಣ್ಣಿಮೆಯ ವರೆಗೆ 7 ದಿನ ಉತ್ಸವ ನಡೆಸುವಂತೆ ವಿಧಿಸಿದರು. (18 ವರ್ಷ ಅವರೇ ನಡೆಸಿದಂತೆ,[78] ಅದು ಇಂದಿಗೂ ನಡೆಯುತ್ತಿದೆ). ತ್ರಿವಿಕ್ರಮ ದೇಗುಲದ ಉತ್ತರಕ್ಕೆ ಕೆಳಭಾಗದಲ್ಲಿ ವಾದಿರಾಜರಿಗಾಗಿ ಮಠವೂ, ಇನ್ನೂ ಕೆಳಭಾಗದಲ್ಲಿ ಗಂಗಾ ಸಾನ್ನಿಧ್ಯದ ಧವಳಗಂಗಾ ಸರೋವರವೂ ನಿರ್ಮಾಣಗೊಂಡುವು. ವಾದಿರಾಜರಿಗಂಜಿ ಗಂಗೆ ಬಂದೊಡನೆ, ಮುಗಳನಗುವ ಹರಿ ಬಂದು ವೇಣುಗೋಪಾಲನಾಗಿ ಧವಳಗಂಗೆಯ ಉತ್ತರ ಬದಿಯಲ್ಲೂ, ಹರಿಯನಗಲದ ಹನುಮ ಬಂದು ಪಶ್ಚಿಮ ಬದಿಯಲ್ಲೂ, ಗಂಗೆಯನಗಲದ ಹರ ಬಂದು ದಕ್ಷಿಣ ಬದಿಯಲ್ಲೂ ನಿಂದರು —

ಹಿತ್ವಾ ಮತ್ಸುತಾಂ ಸ್ಥಾತುಂ ನ ಶೋತ್ಸ್ಯೇಹೇ ಕದಾಪಿಹಿ
ಇತಿ ಬುದ್ಧ್ಯೈವ ವಿಷ್ಣುಸ್ತು ದೇವಸ್ತತ್ರೀರಗೋಽಭವತ ॥

ಹಿತ್ವಾ ಮತ್ಸ್ವಾಮಿನಂ ಸ್ಥಾತುಂ ನಶೋತ್ಸ್ಯೇಹೇ ಕದಾಪಿಹಿ
ಇತಿ ಬುದ್ಧ್ಯೈವ ಹನುಮಾನ ದೇವಸ್ತತ್ರಿರಗೋಽಭವತ ॥

ಇತಿ ಬುದ್ಧ್ಯೈವ ರುದ್ರಸ್ತು ದೇವಸ್ತತ್ರೀರಗೋಽಭವತ ॥ ಸ್ವಾ.ವೃಂ.ಅ. 1,38–40.

ಅದರ ಪೂರ್ವದಲ್ಲಿ ಜಟಾಮಂಡಲದ ವೇದವ್ಯಾಸರನ್ನೂ ಸ್ಥಾಪಿಸಿ ವಾದಿರಾಜರು ಕೃತಾರ್ಥ ರಾದರು.

ಹೀಗೆ ಸಜ್ಜನರನ್ನುದ್ಧರಿಸುತ್ತ ವಾದಿರಾಜರು 4 ಸಲ ಕೃಷ್ಣನ ಪರ್ಯಾಯ ಪೂಜೆ ಮಾಡಿದರು (1532–33, 48–49, 64–65, 80–81). ಅವರ ಶಿಷ್ಯ ವೇದವೇದ್ಯರು[79]

---

77. ಅನಂತರ ರಮಾಪ್ರತಿಮೆ ತ್ರಿವಿಕ್ರಮನೆದುರು ಬಲಬದಿಗೆ ಬಂದಿದೆ.

78. ಧ್ವಜಾರೋಹಣದಿಂದ ಮೊದಲಾಗಿ ಗರುಡ ಪ್ರದಕ್ಷಿಣೆಯ ವರೆಗಿನ ರಥೋತ್ಸವವೆಲ್ಲ ವೃ.ರ.ಸಂ. 2,15–36ರಲ್ಲಿ ವರ್ಣಿತ.

79. 1518ರಲ್ಲಿ ದೀಕ್ಷೆ ವಹಿಸಿದ ಅವರು ತಂತ್ರಸಾರಕ್ಕೆ ಟೀಕೆ ರಚಿಸಿದ್ದಾರೆ.

(1508–1616) ಸಹ ವಯಸ್ಸಾಗಿ ತಮಗೆ ಪರ್ಯಾಯ ದೊರೆಯದೆಂದು ಕೊರಗಿದರು. ಅದನ್ನರಿತ ವಾದಿರಾಜರು 'ಈ 5ನೆಯ ಪರ್ಯಾಯಕ್ಕೆ (1596–97) ನೀವು ಕೂತುಕೊಳ್ಳಿ, ನಾನು ಸೋದೆಯಲ್ಲಿ ಪೂಜಿಸುವೆ' ಎಂದೊರೆದು ('ಮನ್ನಿಸೆನ್ನ ಮಧುಸೂದನ' ಎಂಬ ಕೀರ್ತನೆಯಿಂದ ಕೃಷ್ಣನನ್ನು ಪ್ರಾರ್ಥಿಸಿ) ವೇಣುಗೋಪಾಲನನ್ನರ್ಚಿಸಲು[80] ಸೋದೆಗೆ ತಂದರು. ಇಂತು ಎರಡೂ ಕಡೆಯೂ ಪರ್ಯಾಯ ಪೂಜೆ ನಡೆಯಿತು. ಉಡುಪಿಗೆ ಹೋಗಲಿದ್ದ ಭಕ್ತರೆಷ್ಟೋ ಸ್ವಪ್ನಾದೇಶದಂತೆ ಸೋದೆಗೆ ಬಂದು ಹರಿಗುರುಗಳನ್ನು ಸೇವಿಸಿದರು. ಚಕ್ರವರ್ತಿಗಳೂ ಮಾಡದಿದ್ದ ಕಾರ್ಯಗಳನ್ನು ವಾದಿರಾಜರೊಬ್ಬರೇ ಮಾಡಿದರು. ಆ ಹರಿಪ್ರೀತ್ಯರ್ಥ —

> ವಾದಿರಾಜೇನ ಯತ್ಕರ್ಮಕೃತಂ ದೇವಸ್ಯ ಚಕ್ರಿಣಃ
> ಚಕ್ರವರ್ತಿಭಿರಪ್ಯೇತತ್ ಪ್ರಾಯಶೋ ನಕೃತಂ ಭುವಿ ॥ ವ್ಯ.ರ.ಸಂ.2,40.

ಮಧ್ವ ಮತವರ್ಧನಕ್ಕೆಂದು ಲೋಕಾನುಗ್ರಹದೊರೆದ ಅವರು, ನೂರಕ್ಕೂ ಮಿಕ್ಕ ಅಮೋಘ ಗ್ರಂಥಗಳಿಂದಲೂ, ಅಮಾನುಷ ಕಾರ್ಯ–ಲೋಕೋಪಕಾರಗಳಿಂದಲೂ, ಮಧ್ವರ ಸಾಮ್ರಾಜ್ಯದಲ್ಲಿ ಯುವರಾಜರೆನಿಸಿದರು.[81]

> ಅಮೋಘ ಬಹುಲ ಗ್ರಂಥೈಃ ಶತಾಧಿಕಸುಸಂಖ್ಯಯಾ ॥ 6,57
> ಅಮಾನುಷ ಕ್ರಿಯಾಭಿಶ್ಚ ಲೋಕೋಪಕೃತಿಭಿರ್ಯತಿಃ ।
> ಮಧ್ವಸ್ಯ ಗುರು ಸಮ್ರಾಜೋ ಯುವರಾಜಾಯಿತಃ ಕೃತಿ ॥ 6,58
> ವಾ.ಗು.ಚ.

---

80. ಮಧ್ವಕರಾರ್ಚಿತ ತ್ರಿವಿಕ್ರಮ ಉಡುಪಿ ಕೃಷ್ಣನಿಗೆ ಸಮನೇ. ಧವಳಗಂಗೆಯೆಡೆ ತಾವು ಸ್ಥಾಪಿಸಿದ ವೇಣುಗೋಪಾಲನಲ್ಲದೆ ವಿಷ್ಣುತೀರ್ಥರಿತ್ತ ಕಡಗೋಲು ಕೃಷ್ಣನ ಮೂರ್ತಿಯೂ ಅವರೊಡನಿತ್ತು. 'ಶ್ರೀ ವಾದಿರಾಜತೀರ್ಥರು ಸೋದೆಯನ್ನೊಂದು ರೀತಿಯಲ್ಲಿ ಕಿರು ಉಡುಪಿಯನ್ನಾಗಿಯೇ ಪರಿವರ್ತಿಸಿದರು' (ವಾ.ರಾ.ಕೃ., ಪೀಠಿಕೆ, IX).

81. 'ವಿಶ್ವತೋಮುಖ ಮಹಿಮೆಯುಳ್ಳವರಾಗಿ, ತಪಸ್ಸು–ವಿದ್ಯಾ–ವಿರಕ್ತಿ–ಗ್ರಂಥಕರ್ತೃತ್ವಾದಿ ಸರ್ವಗುಣ ಸಹಿತರಾಗಿ, 120 ವರ್ಷ ಸಹಾಯ ಶೂರರಾಗಿ ಕೃಷ್ಣ ಪೂಜೆ ಮಾಡಿಕೊಂಡು, ಸಿದ್ಧ ಶಿಷ್ಯ ಪ್ರಶಿಷ್ಯರಿಂದ ಯುಕ್ತರಾಗಿ, ವೇದಾಂತ ಸಾಮ್ರಾಜ್ಯದಲ್ಲಿ ಸಾರ್ವಭೌಮರಂತೆ ವಿರಾಜಮಾನರಾಗಿದ್ದವರು ವಾದಿರಾಜರು' (ಎಚ್.ಸುಬ್ಬರಾವ್, ಮಜುತ್ವ ಸಿದ್ಧಾಂತ, ಪು.288). ಮಧ್ವರು ತಾಮ್ರಪಟಸ್ಥ ಸರ್ವಮೂಲವನ್ನು ಕಡ್ರಿಲದಲ್ಲಿರಿಸಿದಂತೆ ಇವರೂ ಸಿದ್ಧಾಪುರ ತಾಲೂಕಿನ ಬಿಳಗಿಯಲ್ಲಿ ಸ್ವಗ್ರಂಥಗಳನ್ನಿರಿಸಿದ ಪ್ರತೀತಿಯಿದೆ; ಅದರ ಮೇಲೆ ಲಕ್ಷ್ಮೀನಾರಾಯಣನ ದೇಗುಲ ಮಾತ್ರ ಈಗಲೂ ಇದೆ — ಮೂರ್ತಿ ರಹಿತವಾಗಿ.

ಕಡೆಗೆ ತಮ್ಮವತಾರ ಕಾರ್ಯ ಪೂರೈಸಿತೆಂದಾಲೋಚಿಸಿ, ತಾವೇ ವೇದವ್ಯಾಸರ ಎದುರು ರಾಮಚಂದ್ರನಾಯಕನ ನೆರವಿಂದಪ್ರದಕ್ಷಿಣಾಕಾರದಲ್ಲಿ ಕ್ರಮಶಃ ಮತ್ಸ್ಯ, ಕೂರ್ಮ ಈ ದಶಾವತಾರಗಳ ಆಕೃತಿಯುಳ್ಳ 4 ಚಿಕ್ಕ ವೃಂದಾವನ, ಅವುಗಳ ಮಧ್ಯೆ ಹನುಮ— ಭೀಮ— ಮಧ್ವ— ವಾದಿರಾಜರೂ ಮೇಲ್ಗಡೆ ರಾಮ— ಕೃಷ್ಣ— ವೇದವ್ಯಾಸ— ಹಯಗ್ರೀವರೂ ಇರುವ ದೊಡ್ಡ ವೃಂದಾವನ — ಹೀಗೆ ಪಂಚವೃಂದಾವನಗಳನ್ನು ಮಾಡಿಸಿ, ಅವುಗಳ ದಕ್ಷಿಣಕ್ಕೆ ಭೂತರಾಜರ ಆಲಯವನ್ನು ಕಟ್ಟಿಸಿದರು. 18ನೆಯ ತ್ರಿವಿಕ್ರಮ ರಥೋತ್ಸವ ನಡೆಯುತ್ತಿರುವಾಗ (1600ರ ಫಾಲ್ಗುಣ ಹುಣ್ಣಿಮೆಯಂದು) ಇಂದ್ರ ಕಳುಹಿದ ವಿಮಾನವನ್ನು ಅರಳಿಯ ಮರದ ಮೇಲ್ಗಡೆ ನಿಲ್ಲಿಸಿ, ಉತ್ಸವಾಂತ್ಯದಲ್ಲಿ ಭಕ್ತರಿಗೆ ಮಂತ್ರಾಕ್ಷತೆ ಇತ್ತರು. 'ಮಧ್ಯವೃಂದಾವನ ಪ್ರವೇಶಿಸಿ ಜಪಿಸುವ ನನ್ನ ಕೈಯಿಂದಜಪಮಾಲೆ ಬಿದ್ದೊಡನೆ ಮುಂಭಾಗದ ಶಿಲೆಯನ್ನು ಮುಚ್ಚಬೇಕು' ಎಂದು (ವೇದವೇದ್ಯ— ವೇದನಿಧಿ— ಭೂತರಾಜಾದಿ) ಶಿಷ್ಯರಿಗಪ್ಪಣೆ ಮಾಡಿ, ಬೆಳಗ್ಗೆ ಹಯಗ್ರೀವ ಪೂಜೆಗೈದರು; ವೃಂದಾವನದಲ್ಲಿ ಕುಳಿತು ಜಪಿಸುತ್ತಿರಲು, ಜಪಮಾಲೆ ಬಿದ್ದು ಶಿಲಾಫಲಕ ಮುಚ್ಚಿದೊಡನೆ, ಮುಗಿಲಲ್ಲಿ ಗಂಟೆಯ ಧ್ವನಿ ಕೇಳಿದ ಭಕ್ತರು ವಿಮಾನದಲ್ಲಿದ್ದ ಮಹಾತ್ಮರನ್ನು ಕಂಡರು. ಆಗ 'ಕರುಣಾಪೂರ್ಣರೇ, ಈ ಅನಾಥ ಪಾದಸೇವಕರನ್ನು ಬಿಡದಿರಿ, ನಮಗೇನು ಗತಿ' ಎಂದಳತೊಡಗಿದ ಭಕ್ತರನ್ನು ಸಂತೈಸುತ್ತ, 'ಅಂಜದಿರಿ ನಾನು ವೃಂದಾವನದಲ್ಲಿ ಒಂದಂಶದಿಂದಿದ್ದು ನಿಮ್ಮಿಷ್ಟ ಪೂರೈಸುವೆ' ಎಂದು, ತಮ್ಮ ಶಾಟಿ ಹಾಗೂ ಸುವರ್ಣ ಪಾದುಕೆಗಳನ್ನು ಕೆಳಗೆ ಹಾಕಿ, ದೇವಲೋಕಕ್ಕೆ ತೆರಳಿದರು. ಶಾಟಿ— ಪಾದುಕೆ ಅಂದಿನಿಂದ ಇಂದಿನವರೆಗೂ ಆದರದಿಂದರ್ಚಿತವಾಗಿವೆ. ಇಂತು ವಾದಿರಾಜರು ಮಧ್ವ ಸಿದ್ಧಾಂತ ಸಂವರ್ಧನೆಗೆ ಭೂಮಿಯಲ್ಲಿ 120 ವರ್ಷ ಕಾಣಿಸಿಕೊಂಡಿದ್ದು, ಕ್ರಿ.ಶ.1600 ಶಾರ್ವರೀ ಸಂವತ್ಸರದ ಫಾಲ್ಗುಣ ಕೃಷ್ಣ ತದಿಗೆಯ ಬುಧವಾರ ಸ್ವಾತೀ ನಕ್ಷತ್ರದಲ್ಲಿ ಹರಿಪದವೈದಿದರು.

---

82. 'ವಿಂಶತಿ ಉತ್ತರಶತಂ' ಎಂದು ಜ್ಯೋತಿಷ್ಯಶಾಸ್ತ್ರವೂ 'ಆಯುರ್ವರ್ಷಶತಾಧಿಕಂ' ಎಂದು ವೇದೋಪನಿಷತ್ತೂ ಹೇಳಿವೆ. ಅದೇ ಪೂರ್ಣಾಯುಷ್ಯ. ಇಷ್ಟು ದೀರ್ಘದ ಸನ್ಯಾಸ ಆಯುಷ್ಯ ಬೇರಾವ ಮಾಧ್ವಯತಿಗಳಿಗೂ ಇಲ್ಲ. 'ರಾಘವೇಂದ್ರ ಸ್ವಾಮಿಗಳಿಗಿಂತ ಮುಂಚೆಯೇ ಸಶರೀರ ವೃಂದಾವನ ಪ್ರವೇಶಿಸಿದ ಹಿರಿಮೆಯೂ ಇವರದೇ' (ಪ್ರಭಂಜನ, ಅಂಭ್ರಣೀ ಸೂಕ್ತ, ix ಪು. 'ಅತ್ಯಕ್ತ ದೇಹದಿಂದ ವೃಂದಾವನದಲ್ಲಿದ್ದು ಮರಣಾಭಾವ ಸಿದ್ಧಿಯನ್ನು ಪ್ರಕಟಿಸಿದರು' (ಮುಜುತ್ತ ಸಿದ್ಧಾಂತ, ಪು.241). ಇಚ್ಛಾಮರಣಕ್ಕಿಂತಲೂ ಇದು ಮೇಲ್ಪಟ್ಟದೆಂದು ಸ್ವಯಂವೇದ್ಯ. ವಾದಿರಾಜರು ಕೃತಿಶರೀರರಾಗಿರುವುದಕ್ಕಂತೂ ಅವರ ಕೃತಿಗಳೇ ಸಾಕ್ಷಿ.

ಸ್ವಸ್ತಿ ಶ್ರೀಜಯ ಶಾಲಿವಾಹನ ಶಕೇ ಸಾರ್ಧಾತ್ಸಹಸ್ರಾತ ಪರಂ
ದ್ವಾವಿಂಶೇ ಶರದಾಂ ಗತೇ ಪ್ರಭವತಿ ಶ್ರೀ ಶಾರ್ವರೀ ವತ್ಸರೇ
ಮಾಸೇ ಫಾಲ್ಗುನಿಕೇಸಿತೇತರ ತೃತೀಯಾಯಾಂ ತಿಥೌ ವಿಧಿಂನೇ
ಸ್ವಾತೀ ಹರ್ಷಣ ಸಂಯುತೇ ಹರಿಪದಂ ಶ್ರೀವಾದಿರಾಜೋಗಮತ ॥
ವಾ.ಗು.ಚ.7,72.

ಮರುದಿನವೇ ಶಿಷ್ಯ ಶ್ರೀ ವೇದವೇದ್ಯರು ಮಠದಲ್ಲಿ ಗುರುಗಳ ವೃಂದಾವನಕ್ಕೆ ಅಭಿಷೇಕ— ಅಲಂಕಾರ— ಪೂಜೆ— ನೈವೇದ್ಯಾದಿ ಶಿಷ್ಯಸಂಪ್ರದಾಯವೇರ್ಪಡಿಸಿ — 'ಉದ್ದಂಡ—ಕೋದಂಡ, ಪರವಾದಿ ಪ್ರಚಂಡ, ಗಂಡಭೇರುಂಡ, ಮಾಯಿಮತ ವಿಧ್ವಂಸಕ, ಮಧ್ವಮತೋದ್ಧಾರಕ, ಸುಧಾರಸಾಸ್ವಾದ, ದಿಗ್ವಿಜಯಾಖ್ಯತಾಸೇತು ಮರ್ಯಾದ, ಭಾವಿ ಹನುಮತ ಚಕ್ರವರ್ತಿನ, ಗುರುಸಾರ್ವಭೌಮ, ಹಂಸಾರೂಢ, ವಾದಿರಾಜ ಘೋಪರಾಕ' ಎಂದು ಸಂಸ್ಕೃತ ಪರಾಕನ್ನುದ್ಘೋಷಿಸಿದರು. ಅರಮನೆಯಲ್ಲಿ ಹೇಳುವ ಪರಾಕು ಕನ್ನಡ ಭಾವಿನಿಷ್ಠದಿಂಯಲ್ಲಿರಿಯಿತು —

ಒಂದು ಕ್ಷಣದಲಿ ಶ್ರೀ ವಾದಿರಾಜರ
ದ್ವಂದ್ವ ಪದವನು ಭಜಿಸಿದವರಿಗೆ
ಬೆಂದು ಹೋಪುದು ಪೂರ್ವಜನ್ಮದ ದುರಿತ ಕಾನನವು।

ಮಂದಮತಿಗಳು ಬಲ್ಲರೇ ಗೋ
ವಿಂದ ಭಕ್ತರ ಮಹಿಮೆಯನು ಪು
ರಂದರಾದಿಗಳರಿವರಲ್ಲದೆ ಇಳೆಯವರರಿಯಬಹುದೇ ॥

ಜೊತೆಗೆ 'ಪಾರಮೇಷ್ಠಿ ಪದಾಧಿಕಾರಿ, ಋಜುಪದಸ್ಥ, ಗುರುರಾಜ, ಪಟ್ಟಭದ್ರ, ವ್ಯಾಖ್ಯಾನ ಸಿಂಹಾಸನಾಧೀಶ್ವರ, ಅಜ್ಞಾನತಿಮಿರಮಾರ್ತಾಂಡ, ಸುಜ್ಞಾನ ತೇಜೋಮಯ' ಎಂಬುದೂ ಉಗ್ಘಡಣೆಯಲ್ಲಿ ಸೇರಿತು.[83]

---

83. ವೇದವೇದ್ಯರು ಲಾತವ್ಯ ಪದಾರ್ಹ ಗಮ್ಯ ಋಜುಗಳೆಂದು ಸ್ವಾ.ವೃಂ.ಆಖ್ಯಾನ 2—39, 21—99, ವಾ.ಗು.ಚ. 9—16, ವಾ.ಗು.ರ.ಮಾ.8—11ರಲ್ಲಿ ಹೇಳಿದೆ. ಇಂಥ ಸಾಕ್ಷಾತ ಶಿಷ್ಯರಿಗೆ ವಾದಿರಾಜರ ಪಾಂಚಭೌತಿಕವಲ್ಲದ ಸತ್ವಗುಣೋಪೇತವೂ 32 ದಿವ್ಯ ಲಕ್ಷಣಯುಕ್ತವೂ ಆದ ಶರೀರದ ಸೂಕ್ಷ್ಮ ಪರಿಚಯವಿದ್ದುದರಿಂದಲೇ ಗುರುಗಳ ಋಜು ಸ್ವರೂಪ ಘೋಷಣೆಯ ಸಂಪ್ರದಾಯ ಪ್ರವರ್ತಿಸಲು ಸಾಧ್ಯವಾಯಿತು. ಜಯತೀರ್ಥರ ನಂತರವೇ ವ್ಯಾಸತೀರ್ಥರು 'ಶ್ರೀಮಾನಿಂದ್ರ: ಸುಧೀಮಾನ್' ಎಂದುದು. ಮಹಾತ್ಮರ ಸ್ವರೂಪ ಕಸ್ತೂರಿಯ ಪರಿಮಳದಂತೆ ಬಹುಕಾಲ ಬಚ್ಚಿಡಲಾಗದು.

ನಂತರ ವೇದವೇದ್ಯರು ಗುರುಗಳ ದರ್ಶನ—ಸಂಭಾಷಣ ಅಪೇಕ್ಷಿಸಿ ನಿತ್ಯ ಸೇವೆಗೆ ತೊಡಗಿದರು. ಎರಡೂ ಆಗವು, ಒಂದನ್ನು ಕರುಣಿಸುವೆನೆಂದು ಕನಸಾಗಲು, ವೃಂದಾವನದ ಮುಂದೆ ಬಂದು ನಿಂದು, ಭೂತರಾಜರು ಶಿಲಾಫಲಕ ತೆಗೆದೊಡನೆ ಧ್ಯಾನಸ್ಥ ಗುರುಗಳ ದಿವ್ಯ ತೇಜೋಮೂರ್ತಿಯನ್ನು ಕಂಡರು. ಭಕ್ತಿಯಿಂದ ನಮಿಸಿ ನುಡಿಸಬೇಕೆಂಬಷ್ಟರಲ್ಲಿ ಕಲ್ಲು ಮುಚ್ಚಲಾಯಿತು.[84]

ವೇದವೇದ್ಯರ ಶಿಷ್ಯ ವೇದನಿಧಿಗಳನ್ನು ಬಲ್ಲವರು ಗರುಡಾಂಶರೆನ್ನುವರು.[85] ಒಮ್ಮೆ ಅವರಿಗೆ ಅಭ್ಯಂಗದ ಚಪಲವಾಯಿತು; ಸೋದೆಯ ನಾಯಕನನ್ನು ನೀಗಿಸಿ ತಾವೇ ರಾಜ್ಯವನ್ನಾಳ್ವ ನಡೆಸಿದರು.[86] ಅದನ್ನಾಲಿಸಿ ಬಂದ ವಾದಿರಾಜರು ನಾಯಕನನ್ನು ಬಿಡಿಸಿ, ('ರಾಜ್ಯಾಂತೇ ನರಕಂ ಧ್ರುವಂ' ಎಂಬುದರಿಂದ) ತಮ್ಮ ಪ್ರಶಿಷ್ಯರಿಗೊದಗುವ ನರಕ ಪಾಪವನ್ನಳಿಸಲು, 21 ದಿನ (ಧವಳಗಂಗೆಯ ಆಗ್ನೇಯದ) ನರಕಕುಂಡದ ಗೋಮೂತ್ರ—ಗೋಮಯಗಳ ಪಾತಾಳಗಂಗೆ[87]ಯಲ್ಲಿರುವಂತೆ ಶಿಕ್ಷೆ ವಿಧಿಸಿದರು. ವೇದವೇದ್ಯರ ನಂತರ 1616ರಲ್ಲಿ ಪೀಠವೇರಿದ ವೇದನಿಧಿಗಳು ವಾದಿರಾಜರ ಕೀರ್ತಿಸ್ತಂಭದಂತಿರುವ ಧ್ವಜಸ್ತಂಭವನ್ನು

---

84. ವೇದವೇದ್ಯರು ಗುರುಗಳ ನಂತರ 1612—13ರಲ್ಲಿ ಇನ್ನೊಂದು ಪರ್ಯಾಯ ನಡೆಸಿ 1616ಕ್ಕೆ ಸೋದೆಯಲ್ಲಿ ವೃಂದಾವನಸ್ಥರಾದರು; ವಾದಿರಾಜರ ವೃಂದಾವನದ ದಕ್ಷಿಣ ಪಾರ್ಶ್ವಕ್ಕೆ ಇವರ ವೃಂದಾವನವಿದೆ. ಇವರು ಮೊದಲು ಆಶ್ರಮವಿತ್ತ ವಿದ್ಯಾನಿಧಿಗಳು ಬೇಗ ಕಾಲವಾಗಲು, ವೇದನಿಧಿಗಳಿಗೆ ದೀಕ್ಷೆ ಇತ್ತಿದ್ದರು (ಶತಮಾನದಂತ್ಯದಲ್ಲಿ). ವಾದಿರಾಜರ ಪುನರ್ದರ್ಶನ ವಿಪ್ರಶಿಷ್ಯನಿಗನ್ವಿತವಾಗಿದೆ, ವಾ.ಗು.ರ.ಮಾ.ದಲ್ಲಿ (11,53—9).

85. ಸಾ.ವ್ಯ.ಅ. 21,53.

86. ಈ ಪ್ರಸಂಗ ಅರಸಪ್ಪನಾಯಕನ ನಂತರ, 1598ರಲ್ಲಿ ಪಟ್ಟವೇರಿದ ರಾಮಚಂದ್ರ ನಾಯಕನ ಆಳ್ವಿಕೆಯ ಆರಂಭದ 2 ವರ್ಷಗಳಲ್ಲಿ ನಡೆದಿರಬೇಕು.

87. ವಾದಿರಾಜರಿಂದ ಪಂಚವೃಂದಾವನಗಳಂತೆ ಪಂಚಗಂಗೆ ನಿರ್ಮಿತವಾಗಿದ್ದುವು: ತ್ರಿವಿಕ್ರಮಾಲಯದಲ್ಲಿ ಆಕಾಶಗಂಗಾ, ಮಧ್ಯಾಂತಸ್ಥನ ಮಠದ ಮುಂಭಾಗದಲ್ಲಿ ಅಂತರಗಂಗಾ, ಹಿಂಭಾಗದಲ್ಲಿ ಶೀತಳಗಂಗಾ, ಕೆಳಭಾಗದ ಧವಳಗಂಗಾ, ಭೂತರಾಜಾಲಯದೆಡೆಯ ಪಾತಾಳಗಂಗಾ. ಇವುಗಳಲ್ಲಿ ಶೀತಳಗಂಗಾ — ಧವಳಗಂಗಾ ಎರಡೇ ಈಗ ಬಳಕೆಗಿವೆ.

ತ್ರಿವಿಕ್ರಮನೆದುರು ಸ್ಥಾಪಿಸಿದರು. ಮೊದಲು ಅದು ನಿಲ್ಲದಿರಲು ಖಿನ್ನರಾಗಿ ವಾದಿರಾಜರನ್ನು ಬೇಡಿಕೊಂಡಾಗ, ಅವರು ಕನಸಿನಲ್ಲಿ 'ಕಂದಾ, ನನ್ನ ಹಂಸಾರೂಢ ಪ್ರತಿಮೆಯನ್ನದರ ಮೇಲೆ ಕೆತ್ತಿಸಿದರೆ ನಿಲ್ಲುವುದು' ಎಂದರು. ವೇದನಿಧಿಗಳು (ಗುರುಗಳ ಬ್ರಹ್ಮಪದಾರ್ಹ ಋಜುತ್ವಸೂಚಕ ಹಂಸವಾಹನ ಪ್ರತಿಮಾಪ್ರಮೇಯವರಿತು) ಅಂತೆ ಮಾಡಿಸಲು ಅದು ನಿಂತಿತು (1640)[88] ಇಂದಿಗೂ ಅದನ್ನು ಕಾಣಬಹುದು.

"ನಮ್ಮ ಗುರು ವೇದನಿಧಿಗಳಲ್ಲಿ ವಾದಿರಾಜರ ಕೃಪೆಯನ್ನೇನು ಹೇಳೋಣ? ಅದನ್ನು ನಾವೇ ಪ್ರತ್ಯಕ್ಷ ಕಂಡಿದ್ದೇವೆ. ಕಿವುಡ–ಮೂಕನಾದ (ಲಕ್ಷ್ಮೀಪತಿ ಎಂಬ 70 ವರ್ಷದ) ಬ್ರಾಹ್ಮಣನಿಗೆ ಸ್ವಪ್ನದಲ್ಲಿ ತಮ್ಮ ಸ್ವರೂಪ ನಿರೂಪಿಸುವ 'ವೃಂದಾವನಾಖ್ಯಾನ' ಗ್ರಂಥವನ್ನು ಪ್ರತಿಪಾದಿಸಿದರು.[89] ಅವನ ಬಾಯಿಂದ ಬೆಳಿಗ್ಗೆ ಹೊರಬರುತ್ತಿದ್ದ

---

88. Annual Report of South Indian Epigraphy 1952, p.232. Dhwajastambha pillar was set up by Shri Vedanidhi Tirtha in 1572 Salivahana Saka (1640 A.D.). ಈ ಕಾಲದಲ್ಲಿ ರಚಿತವಾಗುತ್ತಿದ್ದ ವೃಂದಾವನಾಖ್ಯಾನದಲ್ಲೂ ವಾದಿರಾಜರ ಉಕ್ತಿ – 'ಧ್ವಜಸ್ತಂಭೋ ದ್ವಿಜಶ್ರೇಷ್ಠ ಭುಜಸ್ತಂಭೇ ಧೃತೋ ಮಯಾ' ॥ 11, 82. ವಾದಿರಾಜರ ಹಂಸವಾಹನತ್ವ ಬಿಟ್ಟದ (ಗೌಡಗೆರೆ) ವಾಸುದೇವಾಚಾರ್ಯರ (1816–57) ಗುರುರಾಜ ಸ್ತೋತ್ರದಲ್ಲೂ ಸ್ಪಷ್ಟ – ಕಮಲಜನಿಸಮಾನ: ... ಶ್ರೀಪತೇರ್ಹಂಸಯಾನ: ॥ 10 ॥ ಎಂದಿದೆ.

89. ಅಯಂ ತು ಬ್ರಾಹ್ಮಣ: ಶ್ರೀಮಾನ ಮಾಮೇವ ಶರಣಂ ಗತ:
ವೃಂದಾವನಕೃತೇ: ಪೂರ್ವಂ ಸ್ವಸಾಕ್ಷ್ಯಮೇಷ್ಯಂ ನಿವೇದ್ಯ ಮೇ ॥
ಸ್ವ.ವೃಂ.ಅ.3, 85.

ಎಂಬ ಉಕ್ತಿಯಂತೆ ವಾದಿರಾಜ ಸೇವಕರಾದ ಲಕ್ಷ್ಮೀಪತಿ ಗುರುಗಳ ಬಾಗಿಲೇ ಸನ್ನೆಯಿಂದ ಅವರ–ತಮ್ಮ ಸ್ವರೂಪ ತಿಳಿಯಲೆಳಸಿದರು. ಆದರೆ ಗುರುಗಳು ಅದನ್ನು ಆಮೇಲೆ ತಿಳಿಸುವೆನೆಂದು ಅಭಯಹಸ್ತ ತೋರಿ ವೃಂದಾವನಸ್ಥರಾದರು. ಆಗ ವಿಪ್ರರಿಗೆ 40ರ ನಡುವಯಸ್ಸಿರಬಹುದು. "ಅಮುದ್ರಿತ ಪ್ರಾಚೀನ 'ಗುರುರಾಜ ಮಾಹಾತ್ಮ್ಯಗಳು' ಎಂಬ ಕನ್ನಡ ಪಾತ್ರದಲ್ಲಿ 'ಏಡಮೂಕನಿಗೆ ಸ್ವಪ್ನ ಹೇಳಿದ್ದು 1630' ಎಂದಿದೆ" (ಋಜುತ್ವ ಸಿದ್ಧಾಂತ, ಪು.78). ಕಾರಣ, ಬ್ರಾಹ್ಮಣರಿಗೆ 70ರ ವೃದ್ಧಾಪ್ಯದಲ್ಲಿ ಕನಸಾಗತೊಡಗಿ, ಆಖ್ಯಾನದ 12, 81–86ರಲ್ಲಿ ವಾದಿರಾಜರೇ ಸೂಚಿಸಿದಂತೆ, ಆಗಾಗ ಕೆಲವು ಶ್ಲೋಕ ಹೇಳಲಾರಂಭಿಸಿದರು; ಬೆಳಿಗ್ಗೆ ಬಾಯಿ ಕೊಟ್ಟು ವೇದನಿಧಿಗಳಿಗೆ ಹೇಳಿಸಿ ಬರೆಯಿಸಿದರು. ಧ್ವಜಸ್ತಂಭವನ್ನುಲ್ಲೇಖಿಸಿದ 11ನೆಯ ಅಧ್ಯಾಯ 1640ರಲ್ಲಿ ಮುಗಿದಿರಬೇಕು. 17, 53–57ರಲ್ಲಿ 'ವಿಪ್ರನೇ ನಿನ್ನ ಪ್ರಾಣಸಂಕಟವಾಗಿದೆ, ಆದರೆ ನಿನ್ನನ್ನುಳಿಸುತ್ತೇನೆ, ನನಗೆ ಶರಣು ಬಾ' ಎಂದುಸುರಿದ ಘಟನೆ ಮರುವರ್ಷ ನಡೆದಿರಬಹುದು (1641). ಮಿಕ್ಕ 5 ಅಧ್ಯಾಯವಾಗಿ 1642ರಲ್ಲಿ ವಿಪ್ರ ಪ್ರಾಣಾವಧಿಯಾಗಿ (3, 82) ಆಯುಷ್ಯ ಮುಗಿದಿರಬಹುದು. ಮುಂದೆ 2–3 ವರ್ಷಗಳಲ್ಲಿ ವೇದನಿಧಿಗಳು ವೃಂದಾವನಸ್ಥರಾಗುವ ಮುನ್ನ ಆಖ್ಯಾನ ಬರೆದುಕೊಂಡ ರಾಮಚಂದ್ರಾಚಾರ್ಯರು 'ವಾದಿರಾಜ ಗುರುಚರಿತೆ'ಯನ್ನೂ ಪೂರೈಸಿರಬಹುದು (1645).

ಪದ್ಯಗಳನ್ನಾಲಿಸಿದ ವೇದನಿಧಿಗಳು ನನ್ನ ಕೈಯಿಂದಲೇ ಅವನ್ನು ಬರೆಯಿಸಿದರು.[90] ಸ್ವಪ್ನೋಕ್ತವನ್ನರಿದು ಆತ ಮತ್ತೆ ಮೂಕನಾಗುತ್ತಿದ್ದ. ಇದಕ್ಕೆ ನಾನೂ ನನ್ನ ಗುರುಗಳೂ ಸಾಕ್ಷಿ" ಎಂಬುದು ರಾಮಚಂದ್ರಾಚಾರ್ಯರುಕ್ತಿ—

ಅನ್ಯದ್ಯುಗ್ರೇ ವೇದನಿಧೇ ಪ್ರಸಾದೋ ವಾದಿರಾಣ್ಮುನೇ:
ಕಿಂ ವಕ್ತವ್ಯೋ ಯತೋಽಸ್ಯಾರ್ಥಃ ಪ್ರತ್ಯಕ್ಷೀಕೃತ ಏವ ಯತ ॥ 7,16
ಏಡಮೂಕ ದ್ವಿಜಂ ಸ್ವಪ್ನೇ ಬೋಧಯನ್ನಾತ್ಮವೃತ್ತಕಂ । 7,17
ಪಾತ್ರಸ್ವದ್ವದನಾಚ್ಛಿತ್ರಂ ನಿನ್ಯತಂ ಗುರುರಾಣ್ಮುಮ
ಶ್ರೀ ವೇದನಿಧಿರಾಕರ್ಣ್ಯ ಲೇಖಯಾಮಾಸ ಮತ್ಕರಾತ ॥ 7,19
ಸ್ವಪ್ನಜ್ಞಾತಂ ಗುರುಪ್ರೋಕ್ತಂ ಪ್ರಭಾತೇ ಕೀರ್ತಯಾನ ಜಡ:
ತತ: ಪರಂ ಮೂಕ ಏವ ಸಾಕ್ಷೀ ಚಾಹಂ ಚ ಮೇ ಗುರು: ॥ 7,20
ವಾ.ಗು.ಚ.

ವೇದನಿಧಿಗಳು 'ಸ್ವಪ್ನವೃಂದಾವನಾಖ್ಯಾನ'ದಿಂದ ಸಂಗ್ರಹಿಸಿ ರಚಿಸಿದ 'ಅಣುವೃಂದಾವನಾಖ್ಯಾನ'ವನ್ನು (ದೇವನಾಗರಿ ಲಿಪಿಯಲ್ಲಿ) ಶಿಲಾಶಾಸನವಾಗಿ ಕೆತ್ತಿಸಿ ಭಕ್ತರ ಪಠನಾರ್ಥ (ವೇದವೇದ್ಯರ) ವೃಂದಾವನದ ಬಳಿ ನಿಲ್ಲಿಸಿದರು.[91]

ವಾದಿರಾಜರ ಶಿಷ್ಯ (ರಾಘವಾರ್ಯಸುತ) ರಘುನಾಥಾಚಾರ್ಯರು 'ವೃತ್ತರತ್ನಸಂಗ್ರಹ'ದಲ್ಲಿ ವಾದಿರಾಜರ ರತ್ನದಂತಹ ವೃತ್ತಗಳನ್ನು ಸಂಗ್ರಹಿಸಿ ವರ್ಣಿಸಿದ್ದಾರೆ. ಅವರೆನ್ನುವಂತೆ

---

90. 'ಆ ಪಂಡಿತರಿಂದ ಲಿಖಿತವಾದ ಸ್ವಪ್ನವೃಂದಾವನಾಖ್ಯಾನ ಮೂಲ ಪ್ರತಿಯೂ ಸಹ ಕೀಟಭಕ್ಷಿತವಾದ ಬಹುಗ್ರಂಥಗಳೊಂದಿಗೆ ಸು.1935ರಲ್ಲಿ ನದಿಗೆ ಒಯ್ಯಲ್ಪಟ್ಟು ನಷ್ಟವಾಗಿ ಹೋಗಿದೆ ಎಂದು ಸೋದೆ ಮಠದ ಶ್ರೀವಿಶ್ವೋತ್ತಮತೀರ್ಥ ಶ್ರೀಪಾದಂಗಳವರೇ ಅಪ್ಪಣೆ ಕೊಡಿಸಿದರು' (ಋಜುತ್ವ ಸಿದ್ಧಾಂತ, ಪು.112). 'ಪೇಜಾವರ ಮಠದ ಪುಸ್ತಕ ಕೋಶದಲ್ಲಿ ಶ್ರೀ ವೇದನಿಧಿತೀರ್ಥರು ಬರೆಸಿದ ಸ್ವ.ವೃಂ. ಆಖ್ಯಾನದ ಪ್ರತಿ ಇದೆ. ಬರೆದವರ ಹೆಸರು ಕೃಷ್ಣನೆಂದಿದೆ. ಅ.ಬಿ.223 ನಂಬರು (ಅದೇ, ಪು.322).

91. ಅಣುವೃಂದಾವನಾಖ್ಯಾನದಲ್ಲಿ 18 ಶ್ಲೋಕಗಳಿದ್ದರೂ 16 ಶಾಸನಸ್ಥ; 16—18ನೆಯವು ಮಾತ್ರ ವೇದನಿಧಿರಚಿತ. ವೃಂದಾವನಾಖ್ಯಾನ 10—74ರಲ್ಲಿ ವಾದಿರಾಜರು

ಇಮಾಂ ಕೃತಿಂ ಶಿಲಾಯಾಂತು ಲೇಖಯಿತ್ವಾ ಮಮಾಗ್ರತಃ
ಸ್ಥಾಪಯೇದತ್ರ ತಾಂ ದೃಷ್ಟ್ವಾ ಸಂತಃ ಸಂತೋಷಮಾಪ್ನುಯುಃ ॥

ಎಂದಿರುವುದರಿಂದಲೂ, ಇದರ ಸ್ಥಾಪನೆ ವಾ.ಗು.ಚ.ದಲ್ಲಿ ಉಕ್ತವಾದ್ದರಿಂದಲೂ 1642ರ ಸುಮಾರು ನಡೆದಿರಬಹುದು.

'ವಾದಿರಾಜಗುರುಗಳನ್ನು ಭಜಿಸಿ, ಹರಿಯ ಕಾರುಣ್ಯನಿಧಿಯನ್ನು ಹೊಂದಿ, ನಂತರ ಸುವಿಜ್ಞಾನದ ಫಲ — ಸದಾನಂದ ಪದ ದೊರೆವುದು.'[92] ಮಧ್ವ ಸಿದ್ಧಾಂತದ ಭದ್ರಕೋಟೆಯನ್ನಿದಿರ್ದ ಎದುರಾಳಿಗಳ ಕೂಟಗಳನ್ನು ನಾಶಪಡಿಸುತ್ತ, ಹರಿಭಕ್ತಿಯ ಭಂಡಾರವನ್ನು ಬೆಳೆಸುತ್ತ ವಾದಿರಾಜರು ಯತಿರಾಜ್ಯಗೈಯುತ್ತಿದ್ದಾರೆ. ಅವರು ವೇದಾಚಲದ ಶಿಖರಗಳಲ್ಲೂ ಅದರ ಪದತಲವೆನಿಸುವ ಭಾರತದಲ್ಲೂ ಸಂಚರಿಸುವ ಸಿಂಹವಾಗಿದ್ದಾರೆ —

ಶ್ರೀ ವಾದಿರಾಜಂ ಗುರುಂ ಭಜಧ್ವಂ
ದೇವಸ್ಯ ಕಾರುಣ್ಯನಿಧಿಂ ಲಭಧ್ವಂ ।
ತತಃ ಸುವಿಜ್ಞಾನಫಲಂ ಲಭಧ್ವಂ
ತತಃ ಸದಾನಂದಫಲಂ ಲಭಧ್ವಂ ॥ 3, 51 ॥

ಶ್ರೀ ಮಧ್ವಸಿದ್ಧಾಂತಸುದುರ್ಗವಾಸಿ ।
ವಿನಾಶಯನ್ ಸ್ವಪ್ರತಿಪಕ್ಷಸಂಘಾನ್ ।
ಸಂವರ್ಧಯನ್ ಶ್ರೀ ಹರಿಭಕ್ತಿಕೋಶಂ
ಶ್ರೀ ವಾದಿರಾಜೋ ಯತಿ ರಾಜ್ಯ ಆಸ್ತೆ ॥ 3, 52 ॥

ವೇದಾಚಲೇ ಕೃತಪದಃ ಸುರಹಸ್ಯವಿದ್ಯಾ
ತತ್ತುಂಗ ಶೃಂಗ ಶಿಖರೇಷ್ವಪಿ ಸಂವಿಹಾರಂ ।
ಪಾದೇಷು ತಸ್ಯ ವಿಚರನ್ ಸ್ಮೃತಿಭಾರತೇಷು
ಶ್ರೀವಾದಿರಾಜಯತಿಪೋ ಜಯತೀತ್ರ ಸಿಂಹಃ ॥ 3, 56 ವೃ.ರ.ಸಂ.

## (6) ಋಜುತ್ವ ಸಿದ್ಧಾಂತ

### ಋಜುಗಳ ಸ್ವರೂಪಜ್ಞಾನದ ಅವಶ್ಯಕತೆ

ವಾದಿರಾಜರು ಭೂಮಿಯಲ್ಲಿ ಕಾಣಿಸಿಕೊಂಡಿರುವ ತನಕ ತಮ್ಮ ಸ್ವರೂಪವನ್ನು ರಹಸ್ಯವಾಗಿಟ್ಟುಕೊಂಡಿದ್ದರು. ಕೆಲವು ಕೃತಿಗಳಲ್ಲಿದು ಸೂಚಿತವಾದರೂ ಅವರು ವ್ಯಕ್ತಪಡಿಸಲಿಲ್ಲ. ವೃಂದಾವನಸ್ಥರಾದೊಡನೆ ವೇದವೇದ್ಯರು ಅವರ ಋಜುತ್ವ ಸ್ವರೂಪದ ಪರಾಕು ಘೋಷಿಸಿದರು. ಅನತಿಕಾಲದಲ್ಲಿ 'ಸ್ವಪ್ನವೃಂದಾವನಾಖ್ಯಾನ'ದ ಮೂಲಕ ಸ್ವತಃ

---

92. ಕ್ಷೇತ್ರಪಾಲ ಭೂತರಾಜರಿಗೆ 2 ಕಾಯಿ ಉರುಳಿಸಿ, ತ್ರಿವಿಕ್ರಮನನ್ನು ದರ್ಶನ ಮಾಡಿಕೊಂಡು, ಧವಳಗಂಗಾ — ಪಂಚವೃಂದಾವನ ಸೇವಿಸಿ, ವೃಂದಾವನಾಖ್ಯಾನ ಪಠಿಸುವವರ ಇಷ್ಟಾರ್ಥಗಳೆಲ್ಲ ಕೈಗೂಡುವುವೆಂದು ಪಾ.ಗು.ಚ.7, 25—35.

ವಾದಿರಾಜರೇ ತಾವು ಲಾತವ್ಯ ಋಜುಗಳೆಂದೂ, ರುಕ್ಮಿಣೀಪತ್ರವನ್ನೊಯ್ದ ವಿಪ್ರ ಸುದೇವರೆಂದೂ, ಈಗ ವಾದಿರಾಜರೆಂದೂ ಸಾರಿದ್ದಲ್ಲದೆ, 134 ವರ್ಷಾನಂತರದ ಭವಿಷ್ಯದ್ಘಟನೆಗಳನ್ನೂ ಅರುಹಿದ್ದರು. ಆಗ ಅದಕ್ಕೆ ವ್ಯಾಖ್ಯಾನ ಬರೆದ ಮುಷ್ಣಾಚಾರ್ಯರು ತಮ್ಮ ಮುನ್ನುಡಿಯಲ್ಲಿ ಮೋಕ್ಷ ಸಾಧನೆಗೆ ವಾಯುದೇವರ ಜ್ಞಾನದೊಡನೆ ಋಜುಗಳ ಜ್ಞಾನವೂ ಅವಶ್ಯಕವೆಂದು ಮಧ್ವರ ವಾಕ್ಯಗಳಿಂದ ಪ್ರತಿಪಾದಿಸಿದ್ದಾರೆ. ಮಧ್ವವಿಜಯ 8–5ರ 'ಋಜುಪುಂಗವ' ಎಂದರೆ ಋಜುಗಳಿಗೆ ಪುಂಗವ ಎಂಬರ್ಥವಲ್ಲ, ವಿಶ್ವಪತಿ ವ್ಯಾಖ್ಯಾನದಲ್ಲಿರುವಂತೆ 'ಋಜೂನಾಂ ಸರ್ವೇಷಾಮಪಿ ಸಮುತ್ಕೇನ' ರುದ್ರಾದಿಗಳಿಗೆ ಶ್ರೇಷ್ಠ ಎಂದರ್ಥ; 'ಋಜೂನಾಂ ಸಮುತ್ಕೇನ ಪ್ರಮಿತತ್ವಾತ್' ಎಂಬ ನ್ಯಾಯಸುಧಾ ಉಕ್ತಿ (34,5) ಇದಕ್ಕೆ ಪೋಷಕ. ವಾಯುದೇವರ ಲಕ್ಷಣಗಳೆಲ್ಲ ಋಜುಗಳಿಗೂ ಇರುವುದರಿಂದ, ಅವರೂ ಸಹ ವಿಷ್ಣುವಿಗೆ ವಿಶಿಷ್ಟ ಪ್ರತಿಮರಾಗಿ, ಸಮಾನ ಪೂಜೆಗೆ ಅರ್ಹರು — 'ಭವೇತ್ ಪ್ರತ್ಯೇಕೋಪಾಸನಂ ಯುಕ್ತಂ, ಯದಿ ತೇಷಾಂ ಸಾಮ್ಯಮೇವ ಸ್ಯಾತ್' (ಜಯತೀರ್ಥರ ತತ್ವಪ್ರಕಾಶಿಕಾ 3–3–59). ಅಂತೆಯೇ ಮಧ್ವರು 'ಶ್ರುತಿ ಗೀತಾ ತಾತ್ಪರ್ಯ'ದಲ್ಲಿ ಬ್ರಹ್ಮಪದಾರ್ಹ ಋಜುಗಳ ಸ್ವರೂಪ ಜ್ಞಾನದಿಂದಲೇ ಮುಕ್ತಿ ಸಾಧ್ಯವೆಂದರು —

> ಅತೋ ಬ್ರಹ್ಮಪದೇ ಯೋಗ್ಯಾ ಜೀವಾ ಹಂಸಾಃ ಪ್ರಕೀರ್ತಿತಾಃ
> ತೇಷಾಂ ಪರಂಪರಾಪ್ರಾಪ್ತಂ ಯಥಾರ್ಥಜ್ಞಾನಂ ನಿಯಮೇನ ತು
> ತೇ ಮುಚ್ಯಂತೇ ನ ಚೈವಾನ್ಯೇ ಗುರುಬ್ರಹ್ಮಾಯತೋ ನೃಣಾಂ ॥

ಎಲ್ಲ ಋಜುಗಳ ಸ್ವರೂಪ ಜ್ಞಾನವಾಗುವುದು ಸಾಧ್ಯವಿರದಿದ್ದರೂ ವಾಯುವಿನ ಅವತಾರವಾದ ಮಧ್ವರು, ಲಾತವ್ಯಾವತಾರ ವಾದಿರಾಜರು, ಗವ್ಯಾವತಾರಿ ವೇದವೇದ್ಯರು — ಈ ಮೂವರ ವಿಷಯ ಉಪಲಬ್ಧವಿದೆ. ಅದರಿಂದ ಅವರ ಸ್ವರೂಪವರಿತು ಸೇವಿಸಿದಲ್ಲಿ ಮಾತ್ರ ಅನುಗ್ರಹವಾದೀತು. ಪ್ರಮಾಣಗಳಿದ್ದರೂ ಮಾಹಾತ್ಮ್ಯ—ತಾರತಮ್ಯ ಜ್ಞಾನವಿಲ್ಲದೆ, ಹಟದಿಂದ ಅವರ ಸ್ವರೂಪವನ್ನಲ್ಲಗಳೆದು, 'ಯಾರೋ ದೊಡ್ಡವರು' ಎಂದು ಭಾವಿಸುವುದು ಅಪರಾಧವೇ ಎನಿಸೀತು. ಪೂಜ್ಯರಿಗೆ ಅವಮಾನವಾದಲ್ಲಿ ಕೆಡುಕು ಕಟ್ಟಿಟ್ಟ ಬುತ್ತಿ ಎಂಬುದು ಪ್ರಸಿದ್ಧೋಕ್ತಿ —

ಅಪೂಜ್ಯಃ ಪೂಜಿತೋ ಯತ್ರ ಪೂಜ್ಯೋಯತ್ರಾಪಮಾನಿತಃ
ತ್ರೀಣಿ ತತ್ರ ಭವಿಷ್ಯಂತಿ ದುರ್ಭಿಕ್ಷಂ ಮರಣಂ ಭಯಂ ॥ ಸ್ಮೃತಿ ॥

ದೊಡ್ಡವರ ಪ್ರಣಾಮ ನಮ್ಮ ಅಭಿಮತಸಿದ್ಧಿಯ ಅಂಗವಾಗಿದ್ದು, ಭಕ್ತಿ ಸಾಪೇಕ್ಷವೆನಿಸಿದೆ. ಕಾರಣ, ನಮ್ಯರ ಸ್ವರೂಪ ನಿರ್ಧಾರವಾಗದಿದ್ದಲ್ಲಿ ಭಕ್ತಿಯುಕ್ತ ಪ್ರಣಾಮ ಅಶಕ್ಯ — ನ್ಯಾಯಸುಧೆ 'ನಾ ನಿರ್ಧಾರಿತಸ್ವರೂಪಸ್ಯ ಪ್ರಣಾಮೋ ಯುಕ್ತಃ' ಎಂದಿದೆ.

<u>ವಾಕ್ಯ ಪ್ರಾಮಾಣ್ಯ ಪ್ರಾಶಸ್ತ್ಯ</u>

ನಮ್ಮ ತತ್ವಜ್ಞಾನದಲ್ಲಿ ಪ್ರತ್ಯಕ್ಷ — ಅನುಮಾನ — ಆಗಮಗಳನ್ನು ಪ್ರಮಾಣತ್ರಯವೆಂದು ಸಮ್ಮತಿಸಲಾಗಿದೆ. ಇವುಗಳಲ್ಲಿ ಪ್ರತ್ಯಕ್ಷವೆನಿಸುವ ಕರಣಗಳಿಗೆ ಸ್ವತಃ ಪ್ರಾಮಾಣ್ಯವಿದೆ. ಅನುಮಾನಿಸಲೂ ಆಗದಂಥ ಅತೀಂದ್ರಿಯ ವಿಷಯಗಳಲ್ಲಿ ಆಗಮವಾಕ್ಯ ಪ್ರಮಾಣ. ಈ 'ವಾಕ್ಯಪ್ರಾಮಾಣ್ಯವು ಸ್ವಭಾವತಃ ಯಥಾರ್ಥ ಜ್ಞಾನಬೋಧಕ, ಗುಣಾದಿಗಳನ್ನು ಪೇಕ್ಷಿಸದು' ಎಂದು ಸಿದ್ಧಾಂತಿಸಿದೆ ಮಧ್ವರ 'ಅನುವ್ಯಾಖ್ಯಾನ'. ಪ್ರಮಾಣ ವಿರೋಧ ವಿರದಲ್ಲಿ, ಆ ವಾಕ್ಯವನ್ನು ಅಜ್ಞ—ಉನ್ಮತ್ತರು ಹೇಳಲಿ ಅಥವಾ ಇರುವೆ ಕೊರೆದಿರಲಿ, ಅದು ಪ್ರಮಾಣವೇ —

ಪಿಪೀಲಿಕಾಲಿಖಿತಾಪಿ ಪ್ರಮಾಣಮವಿರೋಧತಃ ॥

ಇಂಥ ವಾಕ್ಯಕ್ಕೆ ಅಪ್ರಾಮಾಣ್ಯ ಸಾಧಿಸಲು ಬಲವತ್ತರ ಪ್ರಮಾಣ ವಿರೋಧ ಬೇಕು. ಇತರ ಪ್ರಮಾಣಾ ವಿರುದ್ಧ ವಾಕ್ಯವಂತು ಪ್ರತ್ಯಕ್ಷದಂತೆ ಪ್ರಮಾಣವೇ. ಅದರಲ್ಲೂ ಬ್ರಹ್ಮ-ಧರ್ಮ — ಋಜುತ್ವಾದಿ ಅತೀಂದ್ರಿಯ ವಿಷಯಗಳಲ್ಲಿ ಅನುಮಾನಕ್ಕೆಡೆ ಇಲ್ಲ, ಅವು ತರ್ಕದಿಂದ ಸಿದ್ಧವಾಗಲಾರವು; ಪ್ರತ್ಯಕ್ಷ ಪ್ರತೀತವಂತೂ ಅಲ್ಲವೇ ಅಲ್ಲ.

ಇನ್ನು ಆಗಮ ವಾಕ್ಯವೆಂದರೆ ಮೂಲ 10 ಶಾಸ್ತ್ರಗಳಿಗೆ[93] ಅವಿರುದ್ಧವಾದ

---

93. ಋಗಾದಿ ಮೂಲ ಶಾಸ್ತ್ರ 10 ಎಂದು ಮಧ್ವರು ಹಲವೆಡೆ ಹೇಳಿದ್ದಾರೆ. ಉದಾ —

ಋಗ್ಯಜುಃ ಸಾಮಥರ್ವಾಶ್ಚ ಭಾರತಂ ಪಂಚರಾತ್ರಕಂ
ಮೂಲ ರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ॥
ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಂ
(ಬ್ರ.ಸೂ.ಭಾಷ್ಯ 1-1-3).

4 ವೇದ, ಭಾರತ, ರಾಮಾಯಣ, ಪಂಚರಾತ್ರ ಹಾಗೂ ಇವುಗಳಿಗೆ ಅನುಕೂಲವಾದ ಪುರಾಣ ಸ್ಮೃತಿಗಳು ಸೇರಿ 9 ಶಾಸ್ತ್ರಗಳಾದುವು; ಅನುಕೂಲವೆಂಬುದನ್ನು ವಿವರಿಸುವಲ್ಲಿ —

...

ಪಾಶುಪತಾದ್ಯಾಗಮ — ಇತರ ಪುರಾಣಗಳ ಪ್ರಮಾಣಾವಿರುದ್ಧ ವಾಕ್ಯ ಸಹ ಎಂದರ್ಥ. (ಈ ಶಾಸ್ತ್ರವಾಕ್ಯಗಳಿಗೇ ಪರಸ್ಪರ ವಿರೋಧವಿದ್ದಲ್ಲಿ, ವಿರೋಧ ಪರಿಹರಿಸುವಂತೆ ಉಪಕ್ರಮಾದಿ ಸಹಾಯದಿಂದಾಲೋಚಿಸಿ ತಾತ್ಪರ್ಯಾರ್ಥ ಸ್ವೀಕರಿಸಬೇಕು, ಪ್ರತೀತಾರ್ಥವನ್ನಲ್ಲ). ಪ್ರಮಾಣಾಂತರ ವಿರೋಧವಿರದಿದ್ದರೆ ಶಾಸ್ತ್ರವಾಕ್ಯವು ಪ್ರಮಾಣವೆಂದೇ ಮಧ್ವರು 'ಗೀತಾಭಾಷ್ಯ'ದಲ್ಲಿ ಹೇಳಿದ್ದು 'ಸಾಪೇಕ್ಷವೃಂದಾವನಾಖ್ಯಾನ'ಕ್ಕೂ ಅನ್ವಯಿಸುತ್ತದೆ. ವಾಕ್ಯದ ಸ್ವತಃಪ್ರಾಮಾಣ್ಯ ಒಪ್ಪದಲ್ಲಿ, ಅದರ ಪ್ರಾಮಾಣ್ಯಕ್ಕೆ ಇನ್ನೊಂದು ವಾಕ್ಯ, ಅದರ ಪ್ರಾಮಾಣ್ಯಕ್ಕೆ ಮತ್ತೊಂದು ವಾಕ್ಯ ಎಂಬ ಅನವಸ್ಥೆ ಒದಗುವುದು. ಅಂತೆಯೇ ವಾಕ್ಯವು ಪ್ರಬಲ ವಿರುದ್ಧ ಪ್ರಮಾಣವಿಲ್ಲದಲ್ಲಿ ಸ್ವಾರ್ಥವನ್ನು ಸತ್ಯವಾಗಿ ಬೋಧಿಸುವುದೆಂಬ ಪ್ರಾಮಾಣ್ಯ ಸ್ವತಸ್ತ್ವ ಸಿದ್ಧಾಂತಗೊಂಡಿದೆ ಮಧ್ವರಿಂದ.

ವಾದಿರಾಜರ ಋಜುತ್ವಕ್ಕೆ ಪ್ರಮಾಣ ವಾಕ್ಯಗಳು

1. ಐತಿಹ್ಯ, ಇತಿಹಾಸ: ವಾದಿರಾಜರು ವೃಂದಾವನಸ್ಥರಾದೊಡನೆ ಸ್ವತಃ ಋಜುಯೋಗಿಯಾಗಿದ್ದ ವೇದವೇದ್ಯರು ಘೋಷಿಸಿದ ಪರಾಕುಗಳಲ್ಲಿ 'ಭಾವಿ ಹನುಮತ ಚಕ್ರವರ್ತಿನ ಪರಮಹಂಸಾರೂಢ, ಪಾರಮೇಷ್ಠಿ ಪದಾಧಿಕಾರಿ— ಋಜುಪದಸ್ಥ' ಎಂಬ ಬಿರುದುಗಳಿವೆ; ವಾದಿರಾಜರಿಗೆ ವಾಯುದೇವರೊಡನೆಯೇ ಪೂಜೆ ಸಲ್ಲುತ್ತಿದೆ. ಆದ್ದರಿಂದ ಈ ಶಿಷ್ಟ ಸಂಪ್ರದಾಯ ಒಂದು ಐತಿಹ್ಯವೆನ್ನಬೇಕು. ಜೊತೆಗೆ, ನನ್ನನ್ನು ಋಜುದೇವತೆ ಮುಕ್ತರಾಗುವರೆಂದು ಸಾರುವ —

---

ಮೂಲ ರಾಮಾಯಣಂ ಚೈವ ಪುರಾಣಂ ಚೈತದಾತ್ಮಕಂ
ಯೇಚಾನುಯಾಯಿನಸ್ತೇಷಾಂ ಸರ್ವೇ ತೇಜ ಸದಾಗಮಾ: ll
(ವಿಷ್ಣುತತ್ತ್ವ ನಿರ್ಣಯ)
ಅವಿರುದ್ಧಂತು ಯತ್ತ್ವಸ್ಯ ಪ್ರಮಾಣಂ ತಚ್ಚ ನಾನ್ಯಥಾ 1
(ಮ.ಭಾ.ತಾ.ನಿ.1, 31)

ಎಂದಿದ್ದಾರೆ. ಇವನ್ನು ವ್ಯಾಖ್ಯಾನಿಸುತ್ತ ಜಯತೀರ್ಥರು 'ಏಷಾಂ ಯುಗಾದೀನಾಮಾನುಯಾಯಿನೋ ಅನುಕೂಲ ಗ್ರಂಥಾ: ಮಾನವಾದ್ಯಾ:' ಎಂದೂ, ವಾದಿರಾಜರು 'ಅವೈಷ್ಣವ ಪುರಾಣಾದಿಷು ವಿದ್ಯಮಾನ ವೇದಾನುಕೂಲ ವಾಕ್ಯಾನಾಮೇತದನುಕೂಲ ಭಾಷ್ಯಾನುವ್ಯಾಖ್ಯಾನಾದಿ ಶಿಷ್ಟಕೃತ ಗ್ರಂಥಾನಾಂ ಚ ಸಂಗ್ರಾಹ್ಯತ್ವ ಸೂಚನಾಯ ಸಾರ್ಥಕ್ಯಾತ' (ಭಾವ ಪ್ರಕಾಶಿಕಾ) ಎಂದೂ ಅಭಿಪ್ರಾಯಿಸಿದ್ದಾರೆ. 10ನೆಯ ಶಾಸ್ತ್ರ 'ಬ್ರಹ್ಮಸೂತ್ರಂ ಮಾನಂ ಸ್ವತ: ಸ್ಮೃತಂ' ಎಂದ ಮ.ಭಾ.ತಾ.ನಿ. 1, 42—44ರಲ್ಲಿ 'ವ್ಯಾಸರೂಪಿ ವಿಷ್ಣುವೇ ವಿರೋಧಗಳನ್ನೆಲ್ಲ ಪರಿಹರಿಸಿ ನಿರ್ಣಯಿಸಿರುವುದರಿಂದ, ಸೂತ್ರಾರ್ಥವನ್ನನುಸರಿಸಿಯೇ ಮುಂದುವರಿಯಬೇಕು' ಎಂದಿದೆ; 'ಸತ್ಯಂ—ಪರವಿದ್ಯಾ' ಎನ್ನಿಸಿಕೊಂಡುದು ಈ (ಉತ್ತರ) ಬ್ರಹ್ಮಮೀಮಾಂಸಾ ಶಾಸ್ತ್ರವೇ.

ಯೋ ಮಾಂ ದೇವಂ ವಿಜಾನಾತಿ ಋಜುಸ್ಥಂ ಮುಖ್ಯಕೃನ್ನರಃ
ಸ ಯಾತಿ ನಿಲಯಂ ಮುಖ್ಯಂ ಯದ ಗತ್ವಾ ನ ನಿವರ್ತತೇ ॥ ಸ್ವ.ವೃಂ.ಆ.3,7

ಎಂಬ ಅಣುವೃಂದಾವನಾಖ್ಯಾನ ಶ್ಲೋಕವಿರುವ ಶಿಲಾಶಾಸನ ಕೂಡ ವೇದವೇದ್ಯರ ವೃಂದಾವನದೆಡೆ ವೇದನಿಧಿಗಳಿಂದ ಸ್ಥಾಪನೆಗೊಂಡು ಪೂಜಿತವಾಗಿದೆ. ಇದನ್ನು ಬರಿ ಐತಿಹ್ಯವೆನ್ನದೆ, ಐತಿಹಾಸಿಕ ದಾಖಲೆ ಎಂದು ಸ್ವೀಕರಿಸಬೇಕಿದೆ. ಇದೇ ಕಾಲಕ್ಕೆ (1640).

ಧ್ವಜಸ್ತಂಭೋ ದ್ವಿಜಶ್ರೇಷ್ಠ ಭುಜಸ್ತಂಭೋ ಧೃತೋಮಯಾ ॥ ಸ್ವ.ವೃಂ.ಆ.11,8

ಎಂಬ ಸ್ವಪ್ರೋಕ್ತಿಗನುಸರಿಸಿ, ವಾದಿರಾಜರ ಹಂಸವಾಹನಾರೂಢ ಪ್ರತೀಕವುಳ್ಳ ಧ್ವಜಸ್ತಂಭ ನಿಂತುಕೊಂಡಿರುವುದೂ ಐತಿಹಾಸಿಕ ಅಂಶ. (Annual Reports of South Indian Epigraphy, 1952, p. 232). ಹಂಸವಾಹನತ್ವ ಬ್ರಹ್ಮಪದಾರ್ಹ ಋಜುತ್ವಸೂಚಕ.

2. <u>ಸ್ವಪ್ನವೃಂದಾವನಾಖ್ಯಾನ:</u> ವಾದಿರಾಜರು ವೃಂದಾವನಸ್ಥರಾದ 30 ವರ್ಷಗಳ ಮೇಲೆ, ಇಂದ್ರಪದಾರ್ಹ[94] ರಾದ ಲಕ್ಷ್ಮೀಪತಿ ಎಂಬ ವಿಪ್ರಶಿಷ್ಯರ ಸ್ವಪ್ನದಲ್ಲಿ ವೃಂದಾವನಾಖ್ಯಾನದ ಶ್ಲೋಕಗಳನ್ನು ಹೇಳಿ, ಬೆಳಗ್ಗೆ ವೇದನಿಧಿಗಳಿಗೆ ಹೇಳಿಸಿ, ಬರೆಯಿಸಿದ ಕಾರಣ, ಅದೊಂದು ಅಪೂರ್ವ ಅದ್ಭುತ ಗ್ರಂಥವೇ ಸರಿ. 12 ವರ್ಷ ಹೇಳುತ್ತಿದ್ದ ಶ್ಲೋಕಗಳಲ್ಲಿ ಎಷ್ಟೋ ದೇವಾಪಹೃತವಾಗಿ, 2 ಸಾವಿರದಷ್ಟು ಗ್ರಂಥಸ್ಥವಾಗಿವೆ.[95] ವಿಪ್ರಪ್ರಾಣಾವಧಿಯ ವರೆಗೆ ಬೋಧಿಸುವೆನೆಂದು ವಾದಿರಾಜರೇ ಸೂಚಿಸಿದ್ದಾರೆ (3,81). ಶ್ಲೋಕಗಳು ಮಂತ್ರಾತ್ಮಕವೂ ಶೋಕನಾಶಕವೂ ಆಗಿದ್ದು, ಮುಖ್ಯವಾದುದನ್ನು ಮರೆತಾಗ ಮತ್ತೆ ಹೇಳಿ ಬರೆಸಿದ್ದಾರೆ. ಸ್ವಪ್ನಗ್ರಂಥವೆಂದು ಶಂಕಿಸುವವರಿಗೆ ಉತ್ತರವಿದು.

ಯದಾಪಿ ಬ್ರಾಹ್ಮಣೋ ಬ್ರೂಯಾತ ದೇವತಾ ವೃಷಭೋಪಿವಾ
ಸ್ವಪ್ನಸ್ಥೋವಾಥವಾ ರಾಜಾ ತತ ತಥೈವ ಭವಿಷ್ಯತಿ ॥ ಬ್ರ.ಸೂ.ಭಾ.3,2–4.

ಬ್ರಾಹ್ಮಣ—ದೇವತೆ—ಗುರು—ರಾಜ—ಯತಿಗಳೊರೆದುದು ಸ್ವಪ್ನಸ್ಥವಾದರೂ ಸತ್ಯವೆನಿಸುವುದು. ಶಾಸ್ತ್ರೋಕ್ತ ಪ್ರಮಾಣ ವಾಕ್ಯಗಳಂತೆ ಲಾತವ್ಯ ಋಜುವಿನ ಅವತಾರವಾದ

---

2151

94. ಸ್ವ.ವೃ.ಆ. 3,60ರಲ್ಲಿ ಅಮರ ರಾಜನಾಗೆಂದು ಹರಕೆ ಇದೆ.

95. ಅದೇ, 14, 76 – 78; 18,78.

ವಾದಿರಾಜರು ಸಜ್ಜನರ ಉದ್ಧಾರಕ್ಕೆ "ವೃಂದಾವನಾಖ್ಯಾನ" ರಚಿಸಿದ್ದು, ಅದರಲ್ಲಿ ತಪ್ಪುತಡೆ ಕಂಡರೆ ಅದು ನಮ್ಮ ಅಜ್ಞಾನವೆಂದೂ ಹೇಳಿದ್ದಾರೆ. ಪ್ರತೀತಾರ್ಥ ಬಾಧಿತವಾದಲ್ಲಿ ಉಪಕ್ರಮಾದಿಲಿಂಗಗಳಿಂದ ತಾತ್ಪರ್ಯಾರ್ಥ ತಿಳಿಸಿರೆಂದೂ ವೇದವೇದ್ಯರಿಗೆ ಅರುಹಿದ್ದಾರೆ —

ಕರ್ಣಶ್ರಾವ್ಯಾರ್ಥ ಸಾರಂ ತ್ವಂ ವ್ಯಾಕರೋಷಿ ಕುಮಾರಕ ॥ 22,10.

ವಿಶ್ವಾಸಯೋಗ್ಯರಿಗುಪದಿಷ್ಟ ರಹಸ್ಯ ಪ್ರಮೇಯಗಳಿರುವಲ್ಲಿ ಆಪಾತತಃ ದೋಷವೆನಿಸಬಹುದು; ಅದು ಅಲೌಕಿಕ ಭಾಗವೆಂದು ಗುರುಗಳೇ ಹೇಳಿದ್ದಾರೆ(3,57). ಹಯಗ್ರೀವನುಪದೇಶಿಸಿದ ಶ್ರುತ್ಯರ್ಥಗಳನ್ನೇ ವಾದಿರಾಜರು ಈ ಕೃತಿರೂಪದ ತುಲಸೀಮಾಲೆ ಕಟ್ಟಿ ಅವನಿಗೆ ತಿರುಗಿ ಅರ್ಪಿಸಿದ ಕಾರಣ, ವ್ಯಾಖ್ಯಾನಕಾರರು "ದಿವ್ಯ ಕೃತಿ" ಎಂದು ಕರೆದಿದ್ದಾರೆ. "ಇದಮದ್ಭುತಮಾಖ್ಯಾನಂ" (3,49) ಎಂದು ವಾದಿರಾಜರೇ ವರ್ಣಿಸಿದ್ದು, ಇದು ಸರ್ವಾಭೀಷ್ಟಪ್ರದವೆನಿಸಿದರೆ ಆಶ್ಚರ್ಯವಿಲ್ಲ. ಋಜುಗಳ ಅಂತರ್ಗತ ಪರಮಾತ್ಮನ ಉಪಾಸನೆಯನ್ನರಿದು, ಮುಕ್ತಿಗೆ ಋಜುಗಳ ಆರಾಧನೆಯು ಅಗತ್ಯವೆಂದು ಸೂಚಿಸಿದ್ದಾರೆ ವಾದಿರಾಜರು.

ಮತ್ಪುತ್ರಚರಣಾಂಭೋಜಂ ಭಜ ಮುಕ್ತಿರ್ಭವಿಷ್ಯತಿ ॥ 4,52 ॥

ಎಂದು ವೇದವೇದ್ಯರ ವಿಷಯದಲ್ಲಿಯೂ ಭಕ್ತಿಗೆ ಸಲಹೆ ನೀಡಿದ್ದಾರೆ. ತಾವು ಮುಂದಿನ ಕಲ್ಪದಲ್ಲಿಯೇ ವಾಯುಪದಾರ್ಹ ಋಜು ಆತವ್ಯರೆಂದು ಖಚಿತಪಡಿಸಿದ್ದಾರೆ; ಪೂರ್ವಾವತಾರದಲ್ಲಿ ಸುದೇವನೆಂಬ ಬ್ರಾಹ್ಮಣನಾಗಿದ್ದು ರುಕ್ಮಿಣೀಹರಣಕ್ಕೆ ಕಾರಣವಾಗಲು, ಶಿಶುಪಾಲನ ಶಾಪ ಹೊಂದಿ ಧನ್ವಂತರಿಯ ಅನುಗ್ರಹದಿಂದ ವಾದಿರಾಜ ಯತಿಯಾಗಿ ಬಂದು, ಕೃಷ್ಣ ಪೂಜೆ, ಮಧ್ವಮತ ಪ್ರಸಾರಾದಿ ದೇವಕಾರ್ಯ ನಿರ್ವಹಿಸಿದ್ದನ್ನು ನಿರೂಪಿಸಿದ್ದಾರೆ. ದೇವಲೋಕಗಳಲ್ಲಿ ಸಂಚರಿಸುತ್ತಿರುವಾಗ ದೇವತೆಗಳು ವಾದಿರಾಜರನ್ನು ವೃಂದಾವನಾಖ್ಯಾನವನ್ನು ಸತ್ಕರಿಸಿ ಪೂಜಿಸಿದ್ದು ಕೂಡ ಇಲ್ಲಿ ವರ್ಣಿತವಾಗಿದೆ. ಯಮಲೋಕದಲ್ಲಿ ವಾದಿರಾಜರಿಂದಲೇ ಪೂಜಿತ ರಾಮದೇವರು 'ಭೃತ್ಯೋ ಭವ ಮಮ ಸಮೀಪಗಃ'(6,21) (ಹನುಮನಾಗು) ಎಂದಾಶೀರ್ವದಿಸಿದರು. ಗರುಡ ಪದಕ್ಕೆ ಬರುವ ವೇದನಿಧಿಗಳಿಗೆ ವಾದಿರಾಜರು ತಮ್ಮ ಭಾವಿಸಮೀರತ್ವ ನಿರೂಪಿಸಿದ್ದಾರೆ —

ತವ ಶಾಸ್ತ್ರ ಪ್ರಣೇತಾಹಂ ಭವಿಷ್ಯಾಮಿ ನ ಸಂಶಯಃ ॥ 6,71 ॥

'ನನ್ನ ಜೀವೋತ್ತಮತ್ವ ದೇವತೆಗಳೂ ನಂಬಿದರು (8,52); ಅಧಿಕಾರಿಗಳೆಲ್ಲ ನಾನು ಉತ್ತಮ' (8,97) ಎಂಬುದಲ್ಲದೆ, ವಾಣೀಪತಿತ್ವ ಒಂದನ್ನುಳಿದು ಎಲ್ಲ ವೈಭವವನ್ನು ಈಗಲೇ ಪಡೆದುಕೊಂಡಿರುವುದನ್ನೂ ಪ್ರತಿಪಾದಿಸಿದ್ದಾರೆ (21,10).

1642–43ರ ಸುಮಾರು ತಾಮ್ರಪರ್ಣಿ ಆನಂದತೀರ್ಥಾಚಾರ್ಯರಿಂದ ರಚಿತವಾದ 'ಸತ್ತತ್ವರತ್ನಮಾಲಾ' ಎಂಬ ಪ್ರಮೇಯ ಗ್ರಂಥದ 146–175ರ ಶ್ಲೋಕ ಭಾಗ 16 ಋಜುತ್ವ ಲಕ್ಷಣಗಳನ್ನು ಸಂಗ್ರಹಿಸಿದ್ದು, ಅವು ವಾದಿರಾಜರು 'ಸ್ವಪ್ನವೃಂದಾವನಾಖ್ಯಾನ'ದಲ್ಲಿ ಹೇಳಿಕೊಂಡ ನುಡಿಗಳಿಗೆಂತು ಅನ್ವಯಿಸುತ್ತವೆಂಬುದು ಎಂ. ಆರ್. ಗೋವಿಂದರಾಯರ 'ಋಜುತ್ವ ಪ್ರಕಾಶಿಕೆ'ಯಲ್ಲಿ ನಿದರ್ಶಿತವಾಗಿವೆ (ಪು.20–42). ಕುತೂಹಲಕರವಾದ್ದರಿಂದ, ಆ ಲಕ್ಷಣಗಳ ಮುಖ್ಯ ಸಮನ್ವಯವನ್ನು ಇಲ್ಲಿ ಅನುವಾದಿಸಿ ಸಂಕ್ಷೇಪಿಸಬಹುದು —

1. ಅನಾದಿ ಕಾಲತಃ ಸರ್ವದೋಷವಿಹೀನಾ, ಗುಣಾಧಿಕಾಃ
'ನಾನು ಸದಾ ಪುಣ್ಯತಮ, ಶುದ್ಧ (ಆಖ್ಯಾನ 3,6); ನಿರ್ದೋಷರ ನುಡಿ ಸುಳ್ಳಾಗದು (7,48); ನಿಸ್ಸಂಗದೇಹಿಯಾದನಿಗೆ ದೋಷವಿಲ್ಲ (3,17); ದೇವತೆಗಳಲ್ಲಿ ಮುಖ್ಯ ಶುಭಗುಣಸ್ವರೂಪಿ ಪಾಪರಹಿತ ಸದ್ಗುಣಾಢ್ಯನೆಂದರಿತವರಿಗೆ ಶುಭಗತಿ (3,13); ಅಖಿಲ ಗುಣಜ್ಞ ಸದ್ಗುಣೈಕಾಧಿವಾಸನಾದ ನನ್ನನ್ನು ಭಜಿಸಲಿ ಪ್ರಸನ್ನರು (3,22 ಹಾಗೂ ಶಿಲಾಸ್ಥ).

2. ಸಮಸ್ತ ಲಕ್ಷಣೈಃ ಪೂರ್ಣಾಃ
'ದೇವತೆಗಳ 32 ಲಕ್ಷಣಗಳಿರುವ ನನ್ನನ್ನರಿತವರಿಗೆ ಅಭೀಷ್ಟಪೂರ್ತಿ (6,98)'

3. ಸಮಸ್ತ ಜಗದೀಶ್ವರಾಃ
'ಲೋಕೇಶರನ್ನೆಲ್ಲ ಪ್ರವರ್ತಿಸಿ ನನ್ನ ಪೂಜಕರನ್ನಾಗಿಸುವೆ (4,33); ಜಗದೀಶ ವ್ಯಾಸರ ಸೇವೆಯಿಂದ ಜಗವೆಲ್ಲ ನನ್ನ ದಾಸ (7,42); ವಾಯು ಬ್ರಹ್ಮರು ವಾಣೀಪತಿತ್ವ ಬಿಟ್ಟು ಉಳಿದೆಲ್ಲ ವೈಭವ ಎನಗಿತ್ತರು (21,11).'

4. ಸವಿಶೇಷಂ ಜಗತ್ಸರ್ವಂ ಭೂತಂ ಭವ್ಯಂ ಭವಚ್ಚ ಯತ
ಆಲೋಚನಾಚ್ಚ ಯತ ಜ್ಞಾನಂ ಭಾಸತೇ ಪರಮಾಣುವತ ॥

(ಈಶನಿಂದನ್ಯತ್ರ ಸರ್ವ ದೇಶ—ಕಾಲಗಳನ್ನೊಳಗೊಂಡಿಸಿ ತಿಳಿವ ಜ್ಞಾನ ಸಾಮರ್ಥ್ಯ) 'ನಾನು ಪೂರ್ವದಿಂದಲೂ ಸರ್ವಜ್ಞ (7,59); ಮನುಜರ ಮನದಲ್ಲಿರುವುದನ್ನರಿವೆ (7,119); ನನಗದೆಲ್ಲ ಗೊತ್ತು, ನಾನು ಜಾತಿಸ್ಮರಣಶೀಲ (11,6). ಭಾವೀ ವಿಶ್ವಪ್ರಿಯತೀರ್ಥರ ಪರಮಗುರು ವಿಶ್ವಾಧೀಶರು ತಮ್ಮನಾದ ವಿಠಲನಿಗೆ ಪೀಠ ಕೊಡುವುದು (11,41—ಅವರೇ ವಿಶ್ವೇಶತೀರ್ಥರಾದರು).'

5. ಸರ್ವವೇದಾಧಿಕಜ್ಞಾನಾ, ಮಹಾಪ್ರತಿಭಯಾಯುತಾ:।
'ನಾನು ಸತ್ಯಲೋಕಕ್ಕೆ ಹೋಗಲು ಹಯಗ್ರೀವನು ಎಲ್ಲ ವೇದಾರ್ಥ ಉಪದೇಶಿಸಿದ್ದನ್ನು ಗ್ರಹಿಸಿದೆ (7,3).' (ರುಕ್ಮಿಣೀಶ ವಿಜಯ, ಯುಕ್ತಿಮಲ್ಲಿಕೆ, ದಶಾವತಾರ ಸ್ತುತಿ, ಶ್ರೀಕೃಷ್ಣ ಬಾಲಲೀಲೆ ಇತ್ಯಾದಿ ಬಹು ವೈವಿಧ್ಯಪೂರ್ಣ ಕೃತಿರಚನೆ ಅವರ ಮಹಾಪ್ರತಿಭೆಗೆ ನಿದರ್ಶನ; ಮಹಾಪ್ರತಿಭೆಯಿರದಿದ್ದಲ್ಲಿ ಅವರ ಈ ಎಲ್ಲ ಸಾಹಿತ್ಯ ಸೃಷ್ಟಿ ಸುಸಾಧ್ಯವಲ್ಲ).

6. ಸರ್ವ ಜೀವಾನಾಮಭಿಮಾನೀ ನಿಯಾಮಕಃ।
ಬಲಮೇಧಾ ಧೃತಿ ಸ್ಥೈರ್ಯ ಧ್ಯಾನ ವೈರಾಗ್ಯ ಮಾನವಾನ್॥
ವಾದಿರಾಜರ ಸರ್ವಜೀವಾಭಿಮಾನಿತ್ವ ಅವರು (ಸ್ವಪ್ನ ವೃಂದಾವನಾಖ್ಯಾನ 19ರಲ್ಲಿ ಉಕ್ತ ದ್ವೇಷಿಗಳನ್ನೊಳಗೊಂಡು) ಎಲ್ಲ ಬಗೆಯವರಿಗೂ ತೋರಿದ ಪ್ರತ್ಯಕ್ಷ ಕರುಣೆ, ರಚಿಸಿದ ಸಾಹಿತ್ಯ ಇವುಗಳಲ್ಲಿ ಸೂಚಿತ. ಅವರಿಗಿರುವ ಪ್ರಾಣಾಪಾನಾದಿ ಪಂಚರೂಪತ್ವ (7,114) ಅವರ ಸರ್ವನಿಯಾಮಕತ್ವಸೂಚಕ. ನಕ್ಷತ್ರ ಮಧ್ಯಸ್ಥರಾದ ಅವರ ತೇಜದಿಂದ ಇತರರ ತೇಜಸ್ತಿರಸ್ಕಾರ (8,58), ಆಕಾಶ ಮಾರ್ಗದಿಂದ ನಾಕೇಶ ಉಪೇಂದ್ರನಲ್ಲಿಗೈದಿದ್ದು (9,76—91) ಅವರ ಬಲ ಮೇಧಾದಿ ಸೂಚಕ.

7. ಸರ್ವ ತತ್ತ್ವಾಭಿಮಾನೀ ಚ ಸರ್ವಪ್ರಾಣಗಣಾಧಿಪಃ॥
ಇಂದ್ರಿಯಾಣಾಂ ಪ್ರವೃತ್ತೌ ತು ಸ್ಥಿತ ಏವ ಕರೋತ್ಯಯಂ
ತದನ್ಯೇಂದ್ರಿಯ ದೇವಾಸ್ತು ಕಿಂಚಿಚ್ಚಲನಸಂಯುತಾಃ॥
(ವಾಯು ಸರ್ವತತ್ತ್ವಾಭಿಮಾನಿ, ಸರ್ವ ಪ್ರಾಣಗಣಾಧಿಪ; ಇದರಿಂದಲೇ ಇಂದ್ರಿಯಾಭಿಮಾನಿ ದೇವತೆಗಳನ್ನು ಪ್ರವರ್ತಿಸುವರು, ನಂತರ ಅವರು ಚಲಿಸುವರು). 'ನಾನು ನಿನ್ನ ಮನಸ್ಸು ಮೊದಲಾದ ಇಂದ್ರಿಯಗಳಲ್ಲಿರುವುದರಿಂದ ಅವು ಕಾರ್ಯ ಮಾಡುತ್ತವೆ (5,17—24 ವಿಪ್ರಪ್ರಕರಣ); ವಿಪ್ರನ ದೇಹವು ನನ್ನ ದೇಹವೇ, ನನ್ನ ಕಲೆಗಳಿಂದಲೇ ಅವನ ದೇಹ ಪ್ರೇರಿತ, ಅವನಿಂದ ಕಲ್ಪಿತವೆಂಬುದು ನನ್ನಿಂದ ಕಲ್ಪಿತ (3,90); ಸಜ್ಜನರ ಎಲ್ಲ ಚೇಷ್ಟೆಗಳನ್ನು ಪ್ರೇರಿಸುವೆ (5,90).'

12. ನಿತ್ಯಪೂರ್ಣಗುಣತ್ವಾಚ್ಚ ಹರೇಃ ಪ್ರಿಯತಮತ್ವತಃ
ಅಶಕ್ಯಪ್ರಾಪ್ಯರಾಹಿತ್ಯಾತ್ ಅರ್ಥ್ಯರ್ಥನಸ್ಯಮುದಾಹೃತಃ
ತಸ್ಮಾತ್ ಅಖಂಡ ಶಕ್ತಿಃ ಸ ನಿಸ್ಸೀಮ ಗುಣಬೃಂಹಿತಃ ॥

ಹರಿಗೆ ನಿತ್ಯಪೂರ್ಣ ಗುಣವುಳ್ಳ ವಾಯುದೇವರು 'ಪ್ರಿಯತಮರೆಂದೂ, ಅಶಕ್ಯ ಅಪ್ರಾಪ್ಯರಾಹಿತ್ಯದಿಂದಾಗಿ ಅರ್ಥ್ಯರ್ಥರೆಂದೂ, ವರ-ಶಾಪ ಬಲಗಳಿಂದ ಎದುರಿಸಸಾಧ್ಯವಾದ ಅಖಂಡ ಶಕ್ತಿವಂತರೆಂದೂ, ಹರಿಪ್ರಸಾದದಿಂದ ಪಡೆದ ಅಷ್ಟಸಿದ್ಧಿ ಇತ್ಯಾದಿಗಳನ್ನು ಇತರ ದೇವತೆಗಳಿಗೂ ಅನುಗ್ರಹಿಸಬಲ್ಲ ನಿಸ್ಸೀಮ ಗುಣಯುತರೆಂದೂ ಎನಿಸಿದ್ದಾರೆ. ವಾದಿರಾಜರೂ 'ಅಖಿಲ ಗುಣಜ್ಞ' ಎಂದು 3,22ರಲ್ಲಿ ಉಕ್ತ; 'ಬದರಿಗೆ ಹೋದಾಗ ವೇದವ್ಯಾಸರು ನನ್ನನ್ನೇ ಮೊದಲು ವಿಚಾರಿಸಿದರು (4,13); ರಮಾದೇವಿಯು ಕೈಗಿತ್ತು ನಿನ್ನ ಮಗು ಎಂದರು (4,14); ಲಕ್ಷ್ಮೀಪತಿಗತಿಪ್ರಿಯನೆಂದು ದೇವತೆಗಳೆಲ್ಲ ನನ್ನನ್ನಾಹ್ವಾನಿಸಿದರು (8,81).' ಇತರ ಸಾಧ್ಯವಲ್ಲದ ಅನಂತಾಸನ ಪರಿಯಂತ ಸಂಚಾರ (7,83), ಲಕ್ಷ ಶ್ಲೋಕಗಳನ್ನು ಕ್ಷಣದಲ್ಲಿ ಹೇಳುವ ಸಾಮರ್ಥ್ಯ (13,47), ಶೇಷನ ಮಡದಿಯ ಗರ್ಭಸ್ಥ ಹೆಣ್ಣುಕೂಸನ್ನು ಪ್ರಾಣದೇವರೂಡನಿದ್ದು ಗಂಡು ಕೂಸಾಗಿಸಿದ್ದು (16,47), ಕರ್ತುಮಕರ್ತುಂ ಅನ್ಯಥಾಕರ್ತುಂ ಸಾಮರ್ಥ್ಯ (18,25) — ಇವು ವಾದಿರಾಜರ ಅರ್ಥ್ಯರ್ಥತ್ವದ್ಯೋತಕ. ಅಣಿಮಾದ್ಯಷ್ಟಸಿದ್ಧಿಯುಳ್ಳವರಾಗಿ (3,62) ಅಖಂಡ ಶಕ್ತಿ—ನಿಸ್ಸೀಮ ಗುಣಯುತರು.

13. ಅನಂತಾನ್ಯಸ್ಯರೂಪಾಣಿ ತ್ರಿಕೋಟೀನಿ ವಿಶೇಷತಃ ।

ಇಂದ್ರಾದಿ ದೇವತೆಗಳಿಂದಾಹ್ವಾನಿತ ವಾದಿರಾಜರು 'ಏಕಕಾಲಕ್ಕೆ ಅನೇಕ ರೂಪ ಧರಿಸಿ ಸತ್ಕೃತರಾಗಿರುವುದರಿಂದ (8,63–91), ಭಾವೀಸಮೀರರಾಗಿ ತ್ರಿಕೋಟಿ ರೂಪಗಳಿಂದ ತ್ರಿವಿಕ್ರಮನನ್ನಾರಾಧಿಸುವರಲ್ಲಿ ಸಂದೇಹವಿಲ್ಲ.

14. ಪ್ರಾಣಾದಿ ದಶರೂಪೋಽಸೌ ಸೋಽಧ್ಯಾತ್ಮಾದಿಗತಃ ಪ್ರಭುಃ ॥

ಪ್ರಾಣಾಪಾನಾದಿ ಪಂಚರೂಪತ್ವ (7,114), ನಾಗ ಕೂರ್ಮ ಕೃಕರ ದೇವದತ್ತ ಧನಂಜಯ ಉಪವಾಯುಪಂಚಕ — ಇವಾ ಮೇಲಣ ಬಹುರೂಪಧಾರಣದಿಂದ ಸೂಚಿತ (ಅಧ್ಯಾತ್ಮದಲ್ಲಿ).

15. ಹನುಮಾನ ಭೀಮಸೇನಶ್ಚ ಪೂರ್ಣಪ್ರಜ್ಞಾರ್ಯ ಇತ್ಯಪಿ
ಶ್ರುತಾನಿ ತ್ರೀಣಿ ರೂಪಾಣಿ ಮೂಲರೂಪ ಸಮಾನಿ ಚ ॥

ಪ್ರಾಣದೇವರಿಗೆ ಪ್ರಿಯನೆಂದು ವೇದವ್ಯಾಸರು ಮೈದಡವಿದ್ದು (4,69), ಭಾರತೀಪತಿಯಂತೆ ಮಾರುತ ಪದವಿಗೆ ಬರುವ ವಾದಿರಾಜರಿಗೂ ರಾಮಾಯಣ — ಭಾರತ ಪಠಿಸ ಹೇಳಿದ್ದು (4,71 ಹಾಗೂ 74), ಭೀಮ ದೇವಾದಿಗಳನ್ನೊಳಿಸಿದ ಕತೆ ಹೇಳಿದ್ದು (4,75,76); ಹನುಮನಿಗೆ ರಾಮ ಆಲಿಂಗನವಿತ್ತಂತೆ ಹಯಗ್ರೀವ

ವಾದಿರಾಜರಿಗಿತ್ತುದು (9,4), ಇವರೀರ್ವರೂ ದಯಿತಾ ಪಾರ್ಶ್ವಯನ್ನು ಹರಿಗೊದಗಿಸಿದುದು (ಸೀತೆ– ರುಕ್ಮಿಣಿಯರಿಂದ) – ಇವು ವಾದಿರಾಜರ ಹನುಮ ತಾದೃಶ್ಯ. ತಪೋನಿರತ ಭಾವೀ ಭಾರತಿ ವಾದಿರಾಜರನ್ನೆಬ್ಬಿಸಲು ಮುಂದಣ ಜನ್ಮದಲ್ಲಿ ವರಿಸುವ ಅಭಯವಿತ್ತುದು (9,6), ತ್ರಿವಿಕ್ರಮಾಲಯದ ಧ್ವಜಸ್ತಂಭ ವನ್ನು ವಾದಿರಾಜರು 10 ಸಾವಿರ ಆನೆಯ ಬಲದ ತಮ್ಮ ಭೀಮ ಭುಜ ಸ್ತಂಭ ದಿಂದೆತ್ತಿ ಹಿಡಿದುದು (11,81) – ಭೀಮಸಾದೃಶ್ಯಸೂಚಕ. ಅಣಿಮಾದ್ಯಷ್ಟಾಂಗ ಯೋಗಗಳ ಮಧ್ವರ ಪಾದಾಂಗುಷ್ಠಕ್ಕೆ ಪತನಾದ ಮಣಿಮಂತ ಸರ್ಪ ಕುಪಿತ ಮಾಯಾವಾದಿಯಾಗಿ ಅಷ್ಟಾಂಗಯೋಗಗಳ ವಾದಿರಾಜರಲ್ಲಿ ವಾದಿಸಿ ನಿಗ್ರಹಿತ ನಾದುದು (9,37–38), ಮಧ್ವರಂತೆ ವಾದಿರಾಜರ ಅಸ್ಥಿಗಳೂ ಶಂಖ ಚಕ್ರಾಂಕಿತವಾಗುತ್ತ ಯೋಗಬಲದಿಂದ ಹರಿಯ ಪದಕೆ ಸಾರುವುದು (9,41–47), ಭಾರತೀಪತಿಯಂತೆ ವೇದಕ್ಕೆ ನಿರ್ಭಯತ್ವ ಸಾಧಿಸಿದಿರೆಂಬ ವೇದವ್ಯಾಸರ ನುಡಿ (8,93) – ಮಧ್ವ ಸಾದೃಶ್ಯ ದ್ಯೋತಕ.

16. ಅಣಿಮಾದ್ಯಷ್ಟ ಸಿದ್ಧಿ: ಸಾಮ್ಯರೂಪಿಕಾ1

ತ್ರಸರೇಣುವಿನ ಸೂಕ್ಷ್ಮ ಅಣುರೂಪಧಾರಣ (9,34), ಬ್ರಹ್ಮಾಂಡದ ಊರ್ಧ್ವ ಅಧೋಭಾಗ ಮುಟ್ಟುವ ಸ್ಥೂಲ ಮಹದ್ರೂಪಧಾರಣ (9,33), ಮೇರುವಿನಂತೆ ಗುರುಭಾರ – ಅರಳೆಯಂತೆ ಹಗುರವಾಗುವ ಗರಿಮಾ – ಲಘಿಮಾ (9,35) ಇಲ್ಲ ಆಗಸದಂತೆ ವ್ಯಾಪಕ – ಅಣುವಿನಂತೆ ಭಾಗವಾಗುವುದೂ ಇದೆ. 10,16ರಲ್ಲಿ ದೇವಲೋಕದಿಂದ ವಾದಿರಾಜರು ಆಖ್ಯಾನ ವ್ಯಾಖ್ಯಾನ ಆಲಿಸಿ ಹರ್ಷಿಸುವ ದೂರ ಶ್ರವಣವೂ ಉಕ್ತ), ಪೂರ್ಣಕಾಮರಾಗಿ ನಿಸ್ಪೃಹರೆನಿಸಿರುವಂಥ ಪ್ರಾಪ್ತಿ (22,36), ಅನಂತಾಸನಾದಿಗಮನದಿಂದ ಸ್ವೇಚ್ಛಾ ಸಂಚಾರ ಸೂಚಿಸಿದ ಪ್ರಾಕಾಮ್ಯ (7,83) ಜಗದೀಶ ವ್ಯಾಸರ ದಾಸರಿಗೆ ಜಗವೆಲ್ಲ ದಾಸವೆಂಬಲ್ಲಿನ ಈಶತ್ವ ಹಾಗೂ ವಶತ್ವ (7,42) – ಇವು ವಾದಿರಾಜರಂಥ ಋಜುಗಳಿಗೆ ಸ್ವಾಭಾವಿಕ, ಇತರ ಯೋಗಿಗಳಿಗೆ ಯೋಗಬಲ ಸಾಧಿತ (3,62ರಲ್ಲಿ ಈ ಸಿದ್ಧಿ ಹಯಗ್ರೀವಾಜ್ಞೆಯಿಂದಾದು ಎಂದಿದ್ದಾರೆ).

ವಾದಿರಾಜರ ಅಜನ್ಮ ಚರಿತ ಅಸಾಮಾನ್ಯ ಘಟನೆಗಳಿಂದ ಕೂಡಿರುವುದನ್ನೂ ಮಧ್ವಚರಿತ ದಂತಿರುವುದನ್ನೂ ಪರಿಶೀಲಿಸಿದಲ್ಲಿ, ಬಚ್ಚಿಡಲಾರದ ಋಜುತ್ವ ಲಕ್ಷಣಗಳಿವು ಸಹಜ ಸೂಚಿತ ವಾಗುತ್ತವೆ. ಆದರಿಂದ ಪಾಮರಪುರುಷರಿಗೂ ಅತೀತರಾದ ಋಜು ದೇವತೆಗಳ ಅಂತಸ್ಸು ತಾನೇ ತಾನಾಗಿ ಧ್ವನಿತವಾಗುತ್ತದೆ. ಸ್ವಾಪ್ನಕೃತಿಯನ್ನು ಹಟದಿಂದಲ್ಲಗಳೆಯುವವರಿಗೆ ವಾದಿರಾಜರ ವ್ಯಕ್ತಿ ಮಹತ್ವದಲ್ಲೇ ಋಜು ದರ್ಶನವಾಗುತ್ತದೆ, ಪೂರ್ವಾಗ್ರಹರಹಿತ

ಸಹೃದಯರಾಗಿ ಸಮಾಲೋಚಿಸಿದರೆ. ಸ್ವಾಪ್ನೇತರ ಅನ್ಯ ಪ್ರಮಾಣ ವಾಕ್ಯಗಳಂತೂ ಇದ್ದೇ ಇವೆ ಅನೇಕಶಃ.

3. <u>ವಾದಿರಾಜ ಗುರುಚರಿತಾಮೃತ</u>: 'ಸ್ವಾಪ್ನವೃಂದಾವನಾಖ್ಯಾನ'ವನ್ನು ವೇದನಿಧಿಗಳ ಮೂಲಕ ಬರೆದುಕೊಂಡ ಅವರ ಶಿಷ್ಯ ರಾಮಚಂದ್ರಾಚಾರ್ಯರೇ ಗುರುಗಳ ಆಜ್ಞೆಯಂತೆ ವಾದಿರಾಜರ ಚರಿತ್ರೆಯನ್ನು ಸಹ ಅದರ ಬೆನ್ನಲ್ಲೇ ಬರೆದು ಮುಗಿಸಿದರು (1645). "ಈ ಗ್ರಂಥವು ವಾದಿರಾಜರ ವಿದ್ಯಾಶಿಷ್ಯರು ರಚಿಸಿದ 'ವೃತ್ತರತ್ನಸಂಗ್ರಹ'ದ ವಿಷಯಗಳನ್ನು, ಜೊತೆಗೆ ತಮ್ಮ ಗುರುಮುಖದಿಂದ ತಿಳಿದ ಅಪೂರ್ವಾನೇಕ ವಿಷಯಗಳನ್ನು ಸಂಗ್ರಹಿಸಿ, ವೇದನಿಧಿ ಶಿಷ್ಯರಿಂದ ರಚಿಸಲ್ಪಟ್ಟಿದೆ... ಈ ಗ್ರಂಥದ ಶ್ರೀ ವಾದಿರಾಜರ ಚರಿತ್ರೆಯನ್ನು ನಿಸ್ಸಂಶಯವಾಗಿ ತಿಳಿಯಲು ಉಪಕರಿಸುತ್ತದೆ... ವಾದಿರಾಜರ ಕಾಲದಲ್ಲೇ ಇದ್ದ ವೇದನಿಧಿತೀರ್ಥರ ಉಪದೇಶದಿಂದ ರಚಿತವಾದುದರಿಂದ ಈ ಚರಿತ್ರೆ ಅತ್ಯಾದರಣೀಯವಾದುದು" (ವಾ.ಗು.ಚ. ಮುನ್ನುಡಿ, ಕಾಣಿಯೂರು ಮಠಾಧೀಶ ವಿದ್ಯಾಸಮುದ್ರತೀರ್ಥರು). ವಾದಿರಾಜರ ಕಾಲದಲ್ಲೇ ಇದ್ದ ರಘುನಾಥಾಚಾರ್ಯರು ಪ್ರತ್ಯಕ್ಷದರ್ಶಿಗಳಾಗಿ ಬರೆದ ಕಾರಣ 'ವೃತ್ತರತ್ನಸಂಗ್ರಹ' ಹೆಚ್ಚು ಚಾರಿತ್ರಿಕವಾದರೂ, ವಾದಿರಾಜರ ಸ್ವರೂಪವರಿತು ಬರೆಯಲಾಗಲಿಲ್ಲ ಅವರಿಗೆ. ಅನಂತರ ಅವರ ಸ್ವರೂಪ ವೇದವೇದ್ಯ — ವೇದನಿಧಿಗಳ ಮೂಲಕ ಐತಿಹ್ಯ — ಇತಿಹಾಸವೆನಿಸಿ, 'ಸ್ವಾಪ್ನವೃಂದಾವನಾಖ್ಯಾನ'ದ ಮೂಲಕ ಗ್ರಂಥಸ್ಥವಾಗಿ, ಗುರು ವೇದನಿಧಿಗಳಿಂದ ವಿವೃತವಾದ ಕಾರಣ, ರಾಮಚಂದ್ರಾಚಾರ್ಯರು ಆ ದೃಷ್ಟಿಯಿಂದಲೇ 'ವಾದಿರಾಜ ಗುರುಚರಿತಾಮೃತ'ವನ್ನುಣಬಡಿಸುವುದು ಸಾಧ್ಯವಾಯಿತು. ಅಂತೆಯೇ ವಾಗೀಶರು ಶಿಶು ರೂಪದ ಋಜುವನ್ನು ನಮಿಸುವುದು, ವಾದಿರಾಜರು ಭೂತರಾಜರನ್ನುದ್ಧರಿಸಿ ಋಜುತ್ವ ತೋರಿಸಿಕೊಂಡಿರುವುದು, ಋಜುಗಳು ಆರಾಧಿಸುವ ತ್ರಿವಿಕ್ರಮನ ಪ್ರತಿಷ್ಠೆಯಾದುದು ಮೊದಲಾದಂಶ ಇವರ ಕೃತಿಯಲ್ಲಿದೆ. ಈ ಕಾರಣದಿಂದ ಇವರ ಕೃತಿಯೇ ಸ್ವತಃ ಇನ್ನೊಂದು ಪ್ರಮಾಣವೆನಿಸಿದೆ ವಾದಿರಾಜರ ಋಜುತ್ವಕ್ಕೆ.

ಅಲ್ಲದೆ, ರಾಮಚಂದ್ರಾಚಾರ್ಯರು ಕೃತಿಯ 8ನೆಯ ಬಿಂದುವನ್ನು ಋಜುತ್ವ ನಿರ್ಣಯಕ್ಕೇ ಮೀಸಲಿರಿಸಿ, ಕೆಲ ಶಾಸ್ತ್ರೋಕ್ತ ಪ್ರಮಾಣಗಳನ್ನೂ, ವಾದಿರಾಜ

ಕೃತಿಗಳಿಂದಲೇ ಸೂಚಿತವಾಗುವ ಇತರ ಕೆಲವು ಪ್ರಮಾಣಗಳನ್ನೂ ಚೆನ್ನಾಗಿ ಸಂಗ್ರಹಿಸಿ ಕೊಟ್ಟಿದ್ದಾರೆ. ಅದಕ್ಕೆ ಪೀಠಿಕೆಯಾಗಿ 'ವೇದನಿಧಿಗಳು ಹೇಳಿದಂತೆ ವಾದಿರಾಜರು ಜೀವೋತ್ತಮ ಋಭುಗಳೆಂಬುದನ್ನು ಶ್ರುತ್ಯಾದಿ ಪ್ರಮಾಣಗಳಿಂದ ಸಾಧಿಸುವೆ' ಎಂದಿದ್ದಾರೆ —

1) ಛಾಂದೋಗ್ಯ ಭಾಷ್ಯದ ಉಕ್ತಿ:

ಗುಹ್ಯದೇಶಾ ಬ್ರಹ್ಮಪದೇ ಯೇ ಯೋಗ್ಯಾ ದೇವತಾ ಗಣಾ:
ಸರ್ವೇ ಗುಹ್ಯೋಪದೇಷ್ಟಾರ: ಸರ್ವೇಷಾಂ ಗುರವೋ ಹಿ ತೇ ॥ 4,5 ॥

ರುದ್ರಾದಿ ಮುಕ್ತಿಯೋಗ್ಯ ಜೀವರಿಗೆ ಪರಬ್ರಹ್ಮನನ್ನು ತಿಳಿಸುವ ಗುರುಗಳು ಬ್ರಹ್ಮ ಪದಾರ್ಹ ದೇವತಾಗಣ.[96]

2) ಮಹಾಭಾರತ ತಾತ್ಪರ್ಯ ನಿರ್ಣಯದ ನುಡಿ:

ಋಭವೋ ನಾಮದೇವಾ: ಪೃಥಕ ಗಣಾ:
ತೈರೇವಾಪ್ಯಂ ತತ್ಪದಂ ತು ನೈವಾನ್ಯೈ: ಸಾಧನೈರಪಿ ॥ 1,94 ॥

ಋಭುಗಳೆಂಬ ದೇವತೆಗಳ ಒಂದು ಪ್ರತ್ಯೇಕ ಪಂಗಡವಿದ್ದು, ಬ್ರಹ್ಮಪದವಿ ಅವರಿಗೇ ಮೀಸಲು, ಬೇರಾರಿಗೂ ಸಾಧ್ಯವಲ್ಲ.[97]

3) ವಾಮನ ಪುರಾಣೋಕ್ತ ಋಭುನಾಮ ಶತಕ:

ಕಲ್ಯೋ ಸುತೇಜಾ ದಾಸಶ್ಚ ... ಲಾತವ್ಯಶ್ಚ ತಥೈವ ಚ[98]

---

96. ಋಭವೋ ನಾಮ ಯೇ ದೇವಾ: ದೇವಾನಾಮಪಿ ದೇವತಾ: ॥
ಮ.ಭಾ.ತಾ.ನಿ.32, 80.

97. ಭಾಗವತ ತಾ.ನಿ.24,12 ಹಾಗೂ ಗರುಡ ಪುರಾಣ ಬ್ರಹ್ಮಕಾಂಡ 10,27 ಇತ್ಯಾದಿಗಳಲ್ಲಿ ಸಂವಾದಿ ಶ್ಲೋಕಗಳಿವೆ. (ಎಂ.ಆರ್.ಗೋವಿಂದರಾವ್, ಋಭುತ್ವ ಪ್ರಕಾಶಿಕಾ, ಪು.48). ಕುಮಾರವ್ಯಾಸನ ಕೆಲ ಭಾರತ ಪ್ರತಿಗಳಲ್ಲಿ 'ಋಭುಗಣದ ಮುಖ್ಯಪ್ರಾಣದೇವನನು (ನೆನೆದಳು ಕುಂತಿ)' ಎಂದಿದೆ (ಕೆ.ಹರಿದಾಸರು, ಪು.279).

98. ಹಿಂದೆ 3ನೆಯ ಪ್ರಕರಣಾರಂಭದಲ್ಲಿ 100 ಹೆಸರು ಉಕ್ತವಾಗಿ ಇಲ್ಲಿ ಸಂಕ್ಷೇಪಿಸಿದೆ. ಇವರಲ್ಲಿ ಮೂರನೆಯ ಋಭು ಲಾತವ್ಯ. ಇದರ ವಿವರವಾದ ಚರ್ಚೆ 'ಋಭುತ್ವ ಸಿದ್ಧಾಂತ' ಪು.273–6ರಲ್ಲಿ ನಡೆದಿದೆ. ಜಗನ್ನಾಥದಾಸರು ಹರಿಕಥಾಮೃತಸಾರ 23,23–30ರಲ್ಲಿಯೂ ಈ ಋಭು ಶತನಾಮಾವಳಿಯನ್ನಿತ್ತಿದ್ದಾರೆ —

ಈ ಋಭುಗಳೊಳಗೊಬ್ಬ ಸಾಧನ
ನೂರು ಕಲ್ಪದಿ ಮಾಡಿ ಕರೆಸುವ
ಚಾರುತರ ಮಂಗಳಸುನಾಮದಿ ಕಲ್ಪ ಕಲ್ಪದಲಿ

ಎಂಬ ಪೀಠಿಕೆಯೊಡನೆ (22).

ವಾಯುಶ್ಚೈವ ತಥಾ ಬ್ರಹ್ಮೇತ್ಯೇವಂ ಪಂಚಾಶದೀರಿತಾಃ ॥
ಇತ್ಯೇತತ ಶತಕಂ ನಾಮ ಋಜೂನಾಂ ಯಃ ಪಠೇತ ಸದಾ
ತೈರ್ದತ್ತಾಂ ಪದವೀಂ ಯಾತಿ ವಾಸುದೇವಾಭಿವೀಕ್ಷಿತಾಂ ॥

ಇಲ್ಲಿ ಲಾತವ್ಯರು ಮಾರುತ ಪದವಿಗೆ ಸರಿದು, ಮಾರುತ ಬ್ರಹ್ಮಪದಕ್ಕೇರುವುದು ಸ್ಪಷ್ಟ.

ಪುರಾಣಾಚ್ಚ ಪ್ರಸಿದ್ಧಂ ತತ ಲಾತವ್ಯೋ ಭಾವಿ ಮಾರುತಃ
ಮಾರುತೋ ಬ್ರಹ್ಮತಾಮೇತಿ ಹ್ಯೇವಂ ಸಿದ್ಧಂ ನ ಸಂಶಯಃ ॥
ವಾ.ಗು.ದ. 8,4.

4) ಸತ್ತತ್ತ್ವ ರತ್ನಮಾಲಾದ ವಾಕ್ಯ:

ಅನಾದಿ ಕಾಲತಃ ಸರ್ವೇ ದೋಷಹೀನಾ ಗುಣಾಧಿಕಾಃ
ಋಜೂನಾಮೇಕ ಏವಾಸ್ಯ ಪರಮೋತ್ಸಾಹ ವರ್ಜನಂ ॥ 146 ॥

'ಋಜುಗಳು ದೋಷರಹಿತರು, ಗುಣಾಧಿಕ್ಯವುಳ್ಳವರು' ಎಂಬ ನುಡಿ ಮಧ್ವರ ಮ.ಭಾ.ತಾ.ನಿರ್ಣಯ 32,80ರಲ್ಲಿಯೇ ಇದ್ದು, 1642–43ರ ಸುಮಾರು ರಚಿತವಾದ 'ಸತ್ತತ್ತ್ವ ರತ್ನಮಾಲಾ' ಎಂಬ ಪ್ರಮೇಯ ಗ್ರಂಥದಲ್ಲೂ ಸಂಗ್ರಹಿತವಾಗಿದೆ.[99]

5) ಪುನಃ ಮಹಾಭಾರತ ತಾತ್ಪರ್ಯ ನಿರ್ಣಯದ ಶ್ಲೋಕ, ಗರುಡ ಪುರಾಣದ ಸಮರ್ಥನೆ:

ದುರ್ವಿಜ್ಞೇಯ ಯತಃ ಸರ್ವೈಃ ಭಾರತಂತು ಸುರೈರಪಿ
ಸ್ವಯಂ ವ್ಯಾಸೋಹಿ ತದ್ವೇದ ಬ್ರಹ್ಮಾ ವಾ ತತ್ಪ್ರಸಾದತಃ ॥

ಮಹಾಭಾರತವನ್ನರಿಯುವುದು ದೇವತೆಗಳಿಗೂ ಕಠಿಣ; ಸ್ವತಃ ವ್ಯಾಸರೂ ಅವರ ಕೃಪೆಯಿಂದ ಬ್ರಹ್ಮನೂ ಅದನ್ನು ಬಲ್ಲವರು. ಬ್ರಹ್ಮಪದಾರ್ಹ ಮಧ್ವರು ಅದಕ್ಕೆ ತಾತ್ಪರ್ಯ ನಿರ್ಣಯ ರಚಿಸಿದಂತೆ, ವಾದಿರಾಜರೂ ವ್ಯಾಸಾಜ್ಞೆಯಾಗಲು ಮಹಾಭಾರತಕ್ಕೆ 'ಲಕ್ಷಾಲಂಕಾರ' ವಿರಚಿಸಿದ್ದು ಅವರ ಭಾವಿ ಸಮೀರ ಬ್ರಹ್ಮತ್ವಸೂಚಕ. ಇದನ್ನು ಸಮರ್ಥಿಸುವ ನುಡಿ ಗರುಡ ಪುರಾಣದಲ್ಲಿದೆ, ಬ್ರಹ್ಮವಾಕ್ಯವಾಗಿ –

---

99. ಸತ್ತತ್ತ್ವರತ್ನಮಾಲಾದಲ್ಲಿ ಮುಂದೆ 175ನೆಯ ಶ್ಲೋಕಗಳ ವರೆಗೂ 16 ಋಜು ಲಕ್ಷಣ ಉಕ್ತವಾಗಿದ್ದು, ಇವೆಲ್ಲಕ್ಕೂ ಸಂವಾದ ಶ್ಲೋಕಗಳನ್ನು ವೃಂದಾವನಾಖ್ಯಾನದಿಂದನುವಾದಿಸಿಕೊಟ್ಟಿದೆ ಹಿಂದೆ.

ಯಾವಜ್ಜ್ಞಾನಂ ಹ್ಯಸ್ತಿ ಮೇ ವಾಸುದೇವೇ
ತಾವಜ್ಜ್ಞಾನಂ ವಾಯುದೇವಸ್ಯ ಹ್ಯಸ್ತಿ ।
ಯಾವಜ್ಜ್ಞಾನಂ ವಾಯುದೇವಸ್ಯ ಹ್ಯಸ್ತಿ
ತಾವಜ್ಜ್ಞಾನಂ ಹ್ಯಸ್ತಿ ವೈ ತದ್ವೃಜೂನಾಂ ॥ ಅ.12 ॥

'ವಾಸುದೇವನ ಜ್ಞಾನ ನನಗಿರುವಷ್ಟೇ ವಾಯುವಿಗೂ, ವಾಯುವಿನಷ್ಟೇ ಋಜುಗಳಿಗೂ ಇರುವುದು'. ಇದರಿಂದ ಬ್ರಹ್ಮ–ವಾಯು–ಋಜುಗಳ ಸಾಮ್ಯ ಸುವೇದ್ಯ. ಅಂತೆಯೆ, ವಾದಿರಾಜರು ಪ್ರಯಾಗದ ಬ್ರಹ್ಮನ ಸಂಧ್ಯಾಮಂಟಪದಲ್ಲಿ ಜಪಿಸುತ್ತಿರಲು ವ್ಯಾಸರು ಪ್ರತ್ಯಕ್ಷರಾಗಿ 'ಲಕ್ಷಾಲಂಕಾರ' ರಚಿಸೆಂದು ಅಪ್ಪಣೆ ಕೊಡಿಸಿದರು.[100]

6) ಬ್ರಹ್ಮವೈವರ್ತಪುರಾಣದ ಬ್ರಹ್ಮನ ಉಕ್ತಿ:

ವ್ಯಾಸಸೇವಾರತೋ ನಿತ್ಯಂ ವಾದಿರಾಜೋ ಋಜುರ್ಯತಿ:
ದುರ್ವಾದಿನಂ ಪ್ರಮಥ್ಯಾಶು ಮತ್ಪದಂ ಯಾತು ಮರ್ಹತಿ
ಸ್ಥಾಪಯಿಷ್ಯತಿ ಮಚ್ಛಾಸ್ತ್ರಂ ತೇಜ ಮೋಕ್ಷೋ ಭವೇದ್ಧಿ ವ: ॥

ವ್ಯಾಸಸೇವಾನಿರತ ಋಜು ಯತಿ ವಾದಿರಾಜರು ದುರ್ವಾದಿಗಳನ್ನು ನಿಗ್ರಹಿಸಿ ನನ್ನ ಪದವಿಗೇರುವರಾಗಿ, ತತ್ತ್ವವಾದ ಸ್ಥಾಪನೆಗೊಂಡ ನಿಮಗೆ ಮುಕ್ತಿಯೊದಗುವುದು — ಎಂಬಲ್ಲಿ ಋಜು ದೇವತೆಗಳ ಉದ್ದೇಶ ವಿಶೇಷದಿಂದ ಮಧ್ವಮತ ಗಟ್ಟಿಗೊಳ್ಳುವ ಅರ್ಥವಿದೆ.

7) ಪದ್ಮಪುರಾಣದ ರೌಪ್ಯಪೀಠ ವರ್ಣನ ಭಾಗ:

ವಾಯುದೇವರು ಮಧ್ವರಾಗಿರುತ್ತ ಅವರನ್ನು ಸೇವಿಸಲು ದೇವತೆಗಳೆಲ್ಲ ಭೂಮಿಗಿಳಿದಿದ್ದರು, ಮಧ್ವ ಶಿಷ್ಯರಾಗಿ ಅವರ ಮತವನ್ನು ಪೋಷಿಸಿದರು. ಅವರಲ್ಲಿ ವಿಷ್ಣುತೀರ್ಥ ಪದ್ಮನಾಭತೀರ್ಥರು ಮುಖ್ಯರು. ವಿಷ್ಣುತೀರ್ಥರು ಇನ್ನೂ ತಪಧರಿಸಿದ್ದು ಮುಂದೆ ಅವರ ಮತವನ್ನು ಪೊರೆಯುವರು. ಅದಕ್ಕೆ ಮುನ್ನ ಇವರ ಪೀಳಿಗೆಯಲ್ಲಿ ಋಜುದೇವತೆ

---

100. ಈ ಮಾತನ್ನು ಲಕ್ಷಾಲಂಕಾರದ ಆರಂಭದಲ್ಲಿಯೇ ವಾದಿರಾಜರೂ ಹೇಳಿದ್ದು, ಸ್ವರೂಪಗೂಹನಾರ್ಥ 'ಮನುಜ ಮಾತ್ರನಾದ ನಾನು ಮಹಾಕಾರ್ಯವನ್ನೆಂದು ಪೂರೈಸಲಿ' ಎಂದಿದ್ದಾರೆ. ವೃಂದಾವನಾಖ್ಯಾನದ —

ಭಾರತಾರ್ಥಂ ಸಮಾಖ್ಯಾಯ ಮಾರುತೇರಿತ ಬುದ್ಧಿನಾ ॥ 4,63 ॥
ಭಾರತೀ ಪತಿವಿದಾಖ್ಯಾತಿ ಭಾರತಾರ್ಥ ಪ್ರಕಾಶನಾತ ॥ 10,65 ॥

ಎಂಬ ನುಡಿಗಳು ಇಲ್ಲಿ ಸಂವಾದಿ ಎನಿಸುತ್ತವೆ.

ವಾದಿರಾಜತೀರ್ಥರೆನಿಸಿ ಬಂದು ಅದನ್ನು ವಿಸ್ತರಿಸುವರು —

> ತತ್ಪೂರ್ವಮಸ್ಯ ವಂಶೇ ಚ ಋಜುಸ್ಥೋ ಹಿ ಸುರೇಶ್ವರಃ
> ವಾದಿರಾಜೋ ಯತಿರ್ಭೂತ್ವಾ ದ್ವೈತವಿಸ್ತಾರಯಿಷ್ಯತಿ ॥

ವಾದಿರಾಜರಿಂದ ತತ್ವವಾದ ನೆಲೆಗೊಂಡು ವಿಸ್ತಾರವಾದುದು ನಿಜವೇ.

8) ಸ್ಕಾಂದ ಪುರಾಣದ ಹೇಳಿಕೆ (ವಾ.ಗು.ಚ.ದಲ್ಲಿರುವುದೂ ಇಲ್ಲಿ ಪ್ರಸ್ತುತ):

ಆಚಾರ್ಯ ಮಧ್ವರು ಅವತರಿಸುವ ಮುನ್ನ, ಋಜುಗಣಸ್ಥ ಲಾತವ್ಯರು ವೇದವತಿಯ ಗರ್ಭದಲ್ಲಿದ್ದು ವಾಯುವಿಗೆಡೆಯಿತ್ತು ತೆರಳುವರು. (ಬಳಿಕ ಲಾತವ್ಯರೂ ವಾಯು ಪದವಿಗೆ ಬರುವರು). ಇವರು ಕಾಲಾಂತರದಲ್ಲಿ ವಾದಿರಾಜರಾಗುವರು. ಸತ್ವಗುಣಾಧಿಕ್ಯ ದೇಹವುಳ್ಳ ಅವರಿಗೆ ಇತರರಂತಹ ಜನನವಿಲ್ಲ —

> ವಾಯೋಃ ಪ್ರವೇಶಪರ್ಯಂತಮತ್ರಸ್ಥಿತ್ವಾಥ ಗಚ್ಛತಿ
> ಇದಂ ಶರೀರಂ ಸಂಪ್ರಾಪ್ಯ ಲಾತವ್ಯೋ ವಾಯುತಾಮಿಯಾತ ॥
> ತತಃ ಕಾಲಾಂತರೇ ಸೋಽಪಿ ವಾದಿರಾಜೋ ಭವಿಷ್ಯತಿ
> ರಜೋಽಧಿಕೇನ ಸತ್ವೇನ ನಿರ್ಮಿತ ತಚ್ಛರೀರಕಂ ॥ ಅ. 4 ॥

9) ಮತ್ತೆ ವಾಮನ ಪುರಾಣದಲ್ಲಿ ಹೇಳಿದ್ದು:

ಅಪರೋಕ್ಷ ವಿಶೇಷವಿರುವ ಬ್ರಹ್ಮಾದಿ ಕಲಿ ಪರ್ಯಂತ ಋಜುಗಳು ಪ್ರಾರಬ್ಧ ಫಲ ಭೋಗಿಗಳು. ಈ ಸರ್ವರಲ್ಲಿ ಹರಿಯಾಜ್ಞೆಯಿಂದ ಬ್ರಹ್ಮನಿಗವತಾರವಿಲ್ಲ, ವಾಯ್ವಾದಿಗಳಿಗುಂಟು ಅವತಾರ ಭರತಖಂಡದಲ್ಲಿ. ವಾಯುವೇ ಹನುಮ. ಭೀಮ ಮಧ್ವರೂಪಧಾರಕ. ರುಕ್ಮಿಣಿಯ ಸ್ವಯಂವರ ಸಂದರ್ಭದಲ್ಲಿ ಯಾರೂ ಅರಿಯದಂತೆ ಅಂತಃಪುರ ಹೊಕ್ಕು ಅವಳ ಪತ್ರ ಪಡೆದುಕೊಂಡು ಕೃಷ್ಣನಿಗೆ ಮುಟ್ಟಿಸಿದ ಬ್ರಾಹ್ಮಣರೇ ಲಾತವ್ಯ ಋಜು. ವಾಯುಪದವೇರತಕ್ಕ ಇವರು ವಾದಿರಾಜ ಯತಿಗಳಾಗಿ, ಆ ಕಲ್ಪಾಂತ ಕೃಷ್ಣನ ವಿಶೇಷ ಕೃಪಾಪಾತ್ರರೆನಿಸಿ, ಕಲಿಯುಗದಲ್ಲಿ ಅವನನ್ನು ಪೂಜಿಸುತ್ತಿದ್ದು, 'ರುಕ್ಮಿಣೀಶ ವಿಜಯ' ರಚಿಸುವರು —

> ಸ್ವಯಂವರ ಸಮುದ್ಯೋಗೇ ರುಕ್ಮಿಣೀ ಪತ್ರಮಾದರಾತ
> ಕೃಷ್ಣಾಯಾದಾತ ಗೃಹೀತ್ವಾ ಯೋಽಹ್ಯಂತಃಪುರಗತೋ ದ್ವಿಜಃ ॥

ಸರ್ವಾದ್ಯಷ್ಟಸ್ತ್ವಥೈವ ವಾಯುರ್ಭೃಗುಲಾತವ್ಯನಾಮಕಃ
ವಾಯುನಾನ್ಯೇನ ಸಮಾಶ್ರಿತೋ ಹ ಯೋಗ್ಯೋಯಂ ಯತಿರೂಪವಾನ ॥
ಕೃಷ್ಣಾರ್ಚಕೋ ಯತಿರ್ಭೂತ್ವಾ ವಾದಿರಾಜೋ ವದಿಷ್ಯತಿ
ಶ್ರೀ ರುಕ್ಮಿಣೀಶ ವಿಜಯಂ ಕಲೌ ಕೃಷ್ಣಪ್ರಸಾದಭಾಕ ॥

10) ಬೃಹನ್ನಾರದೀಯೋಕ್ತ ಋಕ ಸಂಹಿತಾ ವಾಕ್ಯ:[101]

ವಾಯುವಿನ 3 ಅವತಾರ ವರ್ಣಿಸುವ ಬಳಿತ್ಥಾ ಸೂಕ್ತವನ್ನಿಲ್ಲಿ ಲಾತವ್ಯರ 3 ಅವತಾರಗಳಿಗೂ ಅನ್ವಯಿಸಿ ವ್ಯಾಖ್ಯಾನಿಸಿದೆ. (ಬಹುರೂಪೀ ವಾಯು ಬಲ ಜ್ಞಾನಾತ್ಮಕ, ಲೋಕಪೋಷಣೆ— ಚಲನೆಗಳಿಗಾಧಾರ. ಹನುಮಾವತಾರ ರಾಮನ ಸೇವಿಸಿ ಆ ಸತ್ಯರೂಪಿಯ ಸಂದೇಶ ಸೀತೆಗೆ ತಲುಪಿಸಿತು; ಭೀಮನ ಅವತಾರ ಶತ್ರುಗಳ ಸದೆಬಡಿದು ಭುಂಜಿಸುವುದಲ್ಲದೆ ಋಗಾದಿ ಮಗ್ನವಾಯಿತು; ಜ್ಞಾನಶೀಲ ಕರೆವ ದಶಪ್ರಮತಿ ಮಧ್ವ ರೂಪ ಹರಿಗುಣಗಳ ಸಮಾಲೋಚಿಸುವುದು. ಹರಿಪ್ರೇರಿತವಾಗಿ ಇವು ಅಷ್ಟೇಶ್ರೇಷ್ಠ ಅವತಾರ). ಲಾತವ್ಯರ ಭೃಗುನಾಮಕ ಮೂಲರೂಪವು ವಾಯುವಿನಂತೆ ಬಲಾತ್ಮಕ— ಜ್ಞಾನಪೂರ್ಣ— ಜಗತ ಪೋಷಕ— ಸರ್ವಚೇಷ್ಟಕ — ಬ್ರಹ್ಮಾಂಡದಾಚೆ ಸತ್ಯಲೋಕಸ್ಥಿತ— ವಿಶ್ವನಾಯಕ ಹರಿಯ ಬಳಿಯಿದ್ದು ಶಿಷ್ಯರಿಗೆ ಪಂಚರಾತ್ರಾದಿ ಪಾಠಗೈವುದು. ವೃಷನಾಮಕ ನಾಮತೆಯ ರೂಪ ಎಂದರೆ ರುಕ್ಮಿಣೀಪತ್ರ ತಂದು ಕೃಷ್ಣನಿಗಿತ್ತುದು — ಕೃಷ್ಣನಿತ್ತ ಚಿತ್ರಾನ್ನ ಉಂಡು ಅವನ ಪ್ರೀತಿ ಪಾತ್ರವಾದುದು. ವಾದಿರಾಜ ಎಂಬ 3ನೆಯ ರೂಪವೂ ಮೂಲರೂಪದಿಂದ ಭಿನ್ನ. ಹರಿಯಿಂದಲೇ ಈ 3 ಅವತಾರ ನಿರ್ದಿಷ್ಟ —

ಸಹೋರೂಪಸ್ಯದೇವಸ್ಯ ಲಾತವ್ಯಸ್ಯ ಬಲಾತ್ಮಕಂ
ಮೂಲರೂಪಂ ಜ್ಞಾನತತಂ ಜಗದ್ಧಾರಣಕಂ ಯುತಃ ॥
ರೂಪತ್ರಯಾವತಾರಾಯ ನಿಹಿತಂ ಹರಿಣಾ ಸ್ವಯಂ
ಅಂಡಾದ್ಬಹಿಃಸ್ಥಿತಂ ಮೂಲಂ ಸತ್ಯಲೋಕಸ್ಥಿತಂ ಮಹತ ॥
ಗೃಹೀತ್ವಾ ರುಕ್ಮಿಣೀಪತ್ರಂ ಕೃಷ್ಣಾಂತಿಕಮುಪಾಗತಂ
ವಾದಿರಾಜಾಭಿಧಂ ಚೇತಿ ಮೂಲಭೇದವಿವರ್ಜಿತಂ ॥

---

101. "ಛಾಂದೋಗ್ಯ ಭಾಷ್ಯ ಮಾಡುವಾಗ ಸಾಮ ಸಂಹಿತೆಯನ್ನೂ, ತೈತ್ತರೀಯ ಭಾಷ್ಯಮಾಡುವಾಗ ಯಜುಃಸಂಹಿತೆಯನ್ನೂ, ಋಗ್ವೇದ ವ್ಯಾಖ್ಯಾನ ಮಾಡುವಾಗ ಋಕ ಸಂಹಿತೆಯನ್ನೂ ಪ್ರಮಾಣವನ್ನಾಗಿ ಆಚಾರ್ಯರು ಉದಾಹರಿಸಿದ್ದಾರೆ" (ಋಜುತ್ವ ಸಿದ್ಧಾಂತ, ಪು.271). ವಾ.ಗು.ಪ. ಕೆಲ ಸಂಹಿತಾ ಶ್ಲೋಕ ಪುರಾಣೋಕ್ತವೆಂದಿದೆ. (ಅದೇ, ಪು.272).

ಶ್ರುತಿಗೆ 3 ಅರ್ಥ.[102] ಆದ್ದರಿಂದ ಬಳಿತ್ಥಾ ಸೂಕ್ತಕ್ಕೂ ಹರಿ, ವಾಯು, ಲಾತವ್ಯಪರ 3 ಅರ್ಥ. ವಾಯುವಿನ 3 ಅವತಾರಗಳಂತೆ ಲಾತವ್ಯರ 3 ಅವತಾರಗಳು ಶ್ರುತಿಸಿದ್ಧ.[103] ಯುಗಾದಿ ಚತುರ್ವೇದ—ಭಾರತ—ರಾಮಾಯಣ—ಪಂಚರಾತ್ರ ಈ ಏಕನ್ನಾಲೋಚಿಸುತ್ತ, ಜ್ಞಾನದಾಯಕವಾದ ಲಾತವ್ಯರ 3ನೆಯ ರೂಪ ದಶಪ್ರಮತ ಎನಿಸಿದೆ; ವಾದಿಗಳಿಗೆ ಜ್ಞಾನದಾನಗೈವರಲ್ಲಿ ರಾಜ ಎನಿಸಿದೆ. (ವೇತಿ = ಜ್ಞಾನ, ದೇತಿ = ದಾನ, ಇ = ಸ್ವಭಾವವುಳ್ಳ, ರಾಜ = ರಾಜಿಸುವ; ಪೂರ್ಣ ಜ್ಞಾನವಿಲ್ಲದೆ ರಾಜನೆನಿಸುವುದೆಂತು? ದಶ = ಪೂರ್ಣ, ಪ್ರಮತಿ = ಪ್ರಜ್ಞ). ಹರಿಗುಣಗಳ ವರಣ ಪಾಲನಗಳಿಂದ ಪಂಚರ್ಣ ಎನಿಸಿದ ಜ್ಞಾನರೂಪೀ ಭಾರತೀ ಮಧ್ವರಿಂದ ರುದ್ರಾದಿಗಳು ಜ್ಞಾನವಂತರಾದರು. ವಾದಿರಾಜರು ಮಧುಶಾಸ್ತ್ರ—ಮಧ್ವಶಾಸ್ತ್ರಗಳನ್ನು ಚೆನ್ನಾಗಿ ತಿಳಿದು, ಪ್ರಮಾಣವೆನಿಸಿದ ಶ್ರುತ್ಯಾದಿಗಳನ್ನು ಶಿಕ್ಷಾದಿ ಷಡಂಗಗಳಿಂದಾಲೋಚಿಸಿ, ಅವುಗಳಲ್ಲಿ ಅಡಗಿದ ಹರಿಸರ್ವೋತ್ತಮತ್ವವನ್ನು ಸಾಧಿಸಿದರು. ವಿರೋಧಿಗಳ ಪ್ರಶ್ನರೂಪದ ಹುಲ್ಲನ್ನು ತಮ್ಮ ಹುಲ್ಲುಗಳಿಂದ ಕಡಿದರು. ರಮಾನಾರಾಯಣ ಪ್ರೇರಿತವಾದ ಲಾತವ್ಯರ 3 ರೂಪ ತತ್ಕ್ರಿಯೆಯಿಂದ ಪರಿಶುದ್ಧವಾದುವು —

ಯುಗಾದ್ಯ ಇತಿಹಾಸಾಶ್ಚ ಪುರಾಣಂ ಪಂಚರಾತ್ರಕಂ
ತದ್ವಿಚಾರಪರಂ ಪ್ರೋಕ್ತಂ ಜ್ಞಾನದೋಗ್ಧೃ ತೃತೀಯಕಂ ॥

ಲಾತವ್ಯಸ್ಯ ಯುಜೋಸ್ತಸ್ಯ ದಶಪ್ರಮತಿನಾಮಕಂ
ವಾದಿನಾಂ ಜ್ಞಾನದಾನೈಕಶೀಲಾನಾಂ ರಾಜನಂ ಯತಃ ॥

ವೇತಿ ಜ್ಞಾನಂ ಸಮುದ್ದಿಷ್ಟಂ ದೇತಿದಾನಮುದಾಹೃತಂ
ಪ್ರೋಕ್ತಂ ಶೀಲಮಿಕಾರೇಣ ರಾಜನಂ ರಾಜಶಬ್ದಿತಂ ॥

---

102. 'ತ್ರಯೋರ್ಥಾ ಸರ್ವ ವೇದೇಷು' — ವೇದಕ್ಕೆ 3, ಭಾರತಕ್ಕೆ 10, ವಿಷ್ಣುಸಹಸ್ರನಾಮಕ್ಕೆ 100 ಅರ್ಥವೆಂದರು ಮಧ್ವರು (ಮಧ್ವವಿಜಯ 6,4—6). ಪಂಡಿತರು ಸವಾಲೆಸೆಯಲು, ತಾವೊರೆದರ್ಥ ಪುನರುಚ್ಚರಿಸಹೇಳಿದರು; ಪಂಡಿತರಿಗಶಕ್ಯವೆನಿಸಿ ಸೋತರು.

103. ಪವಮಾನಾ ಇತಿಪ್ರೋಕ್ತಾಃ ಮುಖ್ಯವಾಯುತ್ವಯೋಗಿನಃ
ದ್ವಾತ್ರಿಂಶಲ್ಲಕ್ಷಣೈಃ ಸಮ್ಯಗ್ಯುಕ್ತಾ ವಾಯುತ್ವ ಯೋಗ್ಯಕಾಃ
(ಮಹಾಸಂಹಿತೋಕ್ತ, ಬೃಹದ್ಭಾಷ್ಯ 3—3).

'ಪವಮಾನ' ನಾಮ ವಾಯು—ಭಾವಿ ವಾಯು ಇಬ್ಬರಿಗೂ ಉಂಟು, ಏಕೆಂದರೆ ಅವರೂ 32 ಲಕ್ಷಣಗಳ ಉತ್ತಮ ಶರೀರಕರು. (ವಿವರಗಳಿಗೆ 'ಋಜುತ್ವ ಸಿದ್ಧಾಂತ'ದ ಪು.253, 278, 310 ನೋಡಬಹುದು).

ವಾದಿರಾಜಾಭಿಧಂ ರೂಪಂ ದಶಪ್ರಮತಿ ಸಂಜ್ಞಿತಂ
ಪೂರ್ಣಜ್ಞಾನಂ ವಿನಾ ಪ್ರೋಕ್ತಂ ರಾಜನಂ ತು ಕಥಂ ಭವೇತ್ ॥

ದಶೇತಿಪೂರ್ಣಮುದ್ದಿಷ್ಟಂ ಜ್ಞಾನಂ ಪ್ರಮತಿಸಂಜ್ಞಿತಂ
ಪ್ರಕೃಷ್ಟ ಜ್ಞಾನರೂಪೋ ಯೋ ಭಾವೀ ಮಧ್ವಃ ಪ್ರಕೀರ್ತಿತಃ ॥

ಮಧುರಶಾಸ್ತ್ರ ಮಧ್ವಶಾಸ್ತ್ರಂ ಸಮ್ಯಗವೇತ್ತಾ ಗುರುಃ ಸದಾ
ಪ್ರಶ್ನರೂಪಾಂಸ್ತ್ರಣಾದೀನ ಸ ದಂತೇಷ್ವಾರೋಪ್ಯ ಜಕ್ಷತಿ ॥

ಲಾತವ್ಯಾಚಾರ್ಯವರ್ಯಸ್ಯ ಯಸ್ಯ ರೂಪತ್ರಿಕಂ ಹ್ಯಭೂತ್
ರಮಾನಾರಾಯಣೌ ಸಾಕ್ಷಾದಿನ್ಯತಃ ತತ ಕೃಪಾಶ್ರಯಃ ॥

11) ಸರಸಭಾರತೀವಿಲಾಸಃ

ವಾದಿರಾಜರು ಮಧ್ವರಂತೆ ಸ್ವರೂಪ ವ್ಯಕ್ತಪಡಿಸಿಕೊಳ್ಳಬೇಕಾದ ಸಂದರ್ಭವಿರದ ಕಾರಣ, ಹಾಗೂ ತದನುಗ್ರಹವೇ ದೇವತೆಗಳ ಧರ್ಮವಾದ್ದರಿಂದ, ಸ್ಪಷ್ಟ ಹೇಳಿಕೊಳ್ಳದೆ ತಮ್ಮ ಜೀವಿತ ಕೃತಿಗಳಲ್ಲಿ ಸೂಚಿಸಿದ್ದಾರೆ. 'ಸರಸಭಾರತೀವಿಲಾಸ'ದ ಆದಿಗೆ —

ಕರ್ತ್ರೇ ಧರ್ತ್ರೇಚ ಸಂಹರ್ತ್ರೇ ಪಾತ್ರೇ ಚ ಹಯವಕ್ತ್ರವೇ
ಪಿತ್ರೇ ಧಾತ್ರೇ ಧಿಯಾಂ ದಾತ್ರೇ ಸತ್ರೇ ಜಾತಾಯ ತೇ ನಮಃ ॥ 1,25 ॥

ಎಂದರೆ, ಸೃಷ್ಟಿ ಸ್ಥಿತಿ ಸಂಹಾರಕ — ಸಜ್ಜನಪಾಲಕ ಹಯಗ್ರೀವನಿಗೆ, ತಮ್ಮ ತಂದೆ — ತಾಯಿ — ಜ್ಞಾನದಾತ ಬ್ರಹ್ಮನ ಸತ್ರಯಾಗದಲ್ಲುದಿಸಿದವನಿಗೆ ನಮನ ಎಂದಿದ್ದಾರೆ.[104]

ಕೃಪಯಾ ಮಾಂ ಕೇವಲಯಾ ಗೃಹಾಣ ಮಧುರಾಧಿಪ
ಇತಿ ಸ್ವಪಿತರಿ ಶ್ರೀಶೇ ಭಕ್ತ್ಯಾ ಚತುಸ್ತು ಪಿತಾಮಹಃ ॥ 10,34 ॥

ಯದರ್ಶಯತ ಸ್ವದೋಷಾನ್ಯಃ ಕುಲವೃದ್ಧೋ ಗುರುರ್ಮಮ
ತಸ್ಮಾದ್ದುಗ್ಧರೂಣಾಮಾದಾರೇ ಕುಲಾಚಾರೇ ಚ ಧೀಮತಾಂ ॥ 10,35 ॥

---

104. 'ಪುರುಷಾಖ್ಯನೆಂಬ ಅಜನಿಂದ ಬಲಾತ್ಮಕ ಮರುತಸೂತ್ರಸು ಭಾರತಿ ಜನಿಸಿದರು'
(— ವಿಜಯದಾಸ, ಸೂಕ್ಷ್ಮಸೃಷ್ಟಿ ಸುಳಾದಿ, ಮು.ಕ. ಲಿಂಗಸುಗೂರ ಪ್ರಕಟಿತ).
ವೇದವ್ಯಾಸರು ಬದರಿಗೈದಿದ ವಾದಿರಾಜರನ್ನು 'ನಿನ್ನ ಮಗು' ಎಂದು ರಮಾದೇವಿಗಿತ್ತರು (ಸಾ.ವ್ಯ.ಅ.4,14).

ಇಂತು ಸ್ವಪ್ನದಿ ತೊಂಡಾಡಿಸಿಕೊಂಡ ಲಕ್ಷ್ಮೀ
ಕಾಂತನ ಕಂದನೆನಿಸುವ

— ಎಂದು ಲಕ್ಷ್ಮೀಶೋಭಾನೆಯಲ್ಲಿ (109) ತಮ್ಮನ್ನು ವಿಶೇಷಿಸಿಕೊಂಡಿದ್ದಾರೆ ವಾದಿರಾಜರು; ಇಲ್ಲಿ ಸ್ವಪ್ನವೆಂದರೆ ಋಜುಗಳ ಧ್ಯಾನ ಎಂಬರ್ಥವಿದೆ.

ಕೇವಲ ಕೃಪೆಯಿಂದೆನ್ನ ಸ್ವೀಕರಿಸು ಕೃಷ್ಣ ಎಂದು ತನ್ನ ತಂದೆಯಲ್ಲಿ ಭಕ್ತಿಯಿಂದ ತನ್ನ ದೋಷ ಪ್ರಕಟಿಸುವ ಪಿತಾಮಹನು ನಮ್ಮ ಕುಲದ ಹಿರಿಯನಾಗಿದ್ದು, ನಾವೂ ಅವನನ್ನು ಅನುಸರಿಸುವೆವೆಂದಿದ್ದಾರೆ; ಎಂದರೆ ತಾವು ಋಜು ವಂಶದವರೆಂದಾಯಿತು. ಅಲ್ಲದೆ,

ಮಹಾಕಾವ್ಯಮಿದಂ ಚಕ್ರೇ ವಾದಿರಾಜೋ ಮಹಾಮತಿಃ ॥ 12,37 ॥

ಎಂಬಲ್ಲಿ ಮಧ್ವರಂತೆ ತಾವೂ ಪೂರ್ಣಬೋಧರೆಂದು ಸೂಚಿಸಿಕೊಂಡಿದ್ದಾರೆ. (ಮಹಾ ಪ್ರತಿಭೆ ಋಜುಲಕ್ಷಣವೆಂದು 'ಸತ್ತತ್ತ್ವರತ್ನಮಾಲಾ'ದಲ್ಲಿ).

12) ತೀರ್ಥ ಪ್ರಬಂಧ:

ಮೂಕಾಂಬಿಕೆಯನ್ನು ವರ್ಣಿಸುವಲ್ಲಿ ವಾದಿರಾಜರು ತಮ್ಮನ್ನು 'ಏಕಾಂತಿಕ ಜನ'[105] ಎಂದುಕೊಂಡುದು (ಪಶ್ಚಿಮ ಪ್ರಬಂಧ 56) ಏಕಾಂತ ಭಕ್ತತ್ವ ದ್ಯೋತಕ; ಇದು ಋಜು ಲಕ್ಷಣ. ಇನ್ನೊಂದು ಲಕ್ಷಣದಂತೆ ನಿಸ್ಪೃಹರಾದ ಕಾರಣ ಆಖ್ಯಾನದಲ್ಲಿ ನೈವೇದ್ಯನನಗಾಗಿ ಅಲ್ಲ, ನಿಮ್ಮನುಗ್ರಹಾರ್ಥವೆಂದರು (10,85). ಅವರು ಮೋಕ್ಷಾಪೇಕ್ಷಿಗಳೂ ಅಲ್ಲವಾಗಿ, ಕಂಚಿಗೆ ಹೋದಾಗ ವರದರಾಜನನ್ನು ಕುರಿತು ನಿನ್ನನ್ನೇ ಕೊಡು' ಇನ್ನೇನೂ ಬೇಡ ಎಂದಿದ್ದಾರೆ —

ಯಾಚೇ ವರದರಾಜಂ ತ್ವಾಂ ಕಾಂಚೀಶೇಹ ನ ಕಿಂಚನ
ಚೇತನಾ ಚೇತನ ಜಗದ್ವರಂ ತ್ವಾ ಮೇವದೇಹಿ ಮೇ ॥ ಪೂ.ಪ್ರ.32

ಇದೇ ಕೃತಿಯಲ್ಲಿ 'ಕಲಿಂ ಜಯ ತದ್ವಿಧಿಷುಂ' ಎಂಬಲ್ಲಿ ಮೇಲ್ಲೋಕಕ್ಕೆ ತಮ್ಮಲ್ಲಿ ಪ್ರವೇಶಿಸಬೇಕೆಂಬ ಕಲಿಯನ್ನು ಗೆಲ್ಲೆಂಬ ಅರ್ಥವಿದ್ದರೂ, ಕಲಿ ಪ್ರತಿಕ್ಷೇಪಕರಾಹಿತ್ಯ ಧ್ವನಿತವಾಗಿದೆ (ಪೂ.ಪ್ರ.4).

13) ರುಕ್ಮಿಣೀಶ ವಿಜಯ:

ಕಾವ್ಯಾರಂಭದಲ್ಲಿ (1,7) 'ಗಾಳಿಯೇ ತಾವರೆಯ ಗಂಧ ತೆಗೆದುಕೊಂಡು ಎಲ್ಲೆಡೆ ಬೀರಲು ಸಮರ್ಥವಾದಂತೆ, ಪ್ರಾಣದೇವರೇ ಪರಮಾತ್ಮನ ಮಹಿಮೆಯನ್ನು ವರ್ಣಿಸಬಲ್ಲರು; ಮಧ್ವರೂಪೀ ವಾಯು ವರ್ಣಿಸಿದ ಮಹಿಮೆಯನ್ನು ಆಯ್ದುಕೊಳ್ಳುವೆ ನನ್ನ ವಾಣೀಮುಖ

105. 'ಲೋಕಭರಿತನೋ' ಎಂಬ ಹಾಡಿನಲ್ಲೂ 'ಏಕಾಂತಭಕ್ತರ ಪೊರೆವ ಕೃಷ್ಣ' ಎಂದಿದ್ದಾರೆ.

ಪರಿಮಳಿಸಲು" ಎಂದಿದ್ದಾರೆ ವಾದಿರಾಜರು. ವಾಣೀಮುಖವೆಂಬುದಕ್ಕೆ ನನ್ನ ನುಡಿಯ ಆರಂಭ ಎಂದು ವಾಚ್ಯಾರ್ಥ, ಭಾವೀಭಾರತೀಪತಿತ್ವ ಸೂಚ್ಯಾರ್ಥ —

'ವಾಣೀಮುಖಂ ವಾಸಯಿತುಂ ವೃಣೋಮಿ' ॥

ರುಕ್ಮಿಣೀ ಪತ್ರ ಒಯ್ದವರನ್ನು ಭಾಗವತವು 'ಕಶ್ಚಿದ ದ್ವಿಜವರ ಶ್ರೇಷ್ಠ' ಎನ್ನುವಲ್ಲಿ (ಕ= ಬ್ರಹ್ಮ) ಭಾವೀ ಬ್ರಹ್ಮತ್ವಸೂಚಿತ (ಚಿತ್= ಜ್ಞಾನಿ) —

ಕ ಶಬ್ದೋಯಂ ಬ್ರಹ್ಮವಾಚೀತಿ ಭಾವೀ ಬ್ರಹ್ಮಾತ್ರ ಕೀರ್ತಿತಃ ॥ ವಾ.ಗು.ಚ.8,19.

ಅಲ್ಲದೆ ದ್ವಿಜ = ಗರುಡ, ವರ = ಶ್ರೇಷ್ಠ ಎಂಬ ಅರ್ಥಬಲದಿಂದ ವಾಯುವೇಗದಲ್ಲಿ ದ್ವಾರಕೆಗೈದಿದ ಭಾವೀವಾಯುವಿನ ಸೂಚನೆ ಇದೆ. ಈ ಸಂದರ್ಭಕ್ಕೆ —

ದ್ವಿಜೋತ್ತಮಂ ಹರೇಃ ಪದೋಃ ಸಕಾಶಮಾಶ್ವಯೋಜಯತ ॥
ಮ.ಭಾ.ತಾ.ನಿ.17,142.

ಎಂಬ ಮಧ್ವೋಕ್ತಿ (ಗರುಡೋತ್ತಮ ವಿಪ್ರನನ್ನು ಬೇಗ ಕಳಿಸಿದರೆಂಬ) ಪೋಷಣೆ ನೀಡಿದೆ, ಸ್ವತಃ ವಾದಿರಾಜರು —

ಅಜಯಾ ಪ್ರೇಷಿತಂ ಪತ್ರಂ ದ್ವಿಜಃ ಕಶ್ಚಿದುಪಾಹರತ್ ॥ ರು.ವಿ.14,38

ಎನ್ನುವಲ್ಲಿ ಸ್ವಪ್ರಶಂಸೆ ಇಲ್ಲದಂತೆ ಯಾರೋ ಒಬ್ಬ ಬ್ರಾಹ್ಮಣ ಎಂದು ನಿರ್ದೇಶಿಸಿಕೊಂಡಿದ್ದಾರೆ. ಕಃ = ಬ್ರಹ್ಮ, ಚಿತ = ಜ್ಞಾನಿ ಎಂಬರ್ಥ ಸೂಚಿತವಾಗಿವೆ. (ಅಜಯಾ = ಜನ್ಮವಿರದವಳು = ಲಕ್ಷ್ಮಿ ಎಂಬುದೂ ಸೂಚಿತ.) ( ಶ್ರೀಕೃಷ್ಣ ಬಾಲಲೀಲೆ — ಕನ್ನಡ ತಾತ್ಪರ್ಯ ನಿರ್ಣಯಗಳಲ್ಲಿಯೂ 'ಮನೆಗೆ ಒಬ್ಬ ದ್ವಿಜನು ಬಂದ' (ಉ.93), 'ವಿಪ್ರನ ಕೈಯ ಕಳಿಸಲಿಕ್ಕೆ' (2,106) ಎಂದಿದ್ದಾರೆ.) ರುಕ್ಮಿಣಿಯ ಪತ್ರವನ್ನೋದಿದ ಕೃಷ್ಣ ಸದಯನಾಗಿ ಬ್ರಾಹ್ಮಣನ ಕೈಯನ್ನು ತನ್ನ ಕರಪಲ್ಲವದಿಂದ ಹಿಡಿದುಕೊಂಡ (ರಾಮ ಮಾರುತಿಯನ್ನಾಲಂಗಿಸಿದಂತೆ); ಇನ್ನು ರುಕ್ಮಿಣಿಯ ಕೈಹಿಡಿವನೆಂಬಲ್ಲಿ ಅನುಮಾನವೇ? (ರು.ವಿ.14,55). ಆದರೆ ಶಿಶುಪಾಲ ಮಾತ್ರ ಸಿಟ್ಟಾಗಿ ಬ್ರಾಹ್ಮಣನಿಗಿತ್ತ ಅವಿವಾಹ ಶಾಪವನ್ನು ಧನ್ವಂತರಿಯಾದ ಹರಿ ವಾದಿರಾಜ ಯತಿಯವತಾರಕ್ಕನ್ವಯಿಸಿ ಉಪಕರಿಸಿದ್ದು ವಾದಿರಾಜರಿಂದಲೇ ಉಕ್ತ (ಸ್ವಾ.ವೃ.ಅ. 7,32—33).

14) ವೃಂದಾವನಾಖ್ಯಾನ:

ಈ ಜೀವಿತೋತ್ತರ ಕೃತಿಯಲ್ಲಿ ವಾದಿರಾಜರ ಸ್ವರೂಪ ಸ್ಪಷ್ಟವಾಗಿ ವ್ಯಕ್ತವಾಗಿದೆ —

1–14ರಲ್ಲಿಯೂ 'ರುದ್ರಾದಿ ದೇವತೆಗಳೆಲ್ಲ ಪಂಚವೃಂದಾವನದಲ್ಲಿ ಅಶ್ವಾಸ್ಯನನ್ನಾರಾಧಿಸುವರು' ಎಂಬಲ್ಲಿಯೂ ಹರಿಯುಪಾಸನೆಗೆ ತಾವು ಪ್ರತಿಮಾ ಎಂದು ಧ್ವನಿಸಿದ್ದಾರೆ; ಹರಿಯುಪಾಸನೆಗೆ 'ವಿಶಿಷ್ಟ ಪ್ರತಿಮಾ ವಾಯುರೇವ' ಎಂದಿದೆ ಛಾಂದೋಗ್ಯ ಭಾಷ್ಯ; ಇದು ವಾದಿರಾಜರ ಋಜುತ್ವ ದ್ಯೋತಕಾಂಶ. ಅಂಥವೇ ಮತ್ತೂ ಕೆಲ ನುಡಿಗಳಿವು: "ನನ್ನನ್ನು ಋಜು ಎಂದರಿತವ ಮುಕ್ತ (3,7); ವಿಷ್ಣು ತತ್ತ್ವನಿರ್ಣಯಿಸಲು ನಾನು ಬ್ರಹ್ಮನ ಬಲಗಿವಿ–ವಾಯುವಿನ ಎಡಗಿವಿಗಳಲ್ಲಿ ಸದಾ ಸಂವಾದಿಸುವೆ –

ಬ್ರಹ್ಮಣೋ ದಕ್ಷಿಣೇ ಕರ್ಣೇ ವಾಯೋಃ ಕರ್ಣೇ ತು ವಾಮಕೇ
ಸಂವಿದಂತು ಕರೋಮ್ಯದ್ಯ ವಿಷ್ಣೋಸ್ತತ್ತ್ವಸ್ಯ ನಿರ್ಣಯೇ ॥ 4,49.

ಮುಂದಿನ ಕಲ್ಪದಲ್ಲಿ ನಾನು ಶ್ವಾಸಪ್ರಣೀತ (6,71); ನನ್ನ ಜೀವೋತ್ತಮತ್ವ ತಿಳಿದವರೆಲ್ಲ ನನಗೆ ಪ್ರಿಯರು (8,52); ಬ್ರಹ್ಮ–ವಾಯುಗಳ ವೈಭವ ಹೊಂದಿ ಹರಿಯನುಗ್ರಹ ಪಾತ್ರನಾಗಿರುವೆ (21,10).

ಹಂಸಮಂತ್ರ ಜಪಿಸುವ ವಾಯುದೇವರು ಮಧ್ವರಾಗಿ ಜ್ಞಾನಸಾಮ್ರಾಜ್ಯ ಪಾಲಿಸಿದಂತೆ ವಾದಿರಾಜರು ಯುವರಾಜರಾಗಿ ಅದನ್ನು[106] ಪಾಲಿಸಿದರು, ಸಜ್ಜನರನ್ನುದ್ಧರಿಸಿ ಹರಿಯನ್ನು ಮೆಚ್ಚಿಸಿದರು, (ಋಜು ಯೋಗಿ ಯಾದ್ದರಿಂದಲೇ ಜಯತೀರ್ಥರ ಪ್ರಮಾಣ ಪದ್ಧತಿ ಯಂತೆ 'ಆಲೋಚನಯಾ ಸರ್ವವಿಷಯಕಂ ಜ್ಞಾನಂ ಋಜು ಯೋಗಿಜ್ಞಾನಂ' ಎನಿಸಿ)

---

106 ವಾದಿರಾಜರ ಋಜುತ್ವ ಅವರ ವ್ಯಕ್ತಿ ಮಹತ್ವದ ಮುಖ್ಯಾಂಶವೆನಿಸಿದ್ದು, "ಸ್ವಪ್ನ ಸಮುದ್ರದಿಂದ 22 ಅಧ್ಯಾಯಗಳ ಗ್ರಂಥಚಂದ್ರನು ಅದ್ಭುತ ರೀತಿಯಲ್ಲಿ ಅವತರಿಸಿ ದಿಗಂತವಾಗಿ ಅವರ ದೇವತಾ ಮೂಲ ರೂಪವನ್ನು ಬೆಳಗಿರುತ್ತಾನೆ. ಪುರಾಣ ಪ್ರಮಾಣಗಳೆಂಬ ರತ್ನಗಳನ್ನು ಶೋಧಿಸಿ, ವಾ.ಗು.ಚ. ಮುಂತಾದ ಗ್ರಂಥವನದಿಂದ ಸಂಗ್ರಹಿಸಿ, ಅವುಗಳ ಉಜ್ವಲ ಕಾಂತಿಯಲ್ಲಿ ಕಣ್ಣುಬಿಟ್ಟು ನೋಡುವ ಅಧಿಕಾರಿಗಳಿಗೆ ವಾದಿರಾಜ ಋಜುತ್ವ ತತ್ತ್ವವು ಸ್ಫುಟವಾಗಿ ಕಾಣುತ್ತದೆ" (ಋಜುತ್ವ ಸಿದ್ಧಾಂತ, ಪು.308–9.) ವಾದಿರಾಜರಂಥ 'ಪ್ರಚಂಡ ಮಾಧ್ವಮುನಿ' ವೃಂದಾವನಾಖ್ಯಾನದಲ್ಲಿ 'ಕೋ ವಾ ಮತ ಸದೃಶೋ ಯತಿಃ' ಎಂದುದು ಸಮುಚಿತ ಸಂವಾದ ಹೊಂದಿದೆ ರಾಘವೇಂದ್ರ ಗುರುಗಳ ಈ ಶ್ಲೋಕದಿಂದ –

ಕಾಪಾರ್ಧಾಂಗಂ ಪುರಾರೇಃ, ಕಿಟವರದಿಲಸದ್ದಂಷ್ಟ್ರಯಾಧಾರಿ ಕಾಷಾ,
ಕೋ ವಾ ಶೀತೇಂಬುರಾಶೌ, ಯಮುಧಿಧರಣಧ್ವೈಃ ಪ್ರಾಪ್ಯತೇ ಕೋಸು ಶೌರ್ಯೈಃ ॥
ಕೋ ವಾ ನೈವಾಸ್ತಿ ಲಕ್ಷ್ಮೀ ದಿತಿಜಮಥನಯೋಃ, ಕೋ ಗುರುರ್ನಿರ್ಜರಾಣಾಂ,
ಕೋ ವಾ ವಾಚೋಽಕ್ಷೀ ಧರಿತ್ರ್ಯಾಂ, ಪ್ರತಿವಾದನಗತೈಃ ಮಧ್ಯವರ್ಯೈರ್ಮುನೀಂದ್ರೈಃ
(ಸುಧೀಂದ್ರ)

...

ಮೂಲಕ ಸೋದಾ ವಾದಿರಾಜರಲ್ಲಿಗೈತಂದು ಸೋದೆಯೂ ಪ್ರಸಿದ್ಧ ಕ್ಷೇತ್ರವೆನಿಸಿತು.[108]

4. <u>ದಾಸರ ಪದಗಳ ಋಜುದರ್ಶನ</u>: ಹರಿಯ ದಾಸರಾದ ಮಧ್ವರ ಪ್ರೇರಣೆಯಿಂದ ಮೊದಲಾದ ದಾಸ ಸಾಹಿತ್ಯ ನರಹರಿ ತೀರ್ಥ—ಶ್ರೀಪಾದರಾಜ—ವ್ಯಾಸರಾಯರಲ್ಲಿ ಕ್ರಮವಾಗಿ ಬೆಳೆಯುತ್ತಾ ಬಂದ ಹಿನ್ನೆಲೆ ವಾದಿರಾಜರಿಗುಂಟು. ಅವರ ಸಮಕಾಲೀನ ವ್ಯಾಸರಾಯ —ಪುರಂದರ— ಕನಕದಾಸರು ವಾದಿರಾಜರ ಸ್ವರೂಪವರಿತಿದ್ದರೂ ಅವರ ಜೀವಿತ ಕಾಲದಲ್ಲಿದ್ದರಾಗಿ ವ್ಯಕ್ತಪಡಿಸಲಿಲ್ಲ. ಆದರೆ ನಂತರದ ಎಲ್ಲ ದಾಸರೂ ಸಾಮಾನ್ಯವಾಗಿ ವಾದಿರಾಜರನ್ನು ಋಜು ಯೋಗಿ ಎಂದೇ ಕಂಡಿದ್ದಾರೆ.[109] ಸಂಸ್ಕೃತ ಕೃತಿಗಳಲ್ಲಿ ಸೂಚಿತವಾದ ಋಜುತ್ವವನ್ನವರು ಕನ್ನಡ ಕೀರ್ತನೆಗಳಲ್ಲಿ ಪಡಿಮಾಡಿಸಿದ್ದಾರೆ ಜನಸಾಮಾನ್ಯರಿಗಾಗಿ.[110]

ಈ ಋಜುತ್ವದಿಂದ ವಾದಿರಾಜರು ಕನ್ನಡದ ಹರಿದಾಸರೆಲ್ಲರ ಹಿರಿಯರೆನಿಸುವರು.

ವಾದಿಗಳೆಲ್ಲರನೇ ಗೆದ್ದ ವಾದಧೀರನೇ
ವಾದಿರಾಜ ಗುರುರಾಯ ಸಾಧುಪ್ರಿಯಮಾಗೇಯಕಾಯ ॥ ಪ ॥

ಹತ್ತಿದೆ ಮುಕ್ತಿನ ಗದ್ದಿಗೆಯನು ॥ 2 ॥

ನಿನಗೆ ಎಣೆಗಾಣೆ ನವ
ದಿನಪ ತೇಜ, ಮಧ್ವಮುನಿಯ
ಮನದೊಡೆಯ... ॥ 3 ॥

ಎಂಬಲ್ಲಿ ವಾದಿರಾಜರ ಸ್ಥಾನಮಾನ ತಾನೇ ತಾನಾಗಿ ಧ್ವನಿತವಾಗುವುದಲ್ಲವೇ?

---

108. ವ್ಯ.ರ.ಸಂ.2, 9ನೆಯ ಪದ್ಯ ಇಲ್ಲಿ ಸಂವಾದಿ.
"ಅಂತೂ ವಾದಿರಾಜ ಗುರುಗಳು ಆನಂದತೀರ್ಥರಿಗೆ ಸರಿಸಮಾನರಾಗಿ ಅವರು ಮಾಡಿದ ಮಹಾ ಕಾರ್ಯಕ್ಕೆ ಸಮಾನವಾದ ಕಾರ್ಯಗಳನ್ನು ಬಹಳವಾಗಿ ಮಾಡಿ ತಾವು ಭಾವಿ ಸಮೀರರೆಂಬುದನ್ನು ವ್ಯಕ್ತಗೊಳಿಸಿದರು" (ರಜತಪೀಠ, 92, ಅಲೆವೂರು ಸೀತಾರಾಮಾಚಾರ್ಯ).

109. "ದಾಸಕೂಟದವರೆಲ್ಲ ವಾದಿರಾಜ ಋಜುತ್ವದ ಉಪಾಸಕರೇ" (ಋಜುತ್ವ ಸಿದ್ಧಾಂತ 68). ಎಲ್ಲ ದಾಸಕೂಟದ ಮಹಿಮಾ ಗಾಯಕರೂ ವಾದಿರಾಜರನ್ನು ಋಜುಗಳೆಂದೇ ಹೇಳಿದ್ದಾರೆ" (ಕರ್ನಾಟಕ ಭಕ್ತವಿಜಯ, 1—127).

110. ಅನೇಕರ ಸ್ವರೂಪೋಕ್ತಿ ಸಂಸ್ಕೃತ ಕೃತಿಗಳಿಗಿಂತ ಇವುಗಳಲ್ಲೇ ಹೆಚ್ಚಾಗಿದ್ದು ನಮ್ಮ ಜನಮನಕ್ಕೆ ಮುಟ್ಟಿ ದಾಸರಪದಗಳೂ ಶಿಷ್ಟ ಸಂಪ್ರದಾಯವೆನಿಸಿವೆ; ಕಾರಣ ಕನ್ನಡ ಕೃತಿ ಎಂದು ಇವನ್ನು ಅವಗಣಿಸುವಂತಿಲ್ಲ.

ಪುರಂದರದಾಸರು ವಾದಿರಾಜರಂತಹರನ್ನು ಶಿಷ್ಯರನ್ನಾಗಿ ಪಡೆದೆ ಎಂದು ವ್ಯಾಸರಾಯರನ್ನು ವರ್ಣಿಸಿದ್ದರೂ, ಉಡುಪಿಗೆ ಯಾತ್ರೆ ಮಾಡಿದ್ದರೂ ವಾದಿರಾಜರ ಬಗ್ಗೆ ನೇರವಾಗಿ ನುಡಿದಂತಿಲ್ಲ.[111] ಆದ್ದರಿಂದ ಅವರ ಅಂಕಿತದಲ್ಲಿರುವ ಎರಡು ಹಾಡುಗಳ ಉಲ್ಲೇಖವೂ ಪ್ರಕ್ಷಿಪ್ತವೆನ್ನಬೇಕಿದೆ —

ಕಂಡೆ ಕಂಡೆ ರಾಜರ ಕಂಡೆ ಕಂಡೆ ॥ ಪ ॥
......................ಯ
ದ್ವಂದ್ವ ಮಾರುತಿ ಪದಕೆ ಬರುವನ ॥ ಅ.ಪ. ॥
ಪಂಚವೃಂದಾವನದಿ ಮೆರೆಯುವ ॥ 1 ॥
........................
ಶಂಕೆ ಬಿಡಿಸುವ ಶಂಕರೇಶನ
........................॥ 2 ॥
ಭುಜಗೇಶಾಮರೇಂದ್ರ ಪಂಡಿತ
ನಿಜಪುರಂದರವಿಠ್ಠಲೇಶನ
ಭಜನೆ ಮಾಡುವ ಭಾವಿ ಮರುತರ ॥ 3 ॥

"ಈ ಕೀರ್ತನೆ ಪುರಂದರದಾಸರದಲ್ಲ ಎಂದು ಖಚಿತವಾಗಿ ಹೇಳಬಹುದು. ವಾದಿರಾಜರು 1600ರಲ್ಲಿ ನಿರ್ಯಾಣ ಹೊಂದಿದರು. 1565ರಲ್ಲಿ ನಿರ್ಯಾಣ ಹೊಂದಿದ ಪುರಂದರದಾಸರು "ಪಂಚವೃಂದಾವನದಿ ಮೆರೆಯುವ" ಎಂದು ವಾದಿರಾಜರನ್ನು ವರ್ಣಿಸುವುದು ಸಾಧ್ಯವಿಲ್ಲ. ಐತಿಹಾಸಿಕ ವಿಸಂಗತಿ ತುಂಬಿದ ಕೀರ್ತನ ಪ್ರಕ್ಷಿಪ್ತ ಎಂದು ಸುಲಭವಾಗಿ ಹೇಳಿಬಿಡಬಹುದು" (ಪ್ರಸಾದಯೋಗ, 122). ಆದರೆ ಇದು ಯಾರ ರಚನೆ ಎಂದು ಹೇಳುವುದು ಅಷ್ಟು ಸುಲಭವಲ್ಲ; ಯಾರು ರಚಿಸಿದ್ದರೂ ವಾದಿರಾಜರ ಋಜು ಸ್ವರೂಪಕ್ಕೆ ಮಾತ್ರ ಬಾಧೆಯಿಲ್ಲ. ಇದರಂತೆ 'ಸಂಕೀರ್ಣ'ದಲ್ಲಿ ಪ್ರಕಟವಾದ 'ಈ ಮರ್ತ್ಯದೊಳಗಿಲ್ಲ' ಎಂಬ ಸುಳಾದಿಯ 3ನೆಯ ನುಡಿಯಲ್ಲಿ —

ಜಯ ಸೋದೆಯಲಿ ನೆಲಸಿ ಮೆರೆವ ತ್ರಿವಿಕ್ರಮರಾಯ
....................................
ಜಯ ವಾದಿರಾಜಪ್ರಿಯ ಹಯವದನ

---

111. 'ಕಂಡೆ ನಾ ಉಡುಪಿಯ ಕೃಷ್ಣರಾಯನ' ಎಂಬುದರಲ್ಲಿ 'ಅಷ್ಟಮುನಿಗಳ ಕಂಡೆ' ಎಂದಿದೆ.

ಎಂದು ಬರುತ್ತದೆ. "ವಾದಿರಾಜರು ಸೋದೆಯಲ್ಲಿ ತ್ರಿವಿಕ್ರಮನನ್ನು ಪ್ರತಿಷ್ಠಿಸಿದ್ದು 1582ರಲ್ಲಿ. ಪುರಂದರದಾಸರ ನಿರ್ಯಾಣವಾದದ್ದು 1565ರಲ್ಲಿ. ಎಂದಮೇಲೆ ಈ ಸುಳಾದಿಯನ್ನು ಪುರಂದರದಾಸರು ರಚಿಸುವುದು ಸಾಧ್ಯವೇ?" (ಪ್ರಸಾದಯೋಗ, 118; ಕಟ್ಟಿಯವರ 'ಕನಕದಾಸ'ದಂತೆ ದಿವಾಣಜಿಯವರೂ ವರ್ಷಗಳನ್ನು ತಪ್ಪಾಗಿ ಕಾಣಿಸಿದ್ದಾರೆ, ಅವನ್ನೆಲ್ಲ ಸರಿಪಡಿಸಿ ಉದ್ಧರಿಸಿದೆ).

ಯಮಾವತಾರಿ ಕನಕದಾಸರು (1487–1585) ಮೋಹನ ತರಂಗಿಣಿಯಲ್ಲಿ 'ತ್ರಿವಿಕ್ರಮದಾಸನ ದಾಸ' ಎಂದು (26,1) ತಮ್ಮನ್ನು ಕರೆದುಕೊಳ್ಳುವಲ್ಲಿ ತ್ರಿವಿಕ್ರಮೋಪಾಸಕ ಗುರು ವಾದಿರಾಜರ ಸೂಚನೆ ಇರುವುದಷ್ಟೇ ಅಲ್ಲ, ಅವರು ತ್ರಿವಿಕ್ರಮಾಲಯ ಕಟ್ಟ ತದ್ದಾಸರೆನಿಸಿದ ಖ್ಯಾತಿಯ ಕಾಲ ಕೂಡ ಧ್ವನಿತವಾಗುತಿದೆ.

ವಾದಿರಾಜರ ನಂತರದ ಭೃಗು ಅಂಶರಾದಪರೋಕ್ಷಿ ವಿಜಯದಾಸರಲ್ಲಿ (1687–1755) ಮಾತ್ರ ವಾದಿರಾಜರ ಗುರು ಸ್ವರೂಪ ಸ್ಫುಟವಾಗಿ ಮೂಡಿದೆ –

ವಾದಿರಾಜ ಧೀರ ವಾದದಲಿ ಶೂರ ॥ ಪ ॥
.......................... [112]
ಶೃಂಗೇರಿ ಮಠದಿ ಜಯಕೇತದ ಹಾಕಿದ ॥ 1 ॥

ಸುಳಾದಿಯೊಂದರಲ್ಲಂತೂ ವಿಸ್ತಾರಗೊಂಡಿದೆ ಈ ಗುರುದರ್ಶನ –

ಸಾಧು ಸನ್ಮುನಿವರ್ಯ ವೇದತೀರ್ಥರ
ಪದವಿಗೆ ಬರುವ ಲಾತವ್ಯ ಮೇದಿನಿಯೊಳು
.............................. ॥ 1 ॥

ಅಜ ಸತ್ಯಲೋಕಾಧಿಪತ್ಯವನು ಮಾಡಿ ದಿ
ಗ್ವಿಜಯ ಮಾಡಲು ಪುರಕೆ
ನಿಜ ಸುಜ್ಞಾನ ಸುಪೂರ್ಣಪ್ರಜ್ಞರೆಂಬೋ ಮುನಿಯು
ಅಜನ ಪಟ್ಟಕೆ ಬಂದು ಆಳರನಾಳುತಿಪ್ಪ
ನಿಜ ವಾಯು ಹನುಮ ಭೀಮ ಮಧ್ವರಾಯರು

---

112. ಈ ಅಂಶ ಅನ್ಯತ್ರ ಬಂದಿಲ್ಲವಾಗಿ ಕನ್ನಡ ಕೃತಿಗಳೂ ಹೊಸ ಅಂಶ ತಿಳಿಸುವುದಕ್ಕೆ ನಿದರ್ಶನವಾಗಿದೆ.

.................................

ಋಜುಗಳಲ್ಲಿ ಪಕ್ವವಾದ ಮನವುಳ್ಳ
ಸುಜನ ಶಿರೋಮಣಿ ವಾದಿರಾಜರೆನುತ
ನಿಜವಾಗಿ ಬ್ರಹ್ಮಾಂಡ ಪುರಾಣ ಸಾಧಕದಿಂದ[113]
ಅಜನ ಪದ ಸಲುವುದು ಲೇಶ ಸಂಶಯ ಬ್ಯಾಡಿ
................. ............. ॥ 3 ॥
........................ ವಾದಿರಾಜ
ಮುನಿರಾಯ ಸಾಮಾನ್ಯನೆಂದು ಎಣಿಸಿದ ನರರಿಗೆ
ಘನವಾದ ಶಿಕ್ಷೆಯಾವನು ಇನಸೂನು ಕೋಪದಿಂದ
ಮನದಲಿ ಇಟ್ಟುಕೊಂಡು ಮಹಿಮೆ ಪಾಡಿಕೊಂಡಾಡಿ ॥ 4 ॥

ಮೋದತೀರ್ಥರ ಮತ ಸೇನಾಧಿಪತಿಯಾದ
ವಾದಿರಾಜ ಮುನಿರಾಯ ವಿಜಯವಿಠಲನ ದಾಸ ॥ ಜತೆ ॥

ವಿಜಯದಾಸರ ಶಿಷ್ಯರಾದ ಆದವಾನಿಯ ದಿವಾಣ ತಿಮ್ಮಣ್ಣನಾಯಕರು ಪೂರ್ವ ಭವದಲ್ಲಿ ಪಂಗನಾಮದ ವೈಕುಂಠದಾಸರೆನಿಸಿ ವಾದಿರಾಜರೊಡನಾಡಿದ್ದನ್ನರಿತು, 1725ರ ಸುಮಾರು ವೇಣುಗೋಪಾಲ ವಿಠಲಾಂಕಿತರಾಗಿ ಕೀರ್ತಿಸಿದ್ದರಲ್ಲಿ, ವಾದಿರಾಜರ ಸರ್ವ ಜೀವಾಧಮಾನಿತ್ವ – ಪ್ರಾಣಸಮಾನತ್ವ – ಸರ್ವನಿಯಾಮಕತ್ವಾದಿ ಋಜು ಲಕ್ಷಣ ಧ್ವನಿತ –

ಸಕಲ ವೇದ ಪುರಾಣ ಶಾಸ್ತ್ರಗಳೆಲ್ಲ
ಪ್ರಕಟಿಸಿದೆ ಕನ್ನಡದಿ ಪ್ರೇಮದಿಂದ
ನಿಖಿಳ ಜನರು ತಾವಾನಕದುಂದುಭಿಸುತನ
ಭಕುತಿಯ ಪಡೆದು ಮೋಕ್ಷಕುತಿ ಐದಲಿ ಎಂದು ॥ 1 ॥

ಗಣನೆಯಿಲ್ಲದೆ ಕೀರ್ತನೆ ಸುಳಾದಿಗಳನ್ನು
ಮನವೊಲಿದು ಮಾಡಿದ್ದು ಜನರು ಪಠಿಸಿ
ವನಜನಾಭನ ಕರುಣವನು ಪಡೆದು ತಾ
ವನುಭವಿಸಲಾನಂದವೆನುತಲಿ ॥ 2 ॥

---

113. ಪಾ.ಗು.ಡ.ದ ಪದ್ಮಪುರಾಣೋಕ್ತ ಗೌಪ್ಯಪೀಠ ವರ್ಣನ ಭಾಗವೇ ಬ್ರಹ್ಮಾಂಡ ಪುರಾಣೋಕ್ತ ಅಬ್ಬಾರಣ್ಯ ಮಹಾತ್ಮೆಯ ದ್ವಿತೀಯಾಧ್ಯಾಯದಲ್ಲಿದೆ.

. . . . . . . . . . . . . . . . . . . . . . . . . . . . . .

ಸ್ವಾಂತದಲಿ ನೆಲಸಿ ಏಕಾಂತ ಭಕ್ತೋತ್ತಮನೆ

. . . . . . . . . . . . . . . . . . . . . . . . . . . . .

ಖೇಚರ ಮಿಶ್ರಿತಾನ್ನವನುಂಡು ಕರಗಿಸಿದೆ
ಶ್ರೀ ಭಾರತೀರಮಣನಂತೆ ಶ್ರೀ ಹರಿಯ ಕರುಣದಲಿ || 5 ||

ಮಾರಪಿತ ನೀರಜಾಸನ ಶೇಷಖಗಮನ ಪ
ದ್ಮಾರಿ ಪತ್ನಿಗಳಿಂದ ಸಹಿತರಾಗಿ
ಸಾರ ಶ್ವೇತ ದ್ವೀಪದಲಿ ಇಪ್ಪ ತೆರನಂತೆ
ಧೀರ ವೃಂದಾವನದಿ ತೋರುವೆ ನಿರಂತರದಿ || 8 ||

. . . . . . . . . . . . . . . . . . . . . . .

ಧನ್ಯ ಋಜುಗಣದೊಳಗೆ ಮಾನ್ಯನಾಗಿಹ ಸುಪ್ರ
ಸನ್ನ ದ್ವಿಜಕುಲರನ್ನ ನಂದದನೊ ನಿನ್ನ[114] || 9 ||

ವೇಣುಗೋಪಾಲದಾಸರ ಶಿಷ್ಯ ನರಸಿಂಹದಾಸರ ಪುತ್ರ ಜಗನ್ನಾಥದಾಸರ[115] ನುಡಿಗಳೂ ವಾದಿರಾಜರ ಋಜು ಲಕ್ಷಣ ಸೂಚಕವಾಗಿವೆ —

ಪ ವಾದಿರಾಜ ಅಸ್ಮದ್ಗುರು ವಾದಿರಾಜ || ಪ ||

. . . . . . . . . . . . . . . . . . . . . . .

ಎಲರುಣಿ ಭಯಕಂಜಿ ನಿಮ್ಮಾಸನ
ಕೆಳಗಿರೆ ಕಂಡು ನೀನುಳುಹಿದೆ ಕರುಣಿ || 15 ||

---

114. ಈ ಸಾಲುಗಳನ್ನು ಗೋಪಾಲದಾಸರವೆಂದು ಬಂಡಮುಳೆಯವರು ತಪ್ಪಾಗಿ ಉದ್ಧರಿಸಿದ್ದಾರೆ (ಕರ್ನಾಟಕ ಹರಿದಾಸ ಸಾಹಿತ್ಯ, 65). ರಾಘವೇಂದ್ರತೀರ್ಥರದೆಂದು ಪ್ರಚಲಿತವಾದ 'ಇಂದು ಎನಗೆ ಗೋವಿಂದ' ಧೀರವೇಣುಗೋಪಾಲಾಂಕಿತ ಉಳ್ಳ ವೇಣುಗೋಪಾಲದಾಸರ ರಚನೆಯಾಗಿದ್ದು, 'ಧೀರ' ವಿಶೇಷಣ ಪ್ರಾಸಾರ್ಥ ಬಂದಂತಿದೆ.

115. ಪ್ರಹ್ಲಾದಾನುಜ ಸಹ್ಲಾದ 2ನೆಯ ಶಲ್ಯ ಜನ್ಮದಲ್ಲಿ ದುರ್ಯೋಧನ ಸಹವಾಸದಲ್ಲಿದ್ದು (ಕನ್ನಡ ತಾತ್ಪರ್ಯ ನಿರ್ಣಯ, 2–145); ಸತ್ಸಂಗಕ್ಕಾಶಿಸಿ 3ನೆಯ ಜನ್ಮದಲ್ಲಿ ವಾದಿರಾಜರ ಬಳಿ ಕೊಂಡಪ್ಪನೆಂಬ ಕರಣಿಕನಾದ (ವಾದಿರಾಜ ಗುಣರತ್ನಮಾಲಾ, 10, 64–69), 4ನೆಯ ಜನ್ಮದಲ್ಲಿ ಪುರಂದರ ಪುತ್ರ (ಅಪ್ಪಣ್ಣ)ನಾಗಿದ್ದು, 5ನೆಯ ಜನ್ಮದಲ್ಲಿ ಜಗನ್ನಾಥದಾಸರೆನಿಸಿದ್ದು ಸಾಂಪ್ರದಾಯಿಕ ಕತೆ. (ಇದು 1800ರ ಸುಮಾರು ಇದ್ದ ಪ್ರಾಣೇಶ ವಿಠಲಾಂಕಿತ ಯೋಗೀಂದ್ರ ಕುಲಕರ್ಣಿಯವರಿಂದುಕ್ತ). ಜಗನ್ನಾಥದಾಸರು ಪೂರ್ವಭವದಲ್ಲಿ ಕುರುಬನಾಗಿದ್ದು ವ್ಯಾಸ–ವಾದಿರಾಜ, ಪುರಂದರ–ಕನಕದಾಸರ ಸಹವಾಸದಿಂದನುಗ್ರಹೀತನಾದ ಕತೆ (T.V.Subbarao, Karnataka Composers, Journals of the Music Academy, II), 3ನೆಯ ಜನ್ಮದ್ದಾಗಿರಬಹುದು; ಹರಿಕಥಾಮೃತಸಾರದ ಫಲಶ್ರುತಿಯಲ್ಲಿವನ ಹೆಸರು ಬಂಡಪ್ಪನೆಂದಿದೆ. 'ಹರಿಕಥಾಮೃತಸಾರ'ದ ರಚನೆಗೆ ವಾದಿರಾಜರ ಪ್ರೇರಣೆ ಇದ್ದಂತಿದೆ —

...

. . . . . . . . . . . . . . . . . . . . . . . . . . . . .

ಯತಿವರನೆ ತ್ರಿವಿಕ್ರಮನ ರಥೋತ್ಸವ
ಸಮಯದಿ ಬಂದೆನುತುತ್ಕ್ರಮಣವ ತೋರಿದೆ ॥ 21 ॥

ಬಂದು ಕರೆಯೆ ಪುರಂದರದಾಸರ್ಗಳು
ಹಿಂದಬಿಟ್ಟೆ ಕರ್ಮಂದಿಗಳರಸನೆ ॥ 22 ॥

ಅದೇ ಕಾಲಕ್ಕಿದ್ದ (ಸು.1790) ಕಮಲೇಶವಿಠಲಾಂಕಿತ ಸುರಪುರ ಆನಂದದಾಸರ ಸ್ತುತ್ಯೋಕ್ತಿ—

ಹೇಯ ಸಮಯ ಘನ ಪಾಂಡ್ಯದೇವ ಸಮ ॥ 9 ॥

. . . . . . . . . . . . . . . . . . . . . . . . . . . . .

ಸುಜ್ಞಾನದ ವಾದಿರಾಜ
ಶರಣನೀಯ ಹಂಸಾದಿ ಮಂತ್ರಕೋ
ತ್ತಂಸ ಪ್ರಣವ ಪ್ರಶಂಸಾ ॥ 10 ॥

ವೆಂಕಟವಿಠಲಾಂಕಿತ ವೆಂಕಟದಾಸರ (ಸು.1800) ನುತಿ —

ಪಾರ್ವತೀವರವಂದ್ಯಪದಪಾತ್ರ ನೆನೆವೆ ॥ 1 ॥

ಕಲ್ಪಾಂತರದಿ ಪವಮಾನನಾಗುವನ ॥ 2 ॥

ರಾಘವೇಂದ್ರರ ಪ್ರೀತಿ ಪಾತ್ರ ಪ್ರೇಮದಾಸ (ಅಭಿನವ ಜನಾರ್ದನವಿಠಲಾಂಕಿತ)ರ ಪದೋಕ್ತಿ —

ಸುಜನಗಣಮಿಳಿತ ನೀರೇಜನೆ ॥ 1 ॥

. . . . . . . . . . . . . . . . . . . . . . . .

ಪಾಹಿಯಾದ ಎನ್ನ ಪಾಲಿಪುದಕೆ
ಸ್ವಪ್ನದೊಳಗೆ ನಿನ್ನ ರೂಪವ ತೋರ್ದೆ ॥ 4 ॥

(ಇದರಿಂದ ಇವರು ಅಪರೋಕ್ಷ ವ್ಯಕ್ತಿಗಳಲ್ಲಿ ಯಾರಾದರೊಬ್ಬರಿರಬಹುದೇ ಎನಿಸುತ್ತದೆ).

ಭಾವೀ ಸಮೀರತ್ವ ಸೂಚಿಸುತ್ತ ಶ್ರೀಪತಿ ವಿಠಲಾಂಕಿತ ಹರಪನಹಳ್ಳಿ ಶ್ರೀಪತಿದಾಸರು (ಸು.1820)—

ಶರಧಿಗೆ ಪೋಗಲು ಮರುತನಿಂದ ಶುಭ್ರೋ
ಚ್ಚರಿಸೆ ಗೋಪ್ಯವನು ತಿರುಗಿದೆ ಮುದದಿ ॥ 10 ॥

---

ಸ್ವಾದಿ ವಾದಿರಾಜೇಂದ್ರ ವರಪ್ರಸಾದದಿಂದ ಹರಿಕಥಾಮೃತ ಸಾರತತ್ವವನು ಸಾಧು ಜನರಿಗಾಗಿ ಪ್ರಾಕೃತಭಾವ ಪ್ರೇಮಾತಿಶಯದಿ ಪೇಳ್ದ (ಕರ್ಜಗಿ ಶ್ರೀದವಿಠಲದಾಸರು); ವಾದಿರಾಜರ ಕೋಶಕೊಪ್ಪುವ ಹರಿಕಥಾಮೃತಸಾರ ಪೇಳಿದರು (ಕರ್ಜಗಿದಾಸರ ಫಲಶ್ರುತಿ). ವಾದಿರಾಜರು ಪ್ರೇಮದಲಿ ಜಗನ್ನಾಥದಾಸರ ಸ್ವಪ್ನದಲಿ ಬಂದು ನುಡಿದ ಕಾರಣದಿ, ಹರಿಕಥಾಮೃತ ಸಾರವನು ರಚಿಸಿ, ಭಾವಿ ಭಾರತೀಪತಿ ವಾದಿರಾಜರ ತೋಷಕೊಪ್ಪಿಸುತಲಿ (— ಕಮಲಾಪತಿವಿಠಲಾಂಕಿತ ರಾಮದಾಸರು).

ಎಂಬಲ್ಲಿ ಹನುಮನ ಲಂಕಾಗಮನದ ಧ್ವನಿತ. ತಂದೆ ಶ್ರೀಪತಿವಿಠಲಾಂಕಿತ ಹರಪನಹಳ್ಳಿ ವೆಂಕಪ್ಪದಾಸರೂ (ಸು.1840) ಭಾವೀ ವಾಯುತ್ವಾದಿಗಳನ್ನೊರೆವ ಸುಳಾದಿಯ ಸಾಲು —

ಶ್ರೇಷ್ಠ ಮಾರುತಿ ತಂದೆ ಶ್ರೀಪತಿವಿಠಲನ ದಯ
ಮುಖ್ಯಪದಕೆ ನಿಮ್ಮ ದಯ ಪೊಂದಲಿ ಬೇಕು ॥ 4 ॥

.................................

ಶ್ರೀಮದಾನಂದತೀರ್ಥ ಮುಂದೆ ನಿಜ ॥ ಜತೆ ॥

ಪ್ರೇಮದಾಸರ ಪ್ರಶಿಷ್ಯ ಶ್ರೀರಾಮವಿಠಲಾಂಕಿತ ದಾಸರ ನುಡಿಗಳಿವು —

ವಿಜಯಪ್ರದ ವಾದಿರಾಜ ಮುನಿಗಣ
ಸ್ವಜನ ಮುದಿತ ನವಹಾಜ ॥ ಅ.ಪ. ॥

ಕಂಜಜಭವ ಪ್ರಭಂಜನ ಹಥಂಯುತ ॥ 3 ॥

ಭ್ರಾಜದ್ಭೃಜಗಣ ರಾಜಮಾನ ಗುಣ ॥ 4 ॥

ನಂಜನಗೂಡಿನ ಬಾದರಾಯಣವಿಠಲಾಂಕಿತರ (ಸು.1875) ಹಾಡಿನ ಸಾಲಿವು —

ಮುಂದಮತಿಗೆ ದೇವೇಂದ್ರಪದವಿ ಕೊಡುವೆನೆಂದು ದಯದಿ ಪೇಳಿದ ॥ 1 ॥

ಒಂದೇ ಮನದಿ ಭಜಿಸುವರಿಗೆ ಸ್ವಾನಂದ ಕೊಡುವ ಪೂರ್ಣಬೋಧ ಕಾಣಮ್ಮ ॥ 2 ॥

ಗುರು ಜಗನ್ನಾಥವಿಠಲಾಂಕಿತದಾಸರ (ಸು.1890) ಸ್ವಪ್ನೋಕ್ತಿಗಳಿವು —

ಸತ್ಯಲೋಕ ಸುಮುಖ್ಯಪಾತ್ರಗೆ ॥ 2 ॥

..........................

ಮುಂದೆ ಪ್ರಾಣ ವಿರಿಂಚಿ ಕಾಣಮ್ಮಯ್ಯ ॥ 1 ॥

..............................

ಇಂದುಮುಖಿಯೆ ಈತ ಗಂಧವಾಹನನಾಗಿ
ಮುಂದಜಾಸನ ಪದ ಪೊಂದಿಹ ನಮ್ಮ

..............................

ವೀತಭಯ ಪುರುಹೂತಪ್ರಮುಖ
ಭೂತನಾಥನುತ ಮಾತರಿಶ್ವನೀತನಮ್ಮ ॥ 3 ॥

.............................

ಪಾದವ ತೋರಿಸಯ್ಯ ... ಭಾವಿವಿಧಾತ ॥ 6 ॥

ಇವರದೇ 32 ಲಕ್ಷಣಾನುಗುಣ ಅಪಾದಮಸ್ತಕ ವರ್ಣನೆ, ವಾದಿರಾಜರ ಪ್ರತಿಮೆಗೆ ಹೋಲಿಸಿ ನೋಡಿ, ಋಜುತ್ವವನ್ನು ಖಚಿತಪಡಿಸಿಕೊಳ್ಳುವಂತಿದೆ —

ರಾಜರ ನೋಡಿರೈ ಅನಂತತೇಜರ ಪಾಡಿರೈ ॥ ಪ ॥
ರಾಜಪ ಸಿರಿವರ ವಾರಿಜವದನಪದಪೂಜಕರ, ಸುರಸನ್ನುತರ ॥ ಅ.ಪ. ॥
ತರುಣಾರುಣಸಮ ಚರಣಾಂಗುಲಿನಖರಗಳೋ, ವಜ್ರತಲಗಳೋ
ವರಪಾರ್ಷ್ಣಿದ್ವಯ ಪರಮ ಶೋಭಿಪ ಗುಲ್ಫಗಳೋ, ಮಾಣಿಕಯುಗಗಳೋ
ಕರಿವದನೋರ್ಧ್ವಗವರದಂತೋಪಮ ಜಂಘಗಳೋ, ಘನನಾಳಯುಗಗಳೋ
ಪರಮಮಂಯುತಿವರ ಗುರುರಾಂತುರ ಯುಗಜಾನುಗಳೋ, ಶಶಿಬಿಂಬಗಳೋ ॥ 1 ॥

ಶಂಭುಮುಖರ ಕದಂಬವಂದ್ಯನ ಊರುಗಳೋ, ಮೋಚಾವೃಕ್ಷಗಳೋ
ಕುಂಭೀಶ್ವರ ವರಕುಂಭೋಪಮ ಕಟಿತಟವೋ, ಕೇಸರಿನಡುವೋ
ಜೃಂಭಿತ ಉರು ಅರುಣಾಂಬರ ಶೋಭಿತ ರೂಪಾ, ಹಾಕಿದ ಕೈವಾ
ತುಂಬಿದ ಕರುಣನ ಗುಂಭ ಸುನಾಭಿ ತಾವರೆಯೋ, ಗಂಗಾಸುಳಿಯೋ ॥ 2 ॥

ಸುಂದರ ಕುಕ್ಷಿ ಸುವಂದನರ್ಚಿತ ಹೃನ್ಮಂಡಲವೋ, ಹರಿಮಂದಿರವೋ
ಕುಂದದತುಳಸ್ಯರವಿಂದ ಮಾಲಾವಳಿಯೋ, ಗಂಗಾ ತೊಳೆಯೋ
ಮಂದಹಾಸ ಮಣಿಯಿಂದ ಶೋಭಿಪ ಕಂಧರವೋ, ಕಂಬುವರವೋ
ಚಂದ್ರಸುಗಾತ್ರನ ದ್ವಂದ್ವಬಾಹುದಂಡಗಳೋ, ಕರಿಶುಂಡಗಳೋ ॥ 3 ॥

ಯತಿಕುಲವಂದ್ಯನ ಸ್ಮಿತಯುತ ವಕ್ತ್ರವರ್ತುಲವೋ, ಅರಳಾಂಬುಜವೋ
ಅತಿಮತಿಮನ ವರಸಿತಕರ ದಂತಾವಳಿಯೋ, ಮಲ್ಲಿಗೆ ಮುಗುಳೋ
ಕ್ಷಿತಿಸುರವಂದ್ಯ ಅತಿಸುಂದರ ನಾಸಿಕವೋ, ತಿಲಕುಸುಮವೋ
ಗತಿಕಾಣನ್ಯಗೆ ಸದ್ಗತಿದಾತನ ನಯನಗಳೋ, ನೈದಿಲೆಯುಗಗಳೋ ॥ 4 ॥

ಭೂತಾಧಿಪನಾ ಭಾಳಕಪೋಲದ್ವಯವೋ, ದರ್ಪಣಯುಗವೋ
ಪೀತಕಾದ್ಯೈಕ ....................................
ಪಾತಕಹರ ಹರಿಗಾಥವ ಕೇಳುವ ಕರ್ಣಗಳೋ, ಸುಪರ್ಣಗಳೋ
ಪೀತ ತಿಲಕದಿಂ ಈ ಪರಿಶೋಭಿಪ ಫಣೆಯೋ, ಅಷ್ಟಮಿಣಿಯೋ ॥ 5 ॥

ಮಂದಿರವೆನಿಸುವ ವೃಂದಾವನ ಶುಭಮಂಟಪವೋ, ನಂದನವನವೋ
ವೃಂದಾರಕ ಘನ ವೃಂದದಿ ರಾಜಪ ಭೂಪಾ, ಅಪ್ರತಿರೂಪಾ
ವಂದಜನಕೆ ಸ್ವಾನಂದವನೀಸಿದ ದಾತ, ಜಗದೊಳು ಖ್ಯಾತ
ಇಂದಿರಾಧವನ ಪದದಿ ಒಲಿಸಿದನೀತ, ಭಾವಿವಿಧಾತ ॥ 6 ॥

ಸೃಷ್ಟಿಗೆ ಮೀರಿದ ಶ್ರೇಷ್ಠವ ಶುಭತಮ ಪಾದ, ವಂದಿಸೆ ಮೋದ
ವಿಷ್ಣೀತನ ಉತ್ಕೃಷ್ಟ ಪ್ರತಾಪದ ಕೊನೆಯು, ಸುರಧೇನುವು
ಭಿಷ್ಟೀತನ ಮನಮುಟ್ಟಿ ಭಜಿಸಲು ದುರಿತವ ತರಿವ, ಕಾಮಿತ ಕೊಡುವ
ಶಿಷ್ಟರ ಸುಮನೋಭೀಷ್ಟದ ಗುರುಜಗನ್ನಾಥ ವಿಠಲದೂತ ॥ 7 ॥

ಜೊತೆಗೆ ಹರಿಸರ್ವೋತ್ತಮತ್ವ ಸಾರುವ ಪುರಂದರದಾಸರ ಪಲ್ಲವಿಯೊಂದರಿಂದಾರಂಭವಾಗಿ, ವಾದಿರಾಜರ ಋಜುತ್ವ ಸಾರಿದ ಪ್ರಾಣಪತಿವಿಠಲಾಂಕಿತ ಶಹಾಪುರಾಚಾರ್ಯರ (ಸು.1900) ನುಡಿಗಳಿವು —

ಹೊಡಿ ನಗಾರಿ ಮ್ಯಾಲೆ ಕೈಯ, ಕಡ ಕಡ ಹೊಡೀ ॥ ಪ ॥
ಕಡು ವಾದಿರಾಜರು ದೃಢ ಋಜುಗಣರೆಂದ್ಹೊಡೀ ॥ ಅ.ಪ. ॥

. . . . . . . . . . . . . . . . . . . . . . . . . . . . . . . .

ವಾದಿರಾಜ ಪೂರ್ಣಬೋಧರ ಸಮರೆಂದ್ಹೊಡೀ ॥ 3 ॥

ನಂದಿವಾಹನ ಮುಖ್ಯವಂದ್ಯರು ಇವರೆಂದ್ಹೊಡೀ ॥ 4 ॥

. . . . . . . . . . . . . . . . . . . . . . . . . . . . . . . .

ಹಂಸವಾಹನಂಶಾಂಶ ಸಹಿತರೆಂದ್ಹೊಡೀ ॥ 6 ॥

. . . . . . . . . . . . . . . . . . . . . . . . . . . . . . . .

ಭಾವಿಭಾರತೀದೇವಿ ಕರಕಮಲ
ಸೇವಿತ ಪದ ರಾಜೀವದ್ವಯರೆಂದ್ಹೊಡೀ ॥ 9 ॥

ದಾಸ ಸಾಹಿತ್ಯದ ದ್ವಿತೀಯ ಘಟ್ಟದಲ್ಲಿಂಥ ನುಡಿ ಅನೇಕವಿದ್ದು, ಕೆಲವನ್ನಷ್ಟೇ 'ವಾದಿರಾಜ ಗುರುವರರ ಕೀರ್ತನ ಮಂಜರಿ'ಯಿಂದ ಇಲ್ಲಿ ಆಯ್ದು ಪೋಣಿಸಿದೆ; ಪ್ರಾತಿನಿಧಿಕವಾಗಿ.[116] ವಿಜಯದಾಸಾದಿ ಅಪರೋಕ್ಷ ಜ್ಞಾನಿಗಳ ನುಡಿ ಕನ್ನಡದಲ್ಲಿದ್ದು ಮಾತ್ರಕ್ಕೆ ಅವಗಣಿಸುವಂಥವಲ್ಲ; ಅವಗಣನೆಯ ಫಲ ಜಗನ್ನಾಥದಾಸರ ಜೀವನ ಚರಿತೆಯಿಂದಲೇ ನಿದರ್ಶಿತವಾಗಿದೆ. ಈ ಎಲ್ಲ ಹರಿದಾಸರ ವಾಣಿ ವಾದಿರಾಜರ ಋಜುತ್ವಕ್ಕೆ ಸಂಸ್ಕೃತದಲ್ಲಿರುವ ಪ್ರಮಾಣ ವಾಕ್ಯಗಳಿಗೆ ಕನ್ನಡಿ ಹಿಡಿದಿದೆ. ಅದನ್ನೀಕ್ಷಿಸಿದವರಿಗೆ ಆ ಋಜುತ್ವದರ್ಶನವಾಗದಿರದು.

ಹೀಗೆ ವಾದಿರಾಜರು ಋಜುಗಣದ ಲಾತವ್ಯ ತ್ರಿವಿಕ್ರಮೋಪಾಸಕ— ರುದ್ರಾದಿವಂದ್ಯ— ನಿತ್ಯಾಪರೋಕ್ಷಿ—'ಏಕಾಂತಭಕ್ತ'— ದಿವ್ಯಕಾಯ— ಋಜುಯೋಗಿ ಇತ್ಯಾದಿ ಗುಣ ಲಕ್ಷಣ

---

116. 'ಕನ್ನಡ ಹರಿದಾಸ ಸಾಹಿತ್ಯ' ದ್ವೈಮಾಸಿಕ, ಸಂಪುಟ 1, ಸಂಚಿಕೆ 3—6 ರಲ್ಲಿಯೂ ಗೋರಬಾಳ ಹನುಮಂತರಾಯರು ಸುಮಾರು 50ರಷ್ಟು ವಾದಿರಾಜರನ್ನು ಕುರಿತ ಕೀರ್ತನ ಸಂಗ್ರಹಿಸಿದ್ದಾರೆ.

ಸಹಿತ ಇಲ್ಲಿ ವರ್ಣಿತರಾಗಿದ್ದು, ಅವರ ಸ್ವರೂಪವರಿತು ಉದ್ಧಾರ ಹೊಂದಬೇಕೆಂಬವರಿಗೆ ಈ ಕನ್ನಡದ ಕೀರ್ತನೆ ತುಂಬ ದಾರಿದೀಪವಾಗಿದೆ.

5. ಉತ್ತರಕಾಲೀನ ಚರಿತ್ರ ಸಂವಾದ: ಲಕ್ಷ್ಮೀಪತಿ ಎಂಬ ಶಿವಳ್ಳಿ–ಮಲಯಾಳ ಬ್ರಾಹ್ಮಣ ಸ್ವಪ್ನವೃಂದಾವನಾಖ್ಯಾನದ ಮೂಲಕ ಗುರುಗಳ ಋಜು ಸ್ವರೂಪವನ್ನು ತಾವು ಮುಂದೆ ಇಂದ್ರಪದಕ್ಕೇರುವುದನ್ನು ಅರಿತಿದ್ದರಲ್ಲವೇ? ಇವರು1942ರ ಆ ಪ್ರಾಣಾವಧಿಯ 134 ವರ್ಷಾನಂತರ ಎಂದರೆ 1776ರಲ್ಲಿ ಉಡುಪಿಯ ಕೃಷ್ಣಾಚಾರ್ಯ (ಆಖ್ಯಾನೋಕ್ತ ನಾಗಶಯನ) ಎಂಬವರ ಮಗನಾಗಿ ಜನ್ಮಿಸಿ ಶ್ರೀನಿವಾಸ ಎನಿಸಿದರು. ಕೃಷ್ಣಾಚಾರ್ಯರ ಅಣ್ಣಂದಿರಾದ ವಿಠಲಾಚಾರ್ಯ–ಹನುಮಂತಾಚಾರ್ಯರು ತಮ್ಮ ಸೋದರಮಾವನೇ ಸೋದೆ ಮಠಾಧೀಶ ವಿಶ್ವಾಧೀಶ ತೀರ್ಥರಾಗಿದ್ದ ಕಾರಣ, ಮಠದಲ್ಲಿ ಅಧಿಕಾರ ಹೊಂದಿದ್ದರು. ಅವರಲ್ಲಿ ವಿಠಲಾಚಾರ್ಯರಿಗೆ ಸನ್ಯಾಸವಾಗಿ ವಿಶ್ವೇಶತೀರ್ಥರೆನಿಸಿ 1788ರ ಪರ್ಯಾಯ ನಡೆಸಿದರು; ಆಗಲೇ ಉಪನಯನವಾಗಿ 4 ವರ್ಷವಾಗಿದ್ದ ಶ್ರೀನಿವಾಸನಿಗೆ ದೀಕ್ಷೆಯಿತ್ತು ವಿಶ್ವಪ್ರಿಯತೀರ್ಥ ಎಂಬ ನಾಮಕರಣ ಮಾಡಿದರು.

ಅತ್ತ, ಕೊಚ್ಚಿ ಸಂಸ್ಥಾನದ ಮಾರ್ತಾಂಡವರ್ಮ (ಸು.1750) ಸ್ಮಾರ್ತ ನಂಬೂದ್ರಿಯರಾದರೂ, ಅವನ ಮಗ ರಾಮವರ್ಮ ವೇದವ್ಯಾಸರನ್ನು ಸೇವಿಸಲು, ಸ್ವಪ್ನದಲ್ಲಿ ಕಾಣಿಸಿದ ಹರಿ 'ವಾದಿರಾಜರ ಮಾರ್ಗದಿಂದ ಭಜಿಸಿದರೆ ಮುಕ್ತನಾಗುವಿ' ಎಂದಾದೇಶಿಸಿದ —

ವಾದಿರಾಜೋಕ್ತ ಪದ್ಧತ್ಯಾ ಭಜನ್ ಮಾಂ ಮುಕ್ತಿಮೇಷ್ಯಸಿ ॥ 117
ಕೊಚ್ಚಿ ರಂಗಾಚಾರ್ಯರ ವಿಶ್ವಪ್ರಿಯ ಲೀಲಾವಿಲಾಸ 11–15

ಅದ್ದರಿಂದ ಅರಸು ಗುರುರಾಜರ ಮಠಕ್ಕೆ ಆಹ್ವಾನ ಕಳಿಸಿದ. ವಿಶ್ವಾಧೀಶರು ವೃದ್ಧರಾಗಿ ವಿಶ್ವೇಶತೀರ್ಥರನ್ನೇ ಕಳಿಸಿ ಮಧ್ವಮತೋಪದೇಶಗೈಸಿ ದೇವಕಾರ್ಯ ನಿರ್ವಹಿಸಿದರು.

---

117. ಸು.1866ರಲ್ಲಿ ರಚಿತವಾದ ಕೃತಿಯಿದು, 1889ರಲ್ಲಿ ಮುದ್ರಿತವಾಯಿತು. 1820–91ರಲ್ಲಿದ್ದ ಇದರ ಲೇಖಕರ ಪ್ರಪೌತ್ರರೇ ಇಂದಿನ ಖ್ಯಾತ ವಿದ್ವಾಂಸ ಬಿ.ಎನ್.ಕೆ. ಶರ್ಮ. ಕೊಚ್ಚಿ ರಂಗಾಚಾರ್ಯರ ವಾದಿರಾಜ ಗುರ್ವಷ್ಟಕ 'ಶ್ರೀ ಲಾತವ್ಯಪದಾಧಿರೂಢ ವಿಬುಧಾಧೀಶ:' ಎಂದಾರಂಭವಾಗುವುದಲ್ಲದೆ, 8ನೆಯ ನುಡಿಯಲ್ಲಿ ಸ್ವಪ್ನಾಖ್ಯಾನ ವಾದಿರಾಜಕೃತವೆಂದುಕ್ತ.

1790–92ರ ಮಧ್ಯೆ ನಡೆದ ಈ ಘಟನೆಯಿಂದ ಮಧ್ವಮಾರ್ಗಾವಲಂಬಿಯಾದ ರಾಮವರ್ಮ 'ಪೂರ್ಣತ್ರಯೀ ಶತಕ'ವೆಂಬ ಕೃತಿಯನ್ನು ರಚಿಸಿದ. 1792ರಲ್ಲಿ ವಿಶ್ವೇಶತೀರ್ಥರೂ 1794ರಲ್ಲಿ ವಿಶ್ವಾಧೀಶರೂ ಕಾಲವಾಗಿ ವಿಶ್ವಪ್ರಿಯರು ಪೀಠವೇರಿದರು. ಕೂಡಲೇ ಸೋದೆಗೈತಂದು ಬರಿ ಅರಳಿಟ್ಟು ತಿಂದು 48 ದಿನ ವೃಂದಾವನದೆದುರು ಅಧ್ಯಯನ ತಪ ಕೈಕೊಂಡರು. ಆಗಲೇ ವಾದಿರಾಜರು ವೃಂದಾವನದಿಂದ ಅವರೊಡನೆ ಸಂವಾದಿಸಿ ಪುನಃ ಆಖ್ಯಾನ ಕೇಳಿಸಿದರು; ವಿಶ್ವಪ್ರಿಯರು ಜಾತಿಸ್ಮರಣ ಹೊಂದಿ ಸಂದೇಹ ನಿವಾರಿಸಿಕೊಂಡು ಆಖ್ಯಾನ ಪ್ರಕರಣ ವಿಭಜನೆ ಮಾಡಿಕೊಂಡರು; ವೃಂದಾವನಾಖ್ಯಾನ ಪ್ರಸಿದ್ಧ್ಯರ್ಥ ವೃಂದಾವನಾಚಾರ್ಯ ಎನಿಸಿದರು.[118] ತೀರ್ಥಾಟನಕ್ಕೆಳಸಿ ಅಪ್ಪಣೆ ಕೇಳಿದೊಡನೆ ಮಂತ್ರಾಕ್ಷತೆಯಾದುದು —

ತೀರ್ಥಕ್ಷೇತ್ರಾದಿಕಂ ಗಂತುಂ ಗುರುರಾಜಸ್ಯ ಸನ್ನಿಧೌ
ಪ್ರಣಮತ್ಯಸ್ಯ ಶಿರಸಿ ಪೇತುರ್ಮಂತ್ರಾಕ್ಷತಾಃ ಕಿಲ ॥ ವಿ.ಪ್ರಿ.ಆ.ವಿ.1,23.

1804ರಲ್ಲಿ ಪರ್ಯಾಯಸ್ಥರಾದಾಗ ಮೈಸೂರಿನ ಮುಮ್ಮಡಿ ಕೃಷ್ಣರಾಜರು ಸಕುಟುಂಬ ಉಡುಪಿಗೈತಂದು ದಾನ ಧರ್ಮ ನಡೆಸಿದರು (8.2.1821ರಲ್ಲೊಂದು ಧರ್ಮ ಸಾಧನವನ್ನು ಬರೆಸಿಕೊಟ್ಟರು).[119] ಸುಬ್ರಹ್ಮಣ್ಯ ಮಠಾಧೀಶರೂ ಕೃಷ್ಣ–ವ್ಯಾಸ ಪೂಜೆಗೆ ಅರ್ಹರೆಂದು ಕುಹಕಿಗಳು ಪ್ರಚೋದಿಸಲು, ವಿಶ್ವಪ್ರಿಯರು ವ್ಯಾಸ ಪ್ರತೀಕವನ್ನು ಮಧ್ಯ ತಾಲ ಮುಖದಿಂದ ಸೋದೆ ಮಠಕ್ಕೆ ತಂದುಕೊಂಡರು —

ಆಖ್ಯಾನ ಪ್ರೋಕ್ತ ಸನ್ಮಾರ್ಗೈಃ ವ್ಯಾಸಾನಯನಪೂರ್ವಕೈಃ
ನಿರಸ್ತಶ್ಚ ಪ್ರತಿಮುಖ್ಯೈರಯಂ ವೃಂದಾವನಾರ್ಯಕಃ
ಇತಿ ವ್ಯಾಖ್ಯಾನನ್ಯಮೋದೋ ಮೃಗನಾಥೀಯಾರಕಃ ॥ ವಿ.ಪ್ರಿ.ಆ.ವಿ.3,19.

ವ್ಯಾಸಪ್ರತೀಕಾನಯನ ಉಪವಾಸಾದಿಗಳಿಂದ ಇವರೇ ಆಖ್ಯಾನೋಕ್ತ ವಿಪ್ರರೆಂದು ತಿಳಿದು ಬಂತು, ಕಸ್ತೂರಿಯ ಪರಿಮಳ ಬಚ್ಚಿಡಲಾದೀತೇ?

---

ಸು.1866ರಲ್ಲಿ ರಚಿತವಾದ ಕೃತಿಯಿದು

118. ವಾದಿರಾಜರು ಪೂರ್ವ ಜನ್ಮದಲ್ಲೇ ಈ ಹೆಸರಿತ್ತು, ಅವರ ಗುರುತಿಗಾಗಿ ಇದನ್ನೇ ಈಗ ಪ್ರಚುರಗೊಳಿಸುವುದೆಂದಿದ್ದಾರೆ ಸಾ.ವ್ಯ.ಅ.12–34ರಲ್ಲಿ; 17–18ರಲ್ಲಿ ಈ ಹೆಸರಿಟ್ಟುದರ ಕಾರಣ ಸೂಚಿಸಿದ್ದಾರೆ.

119. ರಜತಪೀಠ, ಪು.171.

ಇವರ ಸಂಚಾರ ಮಾರ್ಗದಲ್ಲಿ ಹೊಳೆಹೊನ್ನೂರಲ್ಲಿದ್ದ ಉತ್ತರಾದಿ ಮಠದ ಸತ್ಯಧರ್ಮತೀರ್ಥರು (1798– 1830) ಇವರನ್ನು ಕರೆಸಿ ವ್ಯಾಸಪೂಜೆ ಮಾಡಿಸಿದರು;[120] ಮೈಸೂರರಸರು ಪಚ್ಚರತ್ನದ ಮಂಟಪ ದಾನಗೈದರು. ಉಡುಪಿಯಲ್ಲಿ ಸೀತಾಪತಿ ಎಂಬ ವಿಪ್ರನಿಂದ ಯಾಗ ಮಾಡಿಸಿದಾಗ ಸೋದೆಯ ಮಠಕ್ಕೆ ಹತ್ತಿರವಿದ್ದ ಅಗ್ನಿ ಪಕ್ಕದ ಕುಹಕಿಗಳ ಮನೆಗೆ ಹತ್ತಿತು; ಸೀತಾಪತಿಗಾಶ್ರಯವಿತ್ತು, ವರಾಹತೀರ್ಥರೆಂದು[121] ಕರೆದರು. ಇವರು ಕೊಚ್ಚಿಯ ರಾಜಕುಮಾರರಲ್ಲಿ ಹೋಗಿಬರುವುದೂ, ಅತ ಇವರಲ್ಲಿ ಬಂದು ಹೋಗುವುದೂ ಇತ್ತು. 1820ರಲ್ಲಿ 2ನೆಯ ಪರ್ಯಾಯ ನೆರವೇರಿಸಿ, 1825– 30ರ ಸುಮಾರು ವೃಂದಾವನಾಖ್ಯಾನವನ್ನು ಅರ್ಥೈಸಿ ಪ್ರಕಟಿಸಿದರು. ವ್ಯಾಸಾರ್ಪಿತ ಕಲ್ಯಯ ದಾರವನ್ನು ಪ್ರಸಾದವಾಗಿ ಸ್ವೀಕರಿಸದೆ ಕೆಳಗೆ ಚೆಲ್ಲಿದ (ಕಮಲನಾಭ) ಯತಿ ಕಣ್ಣು ಕಳೆದುಕೊಂಡ ಘಟನೆಯಿಂದ, ಆಖ್ಯಾನೋಕ್ತ (21,13– 15) ಕಾರ್ಯವಾಗಿ, ಆ ಗ್ರಂಥ ಪ್ರಾಮಾಣ್ಯ ಸಿದ್ಧಿಸಿತು —

ಕಲಿ: ಕಮಲನಾಭಾಖ್ಯ: ಪ್ರಸಭರ್ಮಲಂತೋಭವತ
ಮಿಲಿತ: ಸ್ವಸ್ವಾಮಿಮಾಲಷ್ಯಾಕ್ಯ ಯೋ ನಿರ್ಮಾಲ್ಯಂ ನ ಮೇ ಗೃಹೀತ ॥
ಸ್ವಾ.ವೃಂ.ಆ.21,14.

ಮಾಸಮೀಸುತ ಸಮರ್ಪಿತಂ ಪರಂ
ಕಲ್ಯ ದೋರಮುಖಮುತ್ರಕಶ್ಚನ
ಪ್ರೇಷಿತಂ ಗುರುವರೇಣ ದೂಷಣಾನ
ಪ್ರಾಕ್ಷಿಪದ್ಯಪಿ ಯತಿ: ಪ್ರಕೋಪಿತ: ॥ 1 ॥

ತೇನ ದೋಷನಿಮಹೇನ ಚಕ್ಷುಷ:
ಸ್ವಾಧನಮತ್ಯಜದಮುಷ್ಯ ವಿಶ್ವಕ:
ಸ್ವಾಪ್ನಪದ್ಯ ಗುರುರಾಜ ವಾಕ್ಯ
ಸನ್ಮಾನ ತಾಪಿ ಕಿಲ ಸಿದ್ಧತಾಮಗಾತ ॥ 2 ॥ ವಿ.ಪ್ರ.ಲೀ.ವಿ.4.

---

120. ವಿ.ಪ್ರ.ಲೀ.ವಿ.2,28. ಸತ್ಯಧರ್ಮರು ರುದ್ರಾಂಶರೆಂದು ಪ್ರತೀತಿ. ಇವರೇ ಆಖ್ಯಾನೋಕ್ತ ಮುದ್ಗಲ ನಾರಸಿಂಹ. ಪೂರ್ವಾಶ್ರಮದಲ್ಲಿ ಸವಣೂರ ನವಾಬನಿಂದ ಬಂಧಿತರಾದಾಗ ವಾದಿರಾಜರನ್ನು ಸ್ತುತಿಸಿ ಮುಕ್ತರಾದರು. ವಾದಿರಾಜ ಸ್ತೋತ್ರಮಂಜರಿಯಲ್ಲಿ ಇವರು ರಚಿಸಿದ ಸ್ತೋತ್ರವಿದೆ (ಪು.5).

121. ಇವರು ಬಿಡಿ ಸನ್ಯಾಸಿ; ಇವರ ಪೂರ್ವಾಶ್ರಮದ ಮಗ ಅಣ್ಣಯ್ಯಾಚಾರ್ಯರ ಮನೆ ಉಡುಪಿಯಲ್ಲಿದೆ.

ಭೀಮನಕಟ್ಟೆ ಮಠದ ರಘುಪ್ರವೀರ (ಆಖ್ಯಾನೋಕ್ತ ಹಯಗ್ರೀವ ಮುನಿ) ಎಂಬವರು 1834ರಲ್ಲಿ 'ಆಖ್ಯಾನ ಪ್ರಾಮಾಣ್ಯ ಬೋಧಿನಿ'ಯನ್ನು ರಚಿಸಿದರು. ವಿಶ್ವಪ್ರಿಯರು ಕೊಚ್ಚಿ ಅರಸರ ಅಳಿಯನ ಮಾಟ ದೇಶದ ಚಿತ್ಪುರದಲ್ಲಿದ್ದಾಗ ಕೊಚ್ಚಿಯ ಆಸ್ಥಾನ ಪಂಡಿತ ರಂಗಪ್ಪಾಚಾರ್ಯರು ಬಂದರು; ಮುಷ್ಟಾಚಾರ್ಯರೂ ಆಖ್ಯಾನೋಪದೇಶ ಹೊಂದಿದರು.[122] ವಿಶ್ವಪ್ರಿಯರು 1836ರಲ್ಲಿ 3ನೆಯ ಪರ್ಯಾಯ, 1852ರಲ್ಲಿ 4ನೆಯ ಪರ್ಯಾಯ ನಡೆಸಿದರು. 1860ರಲ್ಲಿ ವಿಶ್ವಾಧೀಶತೀರ್ಥರಿಗೆ ದೀಕ್ಷೆ ಇತ್ತರು. 1862ರಲ್ಲಿ ಕೊಚ್ಚಿಯ ರವಿವರ್ಮನಲ್ಲಿದ್ದಾಗ, ಮಂತ್ರಿ ನಾಗರಾಜ (ಆಖ್ಯಾನೋಕ್ತ ಶೇಷ)ನಿಗೆ ಸುಧಾದ್ಯುಪದೇಶ, ವಾದಿರಾಜರ ವೃಂದಾವನ ಸ್ಥಾಪನೆ ಆದವು. ವಿಶ್ವಪ್ರಿಯರು ತರುವಾಯ ಸೋದೆಗೆ ಬಂದಾಗ ವರಾಹತೀರ್ಥರು ವೃಂದಾವನಸ್ಥರಾದರು. 1865ರಲ್ಲಿ (ಕ್ರೋಧನ) ಆಷಾಢ ಅಮಾವಾಸ್ಯೆಯಂದು ಉಡುಪಿಯಲ್ಲಿ ವಿಶ್ವಪ್ರಿಯರೂ ವೃಂದಾವನಸ್ಥರಾದರು. ಆಗಲೇ ನೇತುಮಾಧವ ಸೂರಿಗಳ 'ವಿಶ್ವಪ್ರಿಯ ವಿಲಾಸ'ವೂ, 1867ರಲ್ಲಿ ಕೊಚ್ಚಿಯವರ 'ವಿಶ್ವಪ್ರಿಯ ಲೀಲಾವಿಲಾಸ'ವೂ ರಚಿತವಾದವು.[123] ಇವೆರಡೂ ವಾದಿರಾಜರ ಹಾಗೂ ವೃಂದಾವನಾಖ್ಯಾನದ ಪ್ರಾಮಾಣ್ಯಬೋಧಕ ಗ್ರಂಥ —

> ಯದ್ವೃಂದಾವನಮಾವಿಶ್ಯ ವಾದಿರಾಜೋವದದ್ದ್ವಿಜೇ
> ನಿಧೇಸ್ತುಲ್ಯಂ ತದಾಖ್ಯಾನಮುದ್ಧೃತ್ಯ ಸುಖದೋಹಿನಃ ।। ವಿ.ಪ್ರಿ.ವಿ. 4,17.

ವೃಂದಾವನ ಪ್ರವೇಶ ಮಾಡಿ ವಾದಿರಾಜರು ದ್ವಿಜನ ಸ್ವಪ್ನದಲ್ಲಿ ಹೇಳಿದ ಸಂಪತ್ಸದೃಶ ಆಖ್ಯಾನವನ್ನುದ್ಧರಿಸಿ ವಿಶ್ವಪ್ರಿಯರು ಸ್ವಶಿಷ್ಯರಿಗೆ ಸುಖಪ್ರದರೆನಿಸಿದರು.

134 ವರ್ಷಗಳ ಹಿಂದೆ ಲಕ್ಷ್ಮೀಪತಿಯು ಕನಸಿನಲ್ಲಿ ಹೇಳಿದ ಭವಿಷ್ಯದ್ಘಟನೆ ಹೇಗೆ ನಿಜವಾಗಿವೆ ಎಂಬುದಕ್ಕೆ ಹೆಚ್ಚಿನ ನಿದರ್ಶನಗಳಿವು ಫಲೋಪಲಬ್ಧ ಪ್ರಮಾಣ ಎನಿಸಿವೆ —

---

122. ಇವರು ಆಖ್ಯಾನದ 17 ಅಧ್ಯಾಯಗಳಿಗೆ ವ್ಯಾಖ್ಯಾನ ರಚಿಸಿದ್ದು ಸು.1860 ರಲ್ಲಿ; ಮಿಕ್ಕ 5 ಅಧ್ಯಾಯ ಬುಕ್ಕೀಬಾಗ ಶ್ರೀನಿವಾಸಾಚಾರ್ಯರವು ಈ ಶತಕದಲ್ಲಾಗಿವೆ.

123. ಇವೆರಡೂ ಸಂಸ್ಕೃತದಲ್ಲಿವೆ, 5 ಅಧ್ಯಾಯಗಳ ಕೃತಿ. ಮೊದಲಿನದು ಅಪ್ರಕಟಿತ (ತುಮಕೂರಿನ ಬಿ.ಪಿ.ನಾರಾಯಣರಾಯರಲ್ಲಿ ಪ್ರತಿಯಿದೆ); ಎರಡನೆಯದು 1889ರಲ್ಲಿ ಪ್ರಕಟಿತ.

1) ವಾದಿರಾಜರು ವಿಶ್ವಾಧೀಶರನ್ನು ಕುರಿತು ನಾಗಶಯನನ (ಕೃಷ್ಣಾರ್ಯ) ಸುತನಿಗೆ ಸಂಸ್ಥಾನ ಕೊಡುವುದೆಂದಿದ್ದಾರೆ (ಆಖ್ಯಾನ 11— 41,43,44); ವಿಠಲಾಚಾರ್ಯ (ವಿಶ್ವೇಶತೀರ್ಥ)ರಿಗೂ ಹಾಗೆಂದೇ ಹೇಳಿ (17— 100,100,102) ಅಧಿಪತಿಸುವವರನ್ನು ದೂರವಿಡಲಾದೇಶಿಸಿದ್ದಾರೆ (14— 10,11). ಆಖ್ಯಾನೋಕ್ತ ನಾಗಶಯನರನ್ನು ಕೊಚ್ಚಿಯವರು ಕೃಷ್ಣಾರ್ಯ ಎಂದರೆ, ಸೇತುಮಾಧವರು ಅನಂತ ಎನ್ನುವರು; ಇವರೆಲ್ಲ ಒಂದೇ (11— 63,64,65).

2) ವಿಪ್ರ ಉಪವಾಸಗೈದುದು ಆಖ್ಯಾನೋಕ್ತ (13— 84,10— 104,106); ಕೊಚ್ಚಿಯವರ ಕೃತಿಯಲ್ಲಿ ಅನ್ನ ಬಿಟ್ಟು ಅರಳಿಹಿಟ್ಟು ತಿಂದು ಇದ್ದುದುಕ್ತ (1— 19, 3— 19,35,36).

3) ವಾದಿರಾಜರು ವಿಪ್ರನಿಗೆ ವ್ಯಾಸಪೂಜಾಧಿಕಾರ ಹೇಳಿದ್ದಾರೆ (2— 47,48); ಅದಿಲ್ಲದೆ ಇಂದ್ರಪದವಿಲ್ಲ ಎಂದಿದ್ದಾರೆ (4— 12,24); ತಮ್ಮ ಸನ್ನಿಧಿಯಲ್ಲಿ ಶಾಸ್ತ್ರಾಧ್ಯಯನಗೈಸುವೆವೆಂದಿದ್ದಾರೆ (4— 64). ಮಧ್ಯತಾಲವನ್ನು ಎಡಗಿವಿ ಎಂದೂ, ವ್ಯಾಸಮುಷ್ಟಿಯನ್ನು ಸನ್ಮಣಿ ಎಂದೂ, ವ್ಯಾಸರಾಯರಿಟ್ಟುದನ್ನು ಕಾಮಣಿ ಎಂದೂ, ಹಯಗ್ರೀವನನ್ನು ಬಲಗಿವಿ ಎಂದೂ ಸಂಕೇತಿಸಿದ್ದಾರೆ (5— 40,41). ವ್ಯಾಸಾಸನಯನ (10— 71,13— 30) ನಿಜವಾಗಿದೆ (ಕೊಚ್ಚಿಯವರಲ್ಲಿ 2— 18,19,20); ವಿಪ್ರನಲ್ಲಿದ್ದ ಮಧ್ಯತಾಲದಿಂದ ಅನ್ಯತ್ರ ವ್ಯಾಸಾರ್ಚನೆಗೈವೆನೆಂದುದೂ ದಿಟವಾಗಿದೆ (ಆಖ್ಯಾನ 6— 60 ರಿಂದ 67).

4) ಪೂರ್ವಾಶ್ರಮದಲ್ಲಿ ಕಮಲನಾಭ ಎನಿಸಿದ್ದ ಅಷ್ಟಮಠೀಯ ಯತಿ ನಿರ್ಮಾಲ್ಯವೆಸೆದು ಜ್ಞಾನ ದೃಷ್ಟಿ ಕಳೆದುಕೊಂಡುದೂ ದಿಟವಾಗಿದೆ (ಆಖ್ಯಾನ 21— 14, ಕೊಚ್ಚಿಯವರಲ್ಲಿ 4— 1,2).

5) ಗುರುರಾಜರು ವಿಪ್ರನಿಗೆ ಯಾಗ ಮಾಡಿಸು— ತೊಂದರೆಯಾಗದು ಎಂದಂತೆ (3— 12) ಸೀತಾಪತಿಯಿಂದ ಯಾಗಗೈಸಿದರು (ಶಿಷ್ಯ ಭೂಸುರವರೇಣ ಕಾರಯನ್ ಅಗ್ನಿಹೋತ್ರಮುಖೇಷ್ಟಿ ಸಂತತಿಃ 11 — ಕೊಚ್ಚಿಯವರ ನುಡಿ.

6) ನೋಡೆಂದು ಮಠಕ್ಕೆ ಹಚ್ಚಿದ ಕಿಚ್ಚು ಪಕ್ಕದ ಮನೆಗೆ ತಾಗಿದ್ದು (ಆಖ್ಯಾನ 4–6,7,8; ಸೇತುಮಾಧವರ ಕೃತಿಯಲ್ಲುಕ್ತ).

7) ಆಚಾರ್ಯಾರ್ಚಿತ ಶೇಷಶಯನನ ಪೂಜೆ ಮಾಡಿದರೆ ನನ್ನ ಸಂಸಾರ ನಾಶವಾಗುವುದೆಂದಿದ್ದಾರೆ ಸೀತಾಪತಿಗೆ (15–30,31); ಅವರು ವರಾಹತೀರ್ಥರಾದುದು ನಿಜ (ಕೊಚ್ಚಿಯವರಲ್ಲಿ 4,3).

8) ವಿಪ್ರನಿಗೆ ಭವಿಷ್ಯಜ್ಜನ್ಮದಲ್ಲಿ ಶಿಬಿಕಾರೋಹಣಾದಿ ವೈಭವ ಸೂಚಿತವಾಗಿದ್ದುವು (4–90; 12–1,2). ಕೊಚ್ಚಿಯವರು ಸಂಸ್ಥಾನಿಕರಿಂದೊದಗಿದ ಶಿಬಿಕಾರೋಹಣ ವರ್ಣಿಸಿದ್ದಾರೆ (5–5).

9) ವಿಶ್ವಪ್ರಿಯರ 3ನೆಯ ಪರ್ಯಾಯಕ್ಕೆ ಮಾಟರಾಜನ ನೆರವು (ಆಖ್ಯಾನ 13–78; ಕೊಚ್ಚಿಯವರಲ್ಲಿ 4–34).

10) ವಾದಿರಾಜರು ಮಹಾದ್ಗಲ ನಾರಸಿಂಹ (ಭಕ್ತ)ನ ಮೆಲ್ಲಂಥ ಬಂಧನ ಬಿಡಿಸುವೆನೆಂದಿದ್ದಾರೆ (13–73,74). ಸವಣೂರಿನ ಸತ್ಯಬೋಧರಲ್ಲಿ ಪುರಾಣಿಕರಾಗಿದ್ದು, ಸ್ವಾದಿಯ ಮೃತ್ತಿಕೆ ಪಡೆಯುತ್ತಿದ್ದ ಅಣ್ಣಯ್ಯಾಚಾರ್ಯರೇ ನವಾಬನಿಂದ ಬಂಧಿತರಾಗಿ ವಾದಿರಾಜನನ್ನು ಸ್ತುತಿಸಿ ಮುಕ್ತರಾದುದು; ಮುಂದೆ ಸತ್ಯಧರ್ಮರಾಗಿ ಹೊಳೆಹೊನ್ನೂರಲ್ಲಿ ವಿಶ್ವಪ್ರಿಯರನ್ನು ಕರೆಸಿ ವ್ಯಾಸಪೂಜೆ ಮಾಡಿಸಿದ್ದು (ಕೊಚ್ಚಿಯವರಲ್ಲಿ 2–30).

11) ಧೀಮನಕಟ್ಟೆಯ ರಘುಪ್ರವೀರರು ವಿಶ್ವಪ್ರಿಯರಲ್ಲಿ ಬಂದುದು (ಆಖ್ಯಾನ 21–73,74; ಕೊಚ್ಚಿಯವರಲ್ಲಿ 4,5ನೆಯ ವಿಲಾಸ). ರಘುಪ್ರವೀರರು ಆಖ್ಯಾನ ಪ್ರಾಮಾಣ್ಯ ಬೋಧಿನಿಯಲ್ಲಿ ವಿಶ್ವಪ್ರಿಯರಿಗೆ ತುಂಗಾತೀರದ ಗೃಹ–ಭೂದಾನವಾಗಲು ಕಮಲನಾಭಾದಿ ಕುಹಕಿಗಳಿಗೆ ಸಂತಾಪವಾದುದು ಪ್ರತ್ಯಕ್ಷ ಎಂದಿದ್ದಾರೆ. (ಈ ಅಂಶ 1850ರಲ್ಲಿ ನರಸಿಂಹಾಚಾರ್ಯಸುತ ಸೇತುಮಾಧವರಿಂದ ರಚಿತವಾದ 'ಶ್ರೀಮದ್ವೃಂದಾವನಾಖ್ಯಾನ ಪ್ರಾಮಾಣ್ಯ ಸಂದರ್ಪಣ' ಎಂಬ ಕೃತಿಯಲ್ಲೂ ಉಕ್ತ).

ಹೀಗೆ ವೃಂದಾವನಾಖ್ಯಾನದಲ್ಲಿ ವಾದಿರಾಜರು ಹೇಳಿದ್ದಕ್ಕೆ ವಿಶ್ವಪ್ರಿಯರ ಜೀವನ ಚರಿತ್ರೆದಲ್ಲಿ ಸಂವಾದಗಳಿರುವುದರಿಂದಲೂ ಆಖ್ಯಾನ ಗ್ರಂಥಕ್ಕೆ ಪ್ರಾಮಾಣ್ಯವಿದೆ; ಅದರಿಂದ ಅಲ್ಲಿ ಹೇಳಿದ ಅವರ ಋಜುತ್ವಕ್ಕೂ ಪ್ರಾಮಾಣ್ಯವಿದೆ.

## ಋಜುತ್ವ ವಿರೋಧ ಪರಿಹಾರ

ವಾದಿರಾಜರ ಋಜುತ್ವವನ್ನು ಪ್ರಮಾಣಪೂರ್ವಕ ಸಿದ್ಧಾಂತಗೊಳಿಸಿದರೂ, ಸುಮಾರು 1860ರಿಂದೀಚೆಗೆ ಅದನ್ನು ವೈಯಕ್ತಿಕ ದ್ವೇಷದ ಫಲವಾಗಿ ವಿರೋಧಿಸುವ ಪಕ್ಷವೊಂದು ಹುಟ್ಟಿಕೊಂಡಿದೆ. ಕಾರಣ, ವಾದಿರಾಜರ ಋಜುತ್ವ ಸಮರ್ಥನೆಯೂ ಮುನ್ನಡೆದು ಬಂದಿದೆ, ಇನ್ನಷ್ಟು ಪುಷ್ಟಿ ಪಡೆಯುತ್ತ. ಈ ಪಕ್ಷ–ಪ್ರತಿಪಕ್ಷಗಳ ನಾಯಕ–ಪ್ರತಿನಾಯಕರೆಂದರೆ ಜಮಖಂಡಿ ವಾದಿರಾಜಾಚಾರ್ಯರು (1827–96) ಮತ್ತು ಅವರ ಸಹಪಾಠಿಯಾಗಿದ್ದ ಕೊರ್ಲಹಳ್ಳಿ ಸತ್ಯಬೋಧರಾಯಾಚಾರ್ಯರು (ಇವರೇ ಉತ್ತರಾಧಿಮಠಸ್ಥ ಸತ್ಯಧೀರತೀರ್ಥರೆನಿಸಿದ್ದರು, 1879–86).

ಹಾನಗಲ್ಲ ಶ್ರೀನಿವಾಸಾಚಾರ್ಯರು ಉತ್ತರಾದಿಮಠೀಯರಾದರೂ, ವಿಶ್ವಪ್ರಿಯರಿಂದ ವಾದಿರಾಜರ ಸ್ವರ್ಣ ವೃಂದಾವನ ಹೊಂದಿ, ವಾದಿರಾಜಾಚಾರ್ಯರನ್ನು ಮಗನಾಗಿ ಪಡೆದರು, ಕೃಷ್ಣಾಪುರಮಠದ ವಿದ್ಯಾಧೀಶರಿಂದ ಗಾಯತ್ರಿ ಮಂತ್ರೋಪದೇಶ ಮಾಡಿಸಿದರು. 1837–44ರ ಅವಧಿಯಲ್ಲಿ ವಾದಿರಾಜಾಚಾರ್ಯರೂ ಸತ್ಯಬೋಧರಾಯಾಚಾರ್ಯರೂ ಚಿತ್ರಾಪುರದ ಮಾಯಿ ಶ್ರೀನಿವಾಸಾಚಾರ್ಯರಲ್ಲಿ ಅಧ್ಯಯನಗೈದರು. (ಈ ಶ್ರೀನಿವಾಸಾಚಾರ್ಯರೇ ಉತ್ತರಾದಿಮಠದ ಸತ್ಯಪರಾಕ್ರಮತೀರ್ಥರು, 1872–79). ನಂತರ ವಾದಿರಾಜಾಚಾರ್ಯರು ಕೃಷ್ಣಾಪುರಮಠದಲ್ಲಿ 10 ವರ್ಷ ಸುಧಾ ಓದಿದರು; ಜಮಖಂಡಿಯಲ್ಲಿ ವಾಸ ಮಾಡುತ್ತಿದ್ದುದರಿಂದ ಅದನ್ನೇ ಅಡ್ಡಹೆಸರಾಗಿ ಮಾಡಿಕೊಂಡರು. ಕಮಲಾಬಾಯಿಯನ್ನು ವರಿಸಿ ಕೃಷ್ಣ–ಮಾಧವ–ಜಗನ್ನಾಥ–ಶ್ರೀನಿವಾಸ ಎಂಬ ಪುತ್ರರನ್ನು ಪಡೆದರು. ಬಳಿಕ ತಾವು ಜನಿಸಿದ ಬಳ್ಳಾರಿ ಜಿಲ್ಲೆಯ ಶಿರಗುಪ್ಪದಲ್ಲಿದ್ದು ವಾದಿರಾಜರ ವೃಂದಾವನ ಸ್ಥಾಪಿಸಿದರು (1870). ಶ್ರೀದವಿಠಲಾಂಕಿತ ಕರ್ಜಗಿ ದಾಸಪ್ಪನವರ ಪ್ರಭಾವದಲ್ಲಿದ್ದು ತಂದೆಯ ಮೂಲಕ ಹರಿದುಬಂದ 'ಹರಿಕಥಾಮೃತಸಾರ'ಕ್ಕವರು

ಸಂಸ್ಕೃತದಲ್ಲಿ 2 ವ್ಯಾಖ್ಯಾನ ರಚಿಸಿರುವುದು, ಕನ್ನಡಕ್ಕೆರಡು ಕೋಡು ಮಾಡಿಸಿದಂತೆ. 'ಭಾವಸಾಧನಾ' ವ್ಯಾಖ್ಯಾನಾಂತ 3 ಕನ್ನಡ ಭಾಮಿನಿ ಷಟ್ಪದಿಗಳಿಂದ ಇವರೇ ಇಭವರದ ವಿಠಲಾಂಕಿತರೆಂದು ಸ್ಪಷ್ಟ. (ಈ ಅಂಕಿತವನ್ನು ಭೀಮೇಶವಿಠಲಾಂಕಿತ ಹೊನ್ನಾಳಿ ಭೀಮಪ್ಪನವರಿಂದ ಪಡೆದಂತಿದೆ). 1866ರಲ್ಲಿ ಕಾಶಿಗೆ ಹೋಗಿ ಸಂಸ್ಕೃತದಲ್ಲಿಯೇ 'ವ್ಯಾಸುದಾಸ ಸಿದ್ಧಾಂತ ಕೌಮುದಿ' ಎಂಬ ಇನ್ನೊಂದು ವ್ಯಾಖ್ಯಾನ ರಚಿಸಿದರು; ಉಡುಪಿಯ ಪರ್ಯಾಯದಲ್ಲಿ ಪ್ರವಚನವನ್ನು ನೀಡಿದರು. ಇದಕ್ಕೆ ಮೊದಲು 1862ರಲ್ಲಿ ಕೂಡ ಸುಧಾ ಪ್ರವಚನ ನೀಡಿ, ಕುಂಭಕೋಣೆಯ್ಯಿದಿದ ವಾದಿರಾಜಾಚಾರ್ಯರು 500 ರೂ.ಗಳ ಪಣವೊಡ್ಡಿ ಋಜುತ್ವ ಚರ್ಚೆಗಿಳಿದಿದ್ದರು; ಆಗಲೇ ಸತ್ಯಮಂಗಲದ ಅನಂತನೆಂಬ ವಿಪ್ರನಿಂದ ಬ್ರಹ್ಮಾಂಡ ಪುರಾಣದ ಅಬ್ಜಾರಣ್ಯ ಮಹಾತ್ಮ್ಯೆಯ 2ನೆಯ ಭಾಗವೆಂದು ವಿಶ್ವಪ್ರಿಯರನ್ನು ವೃಂದಾವನಾಖ್ಯಾನವನ್ನು ಟೀಕಿಸುವ (ಮೊದಲ ಮೂರಧ್ಯಾಯಗಳಿಗೆ ವಿಸಂಗತವಾದ) 4–5ನೆಯ ಅಧ್ಯಾಯಗಳನ್ನು ಪ್ರಕಟಿಸಿ,[124] ಋಜುತ್ವ ವಿರೋಧೀ ಪುರಾಣ ಹೇಳಿಸಲಾಗಿತ್ತು. 1863ರಲ್ಲಿ ಕೊಚ್ಚಿಯಿಂದ ಕೊಯಮುತ್ತೂರಿಗೆ ಬಂದ ವಿಶ್ವಪ್ರಿಯರು ರಂಗಪ್ಪನವರಲ್ಲಿದ್ದಾಗ, ಜಿನತ್ಯಪರಾಯಣರು ಅನೆಯ ಮೆರವಣಿಗೆ ಮಾಡಿಸಿಕೊಂಡು ಬರಲು ಸ್ವಲ್ಪ ಕಲಹವಾಯಿತು. (ಆಗ ವಾದಿರಾಜಾಚಾರ್ಯರು ಆನೆ ಮುಷ್ಟಿಪ್ರಹಾರಗೈದರೆಂದು ಕಥೆಯಿದೆ). ಬೆಳಗಾವಿಯ ಶಹಾಪುರದಲ್ಲಿ ವಾದಿರಾಜರ ವೃಂದಾವನ ಆಗಲೇ ಸ್ಥಾಪಿತವಾಯಿತು, ವಾದಿರಾಜಾಚಾರ್ಯ ಶಿಷ್ಯ ವಾಸುದೇವಾಚಾರ್ಯರಿಂದ. (ಇವರೇ ಶಹಾಪುರಾಚಾರ್ಯರು). 1872ರಲ್ಲಿ ಸತ್ಯಪರಾಕ್ರಮರೂ, 1873ರಲ್ಲಿ ಸೋದೆಯ ವಿಶ್ವಾಧೀಶರೂ ವಾದಿರಾಜಾಚಾರ್ಯರ ಪಾಂಡಿತ್ಯ ಮನ್ನಿಸಿದರು. 12–11–1876 ರಂದು ಆಚಾರ್ಯರು ಕೊಯಮುತ್ತೂರಿನ ಹನುಮಂತಾಚಾರ್ಯರೊಡನೆ ವಾದ ಮಾಡಿ[125] ಪ್ರಕ್ಷಿಪ್ತ ಪುರಾಣ ಭಾಗದ ಪ್ರತಿಯನ್ನು ಸುಟ್ಟು, ಕುಂಭಕೋಣೆಗೆ ಹೋಗಿ ಮೂಲ ಪ್ರತಿಯನ್ನೂ ದಹಿಸಿ, ರಘು ಪ್ರವೀರರನ್ನು ಸಂತಸಗೊಳಿಸಿದರು. (ಆಚಾರ್ಯರು 'ಋಜುತ್ವವಿರೋಧಿ ಕಪೋಲ ಚ ಪೇಟಿಕಾ' ಗ್ರಂಥ ರಚಿಸಿದ್ದು ಪ್ರಕ್ಷಿಪ್ತ ಭಾಗಕ್ಕೆ ಉತ್ತರವಾಗಿಯೇ).[126]

---

124. ಎಂ.ಗೋವಿಂದರಾಯರ ಹರಿಭಕ್ತವಿಜಯ (1)ರ ಪರಿಶಿಷ್ಟ 4ರಲ್ಲಿ ಉಧೃತ. (5ನೆಯದು ಮಾತ್ರ)

125. ಅದೇ, 1ರಲ್ಲಿ ಉದ್ಧೃತ.

126. ಅದೇ, 5ರಲ್ಲಿ ಉದ್ಧೃತ.

ಸತ್ಯಪರಾಕ್ರಮರಿಂದ ರಾಜಿಶಾಂತಿ ಏರ್ಪಟ್ಟ ಬಳಿಕ, ಬದರಿ ಯಾತ್ರೆಗೆ ತೆರಳಿ ಮೊದಲ ಮಗನನ್ನು ಕಳೆದುಕೊಂಡು 1879ರಲ್ಲಿ ಮರಳಿದರು. ಅಷ್ಟರಲ್ಲಿ ಸತ್ಯಪರಾಕ್ರಮರ ಕಾಲವಾಗಿ ಸತ್ಯವೀರರಿಗೆ ಪೀಠವಾಯಿತು, ಸಹಾಧ್ಯಾಯಿ ಮಾತ್ಸರ್ಯ ಹೆಡೆ ಎತ್ತಿತು. 1884ರ ತಾರಣ ಸಂವತ್ಸರ ಭಾದ್ರಪದದಲ್ಲಿ ಮದ್ರಾಸದ ವಿಧವಾ ಪುನರ್ವಿವಾಹ ಖಂಡನ ಸಭೆಯಾಗಿ, ನವರಾತ್ರಿಯ ವಾದಿರಾಜಾಚಾರ್ಯರ ಉಪನ್ಯಾಸ ಮೆಚ್ಚಿ 'ವಾದಿರಾಜ ಮೃತ್ತಿಕಾ ಸಮ್ಯ ಪರೀಕ್ಷೆ ಹಚ್ಚಬಹುದು' ಎಂದ ಸತ್ಯವೀರರ ಮನವನ್ನು ಮಠೀಯರು ಕಲುಷಿತಗೊಳಿಸಿದ ಕಾರಣ, 1885ರ ಜನವರಿ (ದ್ವಾದಶಿಯಂದು) ವಾದಿರಾಜಾಚಾರ್ಯರಿಗೆ ಬಹಿಷ್ಕಾರವಾಯಿತು. 'ಋಜುತ್ವ ಪ್ರಮಾಣ ನಾವು ನೋಡಿದ ಯಾವ ಗ್ರಂಥದಲ್ಲೂ ಕಾಣಲಿಲ್ಲ' ಎನ್ನುವಂಥ ಅಭಿಪ್ರಾಯಗಳುಳ್ಳ 'ಮಾರ್ತ್ತಿಕ ಗರ್ವನಿರ್ವಾಪಣ' ಎಂಬ ಕೃತಿಯನ್ನೂ ಪ್ರಕಟಿಸಲಾಯಿತು; ವಾದಿರಾಜಾಚಾರ್ಯರು ಇದಕ್ಕುತ್ತರವಾಗಿ 'ಚಕ್ಷುಷೀ ಉನ್ಮೀಲ್ಯ ಪಶ್ಯ' ಎನ್ನುವಂತೆ ಪ್ರಮಾಣ ಎತ್ತಿ ತೋರಿದ 'ಮೃತ್ತಿಕಾ ದ್ರೋಹಿ ಗರ್ವನಿರ್ವಾಪಣ' ರಚಿಸಿದರು. ಕಾರ್ತಿಕ ಶುದ್ಧ 'ಏಕಾದಶಿಯಂದೇ ಮದ್ರಾಸ ತಿರುವಲ್ಕೇಣಿ (Triplicane) ಸಭೆಯಲ್ಲಿ ಸತ್ಯವೀರರು "ವಾದಿರಾಜರ ಋಜುತ್ವದಲ್ಲಿ ಪ್ರಮಾಣವಿಲ್ಲ, 'ಸ್ವಪ್ನವೃಂದಾವನಾಖ್ಯಾನ' ಅಪ್ರಮಾಣ, 'ಮೃತ್ತಿಕಾಧಾರಣ "ನಿಂದ್ಯ" ಎಂದಿದ್ದರು. ಇದಕ್ಕುತ್ತರವಾಗಿ 'ಸುಮೃತ್ತಿಕಾದಿ ಮತ್ತಗಜಾಂಕುಶ (1885) ಗರ್ವನಿರ್ವಾಪಣ' (1886) ಮೊದಲಾದ ಕೃತಿ ಬಂದುವು.[127] ಮಾಘ ಶುದ್ಧ 1ರಂದು ಉಡುಪಿಯಲ್ಲಿ ವಿಶ್ವಾಧೀಶರೂ ಸಭೆ ಸೇರಿಸಿ ಉತ್ತರಿಸಿದ್ದೇ ಲಕ್ಷ್ಮೀ ನಾರಾಯಣರಿಂದ ಲಿಖಿತವಾಗಿ 'ಋಜುತ್ವ ಚಂದ್ರೋದಯ' ಎನಿಸಿತು (1886). ಅಷ್ಟರಲ್ಲಿ ಪೀಠ ಪಡೆದ ಸತ್ಯಧೀರರೆದುರು ಚಿತ್ತಾಪುರದ ಸಭೆಯಲ್ಲಿ ವಾದಿರಾಜಾಚಾರ್ಯರು ಮೃತ್ತಿಕಾ—ಆಖ್ಯಾನ ಸಹಿತ ಹೋಗಿ ಜಯಗಂಟೆ ಬಾರಿಸಿದರು. ಅದರಿಂದ 'ಯತ ಶ್ವೇತಾ ಯತಮೋಪೀಹ

---

127. ಇವಲ್ಲದೆ ನೃಸಿಂಹಾರ್ಯಸುತ ಸೇತುಮಾಧವರ ಆಖ್ಯಾನ ಪ್ರಾಮಾಣ್ಯ ಸುದರ್ಪಣ (1850), ಕೋವೆತ್ತೂರ ಮಧ್ವರಾಯಾಚಾರ್ಯರ ಋಜುತ್ವ ಸುದರ್ಪಣ (1880), ಎಳತ್ತೂರ ಸೇತುಮಾಧವಾಚಾರ್ಯರ ಋಜುತ್ವ ಪ್ರಮಾಣ ಸಂಗ್ರಹ (1884), ಆನಂದತೀರ್ಥಾಚಾರ್ಯರ ಋಜುತ್ವ ಮಲ್ಲಿಕಾ (1886), ಉಡುಪಿ ವಾಸುದೇವಾಚಾರ್ಯರ ಆಖ್ಯಾನ ಅಪ್ರಾಮಾಣ್ಯ ಶಂಕಾಪಂಕಕ್ಷಾಳನ (1886), ನಾರಾಯಣಾಚಾರ್ಯಾದಿಗಳ ಸಮುಪಾಜಾ ವಿಶಲ್ಯ ಖಂಡನಾದಿ 3 ಕೃತಿ (1886) ಮೊದಲಾದುವೂ ಆಗಲೇ ಬಂದುವು.

ಮೂಕೀಭೂತಾ ' ಎಂಬ ಅಖ್ಯಾನೋಕ್ತಿ ದಿಟವಾಯಿತು. 1886ರ ಕಾರ್ತಿಕದಲ್ಲಿ ಸತ್ಯವೀರರು ಕಾಲವಾದರು, ಫಾಲ್ಗುಣದಲ್ಲಿ ವಿಶ್ವಾಧೀಶರು ಸೋದೆಗೈತಂದ ಆಚಾರ್ಯರನ್ನು ಮರ್ಯಾದಿಸಿದರು.[128] ಆದರೆ ಕೊರ್ಲಹಳ್ಳಿ ಮನೆತನದವರೇ ಆದ ಸತ್ಯಧೀರರು (ಪೂರ್ವಾಶ್ರಮದ ಜಯಾಚಾರ್ಯರು) ಪರಂಪರೆ ಬಿಡಬಾರದೆಂಬಂತೆ ವಿರೋಧ ಮುಂದುವರಿಸಿದರು. ಚಿಕ್ಕೋಡಿಯಲ್ಲಿ ಆಚಾರ್ಯರಿಗೆ ತುಂಬ ಕಿರುಕುಳವಾಯಿತು; ಜ್ವರಗ್ರಸ್ತ ಮಗನೊಡನೆ ಬಂದಿಳಿದ ಆಚಾರ್ಯರನ್ನು ಮಧ್ಯಾಹ್ನದ ಬಿಸಿಲಲ್ಲೇ ಹೊರಹಾಕಲಾಯಿತು. ಇನ್ನು ತಾಳಲಾರದ ಆಚಾರ್ಯರು ಬಳ್ಳಾರಿ ಕೋರ್ಟಿನಲ್ಲಿ ಫಿರ್ಯಾದು ಕೊಟ್ಟರು. ಸತ್ಯಧೀರರು ಆಚಾರ್ಯರನ್ನು ಹೈದ್ರಾಬಾದಿಗೆ ಕರೆಸಿಕೊಂಡು ರಾಜಿಯಾದರು. ಆದರೂ ಮಠಾಧಿಕಾರಿಯು ಮುಖಾಂತರ ಒಳಗೊಳಗೇ ಕಿರುಕುಳ ಕೊಡುವುದು ನಡೆದೇ ಇತ್ತು.[128] ಮುಂದೆ ಬರಲಿದ್ದ ವೈಲಂಥಜನ್ಯದ ವೇಷಭೂಷಾಗ್ಯಂಯುಕ್ತಿದ್ದ ವಾದಿರಾಜಾಚಾರ್ಯರು ಆಗಾಮಿ ಕರ್ಮವನ್ನು ಆಗಲೇ ಅರಿತು ನವೆಸಿಕೊಂಡರು; 1896ರಲ್ಲಿ ಕಮಲಾಪುರದಲ್ಲಿ ಅವಸಾನ ಹೊಂದಿದರು. ಅವರ ಮಗ ಶ್ರೀನಿವಾಸಾಚಾರ್ಯರೇ ವೃಂದಾವನಾಖ್ಯಾನ ಪ್ರಕಟಿಸಿದರು (1925).

ಹೀಗೆ ಕಳೆದ ಶತಮಾನಾಂತ್ಯದಲ್ಲಿ ನಡೆದ ವೈಯಕ್ತಿಕ ಕಲಹ ಈ ಶತಮಾನದ ಪೂರ್ವಾರ್ಧದಲ್ಲಿ ಶಾಂತವಾಗಿತ್ತು. ಆದರೆ 1969ರಲ್ಲಿ ಪ್ರಭಂಜನ ಎಂಬ ಹೆಸರಿನಿಂದ ಪ್ರಾ. ವಿ. ಗುಂಡೂರಾಯರು 'ವಾದಿರಾಜ ಋಜುತ್ವ ವಿಚಾರ'ವನ್ನು ಸಂಸ್ಕೃತದಲ್ಲಿ 25 ಪುಟಗಳಷ್ಟು ಪ್ರತಿಪಾದಿಸಿ, ಪುನಃ ಬಿರುಗಾಳಿಯನ್ನೆಬ್ಬಿಸಿದರು. ಅದಕ್ಕುತ್ತರವಾಗಿಯೇ ಅವರ ಗುರು ಪ್ರಾ. ಎಚ್. ಸುಬ್ಬರಾಯರು (ಸ್ವತಃ ಸ್ಮಾರ್ತರಾಗಿದ್ದರೂ ವೈಷ್ಣವ ದೀಕ್ಷೆ ಹೊಂದಿದವರು) 400 ಪುಟಗಳ ಋಜುತ್ವ ಸಿದ್ಧಾಂತ ರಚಿಸಿದರು (1962). 1969 ರಲ್ಲಿಯೇ ಶಿವಮೊಗ್ಗದಿಂದ ವಾದಿರಾಜ ರಚಿತವೆಂಬ 21 ಪುಟಗಳ 'ನಯುಸಿದ್ಧಾಂತ ಸಂಗ್ರಹ'ವು ಪ್ರಕಟವಾಗಿದ್ದು, ಐತಿಹಾಸಿಕ ವಿಸಂಗತಿ ಎನಿಸುವ (ವಾದಿರಾಜರ 5ನೆಯ ಪರ್ಯಾಯಕ್ಕೆ ಅದ್ಭುತರಾಯನ ನೆರವು ಬರೆದ) ಅವತಾರಿಕೆ— ಅಕ್ಷೋಭ್ಯತೀರ್ಥ ಮಠದ

---

128. ಆಚಾರ್ಯರ Exposition ದಲ್ಲಿ ವಿವೃತ (1891) — ಮು. ಸಿ. ಪು. 85.

ರಾಮಧ್ಯಾನರ ಒತ್ತಾಯದನುಗ್ರಹಗಳನ್ನೊಳಗೊಂಡಿದೆ. (ರಾಮಧ್ಯಾನರ ಅಕಾಲಾವಸಾನವಾಗಿ ಮಠವೂ ಅನವಸ್ಥೆಗೀಡಾದುದು ತತ್ಫಲವೋ ಏನೋ?) ಸುಬ್ಬರಾಯರೇ 'ವೃಂದಾವನಾಖ್ಯಾನ ಕೃತಿ'ಯಲ್ಲಿ (1980) ಇದಕ್ಕೂ ಉತ್ತರಿಸಿದ್ದಾರೆ (ಪು.104— 106). ಅಂತೂ ವಾದಿರಾಜರ ನಂತರ ಸುಮಾರು 250 ವರ್ಷ ಇರದಿದ್ದ ವಿರೋಧ ಈ 100 ವರ್ಷಗಳಲ್ಲಿರುವುದು ಮೇಲಿನ ಚರ್ಚೆಯಿಂದ ಸುವಿದಿತ. 1931ರಲ್ಲಿ ಬಿ.ಎಸ್.ಕಮಲಾಪುರರು ಬರೆದ 'ಸತ್ಯಕಥಾ' ದಲ್ಲಿ ಉತ್ತರಾದಿ ಮಠೀಯ ಯತಿಗಳಿಗೆಲ್ಲ ಸ್ವರೂಪ ಸೂಚನೆ ಇದ್ದರೂ, ವಾದಿರಾಜರ ಋಜು ಸ್ವರೂಪ ಮಾತ್ರ ಇವರಿಗೆ ಬಾಧಕವೆನಿಸಿದೆ. ಆದ್ದರಿಂದ ಇದು ಪೂರ್ವಾಗ್ರಹವೆನಿಸುತ್ತದೆ. ಋಜುತ್ವಪರ ಪ್ರಮಾಣಗಳಿದ್ದೂ ಇಲ್ಲವೆಂಬವರಿಗೆ ತದಭಾವ ಸೂಚಕ ಪ್ರಮಾಣವೇನು ಎಂದು ಕೇಳಬೇಕಾಗುತ್ತದೆ. ಪ್ರಮಾಣ ವಿರೋಧವಿಲ್ಲದಲ್ಲಿ ಮಧ್ವಸಿದ್ಧಾಂತದಂತೆ ಋಜುತ್ವವನ್ನು ಸಿದ್ಧಾಂತವೆಂದು ಸಮ್ಮತಿಸಬೇಕಾಗುತ್ತದೆ.[129] 'ಅಪ್ರಾಮಾಣ್ಯ ಶಂಕಾ ದುಷ್ಟ ಬುದ್ಧಿನಾಮೇವ' (ತತ್ತ್ವನಿರ್ಣಯ, ಪು.178). ಈ ಮನೋದೋಷ ದುರಾಗ್ರಹವೇ ಸರಿ. ಇದರಿಂದ ಭಕ್ತಿಯಲ್ಲಿ ವ್ಯತ್ಯಾಸವಾಗಿ ವಾದಿರಾಜರನ್ನು 'ಯಾರೋ ದೊಡ್ಡವರು' ಎಂದು ಮಾತ್ರ ಹೇಳುವಂತಾಗಿದೆ.[130] ಇದು ಮಿಥ್ಯಾ ಜ್ಞಾನ. 'ಋಜುಗಳನ್ನು ಸಾಮಾನ್ಯ ಜ್ಞಾನಿಗಳೆಂದು ಭಾವಿಸುವುದು ದ್ರೋಹ' ವೆಂದಿದೆ ಬೃಹದ ಭಾಷ್ಯ. ನಿಷ್ಪಕ್ಷಪಾತ ದೃಷ್ಟಿಯಿಂದ ಪರಿಶೀಲಿಸಿದರೆ ವಾದಿರಾಜರ ಋಜುತ್ವವೂ ಆಖ್ಯಾನ ಪ್ರಾಮಾಣ್ಯವೂ ಖಚಿತವೆನಿಸುತ್ತವೆ. 'ಆಖ್ಯಾನಕ್ಕೆ ವಾದಿರಾಜರ ಋಜುತ್ವವೇ ಪ್ರಧಾನ ವಿಷಯ. ಈ ಕಾಲದಲ್ಲಿ ನಿರ್ವಿಘ್ನ ಸಾಧನೆ—ಸಾತ್ತ್ವಿಕ ಗುಣಾಭಿವೃದ್ಧಿ ಆಗಬೇಕೆಂದಿಚ್ಛಿಸುವ ಮುಮುಕ್ಷುಗಳಿಗೆ ಆಖ್ಯಾನ ಬಿಟ್ಟರೆ, ಅಭಯ ನೀಡಿ ಸಂತೈಸುವ

---

129. ನ ಚ ಅವಿರೋಧೇ ಪ್ರಸಿದ್ಧಃ ಪರಿತ್ಯಜ್ಯತೇ (ಬ್ರ.ಸೂ.1— 1— 1); ವಿರುದ್ಧ ಪ್ರಮಾಣವಿಲ್ಲದಲ್ಲಿ ಪ್ರಸಿದ್ಧವಾದುದನ್ನು ಬಿಡುವಂತಿಲ್ಲ.

130. ಅನುವ್ಯಾಖ್ಯಾನ 3— ಉಪಾಸನಾ ಪಾದಾರಂಭದಲ್ಲಿ ಮಧ್ವರು 'ಪರಬ್ರಹ್ಮ ವ್ಯಾಸಾಖ್ಯಂ ಜ್ಞಾನ ರಶ್ಮಿವತೆ' ಎಂದುದಕ್ಕೆ ಜಯತೀರ್ಥರು 'ಕಶ್ಚನ ಮುನಿರ್ವ್ಯಾಸೋ ಬಭೂವ ಇತಿ ಸಮಾತ್ರಕಾರೇ ಭಕ್ತಿ ಮಾಂದ್ಯಂ ಮಾ ಭೂತ ಇತ್ಯತಃ ವಿಶೇಷ ಉಪಾದಾನಂ' (ನ್ಯಾಯಸುಧಾ, ಪು.527) ಎಂದಿದ್ದಾರೆ. ಎಂದರೆ ಇಲ್ಲಿ ಯಾರೋ ವ್ಯಾಸನೆಂಬ ಮುನಿ ಎಂದರ್ಥೈಸದೆ ಪರಬ್ರಹ್ಮ ವೇದವ್ಯಾಸನೆಂದೇ ಅರ್ಥೈಸುವುದು ಅಗತ್ಯ. ವಾದಿರಾಜರನ್ನು ಋಜುದೇವತೆ ಎಂದರಿಯುವುದು ಅಗತ್ಯ. ಈ ತಾರತಮ್ಯ ಜ್ಞಾನವಿರದ ಮಾಧ್ವರು ವಾದಿರಾಜರಿಗೂ ರಾಘವೇಂದ್ರಸ್ವಾಮಿಗಳೊಡನೆ ಹಸ್ತೋದಕ ಸಮರ್ಪಿಸುವಂತಾಗಿದೆ ಇಂದು.

ವಾದಿರಾಜರಂತಹ ಶರಣ್ಯರು ಬೇರೆ ಯಾರಿದ್ದಾರೆ? ಅಂತೆಯೇ —

ಸ್ವಪ್ನವೃಂದಾವನಾಖ್ಯಾನಂ ದಿವ್ಯಾದ್ಭುತ ಕಥಾಶ್ರಯಂ
ಪಠತಾಂ ಶೃಣ್ವತಾಂ ಚೈವ ಕಾಂಕ್ಷಿತಪ್ರದಮಂಜಸಾ ॥ ವಾ.ಗು.ಚ.7,25.

ಎಂಬುದು ಸಮಂಜಸ. (ಋಜುತ್ವ ಸಿದ್ಧಾಂತ, ಪು.105). ಎಷ್ಟೋ ಶ್ರೇಷ್ಠ ಭಕ್ತರು ಋಜುವೆಂದಾರಾಧಿಸಿದರೂ ಅದಕ್ಕೆ ಸ್ವಪ್ನಾದಿಗಳ ಮೂಲಕವೂ ನಿಷೇಧ ಒದಗದಿರುವುದು ವಾದಿರಾಜರ ಋಜುತ್ವ ಸಿದ್ಧಾಂತಕ್ಕೊಂದು ಅನುಮಾನ ಪ್ರಮಾಣ — 'ಅಪ್ರತಿಷಿದ್ಧಂ ಅನುಮತಂ'. ದೊಡ್ಡವರು ದುರುಪಾಸನೆಯನ್ನು ಹೇಗೆ ಸಮ್ಮತಿಸಿಯಾರು? ಹೇಗೆ ಪರಿಭಾವಿಸಿದರೂ ವಾದಿರಾಜರ ಋಜುತ್ವ ಸಿದ್ಧಾಂತವೇ ಸತ್ಯ. ಅದೇ ಅವರ ಸ್ವರೂಪವೂ ಹೌದು, ವ್ಯಕ್ತಿ ಮಹತ್ವದ ಮುಕುಟಮಣಿಯೂ ಹೌದು. ಅದನ್ನೇ ತೆಗೆದರೆ ಉಳಿವುದು ಯಾರೋ ದೊಡ್ಡವರೆಂಬ ಅಜ್ಞಾನದ ಅಸ್ಥಿಪಂಜರ ಮಾತ್ರ!

## 3. ಸಂಸ್ಕೃತ ಕೃತಿಗಳ ಸ್ಥೂಲ ಸಮಾಲೋಚನೆ

### ಧರ್ಮ – ಕಾವ್ಯಧರ್ಮ

ಭಾರತೀಯ ಕಾವ್ಯಮೀಮಾಂಸಕ ಆನಂದವರ್ಧನ ಹೊಸ ಸಿದ್ಧಾಂತ ಮಂಡಿಸದೆ ಭರತನ ರಸತತ್ತ್ವಕ್ಕೇ ಧ್ವನಿಯ ದಾರಿದೋರಿದಂತೆ, ವಾದಿರಾಜರು ಮಧ್ವ ಸಿದ್ಧಾಂತವನ್ನೇ ತರ್ಕಶಾಸ್ತ್ರಬದ್ಧವಾಗಿ ವ್ಯಾಖ್ಯಾನಿಸಿ ನೂರಾರು ಕೃತಿಗಳಿಂದ ವಿವರಿಸಿ ಗಟ್ಟಿಗೊಳಿಸಿದರು –

ವಿಸ್ತರಸ್ಯಾಸ್ಯ ಸರ್ವಸ್ಯ ಮೂಲ ಶಾಸ್ತ್ರ ಮಹಾರ್ಣವೇ
ದೃಷ್ಟವ್ಯಃ ತತ್ತ್ವಟನಾದ್ಯಾ ಮಣಿ ಸಂಗ್ರಹಿಣಾ ಮಯಾ ॥ (ಲಕ್ಷಾಲಂಕಾರ, ಪು.3)

ವಿಮತಗಳ ಆಪತ್ತು ತೊಡೆದು ತತ್ತ್ವವಾದ ನೆಲೆಗೊಳಿಸಲೆಂದೇ ಅವತರಿಸಿದ ಅವರು, ತಮ್ಮ ಹೆಸರು ಸಾರ್ಥಕವೆನಿಸುವಂತೆ ವಾದಿಸಿ, ಸಂಸ್ಕೃತ ರಚನೆಗಳಿಂದ ಪಂಡಿತರಿಗೂ ಕನ್ನಡ–ತುಳು ಕೃತಿಗಳಿಂದ ಪಾಮರರಿಗೂ ಆ ಸಿದ್ಧಾಂತ ಮನ ಮುಟ್ಟುವಂತೆ ಮಾಡಿದರು. ತಮ್ಮ ಬಹುಮುಖ ಪ್ರತಿಭೆಯಿಂದ ಸರ್ವಾನುಗ್ರಹಾರ್ಥ ತತ್ತ್ವವನ್ನು ಕಾವ್ಯಮಯವಾಗಿ ನಿರೂಪಿಸಿದರು. "He thinks in poetry and argues in it. His works show an intense personal fervour and passionate faith in the religion and metaphysical satisfyingness and superiority of Madhva Siddhanta"(B.N.K.Sharma, H.D.S.T., 192). ತತ್ತ್ವ ಮುಖ್ಯವಾದಲ್ಲಿ ಕಾವ್ಯ ಗೌಣವೆನಿಸುವುದು ನಿಜವಾದರೂ, ಋಜು ವಾದಿರಾಜರ ಅಪ್ರತಿಮ ಪ್ರತಿಭೆಯಿಂದ ಹೊಮ್ಮಿದ ಕೃತಿಗಳಲ್ಲಿ ಅದರ ಸ್ಪರ್ಶ ಮನೋಹರವಾಗಿದ್ದು, ಬೌದ್ಧಿಕ ಮಾನಸಿಕ ಆಹ್ಲಾದಗಳೆರಡೂ ಒದಗುತ್ತವೆ. ಅದರಿಂದ ಅವರ ಕೃತಿ ವಿಮರ್ಶೆಯಲ್ಲಿ ತತ್ತ್ವವಾದ ವೈಖರಿಯೊಡನೆ ಕಾವ್ಯಮಯ ನಿರೂಪಣೆಯ ರೀತಿಯನ್ನೂ ಗಮನಿಸುವುದಗತ್ಯ. ಆಗ ಮಾತ್ರ ಧರ್ಮ–ಕಾವ್ಯಧರ್ಮಗಳ ಸಮನ್ವಯ ಗೋಚರಿಸಿ, ಅವರ ಕೃತಿ ಕೇವಲ ಶಾಸ್ತ್ರ ಕಾವ್ಯವೆನಿಸದೆ, ಶಾಸ್ತ್ರವನ್ನೂ ಕಾವ್ಯವಾಗಿಸಿದ ಕಲಾಕೌಶಲ ಅರ್ಥವಾಗುತ್ತದೆ. ಅಂತೆಯೆ 'ಅವರ ಗ್ರಂಥಗಳಲ್ಲಿ ವಿದ್ಯಾವೈಭವ–ಪ್ರತಿಭಾವಿಶೇಷ–ತರ್ಕಬದ್ಧತೆ–ಪಾಂಡಿತ್ಯ ಪೂರ್ಣತ್ವ–ಅಪರೋಕ್ಷ ಜ್ಞಾನದರ್ಶನ–ಶಾಸ್ತ್ರ ವ್ಯುತ್ಪತ್ತಿಗಳು ಅದ್ಭುತ ರೀತಿಯಲ್ಲಿ ಕಂಡುಬಂದರೂ, ಅವರ ಕಲಾಪ್ರಿಯ–ಮಾನವೀಯ ಅಂತಃಕರಣ, ಕಾವ್ಯ ರಸಿಕತೆಗಳು ಎಲ್ಲ ಕಾಲಕ್ಕೂ ಅವರನ್ನು ವಿಭೂತಿ ಪುರುಷರನ್ನಾಗಿ ಮಾಡಿವೆ (ಕೊರಬ, ಶ್ರೀ ವಾದಿರಾಜರು, ಪು.356). ಕೆಲವು ಕೃತಿಗಳಲ್ಲಿ ಶಾಸ್ತ್ರ–ಕಾವ್ಯಗಳೆರಡೂ ಸಮತೂಕವಾಗಿ,

ಕೃತಿ ಯಾವ ಪ್ರಕಾರದ್ದೆಂದು ನಿರ್ಣಯಿಸುವುದೇ ಕಠಿಣವೆನಿಸುತ್ತದೆ. ಕಾರಣ, ಸಂಸ್ಕೃತ ಗ್ರಂಥಗಳನ್ನು ಸ್ಥೂಲವಾಗಿ ಶಾಸ್ತ್ರ–ವ್ಯಾಖ್ಯಾನ–ಕಾವ್ಯ–ನಾಟ್ಯ–ಸ್ತೋತ್ರ ಎಂಬ 5 ಭಾಗ ಮಾಡಿ ಎರಡೂ ಪರಾಲ್ಯ ಲಕ್ಷಿಸುವ.

ಶಾಸ್ತ್ರ ಗ್ರಂಥಗಳು

1. ಯುಕ್ತಿಮಲ್ಲಿಕಾ: ವಾದಿರಾಜರ ಸ್ವತಂತ್ರ ಶಾಸ್ತ್ರ ಗ್ರಂಥಗಳಲ್ಲಿದು ಶ್ರೇಷ್ಠ ಕೃತಿ (Master piece - Magnum opus). ಗುಣ–ಗಾತ್ರಗಳೆರಡರ ಮಹತ್ತ್ವ ಬೃಹತ್ತ್ವಗಳಿಂದ Monumental voluminous ಎನಿಸಿದೆ. 5379 ಅನುಷ್ಟುಪ್ ಶ್ಲೋಕ 5 ಸೌರಭಗಳಲ್ಲಿದೆ. 'ಗ್ರಂಥದ ಹೆಸರು ಮಲ್ಲಿಕಾ ಎಂದಿರುವುದರಿಂದ ಅದರ ಅಧ್ಯಾಯಗಳಿಗೆ ಸೌರಭ — ಎಂದರೆ ಸುವಾಸನೆ ಎಂಬ ಹೆಸರನ್ನಿಟ್ಟಿರುವುದುಚಿತವೇ ಆಗಿದೆ' (ಮಧ್ವಮತಪ್ರಸಾರ, ಪು.168, ಎನ್.ಕೆ.ನರಸಿಂಹಮೂರ್ತಿ). ಇದರಲ್ಲಿಯ ಯುಕ್ತಿ ವೈವಿಧ್ಯ ಮಲ್ಲಿಗೆಯ ಹೂವುಗಳಂತಿದ್ದು 'ಅಂತೇ ಸಿದ್ಧಸ್ಯ ಸಿದ್ಧಾಂತೋ ಮಧ್ವಸಾಕ್ಯಗಮ 'ಏವಹಿ' ಎಂಬಂತೆ ಸೊಗಸಾಗಿ ಅರಳಿವೆ.

(1) ಗುಣಸೌರಭವು 1019 ಶ್ಲೋಕಗಳಲ್ಲಿ ನಿರೂಪಿಸಿದ 39 ಅಂಶಗಳನ್ನು ಲಕ್ಷಿಸಿದರೆ, ಪರಬ್ರಹ್ಮನ ಗುಣಪೂರ್ಣತೆಯನ್ನು ಬ್ರಹ್ಮಸೂತ್ರದ ಪ್ರಥಮಾಧ್ಯಾಯದಂತೆ ಪ್ರತಿಪಾದಿಸಿದ್ದು ತಿಳಿಯುತ್ತದೆ. ಗ್ರಂಥಾರಂಭಕ್ಕೆ ವಾದಿರಾಜರೇ ಕೃತಿಯ ಮಹತ್ವ–ಮಾಧುರ್ಯಗಳನ್ನು ಸೂಚಿಸಿದ್ದಾರೆ —

ವಿದುಷಃ ಅವಿದುಷಃ ಅಪಿ ಇಷ್ಟಂ ಕಂ ಜನಂ ರಂಜಯೇತ ನಗೀಃ
ಭ್ರಮರೈಃ ಅಮರೈಶ್ಚ ಅರ್ಥ್ಯಂ ಕುಸುಮಂ ಕಃ ಪ್ರಮಾನ ತ್ಯಜೇತ ॥

ಪಂಡಿತ–ಪಾಮರ ಇಬ್ಬರಿಗೂ ಇಷ್ಟವಾಗುವಂತೆ ಹೇಳುವ ಕೃತಿಯಿದು ಯಾರನ್ನು ತಾನೇ ಮೆಚ್ಚಿಸದು? ದುಂಬಿಗಳೂ ದೇವತೆಗಳೂ ಅಶಿಸುವ ಹೂವುಗಳನ್ನು ಯಾರು ತಾನೇ ಬಿಡುವರು?

ನ ಸ್ನೇಹಾತ ನ ಚ ವಿಸ್ನೇಹಾತ ಯುಕ್ತ್ಯಾಕೃಷ್ಟೇನ ಚೇತಸಾ
ಯತಃ ಕೃತಾಸಿ ತತ್ತ್ವರ್ಗ ರಸಿಕಾನಾಂ ಮುದೇ ಭವ ॥

ಈ ಕೃತಿಯನ್ನು ಒಂದು ಸಿದ್ಧಾಂತದ ಅಭಿಮಾನದಿಂದಾಗಲಿ ಇನ್ನೊಂದರ ದ್ವೇಷದಿಂದಾಗಲಿ ರಚಿಸದೆ, ಯುಕ್ತಿಸಿದ್ಧ ಸಿದ್ಧಾಂತಕ್ಕೆ ಮಾರುಹೋಗಿ ಗೈದ ಕಾರಣ, ತರ್ಕ ರಸಿಕರಿಗೆ ಮುದ ನೀಡುವುದು.

ತುಲಯಾ ಮಲಯಾದ್ರ್ಯುತ್ಥ ಚಂದನೇನ ಇಂಧನಂಬಲು:
ಸಮಂ ಸಮಂತಾತ ಕುರುತಾತ ಗ್ರಂಥಗಂಧಂ ಕರೋತಿ ಕಃ ॥

ಅಜ್ಞರು ಚಂದನ–ಉರುವಲು ತೂಗಿ ಸಮತೂಕಗೊಳಿಸಬಹುದು, ಆದರೆ ಉರುವಲಕ್ಕೆ ಗಂಧ ಬಂದೀತೇ? ಯುಕ್ತಿಮಲ್ಲಿಕೆಯ ಗಾಂಭೀರ್ಯ ಮಾಧುರ್ಯ ಮಿಕ್ಕ ಕೃತಿಗಳಿಗೆಲ್ಲಿ?

ಅದ್ವೈತಿಗಳ ಮಾಯಾವಾದ– ಬ್ರಹ್ಮೈಕ್ಯ – ನಿರಾಕಾರ– ನಿರ್ಗುಣ– ಜಗನ್ಮಿಥ್ಯಾ ಬ್ರಹ್ಮನ ಅಜ್ಞಾನವಶತ್ವ ಭಗವನ್ನಿಂದೆಯಾಗಿ, ಭಕ್ತಿ ಆತ್ಮೋದ್ಧಾರ ಸಹಾಯಕವೆನಿಸವು. ಉದಾ — ನಿರ್ಗುಣತ್ವ ತಿಳಿಯಬಹುದಾದರೆ ಜ್ಞೇಯತ್ವ ಗುಣ ಒದಗಿ ನಿರ್ಗುಣತ್ವ ನಾಶವಾಗುವುದು; ನಿರ್ಗುಣತ್ವ ತಿಳಿಯದೆಂದರೆ ಅದು ಇದ್ದಹಾಗೇ ಅಲ್ಲ; ಕಾರಣ, ಬ್ರಹ್ಮ ನಿರ್ಗುಣನಲ್ಲ —

ಬೋದ್ಧವ್ಯಂ ಚೇನ್ನಿರ್ಗುಣತ್ವ, ನಿರ್ಗುಣತ್ವಂ ನ ಸಿಧ್ಯತಿ
ನ ಬೋದ್ಧವ್ಯಂ ನಿರ್ಗುಣತ್ವಂ ನಿರ್ಗುಣತ್ವಂ ನ ಸಿಧ್ಯತಿ ॥

ಒಬ್ಬನಲ್ಲಿ ನಿರ್ಗುಣ ಶಬ್ದಕ್ಕೆ ಗುಣರಹಿತನೆಂದರ್ಥವಲ್ಲ, ಪ್ರಾಕೃತ (ತ್ರಿ)ಗುಣಾತೀತ ಎಂದರ್ಥ. ಎಲೆ–ಅಡಿಕೆ–ಸುಣ್ಣ ಸೇರಿ ಬಣ್ಣ (ರುಚಿ) ಬರುವಂತೆ ಪಂಚಭೂತಾತ್ಮಕ ಶರೀರಸ್ಥವಾಗುವುದು ಚೈತನ್ಯ. ಪಂಚಭೂತ ಒಂದೊಂದರಲ್ಲಿಲ್ಲದ ಚೈತನ್ಯ ಅವೆಲ್ಲ ಕೂಡಿ ಬರುವುದರಿಂದ ಶರೀರ ಭಿನ್ನವಾದುದು; ಕಾರಣ, ಬೇರೆ ಆತ್ಮವಿಲ್ಲವೆಂಬ ಚಾರ್ವಾಕ ಮತ ಸರಿಯಲ್ಲ. ಶಂಖ — ಕೃಷ್ಣಾಜಿನ ಬಳಕೆ ಹಿಂಸಾತ್ಮಕವೆಂಬ ಜೈನರು ನವಿಲುಗರಿ ಬಳಸುವುದೂ, ಬಸದಿಗೆ ನೆಲ ಅಗೆದು ಜಂತು ಹಿಂಸೆಗೈವುದೂ ಹೇಗೆ ಸರಿ? ಹುಟ್ಟು–ಬೆಳೆ–ನಾಶ ಪದಾರ್ಥ ಸ್ವಭಾವ ಎಂಬ ಬೌದ್ಧರು ಸ್ವಭಾವ ಜಡವೆಂದರೆ ಕಾರ್ಯವೆಸಗದು, ಚೇತನವೆಂದರೆ ಸ್ವತಂತ್ರ ಕಾರ್ಯವೆಸಗುವುದನ್ನೊಪ್ಪಿ ದೇವರಿಗೆ ಬೇರೆ ಹೆಸರು ಕೊಟ್ಟಂತಾಯಿತು. ಅವನೇ ಸೃಷ್ಟ್ಯಾದಿಕರ್ತ. ವೇದ ಪ್ರತಿಪಾದ್ಯ ವಿಷ್ಣುವೇ ಪರಬ್ರಹ್ಮ, ಗುಣಪೂರ್ಣ, ಶ್ರುತಿಸ್ಮೃತಿ ಮುಖ ದುಂದಿಸಿ ಮೆರೆವ ಮಾನ್ಯ —

ಅಸ್ಮಾದ ಬ್ರಹ್ಮ ಪ್ರತಿ ದ್ವಂದ್ವಂ ಸರ್ವಮಾನ ಮನೋಽಯಂ
ಅನಂತ ಸುಗುಣಸ್ತೋಮ ಮುಖೇನ ಪರಿತೋ ದಿಶಂ
ಅಪಾರೋಪನಿಷತ ಸಾರೀ ಮುಖಾನ್ಯದ್ಯಂಬ ಜೃಂಭತೇ ॥
ತಸ್ಮಾದ್ವಿಷ್ಣೋಃ ಗುಣಾಃ ಸರ್ವೇ ನಿತ್ಯಾಃ ಸತ್ಯಾಶ್ಚ ಸರ್ವದಾ
ಅನಂತಾಶ್ರುತಿ ಸದ್ಯುಕ್ತಿ ಸಿದ್ಧಾಶ್ಚೇತ್ಯತಿ ಮಂಗಲಂ ॥

(2) ಶಬದ್ಧಿ ಸಾರ್ಧದಲ್ಲಿ 532 ಶ್ಲೋಕ — ಅಂಶಗಳಿದ್ದು, ಬ್ರಹ್ಮಸೂತ್ರ ದ್ವಿತೀಯಾಧ್ಯಾಯದಂತೆ ಪರಮಾತ್ಮನ ನಿರ್ದೋಷತ್ವ ಸಾಧಿಸಿವೆ. ಮೇಲ್ನೋಟಕ್ಕೆ ಅವತಾರಗಳು ಜನನ ಮರಣಯುಕ್ತವೆನಿಸಿದರೂ ಅವು ಆವಿರ್ಭಾವ — ತಿರೋಭಾವವಷ್ಟೇ? ಒಡಲೊಳಗೆಲ್ಲ ಧರಿಸಿದವಗೆಲ್ಲಿ ಹುಟ್ಟು ಸಾವಕ್ಕು —

ಕುಕ್ಷೌ ಯಸ್ಯ ಅಖಿಲಾಃ ಲೋಕಾಃ ಲಕ್ಷ್ಯಂತೇ ಸ್ಮ ಶಿಶೋಃ ಕಿಲ
ಜನನಂ ಮರಣಂ ಕಾಸ್ಯ ನ ಯುಕ್ತಃ ಯುಕ್ತಿವಿನ್ಮತೇ ॥

ಬ್ರಹ್ಮಾಂಡ ಒಡೆದರೂ ಉಗುರು ಕೊಂಕದ ವಿಷ್ಣು ಕೃಷ್ಣನಾಗಿ ಬಾಣಹತನಾದುದನ್ನಾರು ನಂಬುವರು? —

ಬ್ರಹ್ಮಾಂಡ ಕರ್ಪರಚ್ಛೇದೇ ಯನ್ನಖಾಗ್ರಂ ದ್ವಿಧಾಪಿ ನ
ಕೋ ಯುಕ್ತಿಮಾನ ತಸ್ಯ ವಿಷ್ಣೋಃ ಛೇದಂ ಸಂಭಾವಯೇತ ಕರ್ಹಿಃ ॥

ಇಂಥ ನಿರ್ದೋಷನಿಗೆ ಅದ್ವೈತ ಅಜ್ಞಾನವನ್ನಾರೋಪಿಸಿದೆ. ಆದರಿಂದ, ಸಂಸಾರ ಬಂಧಿತನಾದವ ಅನ್ಯರನ್ನೆಂತು ಮುಕ್ತಿಗೊಳಿಸುವನು? ತಾನೇ ಕೆಸರಲ್ಲಿ ಸಿಕ್ಕವ ಇನ್ನೊಬ್ಬರನ್ನು ಮೇಲೆತ್ತುವನೇ? —

ಅನುತ್ತೀರ್ಣಃ ಸ್ವಯಂ ಪಂಕಾತ ಕಿ ಮನ್ಯೋತ್ತಾರಕೋ ಭವೇತ[1]
ಯದಿ ಬದ್ಧಂ ಪರಂ ಬ್ರಹ್ಮ ಕಃ ಸ್ಯಾತ ಬಂಧಸ್ಯ ಮೋಚಕಃ ॥

ಮಾಯೆಯನ್ನು ಅಜ್ಞಾನ ಎಂದರ್ಥೈಸಿ, ಅದು ಇದ್ದಾಗಲೇ ಸಗುಣ — ಸರ್ವಜ್ಞ ಬ್ರಹ್ಮನೆನಿಸುವ ಎಂದಲ್ಲಿ, ಸರ್ವಜ್ಞನಾಗಲು ಅಜ್ಞನಾಗಬೇಕು ಎಂದಂತೆ; ಇದು 'ನಾನು ಮೂಕ' ಎಂಬಂತೆ ವ್ಯಾಘಾತದೋಷಯುಕ್ತ. ಮಾಯೆಗೆ ಪರಮಾತ್ಮನ ಇಚ್ಛಾ — ಶಕ್ತಿ — ತೇಜ — ರಮಾ —

---

1. ಕೆಸರೊಳು ಮುಳುಗಿದ ಪರರ ಬಾಧಿಪ ಕೆಸರ ಬಿಡಿಸೋನೆ — ಲಕ್ಷ್ಮೀಶೋಭಾನೆ, 32.

(ಜಡ) ಪ್ರಕೃತಿ ಎಂಬ 5 ಅರ್ಥ ಸಂದರ್ಭಾನುಸಾರ; ದ್ವೈತದಲ್ಲಿ ಜೀವನ ಅಜ್ಞಾನ (ಅವಿದ್ಯೆ) ತನ್ನ — ಪರಮಾತ್ಮನ ಸ್ವರೂಪ ಮುಚ್ಚಿ ಜೀವಾಚ್ಛಾದಿಕಾ — ಪರಮಾಚ್ಛಾದಿಕಾ ಎನಿಸುವುದು. ಸತ್ಯವಾದ ಈ ಸ್ವಭಾವಾಜ್ಞಾನ ಹರಿಪ್ರಸಾದ — ಅಪರೋಕ್ಷಜ್ಞಾನಗಳಿಂದ ದೂರಾಗುವುದು. ಈ ದೋಷ ಕಳೆದ ಪರಮಾತ್ಮನೇ ಸ್ವತಃ ಶುದ್ಧ.

(3) ಭೇದ ಸಾರ್ಥದಲ್ಲಿ 1591 ಶ್ಲೋಕ — 35 ಅಂಶಗಳಿಂದ, ಬ್ರಹ್ಮಸೂತ್ರದ ಜೀವ-ಪರಮಾತ್ಮಾದಿ ಪಂಚಭೇದ ಉಕ್ತ. ಬ್ರಹ್ಮಸೂತ್ರ ಹಲವು ಭೇದ ಹೇಳಿವೆ —

ಭೇದ ಮಾಪೇಕ್ಷಯಾಮಾಸ ಸೂತ್ರೇ ಸೂತ್ರೇ ಸ ಸೂತ್ರಕೃತ್ ।

'ದ್ವಾಸುಪರ್ಣಾ — ತತ್ತ್ವಮಸಿ' ಭೇದ ಪರ ಶ್ರುತಿ. ಆಪಾತತಃ ಅಭೇದಪರ ಎನಿಸುವ ಭಾಗವತ ಶ್ಲೋಕಗಳೂ ವಸ್ತುತಃ ಭೇದಪರ.

(4) ವಿಶ್ವಸಾರ್ಥದ 1237 ಶ್ಲೋಕ — 18 ಅಂಶಗಳಿಂದ 'ಜನ್ಮಾದ್ಯಸ್ಯ ಯತಃ' ಮೊದಲಾದ ಸೂತ್ರ ವಿವರಿಸಿ ಜಗತ್ಸತ್ಯತ್ವ ಸಾಧಿಸುವ ಮೂಲಕ, ಪರಮಾತ್ಮನ ಸೃಷ್ಟ್ಯಾದ್ಯಷ್ಟಕರ್ತೃತ್ವ ಸಮರ್ಥಿತ. 'ಪ್ರಪಂಚೋ ಯದಿ ವಿದ್ಯೇತ' ಎಂಬ ಮಾಂಡೂಕ್ಯ ಶ್ರುತಿಯು ಪ್ರಪಂಚ ಪದವಾ ಪಂಚಭೇದ ಯುಕ್ತ. ಶ್ರುತಿ — ಯುಕ್ತಿಗಳು ಜಗತ್ಸತ್ಯತ್ವ ಪ್ರತಿಪಾದಕವಾಗಿ, ಮಿಥ್ಯಾ ದೃಷ್ಟಿ ಬಿಟ್ಟು, ಸತ್ಯವೆಂದೊಪ್ಪಿ ಭುಕ್ತಿ ಮುಕ್ತಿ ಹೊಂದು —

ಯುಕ್ತೀಃ ಪಶ್ಯ ಶ್ರುತೀಃ ಪಶ್ಯ ಮಿಥ್ಯಾದೃಷ್ಟಿಂ ಪರಿತ್ಯಜ
ಸತ್ಯಂ ವದ ಜಗತ್ಸರ್ವಂ ಭುಕ್ತಿಂ ಮುಕ್ತಿಂ ಯದಿಚ್ಛಸಿ ॥

ಜಗಜ್ಜನ್ಮಾದಿ ಕರ್ತೃತ್ವ ಪರಮಾತ್ಮನ ಲಕ್ಷಣವೆಂದ ಸೂತ್ರಕಾರರೇ ಜಗತ್ತು ಮಿಥ್ಯ ಎಂದಾರೇ? ಜಗತ್ಸತ್ಯವೆಂದರೇ ಪರಮಾತ್ಮನ ಸೃಷ್ಟ್ಯಾದ್ಯಷ್ಟಕರ್ತೃತ್ವ ಮಹಿಮೆಗೆ ಅರ್ಥವಿದೆ.

(5) ಫಲಸಾರ್ಥ 1000 ಶ್ಲೋಕ — 30 ಅಂಶಗಳಿಂದ ಬ್ರಹ್ಮಸೂತ್ರ 3—4ನೆಯ ಅಧ್ಯಾಯಗಳ ಸಾಧನ — ಫಲಪ್ರಾಪ್ತಿ ನಿರೂಪಿಸಿದೆ. ಶ್ರವಣ — ಮನನ — ಧ್ಯಾನ — ಸಾಕ್ಷಾತ್ಕಾರ — ಭಕ್ತಿ — ಪ್ರಸಾದ ಮುಕ್ತಿಯ ಸಾಧನಗಳು —

ಶ್ರವಣಂ ಮನನಂ ತಸ್ಮಾತ್ ಧ್ಯಾನಂ ಸಾಕ್ಷಾತ್ ಕೃತಿಃ ಹರೇಃ
ಭಕ್ತಿಃ ಪ್ರಸಾದಃ ಇತ್ಯೇತೇ ಮುಕ್ತೇಃ ಸೋಪಾನ ಪಂಕ್ತಯಃ ॥

ಪ್ರಸಾದಕ್ಕೇ ಉಳಿದುವು ಸಹಾಯಕ. ಜೀವನ ಆಚ್ಛಾದಕಗಳಲ್ಲಿ ಒಂದನ್ನು ಸರಿಸಿ, ಇನ್ನೊಂದನ್ನಳಿಸಿ ಅವ್ಯಕ್ತನಾದರೂ ಅಚಿಂತ್ಯಾದ್ಭುತಶಕ್ತಿಯಿಂದ ಸ್ವಸಾಕ್ಷಾತ್ಕಾರಗೈಸುವವನು ಪರಮಾತ್ಮ. ಅವಿದ್ಯೆಯಂತೆ ಮನಸ್ಸೂ ಸ್ಥೂಲ—ಸೂಕ್ಷ್ಮ ಶರೀರಗಳೂ ಕಳೆದ ಸ್ವಸ್ವರೂಪಾನಂದ ಆವಿರ್ಭವಿಸುವುದೇ ಮುಕ್ತಿಫಲ. ಇದನ್ನೈದುವಲ್ಲಿ ಉತ್ಕ್ರಾಂತಿ—ಮಾರ್ಗ—ಲಯ—ಭೋಗ ಎಂಬ ಹಂತಗಳಿವೆ. ಅಪರೋಕ್ಷ ಜ್ಞಾನಾನಂತರ ದೇಹಬಿಡುವಲ್ಲಿ ಬ್ರಹ್ಮನಾಡಿಯಿಂದ ಉತ್ಕ್ರಮಣ, ಅರ್ಚಿರಾದಿ ಮಾರ್ಗ ಕ್ರಮಣ, ಬ್ರಹ್ಮನಿಗೆ ಶತಾಯು ತುಂಬುವನಕ ತತ ಲೋಕದಲ್ಲಿದ್ದು, ವಿರಜಾಸ್ನಾನವಾಗಿ ಲಿಂಗಶರೀರವಳಿದು ಮುಕ್ತಿ ಒದಗುವುದು.

ಇಲ್ಲಿ 'ಸಮೃದ್ಧ ಇತಿ ತತ್ರೈವ ಪವಮಾನಸ್ಯ ಯತ್ ಸ್ಪಷ್ಟಂ ಶ್ರೂಯತೇ' ಎಂದು ಪವಮಾನ ಸೂಕ್ತ ಅರ್ಥೈಸಿ 'ಏವಂ ಚ ಪವಮಾನಸ್ಯ ಗುರುತ್ವೇ, ವಿಷ್ಣೋಃ ಪರಮದೈವತ್ವೇ ನಿಶ್ಯಂಕೋ ಭವ, ದುರ್ಮಾರ್ಗಂ ತ್ಯಜ, ಭಕ್ತ್ಯಾ ಭಜ ಪ್ರಭುಂ' (ವಾಯುವೇ ಪರಮ ಗುರುವೆಂದೂ ಹರಿಯೇ ಪರಮನೆಂದೂ ದೃಢವಾಗಿ ನಂಬು, ದುರ್ಮಾರ್ಗ ಬಿಟ್ಟು ಭಗವಂತನನ್ನು ಭಕ್ತಿಯಿಂದ ಭಜಿಸು) ಎಂದು ಯುಕ್ತಿಪೂರ್ವಕ ಕಾವ್ಯಮಯವಾಗಿ ಉಪಸಂಹರಿಸಿದ್ದಾರೆ.

'ಹೀಗೆ ಯುಕ್ತಿಮಲ್ಲಿಕಾ ಗ್ರಂಥವು ಬ್ರಹ್ಮಸೂತ್ರಗಳಲ್ಲಿ ಬಂದ ವೇದಾಂತ ಸಿದ್ಧಾಂತಗಳ ವಿಶದ ನಿರೂಪಣೆಯಾಗಿದೆ' (ಕೆ.ಟಿ.ಪಾಂಡುರಂಗಿ, ಲಕ್ಷಾಲಂಕಾರ, 13). 'ಶಾಸ್ತ್ರ—ಲೋಕನ್ಯಾಯ ಉಪಯೋಗಿಸಿಕೊಂಡು ವೇದಾಂತ ತತ್ವಗಳನ್ನು ಜಿಜ್ಞಾಸುಗಳಿಗೆ ಯಶಸ್ವಿಯಾಗಿ ತಿಳಿಸುವ ಇಂತಹ ಸ್ವತಂತ್ರ ಗ್ರಂಥ ದೊರೆಯುವುದೇ ಇಲ್ಲ' (ಪ್ರಭಂಜನ, ಅಂಭ್ರಣೀ ಸೂಕ್ತ, ಮುನ್ನುಡಿ ix ). ದ್ವೈತ ಸಿದ್ಧಾಂತದ ಶ್ರೇಷ್ಠ ಗ್ರಂಥಗಳೆನಿಸಿದ 'ನ್ಯಾಯಸುಧಾ ತಾತ್ಪರ್ಯ ಚಂದ್ರಿಕಾದಿಗಳ ಸಾಲಿಗೆ ಸೇರುವ ಕೃತಿಯಿದು ಯುಕ್ತಿಚಾತುರ್ಯ —ಕಾವ್ಯಮಾಧುರ್ಯ ಎರಡನ್ನೂ ಸಮನಿಸಿಕೊಂಡಿದೆ. It is a

fine example of poetic gift being utilised for philosophic exposition" (C.R.Rao, Sri Vadiraja, p.18). ಜಯತೀರ್ಥ-ವ್ಯಾಸತೀರ್ಥರ ಗ್ರಂಥ ವಿದ್ವಾಂಸರಿಗೆ ಮೀಸಲು; ಆದರೆ ವಾದಿರಾಜರು ಆಕರ್ಷಕ ತರ್ಕ-ಸುಲಭ ಭಾಷೆಗಳಿಂದ ಅಷ್ಟು ವಿದ್ವಾಂಸರಲ್ಲದವರಿಗೂ ಸಿದ್ಧಾಂತ ಮುಟ್ಟಿಸಿದರು. "Apart from immediate need for a theological and polemnical rehabilization of Madhva's Siddhanta, there was a general need for a more popular and easy exposition of the doctrines and texts of the school in a less technical garb and more colourful form than had been presented so far" (C.R.Rao, Sri Vadiraja, p.22). "Works of Jayatirtha-Vyasaraja were too learned and stiff to be of use to general readers. Vadiraja first brought the wisdom of his predecessors within the reach of all" (B.N.K.Sharma, H.D.S.T. p.200). 'If Vyasatirtha adopted a highly technical-logical style which could be understood and appreciated only by a few advanced scholars, Vadiraja conveyed the teachings of the Acharya to larger classes of students equipped with the knowledge of basic logic and philosophy, by his poetic philosophical works like Yuktimallika' (ಪಂಡಮುಖಿ, ಕರ್ನಾಟಕ ಹರಿದಾಸ ಸಾಹಿತ್ಯ, ಪೀಠಿಕೆ XXVII).

ಯುಕ್ತಿಮಲ್ಲಿಕಾ ವ್ಯಾಖ್ಯಾನ 'ಭಾವ ವಿಲಾಸಿನಿ' ಇದರ ಆದಿಯಲ್ಲಿ —

ಶ್ರೀ ವಾದಿರಾಜಯತಿ ರಾಜಕೃತ ಪ್ರಬಂಧ
ವ್ಯಾಖ್ಯಾನ ಕರ್ಮಣಿ ಸುರೋತ್ತಮ ಯೋಗಿವರ್ಯ:
ದಕ್ಷಾವಯಂ ತು ತದುದೀರಣ ಶಿಕ್ಷಿತಾರ್ಥಾ:
ತತ ಶ್ಲೋಕ ವಾಕ್ಯಚಯ ಲೇಖನತ: ಕೃತಾರ್ಥಾ: ll

ಎಂದಿರುವುದರಿಂದ ನೋಡಿದರ ಸುರೋತ್ತಮತೀರ್ಥರಿಂದ ಹೇಳಿ ಬರೆಯಿಸಿದಂತೆ ತೋರುತ್ತದೆ. ಆದರೆ ಅಂತ್ಯೋಕ್ತಿ —

ಸುರೋತ್ತಮಾಖ್ಯ ಯತಿನಾ ಕೃತಾ ಭಾವ ವಿಲಾಸಿನೀ
...................................
ಪ್ರಾರಂಭ ಮಾತ್ರಂ ತು ಮಯಾ ಕೃತಂ ಪ್ರಾಕ್ ಗುರ್ವನುಜ್ಞಯಾ
ಪೂರ್ತಿಸ್ತು ವಾದಿರಾಜಾಖ್ಯ ಯೋಗೀಂದ್ರೇಣೈವ ಸಾಧಿತಾ ॥

ಕೃತಿಮೇತಾಂ ಸ್ವಯಂ ಕೃತ್ವಾ ವಾದಿರಾಜೋ ಬುಧಾಗ್ರಣೀ:
ಖ್ಯಾಪಯಾಮಾಸ ಮನ್ನಾಮ್ನಾ ಸಂತೋಽಹ್ಯಾಶ್ರಿತ ವತ್ಸಲಾ: ॥

ಎಂಬ ಶ್ಲೋಕಗಳಿಂದ ತಮ್ಮಿನಾರಂಭಿಸಿದ ವ್ಯಾಖ್ಯಾನವನ್ನು ವಾದಿರಾಜರೇ ಪೂರೈಸಿ ತಮ್ಮನ ಹೆಸರಲ್ಲಿ ಪ್ರಚುರಪಡಿಸಿದ್ದು ಸ್ಪಷ್ಟ. ಅಂತೆಯೇ ಅವರ ಸಮಕಾಲೀನ ರಘುನಾಥಾಚಾರ್ಯರು ಉದ್ಗರಿಸಿದ್ದು—

ಪ್ರಕೃತ ಗ್ರಂಥ ರಾಜಸ್ಯ ಯುಕ್ತಿಸಾರಸ್ಯ ವಾದಿರಾಟ್
ಟೀಕಾಂ ಕೃತ್ವಾ ಸ್ವಯಂ ತಸ್ಯ ನಾಮ್ನಾ ಖ್ಯಾಪಿತವಾನಹೋ ॥[2] ವ್ಯ.ರ.ಸಂ.3,30.

ಈ ವ್ಯಾಖ್ಯಾನ ಸಹ ಮೂಲ ಗ್ರಂಥ 715 ಪುಟಗಳಲ್ಲಿ ಕುಂಭಕೋಣದ ಟಿ.ಆರ್.ಕೃಷ್ಣಾಚಾರ್ಯರಿಂದ ಪ್ರಕಟವಾಗಿದೆ (1903). ಮೂಲವನ್ನು ಮಾತ್ರ ದಾವಣಗೆರೆಯ ಟಿ.ಭೀಮರಾಯರು ಕನ್ನಡಿಸಿದ್ದಾರೆ ಈಚೆಗೆ.

2. <u>ನ್ಯಾಯರತ್ನಾವಳಿ</u>: ಯುಕ್ತಿಮಲ್ಲಿಕಾದಂತೆ 5 ಸರಗಳ ಈ ಕೃತಿ 899 ಶ್ಲೋಕಗಳಲ್ಲಿ ಅದ್ವೈತಿಗಳ ಐಕ್ಯಶ್ರುತಿಗಳಿಗೆ ಉಚಿತಾರ್ಥ ಹೇಳಿ ಭೇದ ತೋರಿದೆ, ಸದ್ಯುಕ್ತಿಪೂರ್ವಕ ಪ್ರತಿ ಸರದಲ್ಲೊಂದು ಪ್ರಮೇಯ ಸಾಧಿಸಿದೆ. ಕಾರಣ, ವೇದಾಂತ ನ್ಯಾಯಗಳ ರತ್ನಾವಳಿ ಅಣುಯುಕ್ತಿಮಲ್ಲಿಕಾ (miniature). Nyaya Ratnavali is inferior only in size to Yuktimallika; the poetry, polemical

---

2. ಗುರೋರನುಜ್ಞಯಾ ಸಮ್ಯಗ್ ವ್ಯಾಚಖ್ಯೌ ಯುಕ್ತಿಮಲ್ಲಿಕಾ ॥
ವಾ.ಗು.ರ.ಮಾ.7,12.
ಆದರೆ ಸುರೋತ್ತಮರು ಆಚಾರ್ಯರ ಸದಾಚಾರ ಸ್ಮೃತಿ, ವಿಷ್ಣುತೀರ್ಥರ ಸನ್ಯಾಸ ಪದ್ಧತಿ ವಾದಿರಾಜರ ಪಾಷಂಡಮತ ಖಂಡನಗಳಿಗೆ ವ್ಯಾಖ್ಯಾನ ಮಾಡಿದ್ದಾರೆ.

flavour and to certain extent the actual arguments are the same in both (Betty, Nyaya Ratnavali, Introduction).
ಕೃತಿ ಪಕ್ಷವಾದಿಗಳನ್ನು ಸಂಹರಿಸಬಂದ ನೃಸಿಂಹ ಸ್ತುತಿಯಿಂದಾರಂಭವಾಗಿದೆ —

ಶ್ರೀ ಲಕ್ಷ್ಮವಕ್ಷಸೇ ದುಷ್ಟ ಸುಪಕ್ಷಕ್ಷತರಕ್ಷಸೇ
ಸ್ವಪಕ್ಷರಕ್ಷಾದಕ್ಷಾಯ ನೃಹರ್ಯಕ್ಷಾಯ ತೇ ನಮಃ ॥

ಸಭೆಯಲ್ಲಿ ಈ ಹಾರ ಧರಿಸಿದವರಿಗೆ ವಾಗ್ದಾರಿದ್ರ್ಯವಿರದೆಂದು ಮುಗಿದಿದೆ —

ವಾದಿರಾಜೀನ ರಚಿತಾಂ ನ್ಯಾಯರತ್ನಾವಲೀಮಿಮಾಂ
ಸಂಗ್ರಹೀತಃಸಭಾಮಧ್ಯೇ ವಾಗ್ದಾರಿದ್ರ್ಯಂ ನವಿಂದ್ಯತೇ ॥

ಸೋದೆ ಮಠದ ವಿಶ್ವೇಂದ್ರತೀರ್ಥರು ಇದನ್ನು ಪದಮನ್ನೂರು ನಾರಾಯಣಾಚಾರ್ಯರ 'ಪ್ರಕಾಶ ಸಂಗ್ರಹ' ಟಿಪ್ಪಣಿಯೊಡನೆ 71 ಪಾಠಗಳಲ್ಲಿ ಪ್ರಕಟಿಸಿದ್ದಾರೆ (1917).

ಡಾ.ಬಿ.ಎನ್.ಕೆ.ಶರ್ಮರ ಅಂಗ್ಲ ಬರವಣಿಗೆಯಿಂದ ಪ್ರಭಾವಿತರಾದ ಕ್ಯಾಲಿಫೋರ್ನಿಯಾದ ಪ್ರೊ.ಎಲ್.ಸ್ಟಫೋರ್ಡ ಬೆಟ್ಟಿ ಇದನ್ನು ವ್ಯಾಖ್ಯಾನಸಹಿತ ಇಂಗ್ಲೀಷಿಗೆ ಅನುವಾದಿಸಿದ್ದು ದಿಲ್ಲಿಯ ಮೋತಿಲಾಲ ಬನಾರಸಿದಾಸ ಪ್ರಕಟಿಸಿದ್ದಾರೆ (1978). 'In this work Vadiraja contests Non Dualism, combining deft analogy - charming metaphore - and ruthless method of reductio ad absurdum until the Non Dualism has been destroyed; Shankara's imaginery suffering is just suffering by Atman i.e. Brahman - a Sufferer (Reductio ad absurdum is completed). Who is the Victor? Vadiraja' (Betty). 'He is known for his scintillating exposition of shrutis with all the poetic graces of pun- alliteratim and rhyme, and his fascinating critique of rival theries with his inimitable sallies of wit - humour - and irony which make their appeal irresistable' (B.N.K.Sharma, Foreword). ಈ ಕೃತಿಯ ಬಗ್ಗೆ ಮಾತಾಡುತ್ತ ಡಾ.ಶರ್ಮರು

ಬರೆದ ವಾಕ್ಯಗಳಿವು: 'Vadiraja is the most facile writer in Dwaita. His fine poetic faculty and human touch, the quick flashes of wit and humour, apt analogies from life and literature, and his way of putting things have made him the most popular and enthusiastically applauded writer. Vadiraja tries to flabbergast his opponents by a cleaver and judicious mixture of theology and metaphysics. His homely analogies and pursuasive rhetoric make an instantaneous appeal. The style is as usual alliterative - epigrammatical - and elliptical' (H.D.S.T., 192, 209).

3. ವಿವರಣ ವ್ರಣ: ಶಾಂಕರ ಸೂತ್ರ ಭಾಷ್ಯಕ್ಕೆ ಶಿಷ್ಯಪದ್ಮಪಾದರ ಟೀಕೆಯು ಪ್ರಥಮಾಧ್ಯಾಯದ 4 ಪಾದ, ದ್ವಿತೀಯಾಧ್ಯಾಯದ 1 ಪಾದ ಉಪಲಬ್ಧವಿದ್ದು, 'ಪಂಚಪಾದಿಕಾ' ಎನಿಸಿದೆ; ಇದಕ್ಕೆ ಪ್ರಕಾಶಾತ್ಮಯತಿಯ 'ವಿವರಣ' — ಇದಕ್ಕೆ ಅಖಂಡಾನಂದ ಮುನಿಯ 'ತತ್ತ್ವದೀಪನ' ಟೀಕೆ ಬಂದಿವೆ. ಇವುಗಳ ಖಂಡನ ಗ್ರಂಥ 'ವಿವರಣ ವ್ರಣ' —

ಕುರ್ವೇ ವಿವರಣಂ ತೀವ್ರ ವ್ರಣಂ ದುಸ್ತತ್ತ್ವದೀಪನಂ
ತತ್ತ್ವದೀಪನಮೇಕೋ ನ ಪಾದಿಕಾಂ ಪಂಚಪಾದಿಕಾಂ ॥

ಇದರ ಖಂಡನ ರೀತಿಗೆ ಅಂತ್ಯವಾಕ್ಯ ನಿದರ್ಶನ —

ತತ್ತ್ವಂ ತತ್ತ್ವದ್ಯಶೋಽಸೀತಿ ಪರಮಂ ಸಾಮ್ಯಮುಪೈತೀತ್ಯಾದೌ ನಿರೂಪಿತ
ಬ್ರಹ್ಮಸಾದೃಶ್ಯಪರಮೇವೇದಂ ವಾಕ್ಯಮನ್ಯಥಾ ಏವಂ ಚ 'ಸ್ತಬ್ಧ ಏಂಯಾಮೇತಿ'
ತತ್ಪ್ರಯೋಕ್ತ್ರಂ ಶ್ವೇತಕೇತೋಸ್ತಬ್ಧತ್ವಂ ಉದಾಲಕಾಖ್ಯ ಗುರೂಪಸತ್ತಿಸ್ತನ್ಯಜಾತ
ಶ್ರವಣಂ ಬ್ರಹ್ಮಭಜಕ ತಾಪಸತ್ವಂ ಚ ಯುಕ್ತಮೇವ ನಾನ್ಯಥಾ ಸಾಕ್ಷಾತ
ಸರ್ವಜ್ಞ ಬ್ರಹ್ಮರೂಪತ್ವೇ ತು ಕಥಮಿದಂ ಯುಜ್ಯೇತ। ತಸ್ಮಾತ್ ಸ್ವರೂಪೋ
ಪ್ಯೇದಕ ಜಾನಿವ್ಯಾಖ್ಯಾತ್ವೇ ನ ಕದಾಚಿದಪಿ ಶ್ರುತಿಃ ಪ್ರಮಾಣಂ।

119 ಪುಟಗಳಲ್ಲಿದು ಸೋದೆ ಮಠದಿಂದ ಪ್ರಕಟಿತ (1955).



4. <u>ಶ್ರುತಿತತ್ತ್ವ ಪ್ರಕಾಶಿಕಾ</u>:[3] ಜಯತೀರ್ಥರು ಮಧ್ವರ ಸೂತ್ರಭಾಷ್ಯದ ಟೀಕೆಗೆ 'ತತ್ತ್ವಪ್ರಕಾಶಿಕಾ' ಎಂದು ಕರೆದಂತೆ, (ಅದಕ್ಕೂ ಟಿಪ್ಪಣಿ ಬರೆದ) ವಾದಿರಾಜರು 'ಶ್ರುತಿ ತತ್ತ್ವ ಪ್ರಕಾಶಿಕಾ'ದಲ್ಲಿ 507 ಶ್ಲೋಕಗಳಿಂದ ಮಾಯಾವಾದಿಗಳ 6 ಶ್ರುತಿ ವಾಕ್ಯಗಳಿಗೆ ಭೇದಾರ್ಥದ ಬೆಳಕು ಬೀರಿದ್ದಾರೆ —

| | | |
|---|---|---|
| 1) ನೇಹ ನಾನಾಸ್ತಿ ಕಿಂಚನ | (ಕಾಠಕ 2—1, ಬೃಹದಾರಣ್ಯ 6—4—19) | ಶ್ಲೋಕ 4—391 |
| 2) ಅಹಂ ಬ್ರಹ್ಮಾಸ್ಮಿ | ( " 3—5—4) | 392—4—4 |
| 3) ಸರ್ವಂ ಖಲ್ವಿದಂ ಬ್ರಹ್ಮ | (ಛಾಂದೋಗ್ಯ 15—14—1) | 405—422 |
| 4) ಏಕಮೇವಾದ್ವಿತೀಯಂ ಬ್ರಹ್ಮ | ( " 6—2—1) | 423—428 |
| 5) ತತ್ತ್ವಮಸಿ | ( " 6—8—7) | 429—494 |
| 6) ಕೇವಲೋ ನಿರ್ಗುಣಶ್ಚ | (ಶ್ವೇತಾಶ್ವತರ 6—11) | 495—507 |

ವಾದಿರಾಜರು ಸಾಂಪ್ರದಾಯಿಕ ವಾಕ್ಯಗಳಿಗೆ ನವೀನಾರ್ಥ ಕೊಡುವುದುಂಟು. ಉದಾ — 'ತತ್ತ್ವಮಸಿ'ಯ 8 ವಿವರಣೆಗಳಲ್ಲಿ 4 ಹೀಗಿವೆ: (1) ತತ ತ್ವಮಸಿ? ಅಲ್ಲ (472). (2) ತತ (ತತ) ತ್ವಂ (ತ್ವಂ) (ಐಕ್ಯವಿಲ್ಲ) (457); (3) ಸ ಆತ್ಮಾ (ಪ್ರಥಮಂ) ತತ್ತ್ವಂ, ತ್ವಂ ತತ್ತ್ವಂ (ಬ್ರಹ್ಮ ಮುಖ್ಯ ತತ್ತ್ವ ನೀನು ನಂತರದ ತತ್ತ್ವ) (477); (4) ತತ್ತ್ವಂ ಏತದಾತ್ಮ್ಯಂ (ಬ್ರಹ್ಮಾವಲಂಬತ್ವದ ಸ್ಥಿತಿ) (483—95).

ಕೃತಿಯ ಆದ್ಯಂತ ಭಾಗದ ಪದ್ಯ ಹೀಗಿವೆ (ಕೆಲವೆಡೆ ಪ್ರಾಸಪೂರ್ಣವಾಗಿ) —

ವಾದಿರಾಜಾಭಿಧಃ ಸೋಹಂ ಶ್ರುತಿ ತತ್ತ್ವ ಪ್ರಕಾಶಿಕಾ
ಕರೋಮಿ ದುರ್ಮತಧ್ವಾಂತಬಾಧಿಕಾಂ ಮೋಕ್ಷಸಾಧಿಕಾಂ ॥ 2,3 ॥

ನೇಹ ನಾನೇತಿ ವಾಕ್ಯಸ್ಥೇ ಜಗತ್ಸ್ಯಗೋ ಭವೇದ್ಯದಿ
ತರ್ಹಿ ಹೇಪ್ರೋಕ್ತಿ ತ್ಯಾಜ್ಯಃ ಸ್ಯಾದ್ಯತೋ ಜಗದಿದಂ ಜಡಂ ॥ 4 ॥

........................................

ನಿರ್ಗುಣತ್ವಾದಿದಂ ಧರ್ಮ ಇಯದಿ ಶ್ಲೋಕ್ಯಮಪಿ ಶಿವೇತ
ಸುತರಾಂ ಶೋಭನಗುಣಾನ್ವಿತೀ ರವೇದ್ರಮಾಪತೇ ॥ 506 ॥

---

3. ಗ್ರಂಥಮಾಲಿಕಾಪ್ರಸರ, ಪು.27ರಲ್ಲಿ 'ಶ್ರುತ್ಯರ್ಥ ಪ್ರಕಾಶಿಕಾ' ಎಂಬ ಇನ್ನೊಂದು ಗ್ರಂಥ ಉಕ್ತ.

ಸೋದೆಯ ಮಠದಿಂದ ಪ್ರಕಟವಾದ 50 ಪುಟಗಳ ಇದರ ಮುನ್ನುಡಿಯಲ್ಲಿರುವ ಡಾ.ಬಿ.ಎನ್.ಕೆ.ಶರ್ಮರ ವಿಮರ್ಶಾ ವಾಕ್ಯಗಳಿವು: 'He expounded the intricacies of his school in simpler and less technical garb enlivened by a rich store of telling arguments and analogies from the manifold experiences of life. He also brought to bear on his task a brilliant gift of poetic form and imagery. He also breaths a fine sense of humour and a robust common sense rarely to be met with in dry sastrāic discussions. His racy style, eloquence, indispensable logic of facts and arguments, apt analogies, fine figures of speech, and haunting melodies of alliteration and assonance make such a straight appeal to the head and heart of the reader as to oblige him to admire and agree with him.

5. <u>ಪಾಷಂಡ ಮತಖಂಡನ</u>: ಅವೈದಿಕ ಮತಗಳ ಬಗ್ಗೆ ಇಲ್ಲಿ ಟೀಕೆ ಮಾಡಿದ ಶ್ಲೋಕಗಳಿವು –

> ಪುರಾ ಪುರತ್ರಯಾಧೀಶಾ ದೈತೇಯಾಃ ಶ್ರೌತಕರ್ಮಣಿ
> ಅವರಂಸ್ತದ್ವಧೋಪಾಯಂ ಅಯಾಚಂತ ಹರಿಂ ಸುರಾಃ ॥
>
> ತದಾ ಬುದ್ಧಾಕೃತಿರ್ಭೂತ್ವಾ ಗಪೇತಾಕ್ಷಮಾಕ್ಷಯ ಮಾರ್ಗತಃ
> ಅಂಧೋಗ್ರಾಣ್ಯಾನ್ ಬಹಿಃ ಕರ್ತುಂ ಶಶಾಸೇದಮಸನ್ಮತಂ ॥
>
> ತದೇತದೇತಿಸೋ ಜೈನಾಃ ಶ್ರುಗೀತಾ ವೇದವೈದಿಕಾ
> ಅಶಕ್ತಾಸ್ತದ್ವಧಂ ಗಂತುಂ ಇತಿ ನ್ಯಾಯೇನ ಕೇವಲಂ
> ಅಪವರ್ಗಂ ಶ್ರುತೀಲೋಕಾರ್ಗಂ ನಿನಿಂದುರ್ನಿಂದಿತವ್ರತಾಃ ॥

ಹೀಗೆ ಅವೈದಿಕ ಸಾಂಪ್ರದಾಯದ ಮತವನ್ನು ಸುಧಾ ದ್ವಿತೀಯಾಧ್ಯಾಯದಂತೆ ಈ ಕೃತಿಯೂ 129 ಶ್ಲೋಕಗಳಲ್ಲಿ ಖಂಡಿಸಿದೆ, ಚತುರ ಯುಕ್ತಿ–ದೃಷ್ಟಾಂತಗಳಿಂದ. ಅಂತೆಯೆ

ಅಂತ್ಯದಲ್ಲಿ ಶ್ರೌತಮತವೆಂಬ ಪುಷ್ಪವಾಟಿಕೆಯ ಶುಭ್ರ ಪ್ರಮೇಯ ಪುಷ್ಪರಸ ಹೀರಿದ ವಾದಿರಾಜರಿಂದ ದೊರೆತ ಮಧುವಿದು ಯತ್ಯಾದಿಗಳಿಗೂ ಸೇವ್ಯ ಎಂದಿದೆ —

ಇತಿ ಶ್ರೌತ ಮತೋದ್ಯಾನ ಪ್ರಸೂನರಸನಿರ್ಮಿತಂ
ವಾದಿರಾಜಾಖ್ಯ ಸರಘಾ ಸರ್ವಸ್ವಂ ಸೇವ್ಯತಾಂ ಬುಧೈಃ ॥

ವಾದಿರಾಜ ಸಹೋದರ ಸುರೋತ್ತಮತೀರ್ಥರ ವ್ಯಾಖ್ಯಾನದೊಡನೆ ಇದು ಬೆಳಗಾವಿಯ ರಾಮತತ್ತ್ವ ಪ್ರಕಾಶನದಿಂದ ಬಂದಿದೆ. (ಇದೇ ಹೆಸರಿನ 20 ಶ್ಲೋಕಗಳ ರಚನೆಯೊಂದಿದ್ದು, 'ಭೀಷ್ಮೇಣ ಕಾಮುಕವನೇ' ಎಂದು ಮೊದಲಾಗುವ ಅದನ್ನು ವಾಸಸ್ತೋತ್ರ ಎಂದೂ ಕರೆಯಲಾಗಿದೆ, ಸ್ತೋತ್ರ ಭಾಗದಲ್ಲಿ).

6. <u>ಕಲ್ಪಲತಾ</u>: ಉಡುಪಿಯ ವಾದಿರಾಜ ಗ್ರಂಥ ಪ್ರಕಾಶನದಿಂದ ಬಂದ (1955) 36 ಪುಟಗಳ ಈ ಕಿರುಕೃತಿಯೂ ಜೈನ ಮತವನ್ನು ಖಂಡಿಸಿದೆ, ವಾಕ್ಯ ರೂಪದಲ್ಲಿ. ವಿಶೇಷತಃ ವಾದಿರಾಜಸೂರಿಯ 'ಪ್ರಮಾಣ ನಿರ್ಣಯ'ವೆಂಬ ಜೈನ ಗ್ರಂಥ ವಿಷಯಗಳು ಕಲ್ಪಲತಾದ 4 ಪ್ರಸೂನ ಮಾಲೆಗಳಿಂದ ಖಂಡಿತ. ವಾದಿರಾಜರಿಗೆ ಜೈನ ಮತ ಪ್ರಕ್ರಿಯೆ ಕರತಲಾಮಲಕವಾಗಿದ್ದು, ಸ್ಯಾದ್ವಾದದ 'ಸ್ಯಾದಸ್ತಿ — ಸ್ಯಾನ್ನಾಸ್ತಿ — ಸ್ಯಾದಸ್ತಿನಾಸ್ತಿ — ಸ್ಯಾದವಕ್ತವ್ಯಂ — ಸ್ಯಾದಸ್ತಿ ಅವಕ್ತವ್ಯಂ — ಸ್ಯಾನ್ನಾಸ್ತಿ ಅವಕ್ತವ್ಯಂ — ಸ್ಯಾದಸ್ತಿನಾಸ್ತಿ ಅವಕ್ತವ್ಯಂ' ಎಂಬ ಸಪ್ತಭಂಗಿಗಳೂ ಯುಕ್ತಿಯುಕ್ತ ಖಂಡನೆಗೀಡಾಗಿವೆ — 'ಸಮ್ಯಕ ಜ್ಞಾನಂ ಪ್ರಮಾಣಂ ಇತಿ ಜೈನಾಃ ಪ್ರಮಾಣ ಲಕ್ಷಣಂ ವರ್ಣಯಂತಿ, ತದಿದಮನುಪಪನ್ನಂ'. ಈ ವಿಮತ ಖಂಡನದಿಂದ ಸ್ವಮತಮಂಡನವೂ ಸಾಧಿತ. ಇಲ್ಲಿ ಧರ್ಮದೊಡನೆ ಕಾವ್ಯಧರ್ಮ ಧರ್ಮವೂ ಮಿಳಿತ; ಆದಿಭಾಗದ ಶ್ಲೋಕವೇ ಕನ್ನಡದ ಪ್ರಾಸ ಪ್ರಭಾವಕ್ಕೆ ಸಾಕ್ಷಿ, ವಾದಿರಾಜರ ವಿಶಿಷ್ಟ ಶೈಲಿಗೆ ಕುರುಹು —

ಕೃಷ್ಣೇ ಬಲ ಜ್ಞಾನ ಕಾಂತಾರೇ ।
ಕೃಷ್ಣಾಂಗರಮಣರಾಜ್ಯದಾ ।
ಪುಷ್ಣೀತಾಂ ಮಮ ಸದ್ಬುದ್ಧಿಂ
ವೃಷ್ಣಿ ವಾಶಿಷ್ಠವಂಶಜಾ ॥

ಅಂತ್ಯಭಾಗದ ಶ್ಲೋಕವು ರೂಪಕವೂ ಅರಳಿದ ರೀತಿಗೆ ದ್ಯೋತಕ —

ಇಯಂ ಕಲ್ಪಲತಾ ಕೃಷ್ಣಕೃತಾನುಸ್ಮೃತಿಸೋದ್ಧೃತಾ
ವರ್ಧಿತಾ ವಾದಿರಾಜೇನ ವಿದ್ಯಾದುಗ್ಧಾಬ್ಧಿಸಂಭೃತಾ ॥

7. ಹರಿಭಕ್ತಿಲತಾ: ಹೆಸರೇ ಹೇಳುವಂತೆ ಹರಿಭಕ್ತಿ ಹುಟ್ಟಿಸುವ ಮಂಡನರೂಪದ ಕೃತಿ. ಇದರ ಆರಂಭವಿದು —

ರಮಾರಮಣಮಾನಸ್ಯ ಕ್ರಮಾನ್ನತ್ವಾ ಗುರೂನ್ನಪಿ
ಕರೋಮಿ ವಾದಿರಾಜೋಹಂ ಹರೇಃ ಸುಗುಣದರ್ಪಣಂ ॥
ಹರಿಭಕ್ತಿಲತಾಮೇತಾಂ ತುರಂಗವದನಪ್ರಿಯಾಂ
ಕರೋತಿ ವಾದಿರಾಜೇಂದ್ರಃ ಸತಾಂ ಮುಕ್ತಿಫಲಾಪ್ತಯೇ ॥

ಅಂತ್ಯ ಭಾಗದ ರೂಪಕಗಳ ಬಳ್ಳಿಯಿದು —

ತದ್ವಾದಿರಾಜ ಹೃದಿಕೇದಾರಾಭ್ಯುದ್ಯತ ಮಾರ್ಗಣಿ
ಸ್ಥಿತಾ ಮುಕ್ತಿಪುರೀಪರ್ಯಂತಂ ಚ ಯೇಯಂ ಲತೋದ್ಗತಾ ॥
ಸಂತೋತ್ಯಂತ: ಫಲಾನ್ಯಸ್ಯಾಃ ಸಂತತಾನ್ಯಂತರಾಂತರಾ:
ಆರೋಹಂತು ಲತಾಮೇತಾಮಾಲಂಬ್ಯಾಂತೇ ಹರೇಃ ಪುರೀಂ ॥

ವಾದಿರಾಜ ಮುನೀಂದ್ರೇಣ ಕೃತಾ ಸುಜನಸಮ್ಮತಾ
ಹರಿಭಕ್ತಿಲತಾಸ್ಯಾತ ತೃತೀಯಾಂಮಂಜರೀಮಿಮಾಂ ॥

ಕೃತಿನಾಮ 'ಹರಿಭಕ್ತಿಲತಾ' ಎಂದಿರುವುದರಿಂದ ಅಧ್ಯಾಯಗಳನ್ನು 'ಮಂಜರೀ' ಎಂದಿರುವುದೂ ಸಮುಚಿತ. 394 ಶ್ಲೋಕಗಳ, 38 ಪುಟಗಳ ಈ ಪುಸ್ತಕ ಸೋದಾ ಮಠದಿಂದ ಪ್ರಕಟವಾಗಿದೆ (1953).

8. ಸರಸಭಾರತೀವಿಲಾಸ: ಮಧ್ವರ ಭಾರತ ತಾತ್ಪರ್ಯ ನಿರ್ಣಯದಂತೆ ಸರ್ವಶಾಸ್ತ್ರ ಸಂಗ್ರಾಹಕವಾದ ಈ ಕೃತಿ ಸರಸವಾದ ವಾಣೀವಿಲಾಸದೊಡಿರುವುದರಿಂದ 'ಸರಸಭಾರತೀವಿಲಾಸ' ಎನಿಸಿದೆ. 12 ವಿಲಾಸಗಳಲ್ಲಿ 695 ಶ್ಲೋಕಗಳಿದ್ದು, ಪರಮುಕ್ತತ್ರಯರೆನಿಸಿದ[4] (ಹರಿ) ಶ್ರೀ, ಬ್ರಹ್ಮ—ವಾಣಿ, ಪ್ರಾಣ—ಭಾರತಿ ವರ್ಣಿತರಾಗಿದ್ದಾರೆ; ವಿಮತಖಂಡನ ಸ್ವಮತಮಂಡನಗಳೂ ತರ್ಕಬದ್ಧವಾಗಿ — ಕಾವ್ಯಮಯವಾಗಿ ಸಾಗಿವೆ:

---

4. ಅಜ್ಞಾನಾದಿದೋಷರಹಿತರೂ ಕರ್ಮಾಪಾರರಹಿತರೂ ಆದ ಪರಿಶುದ್ಧ ದೇವತೆಗಳು.

(1) ಹರಿಸರ್ವೋತ್ತಮತ್ವ —ಕರೀಂದ್ರವರದಂ ಪಶ್ಯ ಗಿರೀಂದ್ರಸ್ಯ ಚ ಧಾರಣಂ
ಶ್ರಿಯಾ ಯೋನಾ ವೃತೋ ದೇವಃ ಶ್ರಿಯಾಸ್ಯ ಚರಣಂ ಬುಧ ॥

(2) ರಮಾಮಹಿಮೆ — ಸುರಾಣಾಮುತ್ತುಮದಾರಾಣಾಂ ಸದಾರಾಣಾಂ ಪದಾಂಬುಜಂ
ಉರೂಣಾಂ ಸ್ವಸ್ರೂಣಾಂ ಮೇ ಗುರೂಣಾಂ ಚ ನತೋಸ್ಮ್ಯಹಂ ॥

(3) ರಮಾನಿರ್ದೋಷತ್ವ — ಅತೋ ಮಂಗಳಲೇಶಸ್ಯಾಪ್ಯವಕಾಶೋ ನ ಚ ಶ್ರಿಯಾಂ
ಅತ ಏವ ವದಂತಿ ಮಾಂ ಸರ್ವೇ ಮಂಗಲದೇವತಾಂ ॥

(4) ಕೃಷ್ಣರುಕ್ಮಿಣೀ ಕಲಹ — ಇತಿ ಪ್ರಿಯಾಂ ಪ್ರತಿ ಪ್ರಾಹ ತತಃ ಸತ್ಯವ್ರತಸ್ತತಃ
ನಿರ್ದೋಷಗುಣಪೂರ್ಣತ್ವಾಚ್ಚಾಸೀತ ಪರಮಮಂಗಲಾ ॥

(5) ಹನುಮಚ್ಚರಿತ — ಸೀತಾಪತೇಃ ಪ್ರಿಯಂ ಕೃತ್ವಾ ನತ್ವಾ ತತ್ಪಾದಪಂಕಜಂ
ಆದಾಯಾಸ್ತೇ ನರಾಮೇಣ ಸಾರ್ಥಂ ಕಿಂ ಪುರುಷೇ ಕಿಲ ॥

(6) ಭೀಮಮಹಿಮೆ — ತಸ್ಮಾದ್ಭೀಮಃ ಪರೇ ತತ್ವೇ ಶುದ್ಧೋಭೂದ್ಬುದ್ಧಿ
ಶುದ್ಧಿಮಾನ ॥

(7) ಪಾಂಡುಮಹಿಮೆ — ಪಾಂಡೋರಪ್ಯವಮಾ ವಿಷ್ಣೋರಾಸನ ಕಿಂಕರ ಕಿಂಕರಾಃ ॥

(8) " " — ತಸ್ಮಾದುಕ್ತಪ್ರಕಾರೇಣ ಪಾಂಡುರೇಕಃ ಪರೇ ಹರಾ ॥

(9) ಹರನ ದಾಸ್ಯ — ಪಾಂಡೋರಿತರದೇವಾನಾಂ ಕಲ್ಯಾವೇಶಃ ಕ್ವಚಿತ ಕ್ವಚಿತ ॥

(10) ಹರನಿಗೆ ಉಚ್ಚಿಷ್ಟಾಹುತಿ — ಉಚ್ಚಿಷ್ಟಾಹುತಿರೇವಾಂತೇ ದತ್ತಾ ಯತ್ರೇ ಕೃತೆ ಪಿ ಚ ॥

(11) ಭಾಗವತೋಕ್ತ ಹರನ ದೋಷ — ಕಿಂಚ ವಿಸ್ತೃತ್ಯ ಸೂತ್ರೋಕ್ತ
ದೋಷಾನ್ವಚ್ಮಿ ಶಿವೇತವ ॥

(12) ವ್ಯಾಸ ಮಹಿಮೆ — ತಸ್ಯವ್ಯಾಸಸ್ಯ ಪುರಾಣ್ಯದಾ ಹ್ಯಂಗೀಕಾರಾಯ ಸುರೈರಪಿ ॥

ಅಂತ್ಯ ಶ್ಲೋಕ — ವಾದಿರಾಜಕೃತೇ ಶ್ರಾವ್ಯೇ ಕಾವ್ಯೇ ಭವ್ಯೇ ಸುಬುದ್ಧಿಭಿಃ
ಸೇವ್ಯೇ ಸರಸಭಾರತ್ಯಾಂ ವಿಲಾಸೋಭೂದ್ಧರಿ ಪ್ರಿಯಃ ॥

ಇದು ಬೆಳಗಾವಿಯ ರಾಮತತ್ವ ಪ್ರಕಾಶನದಿಂದ 1882ರಷ್ಟು ಹಿಂದೆಯೇ ಬಂದಿದೆ.

9. <u>ಅಧಿಕರಣ ನಾಮಾವಳಿ</u>: ವೇದವ್ಯಾಸರ 564 ಬ್ರಹ್ಮಸೂತ್ರ 223 ಅಧಿಕರಣಗಳಲ್ಲಿವೆ. ಆ ಅಧಿಕರಣನಾಮಗಳನ್ನು ಅಧ್ಯಾಯ—ಪಾದಾನುಗುಣವಾಗಿ ಈ ಕೃತಿ ಪ್ರತಿಪಾದಿಸಿದೆ.

ಆದಿಭಾಗ — ಸಂಕ್ಷೇಪತೋ ಬ್ರಹ್ಮಸೂತ್ರ ಭಾಷಾಧಿಕರಣಾರ್ಥವೃತ್ತಯಾ ಪರಮಾತ್ಮನೋ
ನಮ್ಯತೋಕ್ತಿಃ ಕ್ರಿಯತೇ ॥ ಓಂ ಜಗಜ್ಜನ್ಮಾದ್ಯಷ್ಟಕರ್ತ್ರೇ ನಮಃ ಓಂ ॥

ಅಂತ್ಯಭಾಗ — ಇತಿ ಚತುರ್ಥಾಧ್ಯಾಯಸ್ಯ ಚತುರ್ಥಪಾದಃ । ಇತಿ ಶ್ರೀಮದ್ಬ್ರಹ್ಮ-
ಸೂತ್ರಾಧಿಕರಣ ಪ್ರತಿಪಾದ್ಯಾರ್ಥವತ್ತ್ವಯಾ ನಾರಾಯಣ ನಮನಂ
ಕೃತಮಿತ್ಯಶೇಷಮತಿ ಮಂಗಲಂ ॥

4 ಅಧ್ಯಾಯ, 21 ಪುಟಗಳ ಕೃತಿಯಿದು. ಬೆಳಗಾವಿಯ ರಾಮತತ್ವದಿಂದ ಪ್ರಕಾಶಿತ (1911).

10. <u>ಏಕಾದಶೀ ನಿರ್ಣಯ</u>: ಇದೂ ಸಹ ಬೆಳಗಾವಿಯಿಂದ ಪ್ರಕಟವಾಗಿದ್ದು (1911), ಉಡುಪಿಯ ವಾದಿರಾಜ ಗ್ರಂಥ ಪ್ರಕಾಶನದವರಿಂದ ಪುನರ್ಮುದ್ರಿತ (1953). ಇದರ 57 ಶ್ಲೋಕಗಳಲ್ಲಿ ಮಧ್ವರ ಕೃಷ್ಣಾಮೃತ ಮಹಾರ್ಣವಾನುಸಾರ ಏಕಾದಶೀ ನಿರ್ಣಯ ನಿರೂಪಿತ. ಮಾಧ್ವರೇ ವಿರುದ್ಧಾಚರಣೆಗಿಳಿದಾಗ ವಾದಿರಾಜರು ಆಚಾರ್ಯಭಾಷ್ಯದಂತೆ ನಿರ್ಣಯಿಸಿದ್ದಾರೆ. ಅಂತೆಯೇ ಮೊದಲು —

ಏಕಾದಶೀಂ ವೃಥಾ ಘ್ನಂತಿ ಕೇಚಿದಾಸ್ಯಾಶ ಪಂಡಿತಾಃ

ಎಂದು ಸಾರಿ, ಅವರನ್ನು ಖಂಡಿಸಿ, ಕರ್ಮನಿರ್ಣಯದಿಂದ ಕೃಷ್ಣ ಪ್ರೀತಿಗೆ ಪಾತ್ರರಾಗುವೆ ವೆಂದಿದ್ದಾರೆ. ಮಧ್ವರು 'ವಿದ್ಧ ಏಕಾದಶಿ ಉಪವಾಸ ಕೂಡದು, ಅವಿದ್ಧ ಉಪವಾಸ ಸಂದೇಹ ವಿದ್ದಲ್ಲಿ ದ್ವಾದಶಿಯಲ್ಲೂ ಉಪವಾಸ' ಎಂದರು; ಅದರೂ ಮೂಲ ಗ್ರಂಥದ ಶ್ಲೋಕಗಳನ್ನು ಸಂಗ್ರಹಿಸಿದ ಕಾರಣ, ಅತಿವೃದ್ಧಿ — ಸಮವೃದ್ಧಿ — ಸಮಪಕ್ಷ — ಕ್ಷಯಪಕ್ಷ ವೇಧರಹಸ್ಯ ವಿವರಿಸದೆ, ತ್ರಿವಿಕ್ರಮ ಪಂಡಿತರಿಗೆ ಮುಖತಃ ಮಾತ್ರ ಹೇಳಿದ್ದು ಉಡುಪಿ ಮಠದಲ್ಲಿ ಆಚರಿತ ವಾಗಿತ್ತು —

ತ್ರಿವಿಕ್ರಮಾರ್ಯವರ್ಯೇಣ ಮರ್ಯಾದೇಯಂ ಕಿಮುಚ್ಯತೇ ॥

ಆದರೆ ಅನ್ಯಮತೀಯರು ನಿರ್ಮಿಸಿಕೊಂಡ ಸೂತ್ರವೇ ಬೇರೆಯಾದ್ದರಿಂದ, ವಾದಿರಾಜರು ತ್ರಿವಿಕ್ರಮ ಪಂಡಿತರ ವಾಕ್ಯ ಉದಾಹರಿಸಿ, ಮಧ್ವಾಭಿಮತ ವೇಧಾನುಷ್ಠಾನ ವಿವರಿಸಿದ್ದಾರೆ. ಅತಿವೃದ್ಧಿಯಲ್ಲಿ 54— 40, ಸಮವೃದ್ಧಿಯಲ್ಲಿ 55, ಸಮಪಕ್ಷದಲ್ಲಿ 55— 50, ಕ್ಷಯ ಪಕ್ಷದಲ್ಲಿ 55— 55ಗಳಿಗೆ ದಶಮಿ ಬಂದರೆ ವೇಧ. (44ನೆಯ ಶ್ಲೋಕದಲ್ಲಿ ನಾಲ್ಕು ಪಕ್ಷ ನಿರ್ದಿಷ್ಟ: 4— 6 ಗಳಿಗೆ ತಿಥಿ ವೃದ್ಧಿಯಾದರೆ ಅತಿವೃದ್ಧಿ, 1— 3ಗಳಿಗೆ ವೃದ್ಧಿ ಇದ್ದರೆ ಸಮವೃದ್ಧಿ, ಸಾಮ್ಯವಿದ್ದ ತಿಥಿ ಸಮಪಕ್ಷ 1— 6ಗಳಿಗೆ ಕಡಿಮೆಯಾದಲ್ಲಿ ಕ್ಷಯಪಕ್ಷ). ಮಧ್ವರ ಈ ಇಂಗಿತ ನಿರ್ಣಯ ಮಾಧ್ವರ ವ್ಯತಿರಿಕ್ತ ಆಚರಣೆಯನ್ನು ಶುದ್ಧಗೊಳಿಸುವುದಾಗಿತ್ತು;

ಆದರೆ ಮಾಧ್ವರಲ್ಲಿಂದಿಗೂ ಇದು ತಿಳಿಯದೇ ಇರುವುದು ವಿಷಾದನೀಯ. ಕೃತಿಯ ಕೊನೆಯ ಶ್ಲೋಕ 'ಏಕಾದಶೀಂ ನಿರ್ಣಯಾಯ ವಾದಿರಾಜೋ ಯತಿಃ ಸ್ವಯಂ' ಎಂದು ಮುಗಿದಿದೆ.

11. ಭೂಗೋಳ ವಿವರಣ: 361 ಶ್ಲೋಕಗಳ ಕೃತಿಯಿದು. ವಾದಿರಾಜ(ರ) ಗ್ರಂಥ ಪ್ರಕಾಶನದವರಿಂದ ಬಂದಿದೆ. ಭಾಗವತ ಪಂಚಮಸ್ಕಂಧ 16–26ನೆಯ ಅಧ್ಯಾಯೋಕ್ತ ವಿಚಾರವಿದು, ಮಧ್ವರ ಭಾಗವತ ತಾತ್ಪರ್ಯನಿರ್ಣಯದಂತೆ ಭಾರತ ತಾತ್ಪರ್ಯ ನಿರ್ಣಯದ 21ನೆಯ ಅಧ್ಯಾಯದಲ್ಲೂ ಸಂಗ್ರಹವಾಗಿತ್ತು.[5] ಅದನ್ನೇ ವಾದಿರಾಜರು ಪ್ರತ್ಯೇಕ ವಿವರಿಸಿ ಸ್ಫುಟಗೊಳಿಸಿದ್ದಾರೆ. ನೆಲ–ನೀರು–ಮೇರು–ಸಪ್ತದ್ವೀಪಾದಿ 55 ಕೋಟಿ ಮೈಲು ವಿಸ್ತಾರದ ಭೂಗೋಲ–ಖಗೋಲವೆಲ್ಲ ಇಲ್ಲಿ ವರ್ಣಿತ. ಆದಿಗೇ ಪ್ರಾಸ ತುಂಬಿದೆ –

ಶ್ರೀ ನಾರಾಯಣಂ ನಮಾಮ್ಯಗ್ರ್ಯಾಯಣ ಶಿರೋಧರಂ
ದೂರಾಯಣಮದೂರಂ ಚ ಪಾರಾಯಣ ಪರಾಯಣಂ ॥ 1 ॥

ಆಚಾರ್ಯಸಂದರ್ಶಿತ ಮನೋಮಾರ್ಗಾನುಸಾರ ವಿವರಿಸಿದ್ದರ ಉಕ್ತಿ: "ಭಾಗವತ್ವಾದರು ಅಸ್ಪಷ್ಟವಾಗಿ ಹೇಳಿದ ವಜ್ರಲೇಪ ಭೂಮಿ ಸ್ವರೂಪ–ತಮಸ್ಸು–ಘನೋದಕ–ದ್ವೀಪ–ಸಮುದ್ರಾದಿಗಳ ಪರಿಣಾಮವನ್ನೇ, ಅವರ 'ಅಧಿ' ಉಪಸರ್ಗ ಸೂಚಿತ ಅಧಿಕಾರ್ಥವನ್ನು ಸ್ಪಷ್ಟೀಕರಿಸಿ, ವಾಕ್ಯಾರ್ಥಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ ಪ್ರಕರಣ ರೂಪದಿಂದ ಭೂಗೋಲ–ಖಗೋಲಾದಿ ಶಾಸ್ತ್ರೈಕ್ಯವೆಲ್ಲವನ್ನೂ ವಿವರಿಸಿದೆ" (75–77). ಹೀಗೆ ಹೊಸದನ್ನು ಹೇಳದಿದ್ದರೂ, ಲೋಕಾಪೇಕ್ಷಿತ ಕಾರ್ಯಗೈದುದೂ ಲೋಕೋಪಕಾರಕವೇ ಸರಿ. ಅಲ್ಲದೆ ಮಧ್ವರು ಇರುವ ಬದರಿಯೂ ಇಲ್ಲಿ ಬಣ್ಣಿಸಿಕೊಂಡಿದೆ (201–3). ವಿಶ್ವನಿಯಾಮಕನನ್ನು ವರ್ಣಿಸುವ ದಿವ್ಯರೂಪಕದ ಭವ್ಯತೆಯಿದು–[6]

ನಾನಾಪಕ್ವಫಲೋಪೇತೈರ್ಮಿಶ್ರಿತಂ ವಿಶ್ವಮೋದಕಂ
ಸಂಕರ್ಷಣಾಗ್ನಿನಾ ಪಕ್ವಮಂಡಾಪ್ಯೈ ಹೈಮಭಾಜನೇ ॥ 355 ॥

---

5. ವಾದಿರಾಜರ ಕನ್ನಡ ತಾತ್ಪರ್ಯ ನಿರ್ಣಯ ಭಾಗ 2, ಪು.190–193.

6. ವೈಕುಂಠ ವರ್ಣನ 2, 19–23ರಲ್ಲಿ ಚಿತ್ರಿಸಲಾಗಿದೆ.

ಸ್ವಯಂ ಪಾನೀಯಪಾನ ಭಗವಾನ್ಮಹಾಕಾಯೋ ಜನಾರ್ದನಃ
ಭುಕ್ತ್ವಾ ಪುನಃ ಕೀರ್ತಿಕಾಮ ಇವ ಸೌವರ್ಣ ಭಸ್ಮ ಚ ॥ 136 ॥

ಅಂಡದಾಹ ಸಮುದ್ಭೂತಂ ಸ್ವಾಂತಸ್ಥೇನ ಮಹಾಗ್ನಿನಾ
ಪುನಃ ಪುನಶ್ಚ ಕ್ವಥಿತಂ ಬಹಿರಾವರಣೋದಕಂ ॥ 357 ॥

ಸ್ವೀಕೃತ್ಯ ಭಾರ್ಯಯಾ ಲಕ್ಷ್ಮ್ಯಾ ಸಹ ತದ್ದ್ರವವಾರಿಧೌ
ವಟಪತ್ರಪುಟೇ ಶೇತೇ ನಿದ್ರಾಲುರಿವ ಲೀಲಯಾ ॥ 358 ॥

ಹೀಗೆ ಶಾಸ್ತ್ರವನ್ನು ಕಲಾತ್ಮಕವಾಗಿ ವರ್ಣಿಸುವ ರೀತಿ ವಾದಿರಾಜರ ವೈಶಿಷ್ಟ್ಯ. ಕೃತಿಯ ಕೊನೆಗೂ ಉಪಕಾರ ಸ್ಮರಿಸಿದ್ದಾರೆ —

ಇತ್ಥಂ ಭುವನಮರ್ಯಾದಾ ಕೀರ್ತಿತಾ ಪ್ರೀತಯೇ ಹರೇಃ
ಮಧ್ವಸ್ಯ ವಾಣ್ಯಾ ದೇವಾನಾಂ ಗುರೂಣಾಂ ಚ ಸತಾಂ ಮುದೇ ॥ 359 ॥

12. ಲಕ್ಷಾಲಂಕಾರ: ವಾದಿರಾಜರನ್ನು ಪಡೆಯಲು ಲಕ್ಷಾಭರಣ ಮಾಡಿಸುವ ಹರಕೆ ಹೊತ್ತಿದ್ದಳು ತಾಯಿ ಗೌರೀದೇವಿ. ವಾದಿರಾಜರು ತೀರ್ಥಯಾತ್ರೆಗೈದುವಾಗಲೇ ಅದನ್ನು ಪೂರೈಸುವ ಮಾತು ಕೊಟ್ಟಿದ್ದರು. ಪ್ರಯಾಗದಲ್ಲಿದ್ದಾಗ ಪ್ರತ್ಯಕ್ಷರಾದ ವ್ಯಾಸರು ಭಾರತದ ಲಕ್ಷ (ಶ್ಲೋಕಗಳ) ಕ್ಲಿಷ್ಟ ಪದಾರ್ಥ ಬರೆದು ಅರ್ಪಿಸೆಂದರೆ. ವಾದಿರಾಜರು ವ್ಯಾಸಬದರಿಗೈದಿ ಅದನ್ನು ಪೂರೈಸಿದರು. ಈ ಲಕ್ಷಾಲಂಕಾರ ಮಹಾಭಾರತದ ಟೀಕೆಯಾದರೂ ವಿವರವಾದ ವ್ಯಾಖ್ಯಾನವಾಗದೆ, ಕೂಟ ಶ್ಲೋಕಗಳನ್ನಷ್ಟೇ ಪ್ರಕೋಶಗಳನ್ನು ಸಂದರ್ಭಿಸಿ ಉದ್ಧರಿಸಿ ವಿವರಿಸಿದೆ; ದಾಕ್ಷಿಣಾತ್ಯ ಪಾಠನಿರ್ಣಯಕ್ಕೆ ಸಹಾಯಕವೂ ಆಗಿದೆ. ಪ್ರಾಸಪೂರ್ಣ ಆರಂಭವಿದು —

ವ್ಯಾಸಾಯಾಪ್ರತಿಮೇತಿ ಹಾಸರಸನೋಲ್ಲಾಸಾಯ ದುರ್ವಾದಿನಾಂ
ತ್ರಾಸಾಯಾಸಕರಾಯ ಸತ್ಸ್ವಕೃತ ವಿಶ್ವಾಸಾಯ ದೋಷದ್ವಿಷೇ
ಭಾಸಾಯಾಮುನರಮ್ಯತೋಯ ಸದೃಶಾಯಾಸಾಯ ಮಾಸೇದಿನೇ
ದಾಸಾಯಾಭಯದಾಯ ಮಧ್ವಗುರುಹೃದ್ವಾಸಾಯ ತುಭ್ಯಂ ನಮಃ ॥

ಮಹಾಭಾರತ ಋಜುಗಳಿಗೆ ಮಾತ್ರ ಅರ್ಥವಾಗುವುದಾದರೂ ಸ್ವರೂಪಗೂಹನಾರ್ಥ 'ನ ವಿವೇದಯಿತುಂ ಶಕ್ಯಾ ಮಾದೃಶೈರ್ಮಂದ ಬುದ್ಧಿಭಿಃ' ಎಂಬುಸುರಿ, ಹರಿಗುರು ಕೃಪೆಯಿಂದ ಶ್ಲೋಕಲಕ್ಷಾಲಂಕಾರಗೈವೆನೆಂದಿದ್ದಾರೆ. ಈ ಬೃಹತ ಕೃತಿಯ 5 ಪರ್ವ ಸೋದೆಯ ಮಠದಿಂದ ಪ್ರಕಟವಾಗಿದ್ದು, ಇನ್ನೂ 13 ಪರ್ವ ಬರಬೇಕಿದೆ. ಇದರ ಹಸ್ತಪ್ರತಿ ಮೈಸೂರು ಪ್ರಾಚ್ಯಕೋಶಾಗಾರ, ಬೆಂಗಳೂರು ಉತ್ತರಾದಿಮಠ ವ್ಯಾಸನಕೆರೆ ಪ್ರಭಂಜನರ ಸಂಗ್ರಹದಲ್ಲೂ

ಇದೂ, ತುಸು ವಿಸ್ತಾರವಾಗಿರುವ ಸನತ್ಸುಜಾತೀಯ–ಗೀತೆ–ವಿಷ್ಣು ಸಹಸ್ರನಾಮದ ಭಾಗಗಳಲ್ಲಿ ಮೊದಲನದು ಬೆಂಗಳೂರಿನಿಂದಲೂ, ಕೊನೆಯದು ಪುಣೆಯ ಬಿ.ಒ.ಆರ್.ಐ. ಪತ್ರಿಕೆಯಲ್ಲೂ ಬಂದಿವೆ.

ಬೆಂಗಳೂರು ರಾಮಕೃಷ್ಣ ದ್ವೈತ ವೇದಾಂತ ಪಾಠಶಾಲೆ ಪ್ರಕಟಿಸಿದ 'ಸನತ್ಸುಜಾತೀಯ' ಇರುವುದು 5ನೆಯ ಉದ್ಯೋಗಪರ್ವದಲ್ಲಿ (41–6 ಅಧ್ಯಾಯ). ಸಂಜಯ ತಾನು ತಂದ ಸುದ್ದಿ ನಾಳೆ ಹೇಳುವೆನೆನ್ನಲು; ಇರುಳು ಕಳೆಯಲು ಧೃತರಾಷ್ಟ್ರನಿಗೆ ವಿದುರನೀತಿ ಬೋಧಿಸಿದ; ಸನತ್ಸುಜಾತ ಹುಟ್ಟು–ಸಾವು–ಮುಕ್ತಿಗಳ ಜ್ಞಾನ ನೀಡಿದ, 6 ಅಧ್ಯಾಯಗಳಾಗಿ ಹುಟ್ಟು ಸಾವು–ಸೃಷ್ಟಿ–ಮನನ–ಗುರುಕುಲವಾಸ–ಪುನರ್ಜನನ–ಬ್ರಹ್ಮಜ್ಞಾನ ಹಾಗೂ ಮುಕ್ತಿ ವಿಚಾರ ನಿರೂಪಿಸಿದ (ಶಾಂಕರಭಾಷ್ಯದಲ್ಲಿ 4 ಅಧ್ಯಾಯ). ವಾದಿರಾಜರು ಆಚಾರ್ಯೋಕ್ತ ಮಾರ್ಗದಿಂದಲೇ ಸನತ್ಸುಜಾತೀಯ ವಿವರಿಸಿದ್ದಾರೆ –

ಆಚಾರ್ಯೋಕ್ತೇನ ಮಾರ್ಗೇಣ ತೇಷಾಮೇವ ಕೃಪಾಬಲಾತ್
ಸನತ್ಸುಜಾತವಾಕ್ಯಾನಿ ವಿಷಯಾಣಿ ವಿವೃಣ್ಮಹೇ ॥

## ವ್ಯಾಖ್ಯಾನ ಗ್ರಂಥಗಳು

13. ಭಾವಪ್ರಕಾಶಿಕಾ: ವೇದಾಧಿಕಾರವಿಲ್ಲದವರಿಗೂ ಧರ್ಮ–ಮೋಕ್ಷ ಒದಗಿಸಲು ವೇದವ್ಯಾಸರೇ ಪಂಚಮ ವೇದವೆನಿಸಿದ ಭಾರತವನ್ನು ರಚಿಸಿದರು. ಸರ್ವಶಾಸ್ತ್ರಾರ್ಥ ನಿರ್ಣಾಯಕ ಭಾರತ ತಾತ್ಪರ್ಯ ನಿರ್ಣಯವನ್ನು ಮಧ್ವರು ಭಾರತ ಸಾರವಾಗಿ ನೀಡಿದರು. ಇದಕ್ಕೆ 16ನೆಯ ಶತಕದಲ್ಲಿ ವರದರಾಜರಿಂದ, 17ನೆಯ ಶತಕದಲ್ಲಿ ಜನಾರ್ದನಭಟ್ಟರಿಂದ 2 ಟೀಕೆ ಬಂದಿದ್ದರೂ, ಮಧ್ವರ ಹೃದಯವರಿತ ವಾದಿರಾಜರ ಟೀಕೆ 'ಭಾವಪ್ರಕಾಶಿಕಾ' ಹೆಚ್ಚು ಉಪಾದೇಯವೆನಿಸಿದೆ. ಮಧ್ವರಂತೆ ವಾದಿರಾಜರೂ ಗುಣಪೂರ್ಣನ ನುತಿಯಿಂದ ಕೃತಿಯನ್ನಾರಂಭಿಸಿದ್ದಾರೆ –

ನಮೋಽಸ್ತು ಗುಣಪೂರ್ಣಾಯ ದೋಷಶೂನ್ಯಾಯ ವಿಷ್ಣವೇ
ಸಮಸ್ತಜಗತಾಂ ಮುಖ್ಯಹೇತವೇ ಧರ್ಮಸೇತವೇ ॥

ಮಧ್ವರಾಜರಿಗೆ ತಾವು ಸಂವಾದಿಯಾಗಿ ವ್ಯಕ್ತಿಮಾತ್ರರಿಂದೂ ಸಂಕೇತಿಸಿದ್ದಾರೆ—[7]

ವಾದೀಮಧ್ವೋ ಯಸ್ಯರಾಜಾ ಸೋಽಹಂ ತಸ್ಯ ಕೃಪಾಬಲಾತ್
ವಾದಿರಾಜೋ ನ ಸ್ವಶಕ್ತ್ಯಾ ಟೀಕೇವ ರಚಯಾಮಿ ತತ್ ॥

ಇದರಂತೆ ಕೊನೆಗೂ ನಮ್ರರಾಗಿ ನಿವೇದಿಸಿದ್ದಾರೆ —

ಮಧ್ವಗ್ರಂಥಸಾರ್ಥಸಂಧಿಂ ವಿದುರ್ದೇವಾ ನ ಮಾನುಷಾಃ
ವಾಯುಸ್ತುತಿರತಿರ್ನಿತ್ಯಂ ವೇದಾಹಂ ಚ ಕಥಂಚನ ॥

ಹರಿಭಕ್ತ್ಯಗ್ರಣೀ ಮಧ್ವೋ ಗುರುಶ್ಚ ಪ್ರೀಯತಾಂ ಮಮ ॥

'ಭಾರತನಿರ್ಣಯ ಟೀಕಾಯಾಂ ಗುರುಭಾವಪ್ರಕಾಶಿಕಾಯಾಂ' ಎಂಬ ಅಂತ್ಯವು ಇದಕ್ಕೆ ಪೂರಕ. ವಾದಿರಾಜ ಗ್ರಂಥ ಪ್ರಕಾಶನದಿಂದ ಇದು ಮೂಲದೊಡನೆ 617 ಪುಟಗಳಲ್ಲಿ ಬಂದಿದೆ (1943).

14. <u>ಗುರ್ವರ್ಥದೀಪಿಕಾ (ನ್ಯಾಯಸುಧಾ)</u>: ಮಧ್ವರ ಸೂತ್ರಪ್ರಸ್ಥಾನ ಗ್ರಂಥಗಳಲ್ಲಿ ಒಂದಾದ 'ಅನುವ್ಯಾಖ್ಯಾನ'ಕ್ಕೆ ಜಯತೀರ್ಥರು ರಚಿಸಿದ 'ನ್ಯಾಯಸುಧಾ' ಟೀಕೆ ಪ್ರಾಚೀನವೂ ಪ್ರಮುಖವೂ ಆಗಿದೆ, ಸಂಕ್ಷಿಪ್ತವಾದರೂ ಅಪೂರ್ವ ಸಂದಿಗ್ಧಾಂಶಗಳನ್ನು ವಿವರಿಸಿದೆ; ಅಲ್ಲದೆ ಮಧ್ವರ ಇನ್ನೊಂದು ಸೂತ್ರಪ್ರಸ್ಥಾನ ಗ್ರಂಥ 'ನ್ಯಾಯವಿವರಣ'ದ ಅಂಶಗಳನ್ನರುಹಿದೆ. ಮೊದಲು —

ನಾರಾಯಣಂ ಹಯಗ್ರೀವಂ ವ್ಯಾಸಂ ವಾಯುಂ ಸರಸ್ವತೀಂ
ನತ್ವಾ ತತ್ಕರುಣಾಸತ್ವಾದ್ರಮೇ ನ್ಯಾಯಸುಧಾಂಬುಧೌ ॥

'ಶ್ರೀಯ ಇತಿ ಭೂತಿರ್ಮಹಾಲಕ್ಷ್ಮೀತಿ ಚ ಶ್ರೀವಾಚಕ ಪದಾಭ್ಯಾಮಾದ್ಯಂತಯೋಃ ಸ್ಫುಟೀಕರಣಾತ್ ಶ್ರೀಕರೋಽಯಂ ಗ್ರಂಥಃ। ತತ್ರ ವಯಮೇವ ಸಾಕ್ಷಿಣಃ।' ಎಂದಿರುವುದು

---

7. ಷಡ್ರಿಪುಗಳನ್ನು ಗೆದ್ದು ಅಂತರಂಗದಲ್ಲಿ ಹರಿಯನಿರಿಸುವುದೇ ಮಧ್ವಶಾಸ್ತ್ರದ ತಿರುಳಾಗಿ, ಕಾಮ ಕೀಚಕ ಕ್ರೋಧ ದುಶ್ಶಾಸನ ಲೋಭ ದುರ್ಯೋಧನ—ಮೋಹ ಮಣಿಮಂತ, ಮದೋನ್ಮತ್ತ ಬಕ, ಮತ್ಸರ ಜರಾಸಂಧ ಇವರನ್ನುರುಳಿಸಿದ ಭೀಮ ನಮ್ಮನುದ್ಧರಿಸಲೆಂದ 'ಮಧ್ವಾಷ್ಟಕ'ದಂತೆ (5), ಭಾರತವೂ ಸಾಂಕೇತಿಕ ವಾದಿರಾಜರಿಗೆ.

ಸಾಮಾನ್ಯರ ಶಿಕ್ಷಣಾರ್ಥ. “ಋಷ್ಯಾದಿ ಮಧ್ಯಮ ಹಾಗೂ ಅಪರೋಕ್ಷ್ಯದ್ಯುತ್ತಮ ಅಧಿಕಾರಿಗಳಿಗೆ ತಮ್ಮ ಜ್ಞಾನದ ಬಲದಿಂದಲೇ ಎಲ್ಲ ಪುರುಷಾರ್ಥ ಸಿದ್ಧಿಸುವುದರಿಂದ ಗ್ರಂಥ ಪಠನಾದಿಗಳು ಅನಗತ್ಯ (ಸರ್ವೇಽಪಿ ಪುರುಷಾರ್ಥಾಸ್ಯುಃ ಜ್ಞಾನಾದೇವ ನ ಸಂಶಯಃ — ಮಧ್ವರ ಅಣುಭಾಷ್ಯ); ಋಜುಗಳಂತೂ ಸಂಕಲ್ಪಸಿದ್ಧಿಯುಳ್ಳವರು. ವಾದಿರಾಜರು ಜಯತೀರ್ಥರ ಕೀರ್ತಿ ವೃದ್ಧಿಯಾಗಲೆಂದೇ 2 ಗ್ರಂಥ[8] ಬರೆದು, ಅವೆರಡರ ಆರಂಭದಲ್ಲೂ ಜಯತೀರ್ಥರಿಗೆ ನಮಸ್ಕರಿಸದಿದ್ದರೂ, ಅವರನ್ನು ಕನ್ನಡದಲ್ಲೂ[9] ಸಂಸ್ಕೃತದಲ್ಲೂ ಅಲ್ಲಲ್ಲಿ ಹೊಗಳಿದ್ದಾರೆ” (ವೃಂದಾವನಾಖ್ಯಾನ ಕೃಪಿಡಿ, 108). ಟಿಪ್ಪಣಿಯ ಅಂತ್ಯದ ನಮನವೂ ಹರಿಗುರುಗಳನ್ನು ಕುರಿತಿದೆ —

> ನಮೋಽಸ್ತು ವಾಸುದೇವಾಯ ವ್ಯಾಸದೇವಾಯ ಧೀಮತೇ
> ಅಸುದೇವಾಯ ದೇವೇಭ್ಯೋ ಗುರುಭ್ಯಶ್ಚ ನಮೋ ನಮಃ ॥

ವಾದಿರಾಜ-ಗ್ರಂಥ ಪ್ರಕಾಶನ 4 ಅಧ್ಯಾಯಗಳ ಈ ಕೃತಿಯನ್ನು 233 ಪುಟಗಳಲ್ಲಿತ್ತಿದೆ (1952).

15. <u>ಗುರ್ವರ್ಥದೀಪಿಕಾ</u> (<u>ತತ್ವಪ್ರಕಾಶಿಕಾ</u>): ವೇದಾರ್ಥ ನಿರ್ಣಾಯಕವಾದ ‘ಬ್ರಹ್ಮಸೂತ್ರ’ಗಳಿಗೆ ಮಧ್ವರು ಬರೆದ ‘ಭಾಷ್ಯ’ಕ್ಕೆ ಜಯತೀರ್ಥರ ಟೀಕೆ ‘ತತ್ವಪ್ರಕಾಶಿಕಾ’ ಹೆಸರಾಗಿದ್ದು, ಅದರ ಹಲವು ಟಿಪ್ಪಣಿಗಳಲ್ಲಿ ವಾದಿರಾಜರ ಪ್ರಸ್ತುತ ಕೃತಿ ‘ಪ್ರಾಚೀನವಾಗಿಯೂ ಟಿಪ್ಪಣ್ಯಂತರಾನುಕ್ತ ವರ್ಣನಪರವಾಗಿಯೂ ಜಿಜ್ಞಾಸುಗಳಿಗೆ ಉಪಕಾರಕವೂ ಆಗಿದೆ’ (ಕೊರಟಿ, ವಾದಿರಾಜರು, 377).

ಆರಂಭ—

> ನತ್ವಾ ನಾರಾಯಣಂ ವ್ಯಾಸಂ ಹಯಾಸ್ಯಂ ಮಧ್ವಮಾದರಾತ್
> ವಾಣೀಂ ಗುರೂಂಶ್ಚ ಸಕಲಾನ್ ಕುರ್ವೇ ಗುರ್ವರ್ಥದೀಪಿಕಾಂ ॥

ಸುಧಾ ಟಿಪ್ಪಣಿಯಂತೆ ಇಲ್ಲಿಯೂ ಮಧ್ವರ ಹಾರ್ದಾರ್ಥ ಸೂಚಿತವಾಗಿ, ಗುರ್ವರ್ಥದೀಪಿಕಾ ಎಂಬುದರಲ್ಲಿ ಅವರದೇ ಮುಖ್ಯಾರ್ಥ; ಜಯತೀರ್ಥರದು ತನ್ಮೂಲಕ ವಿವಕ್ಷಿತ.

---

8. ‘ಗುರ್ವರ್ಥದೀಪಿಕಾ’ ನಾಮಕ, ನ್ಯಾಯಸುಧಾ — ತತ್ವಪ್ರಕಾಶಿಕಾ ಎಂಬ 2 ಟಿಪ್ಪಣಿ ಗ್ರಂಥ.

9. ‘ಭಳಿರೆ ನಿನ್ನಯ, ಜಯರಾಯ, ಹಮ್ಮನಳಿದು’ ಎಂಬ ಕೀರ್ತನೆಗಳಲ್ಲಿ.

"ಗುರ್ವರ್ಥದೀಪಿಕಾ ಎಂದರೂ ವಾದಿರಾಜರಿಗೆ ಗುರುವಾದ ಜಯತೀರ್ಥ ಗುರುಗಳ ಅರ್ಥ ಪ್ರಕಾಶಿಕಾ ಎಂದರ್ಥವಲ್ಲ. ಭಾಷ್ಯಕ್ಕೆ ವ್ಯಾಖ್ಯಾನ ಮಾಡುವಾಗಲೂ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವಾಗಲೂ ಜಯತೀರ್ಥರು ಗುರುಗಳಾದ ಮಧ್ವಾಚಾರ್ಯರ ವಿವಕ್ಷಿತಾರ್ಥಕ್ಕಿಂತ ಭಿನ್ನಾರ್ಥಗಳನ್ನು ಅಲ್ಲಲ್ಲಿ ತೋರಿಸಿರುತ್ತಾರೆ. ವಾದಿರಾಜರು ಮಧ್ವಸಮಾನರಾದ್ದರಿಂದ ಮಧ್ವಾಚಾರ್ಯರ ಹಾರ್ದಾರ್ಥಗಳನ್ನು ಎತ್ತಿಹಿಡಿದು, 'ಮನ್ಯುತನ್ತು' ಇತ್ಯಾದಿ ವಾಕ್ಯಗಳಿಂದ ಮಧ್ವಾಚಾರ್ಯರ ಅರ್ಥವನ್ನು ತೋರಿಸಿ, ಜಯತೀರ್ಥರು ಬೇರೆ ಅರ್ಥವನ್ನು ಅಭ್ಯುಪಗಮ ವಾದಾದಿ ಕಾರಣಗಳಿಂದ ನಿರೂಪಿಸಿದ್ದಾರೆಂಬ ಗೂಢ ವಿವರಗಳನ್ನು ತಿಳಿಸಿದ್ದಾರೆ; ಕ್ವಚಿತ್ ಖಂಡಿಸಿಯೂ ಇದ್ದಾರೆ. ಆದ್ದರಿಂದ ಇಲ್ಲಿ ಗುರು ಶಬ್ದಕ್ಕೆ ಮಧ್ವಗುರುಗಳೆಂದು ಮುಖ್ಯಾರ್ಥ. ಅಮುಖ್ಯಾರ್ಥ ಇಟ್ಟುಕೊಂಡರೆ ಲೋಕಶಿಕ್ಷೆಗಾಗಿ ಬರೆದದ್ದು ಎಂದು ತಿಳಿಯಬೇಕು" (ವೃಂದಾವನಾಖ್ಯಾನ ಕೈಪಿಡಿ, 106–7). ಟಿಪ್ಪಣಿಯ ಅಂತ್ಯ ಶ್ಲೋಕಗಳೂ ಇದಕ್ಕೆ ಪೋಷಕ —

ಸೂತ್ರೇ ಭಾಷ್ಯೇ ಚ ಟೀಕಾಯಾಂ ಸೂತ್ರೋಕ್ತೇ ಶ್ರೌತ ವಾಚಿ ಚ
ಯಥಾಶಕ್ತಿ ವಿಮರ್ಶೇನ ಪ್ರೀಯತಾಂ ಮೇ ರಮಾಪತಿಃ ॥

ಏವಂ ಗುರೂಣಾಂ ಸರ್ವೇಷಾಂ ಭಾವಸ್ಯೈವಂ ಪ್ರದರ್ಶಿತಂ
ವಾದಿರಾಜಾಖ್ಯ ಯತಿನಾ ಕೃತಾ ಗುರ್ವರ್ಥದೀಪಿಕಾ ॥

'ವಾದಿರಾಜರ ಟಿಪ್ಪಣಿಗಳೆಲ್ಲಕ್ಕೂ 'ಗುರ್ವರ್ಥದೀಪಿಕಾ' ಸಾಮಾನ್ಯನಾಮವಾದಂತಿದೆ' (ಗಾಡಗೆರಿ, ಗ್ರಂಥಮಾಲಿಕಾ ಪ್ರಸರ, 2–28). ವಾದಿರಾಜ ಗ್ರಂಥ ಪ್ರಕಾಶನವೇ ಈ 4 ಅಧ್ಯಾಯದ ಟಿಪ್ಪಣಿ 180 ಪುಟಗಳಲ್ಲಿತ್ತಿದೆ (1954).

16. <u>ಈಶಾವಾಸ್ಯ ಉಪನಿಷದ್ಭಾಷ್ಯ ಟೀಕಾ ಟಿಪ್ಪಣಿ</u>: ಮಧ್ವರ ದಶೋಪನಿಷತ್ ಭಾಷ್ಯಗಳಲ್ಲಿ ಈಶಾವಾಸ್ಯಕ್ಕೆ ಬಂದ ಜಯತೀರ್ಥರ ಟೀಕೆಯ ಟಿಪ್ಪಣಿಯಿದು, ಮೂಲ ಭಾಷ್ಯ — ಟೀಕೆ — ಟಿಪ್ಪಣಿ ಎಂಬ ನಾಲ್ಕನ್ನೂ ಒಳಗೊಂಡು 32 ಪುಟಗಳಲ್ಲಿ ಬಂದಿದೆ; ವಾದಿರಾಜ ಗ್ರಂಥ ಪ್ರಕಾಶನದಿಂದ (1954). ಟಿಪ್ಪಣಿ ಸರಳವೂ ಹೃದಯಂಗಮವೂ ಬಹ್ವರ್ಥಗರ್ಭಿತವೂ ಆಗಿದೆ. ಆದಿ ಭಾಗವಿದು —

ಹಯಾಸ್ಯಂ ವ್ಯಾಸ ಕೃಷ್ಣೌ ಮಾಂ ಪ್ರಾಣಂ ವಾಣೀಂ ಗುರೂನಪಿ
ಪ್ರಣಮ್ಯ ವಾದಿರಾಜಾಖ್ಯ ಯತಿನಾ ತದನುಗ್ರಹಾತ್ ।
ಈಶಾವಾಸ್ಯೋಪನಿಷದೋ ಭಾಷ್ಯ ಟೀಕಾ ಪ್ರಕಾಶಿಕಾ
ಕ್ರಿಯತೇ ಹ್ರಿಯತೇ ದುರ್ಮಾರ್ಗಗರ್ವಾಂಧತಮಸಂ ಯಯಾ ॥

ಅಂತ್ಯಭಾಗ ಹೀಗಿದೆ —

> ಅಗ್ನೇ ನಯೇ ತ್ಯಗ್ನಿಸ್ಥ ಭಗವತ್ ಪ್ರಾರ್ಥನಮಿತಿ ಭಾವೇನಾಹ ಅಗ್ನಿಪ್ರತೀಕಮಿತಿ।
> ಗ್ರಂಥೇನಾನೇನ ಭಗವಾನಿಂದಿರಾರಮಣಃ ಪ್ರಭುಃ
> ನಂದತೀರ್ಥಮುನೇರ್ಬಂಧುಃ ಸ ದದ್ಯಾತ ಸಕಲೇಪ್ಸಿತಂ ॥

17. <u>ಷಟ್ಪ್ರಶ್ನೋಪನಿಷತ ಭಾಷ್ಯಟೀಕಾ ಟಿಪ್ಪಣಿ:</u> 39 ಪುಟಗಳ ಈ ಉಡುಪಿಯ ಪ್ರಕಟನೆ ಮೂಲ– ಭಾಷ್ಯ– ಟಿಪ್ಪಣಿಯುಕ್ತ (1960); ಜಯತೀರ್ಥರ ಟೀಕೆ ಇಲ್ಲಿ ಲುಪ್ತ. ಟಿಪ್ಪಣಿಯ ಆದ್ಯಂತಗಳು ಇಂತಿವೆ —

> ಸರ್ವತಲ್ಪಮನಲ್ಪೇಂದ್ರಕಲ್ಪಂ ನತ್ವಾ ಹಯಾನನಂ
> ಷಟ್ ಪ್ರಶ್ನೋಪನಿಷಟ್ಟೀಕಾ ಟಿಪ್ಪಣೀ ಕ್ರಿಯತೇ ಮಯಾ ॥
>
> ಷಟ್ ಪ್ರಶ್ನೋಪನಿಷದ್ಭಾಷ್ಯ ಟೀಕಾರ್ಥಕಥನೇನ ವೈ
> ಪ್ರೀತೋ ಹಯಮುಖಃ ಶ್ರೀಮಾನ ಕಾಮಾದೀನಹಂತು ಷಡ್ರಿಪೂನ ॥

ವಾದಿರಾಜರ ಪ್ರಾಸಪ್ರಿಯತೆ ಇಲ್ಲೂ ಸುವ್ಯಕ್ತ.

18. <u>ತಲವಕಾರ ಉಪನಿಷದ್ಭಾಷ್ಯ ಟಿಪ್ಪಣಿ:</u> ಮಧ್ವರ ಭಾಷ್ಯಕ್ಕಿದು ನೇರ ಟಿಪ್ಪಣಿ, ಬೇರೆಯವಕ್ಕಿಂತ ಬೋಧಪ್ರದ. (ತಲವಕಾರಕ್ಕೆ ಕೇನೋಪನಿಷತ ನಾಮಾಂತರ). ಮೂಲ– ಭಾಷ್ಯ– ಟಿಪ್ಪಣಿ ಉಡುಪಿಯಿಂದ 11 ಪುಟಗಳಲ್ಲಿ ಪ್ರಕಟಿತ (1954). ಇದರ ಪ್ರಾಸಪೂರ್ಣ ಆದ್ಯಂತ ಶ್ಲೋಕ —

> ದದ್ಯಾದ್ವಿದ್ಯಾಂ ಹಯಗ್ರೀವಃ ಪದ್ಯಾ ದದ್ಯಾದ್ಧಿಯಂ ಮಮ
> ದದ್ಯಾನ್ಮಧ್ವೋ ಬುದ್ಧಿಶುದ್ಧಿಂ ದದ್ಯಾದದ್ಯ ಮಹರ್ದ್ಧಿಮಾನ ॥
>
> ನಿಯಂತಾ ಸರ್ವದೇವಾನಾಂ ನಿಹಂತಾ ಸರ್ವರಕ್ಷಸಾಂ
> ನ ಯಂತಾ ಕಮಲಾಕಾಂತಃ ಸಮಂತಾತ್ಸುಖದೋಸ್ತು ಮೇ ॥

19. <u>ಕಾಠಕ ಉಪನಿಷದ್ಭಾಷ್ಯ ಟಿಪ್ಪಣಿ:</u> 27 ಪುಟಗಳ ಉಡುಪಿಯ ಪ್ರಕಟಣೆ (1969, 3 ಭಾಗ(ಪಠ್ಯ)ಗಳಿಂದ ಕೂಡಿ ಉಪಕಾರಕವಾಗಿದೆ. ಟಿಪ್ಪಣಿ ಭಾಗದ ಆದ್ಯಂತ ವಾಕ್ಯ ಹೀಗಿವೆ —

> ಉಶನ್ಹ ವೈ ವಾಜಶ್ರವಸ ಇತ್ಯತ್ರ ವಾಜಶ್ರವೋ ನಾಮ ಕಶ್ಚಿದೃಷಿಃ। ತಸ್ಯ
> ನಪ್ತಾ ಪೌತ್ರಪುತ್ರಃ ಉದ್ದಾಲಕಾಖ್ಯಃ ವಾಜಸ್ರವಸ ಉಚ್ಯತೇ।

ಸ್ವಾತ್ಶರೀರಾತ್ ಸ್ವಕೀಯದೇಹಾತ್ ಪ್ರವೃಹೇದ್ವಿಭಕ್ತಂ ಭಾವಯೇದಿತ್ಯರ್ಥಸ್ಯ ಪರಮಾತ್ಮನಃ ಜೀವಶರೀರಸ್ಯ ಚ ಭೇದಸ್ಯ ಸ್ವತಃ ಸಿದ್ಧತ್ವಾತ್ ನ ಪೃಥಗ್ವಿಧೇಯಂ ಇತಿ ವಿದುಷಾಂ ಪರೀಕ್ಷಾಕ್ಷಮತ್ವಾತ್ ಉಪೇಕ್ಷಣೀಯ ಏವ।

20. <u>ಆಥರ್ವಣ ಉಪನಿಷದ್ಭಾಷ್ಯ ಟಿಪ್ಪಣಿ:</u> 24 ಪುಟಗಳ ಈ ಉಡುಪಿ ಪ್ರಕಟನೆ (1969) ಕೂಡ ತ್ರಿಭಾವಯುಕ್ತವಾಗಿದ್ದು, ಲಲಿತವೂ ಬೋಧಪೂರ್ಣವೂ ಎನಿಸುವಂತಿದೆ. ಆದ್ಯಂತ ಭಾಗ ಹೀಗೆ —

ನಮಸ್ಕೃತ್ಯ ಹಯಗ್ರೀವಂ ಸಮಸ್ತ ಸುರನಾಯಕಂ
ಆಥರ್ವಣೋಪನಿಷದಃ ಪ್ರೋಕ್ತಂ ಭಾಷ್ಯಂ ವಿವೃಣ್ಮಹೇ ॥

ಆಥರ್ವಣೀಯ ಜ್ಯೇಷ್ಠಪುತ್ರಾಯೇತಿ।
ಹನ್ಯಂಧೋ ಮಣಿಂ ಪಶ್ಯತಿ। ನಾಪಿ ಮಾಣವಕೋಽಗ್ನಿರ್ಭವತಿ।
ನ ವಾಯುರ್ವಾದಿತ್ಯೋ ಭವತಿ। ಅತೋ ಯುತ ಕಿಂಚಿದೇತತ್।

21. <u>ಮಾಂಡೂಕ್ಯ ಉಪನಿಷದ್ಭಾಷ್ಯ ಟಿಪ್ಪಣಿ:</u> ಮಂಡೂಕ ನಾಮಾಂತರದ ಉಪನಿಷದ್ಭಾಷ್ಯ ಟಿಪ್ಪಣಿಯಿದು ಉಡುಪಿಯಿಂದ 25 ಪುಟಗಳಲ್ಲಿ ಪ್ರಕಟವಾಗಿದ್ದು (1969) ಉಪಯುಕ್ತವಾಗಿದೆ. ವಾದಿರಾಜೀಯ ಆದ್ಯಂತ ಇವು —

ತಾರಾಭಿಧೇಯಸ್ತಾರಾಭ ಹಾರಾಲಂಕಾರಭಾಸುರಃ
ಸಾರಾತ್ಸಾರೋ ಹಯಶಿರಾಸ್ತ್ರಾಯೇದ್ದುಸ್ತರಾದರಾತ್ ॥

ಉಪಸಂಹಾರವಾಕ್ಯೇಽಪಿ 'ಪ್ರಣವಂ ಹೀಶ್ವರಂ ವಿದ್ಯಾತ್ಸರ್ವಸ್ಯ ಹೃದಯೇ ಸ್ಥಿತಂ। ಸರ್ವವ್ಯಾಪಿನಮೋಂಕಾರಮಿತಿ ಭಗವನ್ಮಹಿಮೋಕ್ತ್ಯೈವ ಸ್ವಾಭಿಪ್ರೇತಾರ್ಥರೂಪ ರತ್ನರಕ್ಷಾರ್ಥಂ ಸಂಪುಟೀಕಾರೇತಿ ಸರ್ವಮವದಾತಂ। ಓಂ।

22. ತೈತ್ತಿರೀಯ ಉಪನಿಷದ್ಭಾಷ್ಯ ಟಿಪ್ಪಣಿ: ಈ ಟಿಪ್ಪಣಿ ಪೂರ್ತಿ ಸಿಕ್ಕಿಲ್ಲವಾದರೂ, ಉಪಲಬ್ಧ ಭಾಗ 29 ಪುಟಗಳಷ್ಟು ಉಡುಪಿಯಿಂದ ಪ್ರಕಟವಾಗಿದೆ (1954). ಇದರ ಆದಿಯ ಪ್ರಾಸಭರಿತ —

ಸುಮತಿಭಿರನುಮೇಯಂ ಶುಭ್ರಕಾಯಂ ಸಖಾಯಂ
ಸುಖಮಯಮನಪಾಯಂ ಮುಕ್ತ್ಯುಪಾಯಂ ವಿಮಾಯಂ

ನೃಹರಿಯಮಹಮೇಯಂ ಧ್ಯೇಯಮಾಮ್ನಾಯ ನಗೇಯಂ
ಸದಯಮಯಸದಜೇಯಂ ಶ್ರೀಸಹಾಯಂ ಭಜೇಯಂ ॥

(ಗಾಡಗೆರಿ ಗೋಪಾಲಕೃಷ್ಣಾಚಾರ್ಯರ ಗ್ರಂಥಪ್ರಸಾರ ಮಾಲಿಕಾ, ಪು. 4, 9; 14ರಲ್ಲಿ ಈ ಶಾ ಮಾಸ್ಯ ತಲವಕಾರ ತೈತ್ತರೀಯ ಟಿಪ್ಪಣಿಗಳನ್ನೂ 'ಗುರ್ವರ್ಥದೀಪಿಕಾ' ಎಂದೇ ಕರೆದಿದೆ.)

23. <u>ಉಪನ್ಯಾಸ ರತ್ನಮಾಲಾ:</u> ಈ ಕೃತಿಯ ಹೆಸರೇ ಸೂಚಿಸುವಂತೆ ಇದು ಪ್ರಬಂಧರೂಪದ ರಚನೆ. ಆರಂಭದ —

ಶ್ರೀಶಂ ಪ್ರಣಮ್ಯ ವ್ಯಾಸಂ ತಂ ವಾಣೀಶಂ ಚ ಗುರೂನ್ಗುರೂನ್
ಕರೋಮ್ಯುಪನ್ಯಾಸ ರತ್ನಮಾಲಾಂ ಶ್ರೀವಲ್ಲಭಪ್ರಿಯಾಂ ॥

ಎಂಬ ಶ್ಲೋಕಾನಂತರ 'ಶ್ರೀ ರುಕ್ಮಿಣೀಶ ವಿಜಯಸ್ಥ ಕೃಷ್ಣ ಸ್ತುತಿರೂಪ ಗೋಪೀ ವಾಕ್ಯಾತ್ಮಕ ಶ್ಲೋಕದ್ವಯಸ್ಯ ದ್ವಾವುಪನ್ಯಾಸೌ, ಪ್ರಮಾಣಪದ್ಧತ್ಯ[10]ಪಾಯುಕ್ತ್ಯಾಸ್ಯ ಪ್ರೋಪನ್ಯಾಸಾ:, ಮಾಯಾವಾದಖಂಡನೋಪಯೋಗ್ಯೇಕ:, ಏವಂ ದಶೋಪನ್ಯಾಸಾ: ದಶಪ್ರಮತಿ ಪ್ರೀತ್ಯರ್ಥಂ ಬಾಲಾನಾಂ ಬುದ್ಧಿವೈಶದ್ಯಾಯ ಚ ಸಂಗೃಹ್ಯಂತೇ' ಎಂದಿದೆ. ಆದರೆ ಉಪಲಬ್ಧ 3 ಉಪನ್ಯಾಸ ವಾದಿರಾಜ ಗ್ರಂಥ ಪ್ರಕಾಶನದವರಿಂದ ಪ್ರಕಟಿತ (1954) 24 ಪುಟಗಳಲ್ಲಿ.

ಪ್ರಥಮೋಪನ್ಯಾಸ 'ರುಕ್ಮಿಣೀಶ ವಿಜಯ' 8—29ರ ಬಗ್ಗೆ, ಹೀಗೆ ಮೊದಲಾಗಿದೆ — 'ಜಡಾಜಡ ಮುಕ್ತಾಮುಕ್ತ ಸಕಲ ಪ್ರಪಂಚಾತ ಸವಿಸ್ತರಂ ಶ್ರಿಯ: ಮಹತ್ವಂ ನಿರೂಪ್ಯ, ತಸ್ಯಾಶ್ಚ ಪತಿತ್ವೇನ ಹರೇರ್ನಿರವಧಿಕ ಮಹತ್ವಂ ಪ್ರತಿಪಾದಯಿತುಂ ಇದಂ ಪದ್ಯಂ ಪ್ರವೃತ್ತಂ' (ಪದ್ಯದ ಭಾವವೇನೆಂದರೆ — "ಅಂಭೃಣೀ ಸೂಕ್ತದಲ್ಲಿ[11] 'ಅಹಂ ರುದ್ರೇಭಿ:' ಮುಂತಾದ ಮಂತ್ರಗಳಿಂದ ಲಕ್ಷ್ಮಿಯು ಬ್ರಹ್ಮಾದಿಗಳಿಗಿಂತ ಉತ್ತಮಳು, ಶತ್ರುಗಳನ್ನು ಕಾಳ್ಗಿಚ್ಚಿನಂತಹ ಗಿಸುವ ನಿನ್ನನ್ನಾಶ್ರಯಿಸಿದವಳು, ಪ್ರಪಂಚವನ್ನು ಕಡಿಮೆಯಾಗಿ ತಿಳಿದವಳು ಎಂದಿರುವುದರಿಂದ, ಲಕ್ಷ್ಮೀಪತಿ ಸರ್ವೋತ್ತಮನೆಂದಾಯಿತು!" ಇದೀಗ ವಾದಿರಾಜರ ಯುಕ್ತಿಚಾತುರ್ಯವಲ್ಲವೇ?)

---

10. ಜಯತೀರ್ಥ ಕೃತಿ.

11. ಪ್ರಾಸಂಗಿಕವಾಗಿ ಅಂಭೃಣೀ ಸೂಕ್ತದ ವ್ಯಾಖ್ಯಾನವೂ ಇಲ್ಲಿ ಬಂದಿದೆ. (ಪ್ರಭಂಜನ, ಅಂಭೃಣೀ ಸೂಕ್ತ). ಅಂಭೃಣ = ಲಕ್ಷ್ಮಿ.

ಉಪನ್ಯಾಸದ ಅಂತ್ಯಕ್ಕೆ "ಉತ್ತರ ಪದ್ಯೇಷು ಚ ಬ್ರಹ್ಮಾದಿ ಸಕಲದೇವಾನಾಮಪಿ ವಿವಿಧ ಕಾಮಕ್ರೋಧಾದಿ ದೋಷಗ್ರಸ್ತತ್ವೇನ ಭಗವತ್ಪ್ರಕಾಶಾತ್ ನೀಚತ್ವಸ್ಯ ಮೂಲರೂಪ ಶ್ರೀಯಶ್ಚೈವ ಕಥನಾಚ್ಚ 'ಯದ್ಧಿ ಮನಸಾ ಧ್ಯಾಯತಿ ತದ್ವಾಚಾ ವದತೀತಿ ಪ್ರಮಿತತ್ವಾತ್ ನಾ ಇದಂ ಜಗತ್ ತೇ ಅನುಮನುತ' ಇತಿ ಗೋಪೀಭಿರುಕ್ತಂ ಯುಕ್ತಮಿತಿಸ್ಥಿತಂ" ಎಂದಿದ್ದಾರೆ. ಹರಿಸರ್ವೋತ್ತಮತ್ವ — ಮೋಕ್ಷಸಾಧಕವಾದ ಸ್ವರಚನೆಯ ಇಂಥ ವಿವೇಚನೆ ಸ್ವಾರಸ್ಯಕರ, ಕುತೂಹಲಕರ.

ದ್ವಿತೀಯೋಪನ್ಯಾಸದ ಮೊದಲಲ್ಲಿ 'ನಾರಾಯಣೋಗಣ್ಯಗುಣ ನಿತ್ಯೈಕ ನಿಲಯಾಕೃತಿಃ ... ಇತ್ಯಾದ್ಯ ಶ್ಲೋಕೇನ ನಾರಾಯಣಸ್ಯಾಗಣ್ಯಗುಣಾಶ್ರಯತ್ವಂ ಆಚಾರ್ಯೈರಭಿಹಿತಂ' ಎಂದಿದ್ದರೆ, ಅಂತ್ಯದಲ್ಲಿ 'ತಯಾ ನಾರಾಯಣಸ್ಯಾಲ್ಪಗುಣಾಶ್ರಯತ್ವಸ್ಯ ವಕ್ತುಮಶಕ್ಯತ್ವೇನ ಯುಕ್ತಮೇವ ತಸ್ಯಾಗಣ್ಯ ಗುಣಾಶ್ರಯತ್ವ ಪ್ರತಿಜ್ಞಾನಂ' ಎಂದಿದೆ. ಈ ಉಪನ್ಯಾಸವು ಸಂಪಾದಕರು ಭಾವಿಸಿದಂತೆ ಮಧ್ವರ ಮಾಯಾವಾದ ಖಂಡನಕ್ಕೆ ಸಂಬಂಧಿಸದೆ 'ಉಪಾಧಿಖಂಡನ'ಕ್ಕೆ ಸಂಬಂಧಿಸಿದೆ; ಮಧ್ವರ ದಶ ಪ್ರಕರಣಗಳಲ್ಲಿರುವ 'ಪ್ರಪಂಚ ಮಿಥ್ಯಾತ್ವಾನುಮಾನ ಖಂಡನ'ಕ್ಕೂ ವಾದಿರಾಜರು ನಂತರ ಟಿಪ್ಪಣಿಸಿದಂತಿದೆ (ಗಾಡಗೆರೆ, ಗ್ರಂಥಮಾಲಿಕಾ ಪ್ರಸರ, ಪು.18). ಪುಣೆಯ ದ್ವೈತ ಸಿದ್ಧಾಂತ ಕಾರ್ಯಾಲಯದಿಂದ ಆರ್.ಬಿ.ಅವಧಾನಿಯವರು ಪ್ರಕಟಿಸಿದ ಮಾಯಾವಾದ ಖಂಡನ ಟೀಕಾ ಹಾಗೂ ಮಿಥ್ಯಾತ್ವಾನುಮಾನಖಂಡನ ಟೀಕಾಗಳ ಆದಿಯಲ್ಲಿ ತತ್ಸಂಬಂಧಿ ಉಪನ್ಯಾಸಗಳನ್ನು ಕರ್ತೃನಾಮವಿಲ್ಲದೆ ಕೊಟ್ಟಿದ್ದಾರೆ.[12] ಕರ್ತೃವಾದಿರಾಜರಾದರೆ, ಒಟ್ಟು 12 ಉಪನ್ಯಾಸಗಳೆಂದಾಯಿತು; ಅವುಗಳಲ್ಲಿ 5 ಸಿಕ್ಕು, ಪ್ರಮಾಣ ಪದ್ಧತಿಯ 7 ಸಿಕ್ಕಿಲ್ಲವೆಂದಾಯಿತು.

ಫಲೋಪನ್ಯಾಸವೆಂಬುದು ದಶೋಪನ್ಯಾಸ ರತ್ನಮಾಲಿಕೆಯ ಕೊನೆಯ ಉಪನ್ಯಾಸದಂತಿದೆ. ಇದು 'ರುಕ್ಮಿಣೀಶ ವಿಜಯ'ದಲ್ಲಿ ಮುನಿಗಳು ಕೇಶವಾದಿ ರೂಪಗಳನ್ನು ವರ್ಣಿಸುವಾಗ ಬರುವ 17—12ರ ಬಗ್ಗೆ ಇದ್ದು, ಹೀಗೆ ಮೊದಲಾಗಿದೆ — 'ಅನೇನ ಹಿ

12. ಪ್ರಭಂಜನ, ವಾದಿರಾಜ ಸ್ತೋತ್ರ ಮಂಜರಿ, iv.

ಪದ್ಯೇನ ತ್ರಿವಿಧ ಜೀವಾನಾಂ ಸ್ವಭಾವತ್ರಯಂ ತದುಚಿತಫಲತ್ರಯಂ ಚೋಕ್ತಂ ’. (ಪದ್ಯದ ಭಾವವೇನೆಂದರೆ — ಕರಣಪಾಲನಶೀಲನೇ, ವಾಯುಭಕ್ತರು ನಿನ್ನ ಭಕ್ತಸಾನ್ನಿಧ್ಯವನ್ನರಿಯುವವರು, ನಿನ್ನ ಭಕ್ತರು ಯಜುರ್ವೇದದಿಂದ ಅಗ್ನಿಕಾರ್ಯ ಅರಿಯುವಂತೆ ನೀನು ಭಕ್ತರಲ್ಲಿರುವುದನ್ನರಿಯುವವರು. ಕೃಷ್ಣ, ಸೃಷ್ಟಿಪಾಲನನಿರತ, ಭೀಮ ಕೀರ್ತ್ಯರ್ಥ ಜರಾಸಂಧ ಯುದ್ಧ ತಡೆದೆ; ಅಧರೋದರಾಸಕ್ತಯಾದವರು, ಯಜುರ್ವೇದ ನೋಡದವರು ಯಜ್ಞ ತಿಳಿಯದಂತೆ, ನಿನ್ನ ಮಹಿಮೆಯರಿಯರಿಲ್ಲ). ಉಪನ್ಯಾಸಾಂತ್ಯಕ್ಕೆ ‘ಇತಿ ಶ್ಲೋಕೋಕ್ತ: ಸರ್ವೋಪ್ಯರ್ಥ: ಕಥಂ ನ ಶ್ಲೋಕ್ಯ: ಇತಿ ಸರ್ವಂ ಅವದಾತಂ ... ಉಕ್ತದಶೋಪನ್ಯಾಸೇಷು ಶ್ರದ್ಧಾವತಾ ಭಾವ್ಯಂ ಅತ: ಪೂರ್ಣಮತಿನಾ ಯತಿನಾ ನಿರೂಪಿತ ಏವ ಶಾಸ್ತ್ರಾರ್ಥ ಇತಿ ಸ್ಥಿತಂ ಇತಿ ಫಲೋಪನ್ಯಾಸ: —

ವಾದಿರಾಜೇನ ರಚಿತಾ ಮಾಲೇಯಂ ವಿಮಲಾ ಸದಾ
ಸದಯೇ ಹೃದಯೇ ಧಾರ್ಯಾ ಹರಿಣಾ ಭವವೈರಿಣಾ ।।
ಇತಿ ಶ್ರೀಮತ್ಕವಿಕುಲತಿಲಕ ಶ್ರೀಮದ್ವಾದಿರಾಜ ಪೂಜ್ಯ ಚರಣವಿರಚಿತಾ
ಉಪನ್ಯಾಸರತ್ನಮಾಲಾ ಸಮಾಪ್ತಾ ’

ಎಂದಿರುವುದರಿಂದ, ದಶೋಪನ್ಯಾಸಗಳಲ್ಲದೇ ಕೊನೆಯದೆನಿಸುತ್ತದೆ. ಮಧ್ಯ ಸಿಕ್ಕದುಳಿದ ಏಳು ಉಪನ್ಯಾಸ ಇನ್ನೂ ಬೆಳಕಿಗೆ ಬರಬೇಕಷ್ಟೇ? ವಾದಿರಾಜರ ಕೃತಿಗಳೆಲ್ಲ ಉಪಲಬ್ಧವಾಗಿಲ್ಲವೆನ್ನಲು ಇದು ಸ್ಪಷ್ಟ ನಿದರ್ಶನ.

## ಕಾವ್ಯ ಕೃತಿಗಳು

(24) ರುಕ್ಮಿಣೀಶ ವಿಜಯ: ತೀರ್ಥಾಟನಗೈಯುತ್ತ ವಾದಿರಾಜರು ಪುಣೆಯನ್ನು ಪ್ರವೇಶಿಸಿದಾಗ, ಪಂಚಮಹಾಕಾವ್ಯಗಳಲ್ಲಿ ಶ್ರೇಷ್ಠವೆನಿಸಿದ ಮಾಘನ ‘ಶಿಶುಪಾಲವಧ’ ಕಾವ್ಯಕ್ಕೆ ಆನೆಯ ಮೆರವಣಿಗೆ ಏರ್ಪಟ್ಟುದನ್ನಾಲಿಸಿ, ಅದನ್ನು ಮೀರಿಸುವ ತಮ್ಮಲ್ಲಿಯ ಕೃತಿ ತರಿಸಲವಕಾಶಪಡೆದು, 19 ರಾತ್ರಿಗಳಲ್ಲಿ 19 ಸರ್ಗಗಳ (ಅಂತ್ಯ ಗದ್ಯ — ಪದ್ಯವಿರದ) ‘ರುಕ್ಮಿಣೀಶ ವಿಜಯ’ ರಚಿಸಿ ಕೊಡಲು, ಮೆರವಣಿಗೆ ಈ ಕೃತಿಗೊದಗಿ, ‘ಕವಿಕುಲತಿಲಕ’ ಬಿರುದೂ ಬಂದಿತು. ‘ಶಿಶುಪಾಲವಧ’ವು ಭಾರತೀಯ ಸಂಪ್ರದಾಯ ವಿರುದ್ಧ ಪ್ರತಿನಾಯಕ ಪ್ರಧಾನ ವಸ್ತು ಹಾಗೂ ಅಮಂಗಲಾಂತ್ಯ ಸೂಚಕ ನಾಮವೆನಿಸಿ, ‘ರುಕ್ಮಿಣೀಶ ವಿಜಯ’ವು ನಾಯಕ— ನಾಯಿಕೆಯರನ್ನೊಪ್ಪಯೇ ಸೂಚಿಸಿದ ಮಂಗಲಾಂತ್ಯಧ್ವನಿಯ

ಹೆಸರಾಗಿ ಸಹೃದಯರ ಮನ ಮೆಚ್ಚಿಸಿತು. 'ಸುಮಧ್ವವಿಜಯ'ದ ಶುಭನಾಮವೇ ಈ ಹೆಸರಿಗೆ ಪ್ರೇರಕ. ಕೃತಿಯೂ ಶಿಶುಪಾಲವಧಕ್ಕಿಂತ ವಾಸ್ತವ— ಚಾತುರ್ಯ— ಲಾಲಿತ್ಯ ಗುಣಪೂರ್ಣವೆನಿಸಿದೆ.

ಕೃಷ್ಣ ರುಕ್ಮಿಣೀ ವಿವಾಹವೇ ಇದರ ಮುಖ್ಯ ವಸ್ತು. ಭಾಗವತ ಇದರ ಮೂಲ ದ್ರವ್ಯ. ದಶಮಸ್ಕಂಧದಲ್ಲಿ ಪುರುಷೋತ್ತಮನ ವಿಜಯವನ್ನೊರೆದ ಭಾಗವತ ಮಧ್ವರಿಂದ ವ್ಯಾಖ್ಯಾತವಾಗಿ ಪ್ರಸಾಧನತ್ರಯದ ಮಟ್ಟಕ್ಕೇರಿದೆ. ವಿಜಯಧ್ವಜರ ವ್ಯಾಖ್ಯಾನದಂತೆ ವಾದಿರಾಜರ ಈ ಕಾವ್ಯವೂ ಮಧ್ವರ ತಾತ್ಪರ್ಯ ನಿರ್ಣಯಗಳ ಬೆಳಕಿನಲ್ಲಿ ನೇರ್ಪಟ್ಟು ಬಂದಿದೆ. ಕಾವ್ಯದ ಕೊನೆಗೆ ವಾದಿರಾಜರೇ ಸೂಚಿಸಿದಂತೆ —

ಯಸ್ಮಿನ್ ಮಂಗಲದೇವತಾಖಿಲಜಗನ್ಮಾತಾ ರಮಾ ನಾಯಿಕಾ
ಪದ್ಮಾ, ಪದ್ಮಭವಾದಿಸೇವ್ಯಚರಣಸ್ತದ್ವಲ್ಲಭೋ ನಾಯಕಃ ।
ಅಶ್ವಗ್ರೀವದಯಾಪಯೋಬ್ಧಿಫಲಿತಂ ಪ್ರಾಗ್ರ್ಯೋಕ್ತಿರತ್ನೋಜ್ವಲಂ
ತದ್ದಾಸಾನುಗವಾದಿರಾಜರಚಿತಂ ಕಾವ್ಯಂ ವಿಭಾವ್ಯಂ ಬುಧೈಃ ॥ 19,38 ॥

ಇಲ್ಲಿ ಜಗನ್ಮಾತಾಪಿತೃಗಳ ಅವತಾರ ಸ್ವರೂಪರ ಕಲ್ಯಾಣ ವಸ್ತುವಾದ್ದರಿಂದ ಶೃಂಗಾರ ಪ್ರಧಾನವಾಗಬೇಕಾದ್ದು, ಮಧ್ವಾನುಗ ಯತಿ ವಿರಚಿತವಾಗಿ, ಭಕ್ತಿಗೆ ತಿರುಗಿದೆ. ವಾದಿರಾಜರ ಅಸಾಧಾರಣ ಪ್ರತಿಭೆ ಇದನ್ನು ಕಲಾತ್ಮಕವಾಗಿ ಸಾಧಿಸಿದೆ. ಲಾಕ್ಷಣಿಕರು 'ರತಿರ್ದೇವಾದಿ ವಿಷಯಾ ಭಾವ ಇತ್ಯಭಿಧೀಯತೇ' ಎಂದುದರಿಂದಲೂ, ಇಲ್ಲಿ ಭಕ್ತ್ಯಂಗವಾಗಿರುವುದರಿಂದಲೂ ಶೃಂಗಾರವು ರಸವೆನಿಸದೆ ಭಾವವೆನಿಸಬೇಕು. ಆದರೆ ಕಾವ್ಯಾಸ್ವಾದನದಲ್ಲಿ ದೇವತಾ ಭಾವ ಮರೆಯಾಗಿ ನಾಯಕ— ನಾಯಿಕಾರತಿ ಸಾಧಾರಣವಾಗುವುದರಿಂದ ಶೃಂಗಾರ ರಸವೆನಿಸುವುದು. ಇದಕ್ಕನುಕೂಲವಾಗಿದೆ ಕೃಷ್ಣ— ರುಕ್ಮಿಣಿಯರನ್ನು ನಾಯಕ— ನಾಯಿಕೆಯನ್ನಾಗಿ ಆಯ್ದ ವಾದಿರಾಜರ ಜಾಣ್ಮೆ – ಮಾನವೀಯತೆಯಿಂದ ಪರಿಪೂರ್ಣನಾದ ಪುರುಷೋತ್ತಮನ ಶೃಂಗಾರವನ್ನು ಇಲ್ಲಿ ಸಂಚಾರಿಗೊಳಿಸಿ ಭಕ್ತಿ ಸ್ಥಾಯಿಯನ್ನು ಪೋಷಿಸಿದುದು ಸಮುಚಿತವಾಗಿದೆ. ಅಂತೆಯೇ 'Its poetic beauty and spiritual Sthai Bhava of Bhakti Rasa have to be felt by drinking deep at the fountain' (ಬಿ.ಎನ್.ಕೆ.ಶರ್ಮಾ, ಲಕ್ಷಾಲಂಕಾರ,4) ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಕವಿಯೂ ಆರಂಭದಲ್ಲಿ 'ಜಾಣನಲ್ಲದವನು ಕಟ್ಟಿದರೂ ಜಾಜಿಯ ಮಾಲೆ

ಉತ್ತಮವೆಂದೆಲ್ಲರೂ ಕೊಳ್ಳುವಂತೆ, ಹರಿಲೀಲೆಯುಳ್ಳ ಕೃತಿಯಿದು ರಸಿಕರ ಕಂಠಮಾಲೆಯಾಗಲಿ' (1—9) ಎಂದಿದ್ದಾರೆ.

ನಾಂದೀ ಪದ್ಯ ಕೃಷ್ಣನನ್ನು ಜ್ಞಾನಾನಂದಾದಿ 'ಗುಣೋದ್ಯನ್ನ' ಎಂದಿದೆ; ಆತ ರುಕ್ಮಿಣಿಯ ಕೈಹಿಡಿದರೆ ನೀಲಮಣಿ ಸುವರ್ಣ ಸೇರಿದಂತೆನ್ನುವರು ಕುಂಡಿನಪುರದ ಜನ (14—61); ರುಕ್ಮವೆಂದರೆ ಬಂಗಾರವೇ. ರುಕ್ಮಿಣಿಯ ನುತಿ ಲಕ್ಷ್ಮೀಸ್ತುತಿಯೇ —

ಅಂಬಾಂ ತಾಂ ಪ್ರಣತೋಸ್ಮಿ ಕೃಷ್ಣ ರಮಣೀಂ
ಲಂಬಾಲಕಾಂ ರುಕ್ಮಿಣೀಂ (1—4)

ಎಂಬುದನ್ನು 'ಶ್ರೀಶಗುಣದರ್ಪಣ'ದ 'ಅಂಬಾಂ ಪೀತಾಂಬರ ಶ್ರೇಣೀಂ ಲಂಬಾಲಕಲಸನ್ಮುಖೀಂ' ಎಂಬ ಶ್ಲೋಕ (10) ಹೋಲುವುದಿಲ್ಲವೇ? ರಾಜರು ಪಯಣಿಸುವ ಮುನ್ನ ಹಾಸಿಗೆಯನ್ನು ಕಳಿಸುವಂತೆ ಕೃಷ್ಣ ಶೇಷನಿಗವತರಿಸೆಂದ ಕಲ್ಪನೆ ವಾದಿರಾಜರ ಲೋಕ ಪರಿಜ್ಞಾನದ ನಿದರ್ಶನ (26). ಹುಟ್ಟಿಲ್ಲದ ಅಪೂರ್ವ ಮಗು ಹುಟ್ಟಿದೊಡನೆ ಜಗವೆಲ್ಲ ಹರ್ಷಿಸಿತು (44). ಆತ ವಸುದೇವ ಸುತನಾದರೆ ಚತುರ್ಭುಜ ಪೀತಾಂಬರ ಹೇಗೆ ಬಂದಾವು? ಕಂಬದಿಂದ ಬಂದ ನರಸಿಂಹನೀತ (52, 54). ಇವನ ನೆನೆದವರಿಗೇ ತೊಂದರೆಯಿಲ್ಲ, ಹೊತ್ತೊಯ್ಯುವವಗಿಲ್ಲ (59)? ಕಾರಾಗೃಹದ ಬಾಗಿಲು ತೆರೆದು ಶೇಷನ ಹೆಡೆ ಮಳೆಯ ಹಾಸಿಗೆ ಕೊಡೆಹಿಡಿದಿರಲು, ಯಮುನೆ (ರಾಮಾವತಾರದಲ್ಲಿ) ಪತಿಗಾದ ಅವಸ್ಥೆ ನೆನೆದು ದಾರಿಕೊಟ್ಟಳು (61, 63).

ಕೃಷ್ಣಾವತಾರ—ಗೋಕುಲಗಮನಾನಂತರ 2ನೆಯ ಸರ್ಗದಿಂದ ಬಾಲಲೀಲಾ ವರ್ಣನ (ಅವನಾಟ್ಯರಸದ ಕಿವಿಗಳಿಗೆ ಮೃದಂಗವಾ 'ಧಿಕ ತಾನ ಧಿಕ ತಾನ ಧಿಗೇತಾನ' ಎನ್ನುವುದು ಸುಭಾಷಿತ). ಭೂಮಾತೆ ಗೋಮಾತೆಯಾಗಿ ಕೋರಿದ ಕಾರಣ, ಅವಳ ಪಾಲನೆಗೆ ಹರಿ ಗೊಲ್ಲನಾಗಿ ಅವತರಿಸಿದ (26). ಆತ ತಾಯ ಎದೆಗೆ ಪುಣ್ಯ ತುಂಬಲೆಡೆ ಮಾಡುವಂತೆ ಹಾಲುಣ್ಣಿದರೆ, ವಿಷ ಉಣಿಸಬಂದ ಪೂತನಿಯು ಎದೆಯೊಳಗೇ ವಿಷ ಊಡಿದ — ದುಷ್ಟರ ತಂತ್ರ ತಿರುಗುಬಾಣ (30, 38). ಶಾಪವಶಾತ ಅವಳಿಲ್ಲದ ಊರ್ವಶಿಗೆ ಮುಕ್ತಿಯಾದರೆ,

ಶಾಟಕಿಗೆ ನರಕವಾಯಿತು[13](41). ಕರುಣಾಳು ಶತ್ರುವಿನಲ್ಲಿರುವ ಭಕ್ತರನ್ನೂ ಬಿಡಿಸುವನೆಂದ ಮೇಲೆ ಅನ್ಯರನ್ನು ಅವಶ್ಯ ಬಿಡಿಸುವನೆಂದು ಬೇರೆ ಹೇಳಬೇಕೇ? ಈ ತತ್ತ್ವವಾದ ಆಶ್ರಯಿಸಿಯೇ ಹೊಮ್ಮಿದ ಕೃತಿಯಿದು (58,60).

ಯಶೋದೆ ಮಗುವನ್ನು ಸೊಗಸಾದ ತೊಟ್ಟಿಲಿಗಿಟ್ಟು ಸಾಲೋಕ್ಯ ಸುಖಿಸಿದಳು —

ಅಲೋಲಹೈಮವರದಾಮವತೀಂ ವಿತಾನ
ಜಾಲಾವಲಂಬಿ ಶುಭಮೌಕ್ತಿಕ ರಮ್ಯಮಾಲಾಂ
ದೋಲಾಂ ವಿಧಾಂತು ತದುಪರ್ಯಧಿರೋಪ್ಯ ಬಾಲಂ
ಸಾಲೋಕ್ಯಸೌಖ್ಯಮುಪಲಭಿಷ್ಟ ಹ್ಯದಾ ಯಶೋದಾ[14] ॥ 3—8 ॥

ಅದರೆ ಕೃಷ್ಣ ವಿಶ್ವರೂಪದೋರಿ ಪಿತೃಭಾವ ಮೂಡಿಸುತ್ತಿದ್ದ, ಅಂಬೆಗಾಲಿಟ್ಟು ಪುತ್ರ ವಾತ್ಸಲ್ಯ ಹುಟ್ಟಿಸುತ್ತಿದ್ದ(17). ಹೆಸರಿಡಲು ತಡವಾಗಿ, ಪೂತನಾಂತಕ—ಶಕಟಮರ್ದನ ವಿಶ್ವಂಭರಾದ್ಯನಂತನಾಮಕನಾದ; ಆದರೂ ಗರ್ಗರಿತ್ತ ಕೃಷ್ಣನಾಮ ಎಲ್ಲರೂ ಕರೆದು ಪ್ರಿಯವೆನಿಸಿತು (19,20). ವಿಶ್ವಂಭರನೀಗ ಸಣ್ಣ ಹೊಟ್ಟೆದೋರಲು ನಾಚಿ ಅಂಬೆಗಾಲಿಟ್ಟ (26)! ಮುಂದೆ ಮುಕ್ತಿ ನೀಡಲೆಂಬಂತೆ ಗೋಪಿಯರಲ್ಲಿ ಕಳವಿಗಿಳಿದ (32). ಸದಾಗದಿರಲೊಂದು ಕೈ ಗಂಟೆ ಹಿಡಿದಿದೆ, ಇನ್ನೊಂದು ಹಾಲಿನ ಪಾತ್ರೆ ಹಿಡಿದಿದೆ, ಮತ್ತೊಂದು ಕುಡಿಯುತ್ತಿದೆ, ಮಗುದೊಂದು ಮಿತ್ರರಿಗೀಯುತ್ತಿದೆ —ಇದ ನೋಡಿದ ಗೋಪಿ ಸ್ತಬ್ಧಳಾದಳು (34). ಗೋಪೀ ಕೃಷ್ಣರು ನಂತರ ಸಂವಾದಿಸಿದರು: 'ಬೆಣ್ಣೆಯೆಲ್ಲೇಕೆ ಕೈ? — ಮೃದು ಮನದಲ್ಲಿರಿಸಿಕೊಳ್ಳಲು; ಶಕಟಮರ್ದನ ಮೃದುವೇ? ನೀನಿದೆಂತು ಮೇಲೆ ಕುಳಿತುಕೊಂಡ ಬರಿ ಮಾತ್ರ ಕಠಿಣ' (40,41). ಕಾಡಿಕೋರೆದುದೇ ಮಣ್ಣ ತಿಂದು ಅದು ಕಳವಳ್ಗೊಂದರುಹಲು, ಅದನಿತ್ತ ಭ್ರಾಮಿತಾಯಿಗೆ ಬಹುಫಲವಿತ್ತ,ತಾಯಿಗೆ ವಿಶ್ವರೂಪದರ್ಶನವಿತ್ತ (61,62).

---

13. ಇಲ್ಲಿಯ 20 ಪದ್ಯ ಮಧ್ಯ ಮತದಂತೆ, ಪೂತನಿ—ಕಂಸ—ಶಿಶುಪಾಲರಲ್ಲಿ ಜೀವದ್ವಯ ಸಮಾವೇಶ ಹೇಳಿವೆ. ಆರ್.ಎಲ್.ಸ್ಟೀವನ್ಸನ್ನನ 'ಜೆಕಿಲ ಹೈಡ' ಕಾದಂಬರಿ ಇಂಥ ವ್ಯಕ್ತಿಚಿತ್ರವಿತ್ತಿದೆ.

14. ಸಂಸ್ಕೃತದಲ್ಲಿರದ ಇಂಥ ಅದಿ ಪ್ರಾಸ ಕನ್ನಡದ ಪ್ರಭಾವವೆಂಬುದು ಸ್ಪಷ್ಟ.

ಕೃಷ್ಣನಂತೆ ಬೆಳೆದ ಬಾಲಲೀಲೆಗಳನ್ನು ಹರಿದಾಸರಿಗೆ ಹಾಡಲು ಕಲಿಸಿದ್ದೇ ಭಾಗವತ; ವೇಣು ಊದುವ ಗೋಪಿಯರ ಗಾನಸ್ವರ ಬಾನಿಗೇರಿ ಅಮಂಗಳ ನಿವಾರಿಸಿತಂತೆ. ಅಂತೆಯೇ, ಮಧುರಗೈಯುವ 'ಭಕ್ತೈಕವಶ್ಯಪ್ರಭು' ಅವರ ಋಣ ತೀರದೆಂದ ವಾದಿರಾಜರೂ ಭಕ್ತಿಯಿಂದವನ ಲೀಲೆಗಳನ್ನು ಬಣ್ಣಿಸುವರಲ್ಲ ಭಕ್ತ್ಯೇತರ ಭಾವ ಮರೆಯಾಗುತ್ತವೆ. ಯಮುನಾ ಅಂಜುವಂತಹ ಹೆಸರಿನ ಕೃಷ್ಣನನ್ನು ಕಟ್ಟ ಹೊರಟು ಯಶೋದೆ ಕೋಲು ಹಿಡಿದುಕೊಂಡು ಹೆದರಿಸಿದಳೆಂಬಲ್ಲ (4—6) ಅವನ ಹಿರಿಮೆಯೇ ಗಮ್ಯ. ಕಟ್ಟಲು ಹಗ್ಗ ಸಾಲದೆ ಹರಿ ಎಂದರಿತಾಕೆ, ಭಕ್ತಿಯ ಹಗ್ಗದಿಂದ ಬಿಗಿಸಿಕೊಂಡವನನ್ನು ಕಟ್ಟಿದಳು (10); ಚೌರ್ಯ ಸಹಾಯಕ ಒರಳಿಗೆ ಕಟ್ಟಿದರೂ ಭೃತ್ಯ[15]ಭೀಮಾನುಜನ ಹೆಸರಿದ್ದ ಅರ್ಜುನ ವೃಕ್ಷ ಭಂಗ ಮಾಡುವ (14). ಗೋಪಾಲರು ಸಮೃದ್ಧ ವೃಂದಾವನಕ್ಕೆ ಸರಿದಾಗ ಭಾಗವತವು 'ಕಿಮ ಲಭ್ಯಂ ಭಗವತಿ ಪ್ರಸನ್ನೇ ಶ್ರೀ ನಿಕೇತನೇ' ಎಂದರೆ, ವಾದಿರಾಜರು "ಹರೌ ಪ್ರಸನ್ನೇ ಕಿಮಿಹಾಸ್ತ್ಯಸಾಧ್ಯಂ (24) ಎಂದಿದ್ದಾರೆ. ವಸಂತ ವರ್ಣನೆಗೆ ದ್ರುತವಿಲಂಬಿತ ವೃತ್ತ ಬಳಸಿದ ಔಚಿತ್ಯದೋರಿದ್ದಾರೆ (38—44). ಉತ್ತಮ ಋತುವರ್ಣನೆಯಾದರೂ ಇದು ಅಧ್ಯಾತ್ಮಿಕ ಕಲ್ಪನೆಗಳಿಂದ ಕೂಡಿದೆ. ನಮ್ಮ ಕವಿಗಳಿಗೆ ಕಾವ್ಯಾನಂದವು ಬ್ರಹ್ಮಾನಂದ ಸಹೋದರ. ಭಕ್ತಕವಿಗಳಂತೂ ಮಧುರಭಾವದಿಂದ ಪ್ರಕೃತಿಯಲ್ಲೇ ಪರಮಾತ್ಮನ ಸ್ಮರಿಸುವರು. 'Our poet saints like Vadiraja poured their hearts devotion as a spiritual offering dedicating their whole body and soul to the supreme. The sincere outpourings shape themselves in to lovely similies and metaphores, clothe themselves in language at once simple and sublime-sweet and mellifluous. Thus emerges the lofty, unpremeditated poetry which enthralls and holds us spell bound. (U.V.K.Rao, Thus sang Vadiraja, 50-51). ಕಾಳೀಯ ಮರ್ದನವನ್ನು ಬಲರಾಮ ಸ್ವಪಂಕ್ತೀಯಾಭಿಮಾನದಿಂದ ತಡೆದನೆಂದು ಕೃಷ್ಣ ಒಬ್ಬನೇ ಹೋದ (56).

---

15. ಇಲ್ಲಿ ಮಧ್ವಮತದ ತಾರತಮ್ಯ ಧ್ವನಿತ.

ಶ್ರುತಿ ಸಾರುವ ಕೃಷ್ಣನ ಹಿರಿಮೆ ಶಿಖಿಯಿಂದ ಕಾಳೀಯನಿಗರಿದು (59). ಅಪರಾಧಿಯು ಹೆಡೆ ತುಳಿದರೂ ಕೃಷ್ಣ ನಿರಪರಾಧಿ ಬಾಲವನ್ನೆತ್ತಿ ಹಿಡಿದ (65). ಕೃಷ್ಣನ ಕುಣಿತಕ್ಕೆ ಬ್ರಹ್ಮನ ಮೃದಂಗವಾದನ, ವಾಯುವಿನ ಗಾನ, ಶಿವನ ತಾಳ (68). ಸರ್ಪಪತ್ನಿಯರ ಪ್ರಾರ್ಥನೆಗೆ ಮೃದುಮನವಾಂತ ಕೃಷ್ಣ ಅವರಿಗೆ ಸ್ಥಳಾಂತರಿಸಹೇಳಿದ (69). ತನ್ನ ಪಾದಾಂಕಿತ ಫಣಗಭಯವೆರೆದ ಗರುಡನಿಂದ, ಹರಿಯ ಕೋಪವೂ ವರಸಮಾನ (71).

ಇಂಥ ಸಾಮಾನ್ಯೋಕ್ತಿ 5ನೆಯ ಸರ್ಗದ 10–12–14–22–31–32 ನೆಯ ನುಡಿಗಳಲ್ಲೂ ಇವೆ. ಇಲ್ಲಿ ಗೋವರ್ಧನೋದ್ಧಾರದ ನಂತರ ವರ್ಷ ವರ್ಣನೆ ಇದೆ. ಕೃಷ್ಣನ ವಿರುದ್ಧ ವರ್ಷಿಸಿದ ಇಂದ್ರನಿಗೆ ಸಾವಿರ ಕಣ್ಣಿದ್ದೂ ವ್ಯರ್ಥವಾಯಿತು (56). ತನ್ನ ಸಮನಲ್ಲದವನಹಂಕಾರ ಅಡಗಿಸಲು ಅವನ ಶತ್ರುವಾದ ಗಿರಿಯನ್ನೆತ್ತಿ ಹಿಡಿದು ಕೃಷ್ಣ ಸುಮ್ಮನಿದ್ದುಬಿಟ್ಟ (67).

ಕೃಷ್ಣೋದ್ಧೃತ ಗಿರಿಗೆ ಮಳೆಯಿಂದೇನಾದೀತು (6–10)? ಇನ್ನು 4 ಸರ್ಗ ರಾಸ ಕ್ರೀಡೆ – 'ಏಕೆಂದರೆ ಅದು ಕೇಳಿದವರಿಗೂ ಹೃದ್ರೋಗ ಪರಿಹಾರಕ (ಹೃದ್ರೋಗ ಮಾಶ್ವಪಹಿನೋತ್ಯಚಿರೇಣ ಧೀರಃ ॥ ಭಾಗವತ 10–33–40 ॥). 'ಸದ್ವಂಶಜೆಯರಲ್ಲಿ ಯಾರಿಗೆ ತಾನೇ ಆಸಕ್ತಿಯಾಗದು' ಎಂಬಲ್ಲಿಯೇ ಕೃಷ್ಣ (ಸ್ತ್ರೀರಂಗದ) ಮುರಲಿಯನ್ನು ಮಿಡಿಯಿಸಿದ ಶ್ಲಿಷ್ಟ ಚಿತ್ರವಿದೆ (48). ಆದರೂ ಗೋಪೀ–ಕೃಷ್ಣರ ಸಂಬಂಧದಲ್ಲಿ ರತಿಭಾವ ಮರೆಸುವ ಭಕ್ತಿ ತುಂಬಿದೆ. ಕೃಷ್ಣ ಮನೆಗೆ ಮರಳಿರೆನ್ನಲು, ಅವರೆನ್ನುತ್ತಾರೆ – ಪತ್ಯಾದಿ ಸೇವೆಯೂ ನಿನ್ನ ಪ್ರೀತ್ಯರ್ಥವೆನ್ನುತ್ತಾರೆ ಬಲ್ಲವರು; ನಿನ್ನನ್ನೇ ಸೇರಿರಲು ಮರಳಿರೆಂಬುದುಚಿತವೇ?' (57) ಕೃಷ್ಣ 'ಶ್ರುತಿಜ್ಞಾನವುಳ್ಳ ವಿಶಾಲಾಕ್ಷಿಯರೇ ಈ ಕಾಮನೆ ಹೊಸದು, ನಿಮಗದು ಧರ್ಮವಲ್ಲ' ಎನ್ನಲು, ಅವರು 'ವಿಶಾಲಾಕ್ಷ ನಮ್ಮ ಧರ್ಮ ನಿಜಕರ್ಮ ನವೀನ, ವಿಷಯಾಸಕ್ತರಿಗಿದು' ಎಂದರು; 'ಪತಿಯ ಬಿಟ್ಟು ಅನ್ಯರ ಭಜಿಸಬೇಡಿ' ಎಂದರೆ 'ಪತಿಯನುಳಿದು ನಿನ್ನನ್ನೇ ಭಜಿಸುವೆವು' ಎಂದರು –

ಧರ್ಮ್ಯೇ ನಯೋಽಯಂ ಶ್ರುತಿ ಸಂಗತಾಕ್ಷ್ಯೇ
ಧರ್ಮ್ಯೇ ನಯೋಽಯಂ ಶ್ರುತಿಸಂಗತಾಕ್ಷ
ಮಾನ್ಯಂ ಭಜಧ್ವಂ ರಮಣಂ ವಿಹಾಯ
ಮಾನ್ಯಂ ಭಜಾಮೋ ರಮಣಂ ವಿಹಾಯ ॥ 62 ॥

ಶಬ್ದಾಲಂಕಾರ–ಶ್ಲೇಷಾರ್ಥ ವೈಭವಗಳ ಈ ವಾಗ್ವೈಖರಿಗೆ ಮೆಚ್ಚಿದ ಕೃಷ್ಣ (ವಿಷ್ಣು ಪುರಾಣದಂತೆ 7 ವರ್ಷದ ಬಾಲಕನಾದರೂ ಭಾಗವತೋಕ್ತ ಯೋಗಮಾಯೆಯಿಂದ) ಅವರನ್ನುದ್ರೇಕಿಸಿದ; ಆದರೆ ಕಾಮಿಗಳಿಗೆಟುಕನೆಂಬಂತೆ ಕಾಣದಾಗಿ ಅವರ ಭಕ್ತಿಯನ್ನು ಒರೆಗೆ ಹಚ್ಚಿದ (64). ಅವರು ತಪಸಿಗಳಂತೆ ಅವನನ್ನರಸತೊಡಗಿದರು (65).

7ನೆಯ ಸರ್ಗವೆಲ್ಲ ಅವನ ಅನ್ವೇಷಣೆಯೇ. ತರುಲತೆಗಳನ್ನು ಪ್ರಶ್ನಿಸುವಲ್ಲಿ 'ತುಲಸೀ ಕೃಷ್ಣನತ್ತ ಕರೆದೊಯ್ಯುತ್ತ' ಎಂದರೆ, ಜಾಜಿ ತಮ್ಮ ಹಾಗೂ ಕೃಷ್ಣಾಲಿಂಗನದಿಂದ ಬಜ್ಜೆಯಾಗುವ ಕಾರಣ ಅವನಿರವು ಅರುಹದೆನುವರು (8,12); ಕೃಶಾಂಗಿಯರಾಗಿ ಅಶೋಕವನ್ನೊದೆಯಲೂ ಅರದೆ, ಕಷ್ಟಪ್ರದ ಕೃಷ್ಣನಂತೆ ಅಮೃತಕಿರಣನೂ ವಿಷಪ್ರದನೆಂದುಸುರಿ, ಕೃಷ್ಣನಂತೆ ಕಪಾಟಿ ಉದಾರ ಗುಣವಿದ್ದ ಯಮುನೆಯನ್ನು ಬೇಡಿದರು (24,31,34,35); ಆತ ಕಾಣದಲ್ಲಿ ಮರಣವೇ ವಿಹಿತವೆಂದರು (42); ಕೃಷ್ಣ ದೂರ ಹೋದನೇ ಎನಲು ಒಬ್ಬಳು 'ನನ್ನ ಪುಣ್ಯ ದೂರ ಹೋಗಿದೆ' ಎಂದಳು, ಕೃಷ್ಣನನ್ನರಿವೆಯಾ ಎನಲು 'ಆತ ಕದ್ದ ಮನವನರಸುವೆ' ಎಂದಳು (45). ಇಂತು ಸರ್ವಾಂತರ್ಯಾಮಿಯನ್ನವರು ಸರ್ವತ್ರ ಹುಡುಕಿದರೂ, ಅವರ ರಮ್ಯ ನುಡಿಗಳಿಗಾಗಿ ಆತ ಇನ್ನೂ ಅಡಗಿಯೇ ಇದ್ದ (53).

ಆದರಿಂದ ಮುಂದುವರಿದ ಅನ್ವೇಷಣದಲ್ಲಿ 'ನಮ್ಮನುಳಿದುಹೋದ ನೀನು ಭಕ್ತರ ಯೋಗಕ್ಷೇಮ ನೋಡಿಕೊಳ್ಳುವವನೆಂಬ ಗೀತೋಕ್ತಿ ಸುಳ್ಳು' ಎಂಬ ಯುಕ್ತಿಯಲ್ಲಿ ಆರ್ತ ಭಕ್ತಿಯಿದೆ (8–25). 32–35ರಲ್ಲಿ ಮುಗ್ಧಸಿದ್ಧಾಂತದ ಹರಿಯ ವರ್ಣನೆಯಿದೆ. ಒಬ್ಬಳು ಧ್ಯಾನ ಮಾತ್ರದಿಂದ ಸಾಯುಜ್ಯ ಸುಖವನ್ನೆಲ್ಲ ಪಡೆದಳು — ಮುನಿಗಳಂತೆ ಧ್ಯಾನರತರು ಏನು ತಾನೇ ಪಡೆಯರು? (44) ಎಂಬಲ್ಲಿ ಶೃಂಗಾರಕ್ಕೆ ಆಧ್ಯಾತ್ಮದ ಪಾವಿತ್ರ್ಯ ಒದಗಿದೆ.

ಭಾಗವತದಂತೆ ವಾದಿರಾಜರಿಗೂ ರಾಸಕ್ರೀಡೆ ಪರಮಾತ್ಮನ ಸಾಕ್ಷಾತ್ಕಾರ. ಗೋಪಿಯರ ದೃಢಭಕ್ತಿಗೆ ಮೆಚ್ಚಿ ಮನ್ಮಥಾಕಾರದಲ್ಲಿ ಪೀತಾಂಬರಧಾರಿ ಪ್ರತ್ಯಕ್ಷನಾದ; ಆದರೆ ಅನಂಗಬಾಣ ಮಥನಲಾರದ ಮಹಾತ್ಮ್ಯ ಅವನದು (ಭಾಗವತ 10—61—4). ಆದರಿಂದವನು ಗೋಪಿಯರನಾಲಿಂಗಿಸಿದುದು ಸಾಯುಜ್ಯ — ಸುಗಂಧತಿಲಕ ಲೇಪಿಸಿದುದು ಸಾಧರ್ಮ್ಯ — ಹೆಗಲಿಗೆ ಕೈಯಿಟ್ಟು ಕುಣಿದುದು ಸಾರೂಪ್ಯ ಸಾಷ್ಟಿ ಮೋಕ್ಷವೆನಿಸಿತು[16](46). ಅವರ ಕಂಗಳಿಗೆ ನೂರಾರು ಕೃಷ್ಣರೂಪ ಹೊಳೆದುವು (61).

ಆ ಸುಂದರಮೂರ್ತಿಯ ಭುಜ ಹಿಡಿದ ಅವರ ಕೈ ಹಾಗೂ ಕುಣಿತದ ಧ್ವನಿಗಳಿಂದ ರಾಸೋತ್ಸವ ಸೊಗಯಿಸಿದ ನುಡಿ ಅತ್ಯಂತ ಪ್ರಾಸಪೂರ್ಣ —

ಮಂಜುಸಿಂಜದತಿ ಭಾಸುರಭೂಷಃ
ರಂಜನಾಢ್ಯ ಬಹುಸುಂದರ ವೇಷಃ।
ಅಂತಲಗ್ನಕರಸಾರಸಪಾಶಃ
ಸಂಬಭ್ರುತೋ ಜಯತಿ ರಾಸವಿಲಾಸಃ ॥ 9—11 ॥

ಶೃಂಗಾರಮಯ ರಾಸಲೀಲೆಯನ್ನು ಆಧ್ಯಾತ್ಮಿಕಗೊಳಿಸುತ್ತದೆ. 'ನಮ್ಮ ಶ್ರುತಿಪಂಜರ (ಶಿವ) ಶುಕಾಚಾರ್ಯರನ್ನು ಧರಿಸಿ ಭಾಗವತ ಕೇಳುತ್ತಿರಲಿ' ಎಂಬ ನುಡಿ (24). 26, 31ರಲ್ಲಿ ಶೃಂಗಾರ ಚಿತ್ರಗಳೊಡನೆ ಭಕ್ತಿಯ ಪ್ರಾರ್ಥನೆ ಬೆರೆತಿವೆ. ಹೆಣ್ಣಾನೆಗಳೊಡನೆ ನೀರಾಟವಾಡುವ ಗಜದಂತಿರುವ ಕೃಷ್ಣ ಬಾಳೆಮರ ನೀಳುವಂತನ್ನ ಮನದ ಅಜ್ಞಾನ ಕಳೆಯಲಿ' ಎಂಬ (34) ರೂಪಕದ ಶೃಂಗಾರವೂ ದಿವ್ಯ ಕೋರಿಕೆಯಲ್ಲಿ ಮುಗಿದಿದೆ.

10ನೆಯ ಸರ್ಗದಲ್ಲಿ ಮುಖ್ಯವಾದುದು ಅಕ್ರೂರದೌತ್ಯ. ಕೃಷ್ಣನ ಸ್ಮರಣೆಗೇ ಅರಿಷ್ಟ ಪರಿಹಾರವಾಗುವ ಗೋಕುಲಕ್ಕೆ, ಗೂಳಿಯಾಗಿ ಬಂದ ಅರಿಷ್ಟಾಸುರ ಹೇಗೆ ಉಳಿದಾನು(9)?

---

16. ಗೋಪಿಯರನ್ನು ಸಮೀಪಿಸಿದ್ದೇ ಸಾಮೀಪ್ಯ ಮೋಕ್ಷವೆಂಬುದಿಲ್ಲಿ ವಾಚ್ಯವಾಗಿಲ್ಲ. ಸಾಷ್ಟಿ ಉಕ್ತವಾದುದು ವಿಶೇಷ. ಸಾರೂಪ್ಯ — ಸಾಮೀಪ್ಯ — ಸಾಲೋಕ್ಯ — ಸಾಯುಜ್ಯ ಇವು ಮಧ್ವವಿಜಯ, ವೈಕುಂಠ ವರ್ಣನೋಕ್ತ.

ನಾಳೆಗಿರುವುದಿಲ್ಲೆಂದು = 'ಅಶ್ವ' ಆಗಿ ಬಂದ ಕೇಶಿಯೂ ಅಳಿದ(15). ನಾರದರು ಕಂಸನಿಗೆ ಕೃಷ್ಣನ ಸ್ವರೂಪ ತಿಳಿಸಿ, ಭಕ್ತರ ಮಾತು ಮೀರನೆಂದು[17] ಕೃಷ್ಣನತ್ತ ಬಂದು ಕಂಸವಧೆ ಸೂಚಿಸಿದರು (16,21). ಬಿಲ್ಲ ಹಬ್ಬಕ್ಕೆ ಕರೆಯಬಂದ ಅಕ್ರೂರನೂ 'ತಂದೆ ಇಲ್ಲದ ನಿನ್ನ ತಂದೆಯಾಗಿ ಬಂಧಿತನಾದ ವಸುದೇವ, ನಿನ್ನ ಸ್ಮರಣೆಯಿಂದ ದುಃಖ ಮುಕ್ತ; ನೀ ಬಂದು ಕಂಸನ ಕೊಂದು ಭಕ್ತರನಾನಂದಪಡಿಸು' (28,31) ಎಂದ. ಕೃಷ್ಣ ಹೊರಡಲು ಗೋಪಿಯರು 'ನೀನು ಹೋದರೆ ನಮ್ಮಪ್ರಾಣವೂ ಹೋಗುವುದು, ನೀನೂ ಪ್ರಾಣನೂ ಒಟ್ಟಾಗಿರುವವರು' (36) ಎಂಬುದು ಮಧ್ವಮತಾನುಸಾರವಾಗಿದೆ;[18] 'ಕಾಮಿನಿಯರ ವಿಲಾಸ ಕಡೆಗಣಿಸಿ ಕೃಷ್ಣನ ಕರೆದೊಯ್ವ ಅಕ್ರೂರ ವಿರುದ್ಧ ಹೆಸರಿನವ (39) ಎಂಬುದು ಭಾಗವತಾನುಸಾರವಾಗಿದೆ. ದಾರಿಯಲ್ಲಿ ಅಕ್ರೂರನು ಶ್ರುತ್ಯುಕ್ತ ಮಾಧ್ಯಂದಿನ ಆಹ್ನಿಕದಿಂದ 'ದಾಸ್ಯೈಕವಶ್ಯಪ್ರಭು'[19]ವಿನ ವಿಶ್ವರೂಪದರ್ಶನ ಪಡೆದ, ರಥಸ್ಥ ಕೃಷ್ಣನನ್ನು ಪುನಃ ಸೇವಿಸಿದ — 'ಮುಕ್ತೋಽಪಿ ನೈವೋಜ್ಝತಿ ಕೃಷ್ಣಸೇವಾಂ'[20] (49,71). ಮಧುರೆಯ ಹೊರವಲಯದಲ್ಲಿ ಹೊರಡಲಪ್ಪಣೆ ಪಡೆದ ಅಕ್ರೂರ ಕೃಷ್ಣನನ್ನು ನುತಿಸುತ್ತ 'ಎಲೆ ಅಡಿಕೆ ಸುಣ್ಣ ಸಂಕೇತಿಸಿದ ವಿಠಲನಾಮ ತಾಂಬೂಲ ಸೇವನೆ ಮೋಕ್ಷದಾಯಿ' ಎನ್ನುವನು (80,81).

ಮಾರ್ಗದಲ್ಲಿ ಮಡಿವಳನು ಕೃಷ್ಣನಿಗೆ ರಾಜವಸ್ತ್ರ ಕೊಡಲೊಪ್ಪದ್ದೇ ಕಂಸ ನಾಶಕ್ಕೆ ನಾಂದಿ ಹಾಡಿತು. ಕೇಳಿದೊಡನೆ ಗಂಧವಿತ್ತ ತ್ರಿವಕ್ರೆಯನ್ನುದ್ಧರಿಸಿದವನು, ತನ್ನನ್ನರ್ಚಿಸಿದವರಿಗೆ ಮೋಕ್ಷ ಕೊಡದಿಹನೇ? (11,7,10). ಸದ್ವಂಶಜವಾದರೂ

---

17. ಋತಂ ವಿಧಾತುಂ ವಚನಂ ಮದೀಯಂ = ಸತ್ಯಂ ವಿಧಾತುಂ ನಿಜಭೃತ್ಯ ಭಾಷಿತಂ (ಭಾಗವತ ನೃಸಿಂಹೋಕ್ತಿ).

18. ದೇಹೇಽಪಿ ಯತ್ರ ಪವನಃ ತತ್ರ ಹರಿಃ । ಪರಮಾತ್ಮ— ಜೀವಾತ್ಮರು ವಾಯು ವಾಹನರಾಗಿ ದೇಹಗಳನ್ನಲೆಯುವರು (ವಿ.ಸ.ನಾಮ 3,33).

19. 'ಭಕ್ತೈಕವಶ್ಯಪ್ರಭು' ಎಂದಿದೆ ಭಾಗವತ.

20. ಮುಕ್ತಾನಾಂ ಪರಮಾ ಗತಿಃ (ವಿಷ್ಣುಸಹಸ್ರನಾಮ 12). ಲಕ್ಷ್ಮಿಯೂ ದೇಶ— ಕಾಲತಃ ಹರಿಸಮಳಾಗಿ ಸಮನಾ, ಗುಣತಃ ಸಮಳಲ್ಲವಾಗಿ ಅಸಮಾ (ಬ್ರಹ್ಮಸೂತ್ರ 4— 2, ಭಾಗವತ 10— 60— 24).

ವಕ್ರಾಕಾರದ ಬಿಲ್ಲು ಮುರಿದ (12). ಮರುದಿನ ಮುಂಜಾವು ಕೃಷ್ಣನ ಅಂಕುಶ ಚಿಹ್ನದ ಪಾದಾಘಾತಕ್ಕುರುಳಿದ ಕುವಲಯಾಪೀಡ ಭೂಪೀಡಕವೆನಿಸಿತು (37). ಕಂಸಹತನಾಗಿ ಅಂಧಂತಮ ಹೊಂದಿದರೆ, ಅವನಲ್ಲದ್ದ ಭೃಗುವಿನಂತೆ ಮುಕ್ತಿಪಾಯಿತು (62).

ನಂತರ ಉಗ್ರಸೇನನಿಗೇ ರಾಜ್ಯವಿತ್ತ ಕೃಷ್ಣ, ವಿಶ್ವಾಧಿಪನಿಗೆ ಆ ರಾಜ್ಯದಿಂದಾಗ ಬೇಕಾದ್ದೇನು? (10,6,7) [illegible]ತ್ತ್ವವರ ಬೇಡಿ ತೆಗೆಸಿದರೂ ವಾತ್ಸಲ್ಯ—ಮಮತೆಗಳ ಬೇಡಿ ತೊಡಿಸಿದನು (14). ರಾಮಕೃಷ್ಣರು ಸಾಂದೀಪನಿಯಲ್ಲಿ ಓದಿ ಗುರುದಕ್ಷಿಣೆಯಾಗಿ ಮೃತ ಗುರುಪುತ್ರನನ್ನು ಬದುಕಿಸಿ ತಂದುಕೊಟ್ಟರು. ಈ ಸರ್ಗಾಂತ್ಯದಲ್ಲಿ ಉಗ್ರಸೇನನ ಮಂತ್ರಿಗಳೊರೆದಂತೆ ಸಾಮಾನ್ಯ ಹಾಗೂ ಮಾಧ್ವ ವಿಶಿಷ್ಟ ರಾಜನೀತಿಯ ಸೂಕ್ತಿಗಳಿವೆ (53,58,60); ಇವೆಲ್ಲ ವಾದಿರಾಜರ ನವೀನ ಉಕ್ತಿ: 'ಪ್ರಜರ ಪೀಡಿಸಿ ಹಣ ಕೂಡಿಸುವರನು ಮಕ್ಕಳ ಮಾರಿ ಹಣಗಳಿಸುವ ಲೋಭಿ (65), ವಿಷಯ ಉಪಭೋಗಿಗೆ ಅದರ 3ನೆಯ ಭಾಗ(ಯುಕಾರ) ಜೀರ್ಣಿಸಿ ಉಳಿದ ಭಾಗ ವಿಷವೆನಿಸುತ್ತದೆ (68).

13ನೆಯ ಸರ್ಗಾರಂಭದಲ್ಲಿ ಉದ್ಧವದೌತ್ಯವಿದೆ. ಆ ಕೃಷ್ಣಭುಕ್ತ ವೇಷ ಭೂಪಾಲಂಕೃತನು ಕೃಷ್ಣನಂತೆಯೇ ಗೋವಳರ ಸ್ವಾಗತ ಪಡೆದ (7). ಅಲ್ಲೆಲ್ಲ ಕೃಷ್ಣನ ಧ್ಯಾನ—ಸ್ಮರಣ (9,10). 27ರ ವರೆಗೂ ಕೃಷ್ಣ ವಿರಹಿಣಿಯರ ವರ್ಣನ. ಅವರ ವಿರಹವು ಕೃಷ್ಣಪಾದಾಬ್ಜಾಸಕ್ತ ಭ್ರಮರದಂತೆ ಮರಳಲಿದ್ದ ಉದ್ಧವನೆದುರು (ಪರಪುರುಷನೆಂದು ಭ್ರಮರನಿಮಿತ್ತ ಶ್ಲೇಷಾರ್ಥದಿಂದ) 10 ನುಡಿಗಳಲ್ಲಿ ಬಂದ ಭ್ರಮರಗೀತವಾಗಿದೆ (ಭಾಗವತ 10—47ರಲ್ಲಿರುವಂತೆ) —

ಕೃಷ್ಣಾಂಘ್ರಿಭೃಂಗಂ ತಂ ವೀಕ್ಷ್ಯ ಲಜ್ಜಾಕ್ಲೇಶವಶಂಗತಾ:
ಶ್ಲಿಷ್ಟೋಕ್ತ್ಯೋಚಾಸ್ತಥಾ ಲಕ್ಷೀಕೃತ್ಯಾನ್ಯಮಗ್ರತ: ॥ 28 ॥

ಅವರು ಅದಕ್ಕೆ ಪುಷ್ಪಾಲಂಕಾರವಿಲ್ಲದವರ ವಿರಹಾಗ್ನಿಗೆ ಬೀಳದೆ, ಆನೆಯ ಮದೋದಕದತ್ತ ಹೋಗಿ, ವಸಂತ ಮಾಧವನನ್ನು ವೃಂದಾವನಕ್ಕೆ ಬರಮಾಡೆನ್ನುವರು (29,36). ಸರ್ಗದ ಉತ್ತರಾರ್ಧ ಜರಾಸಂಧಭಂಗಕ್ಕೆ ಮೀಸಲು. ಕಂಸನ ವಿಧವೆ 'ಅಸ್ತಿ' ತಂದೆ

ಜರಾಸಂಧನಿಗೂ ಜಾಡಿ ಹೇಳಿ ಹೋರಾಡಿಸಿ ಸಾಯಿಸಿ ಉಳಿದುದು ಅನ್ವರ್ಥಕ (38). ಈ ಜರಾಸಂಧನ ಜೊತೆಯ ಹೋರಾಟ ಅದ್ವೈತದೊಡನೆಯ ಹೋರಾಟವಾಗಿ, ಕೃಷ್ಣನ ಗದೆ– ಶಂಖ ಮಧ್ವರ ಮಾತು– ಕಂಠಗಳಂತಿದ್ದುವು (46); ಕೃಷ್ಣ ನಿರ್ಗುಣನೆಂದವರಂತೆ ಜರಾಸಂಧ ಭಂಗ ಹೊಂದಿದ (60). ಕೃಷ್ಣನೇನೆ ಶತ್ರು ಕೈದುಗಳಿಂದಲೇ ಅವರನ್ನು ಭಂಗಿಸಿದಂತೆ, ಮಾಧ್ವರು ಮಾಯಾವಾದಿಗಳ ವಾಕ್ಯಗಳನ್ನೇ ಬಳಸಿ ಭೇದ ಸಾಧಿಪಿಸಿದರು (63). "ವಾದಿಗಳು ವಾಗ್ಬಾಣಗಳಿಂದ ಹೊಡೆದಾಡುವುದಿಲ್ಲಿ ಕಂಡುಬರುತ್ತದೆ. ವಾದಿರಾಜರು ಪರಮತೀಯರನ್ನು ಎಂತಹ ಯುಕ್ತಿಗಳಿಂದ ಮುರಿಯಬಹುದೆಂಬುದರ ಅನುಭವ ಇದರಲ್ಲಿ ಪ್ರತಿಚ್ಛಾಯೆ ತೆರದಿದೆ" (ರಾಜಗೋಪಾಲಾಚಾರ್ಯ, ಲಕ್ಷಾಲಂಕಾರ,23).

14ನೆಯ ಸರ್ಗಾರಂಭಕ್ಕೂ ಇದೇ ಅಂಶ. ಮಾಯಾವಾದಿಗಳ ಬ್ರಹ್ಮನ ಅಖಂಡತ್ವದಂತೆ ಶತ್ರುಕೋಟಿ ತುಂಡಾಯಿತು (1). ಎದುರಿಸಿದವರನ್ನಳಿಸಿ ತಲೆಮರೆಸಿಕೊಂಡವರನ್ನುಳಿಸಿದ್ದು, ಇದ್ದುದನ್ನೊಪ್ಪಿ ಇಲ್ಲದ್ದನ್ನನತ್ತೊಟ್ಟಿಗೆ ಸೇರಿಸಿ, ಇದ್ದುದು ಇರದಿದ್ದುದು ಎಂಬ ಅನಿರ್ವಚನೀಯವಿಲ್ಲೆಂದು (ಸದಸದ್ವಿಭಿನ್ನಶೂನ್ಯಂ) ಸಿದ್ಧಪಡಿಸಿದಂತಾಯಿತು (3). ಭೋಳೆಶಂಕರ ಕಾಮನ ಸುಟ್ಟರೂ ಮನಸಿಜನಿಂದ ಕುಮಾರಸಂಭವವಾಯಿತು, ಕೃಷ್ಣನಾದರೋ ಕಾಮನನ್ನೇ ಕುಮಾರನನ್ನಾಗಿ ಪಡೆದು ಕುತರ್ಕದಂಥ ಜರಾಸಂಧನ ಸುತ ಏಕಲವ್ಯನನ್ನು ಕೊಲಿಸಿದ (6). ಮಧುವೈರಿ ಶಾರ್ಙ್ಗಧರನಾಗಿ ಮದೋನ್ಮತ್ತ ಶಿಶುಪಾಲನನ್ನು ನಿರಾಯುಧಗೊಳಿಸಿ ಶಿಶುಗಳ ಪಾಲಕನಂತಾಗಿಸಿದ, ಬಲರಾಮ ಜರಾಸಂಧನಿಗೆ ಮುಪ್ಪು ಸಂಧಿಸಿದಂತೆಸಗಿದ (16). ಕೃಷ್ಣ ಯುಕ್ತಿಯಿಂದ ದ್ವಾರಕೆಗೆ ಸರಿದು, ವಿಪಕ್ಷದ ಕಾಲಯವನ ಬೆನ್ನಟ್ಟಲು, ಮುಚುಕುಂದನಲ್ಲಿಗೈದಿ, ಅಭೇದ ಭ್ರಮಿತನಿಂದ ಒದೆಯಿಸಿ, ಶತ್ರುವನ್ನು ಸುಡಿಸಿ, ಭಕ್ತನಿಗೆ ಮುಕ್ತಿಯಿತ್ತ(31,37). ಈ ಸರ್ಗದ ಉತ್ತರಾರ್ಧ ರುಕ್ಮಿಣೀಹರಣ. ಶಿಶುಪಾಲನ ಪಾಲಾಗುವ ಮುನ್ನ ತನ್ನನ್ನಪಹರಿಸೆಂದು ವಿಪ್ರನಿಂದ[21] ಪತ್ರ ಕಳಿಸಿದ ರುಕ್ಮಿಣಿ ಸ್ವಸ್ವರೂಪ ಅರಿತವಳು; ಅಂತೆಯೆ

---

21. ವಾದಿರಾಜರ ಪೂರ್ಣಾವತಾರ — ಸುದೇವ. ಖಂಡಿತ ರುಕ್ಮಿಣಿಯ ಕೈಪಿಡಿವನೆಂಬಂತೆ, ಕೈಯ ಮೇಲೆ ಕೈಯಿಕ್ಕಿ ಪ್ರತಿಜ್ಞೆಗೈವಂತೆ, ವಿಪ್ರನ ಕೈಹಿಡಿದು ಆದರಿಸಿದ ಕೃಷ್ಣ (55).

'ಭೀಷ್ಮಕ— ರುಕ್ಮಿಯಂಥವರಿಂದ ತನಗೇನಾಗಬೇಕಿದೆ' ಎಂದವಳು (48) —

ತ್ವಮಂಗ ಲಕ್ಷ್ಮೀರಮಣ ಸ್ವತಂತ್ರಃ
ತ್ವದೀಯ ಜಾಯಾ ಕಮಲಾಹಮಸ್ಮಿ ॥ 52 ॥

ಪತ್ರದಂತೆ ಕುಂಡಿನಪುರಕ್ಕೈತಂದ ಕೃಷ್ಣನ ಕಂಡವರು 'ನೀಲಮಣಿ— ಬಂಗಾರ' ಸೇರಲೆಂದು ಹಾರೈಸಿದರು (61). ಆಗ ರುಕ್ಮಿಣಿಯು ದೇವಿಯ ಗುಡಿಗೆ ಹೋದಳೆಂದಿದೆ ಭಾಗವತ; ಇಲ್ಲಿ ಕುಲದೇವತೆಯಾದ ಶಿವನನ್ನಾರಾಧಿಸಿ, ತನ್ನ ಮನೆಯೊಡೆಯನನ್ನು ನೋಡನಡೆದಳೆಂದಿದೆ (64). ಕನ್ಯೆ ಮೊಮ್ಮಗನನ್ನಾರಾಧಿಸಿ ಬಂದಳೆಂದರೆ ಇಲ್ಲಿ ಶಿವನೆಂಬ ಆಧ್ಯಾತ್ಮಿಕ ಅರ್ಥವಷ್ಟೇ? 'ಸ್ವಯಂವರದಲ್ಲಿ ಅವಳ ನೋಟದಿಂದಾಗದ ಕಾಮನು, ಕೃಷ್ಣ ತನ್ನ ತಾಯಿಯನ್ನು ಕೊಂಡೊಯ್ಯಲಿದ್ದ ಕಾರಣ, ರಾಜರನ್ನು ಸಮ್ಮೋಹನಾಸ್ತ್ರಗಳಿಂದ ಮೂರ್ಛೆಗೊಳಿಸಿದಂತಿತ್ತು' ಎಂಬ ನುಡಿಯಲ್ಲಿ (66) ಅಂತೆ ಅರ್ಥೈಸಬೇಕು. "ಕನ್ಯೆಗೆ ಮಗನಿರುವುದು ಸಾಧ್ಯವಿಲ್ಲ. ಆದುದರಿಂದ ಇಲ್ಲಿನ ಅರ್ಥ ಬೇರೆ ಎಂಬುದನ್ನು ನೂನಂ ಎಂಬ ಉತ್ಪ್ರೇಕ್ಷೆ ಹೇಳುತ್ತದೆ. ರುಕ್ಮಿಣಿಯ ನೋಟದಿಂದ ವಿಕಾರಕ್ಕೆ ಗುರಿಯಾದ ಅರಸರಿಗೆ ಮೂರ್ಛೆಯೇ ಬಂದಿರಬೇಕು. ಆಕೆ ಜಗನ್ಮಾತೆ — ಮನ್ಮಥನಿಗೂ ತಾಯಿ ಎಂಬ ತಾತ್ತ್ವಿಕ ಭಾಗವನ್ನೂ ಕಟಾಕ್ಷಪಾತದಿಂದಲೇ ಮೂರ್ಛೆಗೊಳಿಸುವಂತಹ ಅನುಪಮ ಸುಂದರಿ ಎಂಬ ಪ್ರಕೃತಾರ್ಥವನ್ನೂ ಏಕಕಾಲದಲ್ಲಿ ಸಾಧಿಸಿದ ವಾದಿರಾಜರ ಜಾಣ್ಮೆ ಅನನ್ಯಸದೃಶವೇ ಸರಿ" (ಲಕ್ಷಾಲಂಕಾರ, 23). ಸಹಜವಾಗಿಯೇ ರಾಜರ ಕಾಮಮೂರ್ಛೆ ರುಕ್ಮಿಣೀಹರಣಕ್ಕೆಡೆ ನೀಡಿತು (67).

ಜಗನ್ಮಾತೆಯನ್ನಾಲಂಗಿಸಿ, ಚುಂಬಿಸಿ, ಸುಖಿಸಬೇಕೆಂದವರ ತೋಳು ತಲೆ ತೆಗೆದರು ಹರಿಭಟರು[22] (15—2). ಮಾತೃಗಾಮಿ[23]ಯಾಗಲಿದ್ದ ಶಿಶುಪಾಲ ಸೇನೆ ಹತವಾಯಿತು (8). ರುಕ್ಮಿಯ ತಲೆ ಬೋಳಿಸಿ ಕಳಿಸಿದ ಕೃಷ್ಣ (10). ದ್ವಾರಕೆಯಲ್ಲಿ ವಿವಾಹಾರ್ಥ ಮಾಧವೋದ್ಯಾನಕ್ಕೈತರಲು, ಕೋಗಿಲೆಗಳ ಸಂಗೀತ, ಕಡಲ ಮದ್ದಳೆ, ಶುಕಗಳ ಮಂತ್ರ, ನವಿಲ ನರ್ತನ, ದುಂಬಿಗಳ ಝೇಂಕಾರದ ವೀಣೆ, ಪುಷ್ಪಗಳ ಅಕ್ಷತೆ ನೈಸರ್ಗಿಕವಾಗಿ ಒದಗಿದುವು (27).

---

22. ಈ ಕಾರ್ಯ ಬಲರಾಮನದೆಂದಿದೆ ಭಾಗವತ.

23. ಗುಂಡಕ್ರಿಯೆ 18ರಲ್ಲೂ ಇರುವ ಪ್ರಯೋಗ.

ತನ್ನ ನೋಟದಿಂದಲೇ ಮಂಗಲ ಉದಿಸುವಗೆ ಸುಮುಹೂರ್ತವೂ, ಪಾದದಿಂದ ಗಂಗೆ ಉದಿಸಿದವಗೆ ಕಾಶಿಯಾತ್ರೆಯೂ ಬೇಕಿಲ್ಲ; ಆದರೂ ಆತ ಅವನ್ನನುಸರಿಸಿದ್ದು ಲೋಕಶಿಕ್ಷಾರ್ಥ (48,54,57).

ದೇವತೆಗಳೆಲ್ಲ ಬಂದರು, ರುಕ್ಮಿಣಿ ಗುಣಪೂರ್ಣನಿಗೆ ಮಾಲೆ ಹಾಕಿದಳು (16–29). ದಿವ್ಯ ವಿವಾಹ ನೆರವೇರಿತು. (ಇಲ್ಲಿ ಸಮುದ್ರ ವರ್ಣಿತ).

ದಿವ್ಯ ದಂಪತಿದರ್ಶನದಿಂದ ಎಲ್ಲರೂ ಹರ್ಷಿಸಿದರು. ಮುನಿಗಳು ಹರಿಯ ಸಕಲಾವತಾರ ಕೊಂಡಾಡಿದರೆಂಬಲ್ಲಿ ವಾದಿರಾಜರು ಸಹಜವಾಗಿಯೇ ತಮಗೆ ಪ್ರಿಯವಾದ ದಶಾವತಾರವನ್ನೂ ತಂದಿದ್ದಾರೆ (17,15–24). ಧರ್ಮಾವಿರುದ್ಧ ಕಾಮದಿಂದ ದ್ವಾರಕೆ ಪುಣ್ಯಪುರವೆನಿಸಿತು (44). ಸಿದ್ಧರಿಗೂ ಸಾಲೋಕ್ಯವನ್ನುಳಿದು ಬಂದು ನೋಡಬೇಕೆನ್ನಿಸಿತು, ಗೋಪಿಯರೊಡನಿದ್ದ ಕೃಷ್ಣರೂಪಗಳನ್ನು (65).

18ನೆಯ ಸರ್ಗವಿಡೀ ಕೃಷ್ಣ–ರುಕ್ಮಿಣಿಯರ ಅಂಗಾಂಗ ವರ್ಣನೆ ಶೃಂಗಾರಗೊಂಡಿದ್ದರೂ, ಭಕ್ತಿಯ ಪ್ರಾರ್ಥನೆಗಳಿಂದ ತುಂಬಿಕೊಂಡಿದೆ — ಅವು ನಮ್ಮ ಮನದಲ್ಲಿರಲಿ, ಸೌಖ್ಯಪ್ರದವಾಗಲಿ ಎಂಬಂತೆ.

ಕೊನೆಯ ಸರ್ಗ ಕೃಷ್ಣನು ಅಷ್ಟಮಹಿಷಿಯರನ್ನು ವರಿಸಿ, ಪ್ರದ್ಯುಮ್ನಾದಿ ಪುತ್ರ ಪ್ರಪೌತ್ರರನ್ನು ಪಡೆದ ವಿಷಯ ವರ್ಣಿಸಿ, ಕಾವ್ಯವನ್ನು ಮುಗಿಸಿದೆ.

ಈ ವಸ್ತುವಿವೇಚನೆಯಿಂದ ವಾದಿರಾಜರು ಕೃಷ್ಣ–ರುಕ್ಮಿಣಿಯರನ್ನು ದಿವ್ಯಪಾತ್ರವಾಗಿ ಚಿತ್ರಿಸಿರುವುದು ಸ್ಪಷ್ಟ. ಆದ್ದರಿಂದ ಪಾತ್ರೋಚಿತ ಭಕ್ತಿಯ ಚೌಕಟ್ಟಿನಲ್ಲೇ ದಿವ್ಯ ಶೃಂಗಾರ ಮೂಡಿ, ದಾರ್ಶನಿಕ ಶೈಲಿಯ ಮಹಾಕಾವ್ಯ ಒದಗಿದೆ. 'ಕಾವ್ಯದ ತುಂಬ ಅನೇಕ ಲೋಕೋಕ್ತಿ–ವೇದಾಂತ ತತ್ತ್ವ ತುಂಬಿಕೊಂಡಿವೆ. ಇದನ್ನು ಕೇವಲ ಸದ್ಯಃಪರನಿರ್ವೃತಯೇ ಎಂದು ಓದುವಂತಿಲ್ಲ. ಸಹೃದಯತೆ–ವೈದುಷ್ಯ ಇದ್ದರೆ ಮಾತ್ರ ಇದರ ಸ್ವಾರಸ್ಯ

ಗ್ರಹಿಸಬಹುದು. (ಲಕ್ಷಾಲಂಕಾರ, 23). ಪ್ರತಿಸರ್ಗಾಂತ್ಯದಲ್ಲಿ ಪೋಣಿಸಿರುವ —

ರೋಮಾಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘ ವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರ ವಿಮಲ ಶ್ಲಾಘ್ಯಾರ್ಥ ಸಂದಾಯಿನಿ।
ಸಂಜಾತೇ ಭುವಿ ರುಕ್ಮಿಣೀಶ ವಿಜಯೇ ಸದ್ವಾದಿರಾಜೋದಿತೇ
ಸರ್ಗೋಭೂತ್ಸುರಮಂಡಲೀಷು ಸುತರಾಮೇಕೋನವಿಂಶೋಮುದಾಂ ॥

ಎಂಬಂತಹ ನುಡಿಯೇ ಸೂಚಿಸಿದಂತೆ 'ಇದರ ಶ್ರವಣ ರೋಮಾಂಚಕ, ಪಾಪ ಪರಿಹಾರಕ; ಶ್ರದ್ಧಾ ಭಕ್ತಿ ಆಸಕ್ತಿಯಿಂದಾಲೋಚಿಸಿದರೆ ನೂತನವಾದ ಅಧ್ಯಾತ್ಮಿಕ ಅರ್ಥ ಹೊಳೆಯುಸುವುದು. ಈ ಕಾವ್ಯ ಇತರ ಕಾವ್ಯಗಳಂತಲ್ಲದೆ ಮೋಕ್ಷಸಾಧಕವೂ ಆಗಿರುವುದೊಂದು ವಿಶೇಷ.

ಭಕ್ತ — ಕವಿ — ವಾಗ್ಗೇಯಕಾರ ವಾದಿರಾಜರ ಜೀವಿತವೇ ಸಂಗೀತಮಯ ಸಮರ್ಪಣೆಯಾಗಿತ್ತು. ಆರಂಭಕಾಲದ ಕೃತಿಯಾದರೂ ರುಕ್ಮಿಣೀಶ ವಿಜಯ ದಿವ್ಯಭಾವಗಳನ್ನಭಿವ್ಯಂಜಿಸಿದ ಸ್ವರ್ಗೀಯ ಸೊಬಗುಳ್ಳುದು. ವಾದಿರಾಜರ ಭಕ್ತಿ ಇಲ್ಲಿ ಸಂಗೀತಮಯವಾಗಿ ಧುಮುಕಿದೆ, ದಶಾವತಾರಾದಿ ಸ್ತೋತ್ರಗಳಂತೆ. ಕೃಷ್ಣನ ಕಾಳಿಂಗಮರ್ದನ ನೃತ್ಯ— ವಿವಾಹೋದ್ಯಾನ ವರ್ಣನೆಗಳಲ್ಲಿ ಕಾವ್ಯ ಲಯ ಸಂಗೀತಗಳೆಲ್ಲ ಸಮ್ಮಿಳಿತವಾಗಿವೆ. Here is a finest synthesis of poetry, melody and rhythm (Thus sang Vadiraja, 103). ಕಾಳಿದಾಸನ ಕುರಿತು ಅಭಿನವಗುಪ್ತ ನುಡಿದಂತೆ ವಾದಿರಾಜರದೂ ಭಗವದನುಗ್ರಹವಿದ್ಧ ಪವಿತ್ರ ವಾಕ್. ಇಲ್ಲಿ ಕಾಣುವ ಅವರ ಸಿದ್ಧಕವಿತ್ವ, 'ಉತ್ಪ್ರೇಕ್ಷಾ ವಾದಿರಾಜಸ್ಯ' ಎನ್ನುವಂತಿರುವ ಕಾವ್ಯಕಲ್ಪನೆ, ಪ್ರಸಾದ ಗುಣವುಳ್ಳ ವೈದರ್ಭೀ ರೀತಿ ಆಶ್ಚರ್ಯಕರವೆನಿಸಿವೆ. ಮುದ್ದು ಮೆಯ್ಯ ಕೃಷ್ಣನಿಗೆ ಚಾಣೂರ ಘಟ್ಟಿಸಿ ಹೊಡೆದದ್ದೂ ಪ್ರಯೋಜನವಾಗಲಿಲ್ಲೆಂಬಾಗ 'ಮುದ್ದು ಸರಸ ಕವಿಗೆ ಕಠಿಣಪದಪ್ರಿಯನ ಸ್ವಭಾವ ಹಿಡಿಸದೆಂದಿದ್ದಾರೆ (11— 44). ಕಂಸನ ಪಂತಕ್ಕೆ ಚಾಣೂರನ ತಲೆ ಎಂಬ ತೆಂಗು ಒಡೆಯಿತೆಂಬಲ್ಲಿ, ಪತಿ— ಪಿತರ ಕೊಲಿಸಿ ಅಸ್ತಿ ಉಳಿದಳೆಂಬಲ್ಲಿ, ಶಿಶುಪಾಲ— ಜರಾಸಂಧರೂ ಅನ್ವರ್ಥಕನಾಮರಾದರೆಂಬಲ್ಲಿ ನವುರಾದ ಹಾಸ್ಯ ತಂದಿದ್ದಾರೆ.[24] ವ್ಯಾಸ— ಕೃಷ್ಣರನ್ನು

---

24. ಸ್ವಪ್ನವೃಂದಾವನಾಖ್ಯಾನದಲ್ಲೂ ಇಂತಹ ಉದಾಹರಣೆಗಳಿವೆ (19, 20ನೆಯ ಅಧ್ಯಾಯಾರಂಭದಲ್ಲಿ).

ಕೂಡಿಯೇ ವರ್ಣಿಸಿದ ಶ್ಲೇಷ 17–22ರಲ್ಲಿದೆ. ಪ್ರಾಸಾನುಪ್ರಾಸಗಳನ್ನು ತಮ್ಮ ಶೈಲಿಯ ವೈಶಿಷ್ಟ್ಯವಾಗಿಸಿಕೊಳ್ಳುವಲ್ಲಿ ವಾದಿರಾಜರು ಸಂಸ್ಕೃತದ ಅನುಪ್ರಾಸಕ್ಕೆ ಕನ್ನಡದ ಆದಿಪ್ರಾಸವನ್ನೂ ಪೋಷಕವಾಗಿ ಪಡೆದಿದ್ದಾರೆ: 3–8ರಂತೆ. ಇದಕ್ಕಿನ್ನೊಂದು ನಿದರ್ಶನ ಕೃಷ್ಣನಿಗೆ ಯಶೋದೆ ಮೊಲೆಯೂಣಿಸಿದ ಪದ್ಯ –

ಅಂಶೋಜ್ಜ್ಯಸ್ತೇಂದು ಪ್ರತಿಮಾನಸಂ ತಂ
ಅಂಶಂ ನಮಾರೋಪ್ಯ ಮುಹುರ್ಮೃಜಂತೀ ।
ಪಂಕಂ ಮನೋಜ್ಞಾಂಗಗತಂ ಕುಧಾರ್ತಾ
ಶಂಕಾಸ್ತನಕ್ಷೀರಮಪಾಯಯತ್ತಾಂ ॥ 4–2 ॥

ಇನ್ನಾವ ಅಲಂಕಾರವಿರದಿದ್ದರೂ ವಾದಿರಾಜರ ಪದ್ಯ ಪ್ರಾಸಾಲಂಕಾರವನ್ನು ಖಂಡಿತ ಉಳ್ಳವು. ಅವರಲ್ಲಿ 'ಅಲಂಕಾರವಿಲ್ಲದ ಒಂದು ಪದ್ಯವೂ ದೊರೆಯದೆಂದರೆ ಅಲಂಕಾರದ ಮಾತಾಗದು' (ಲಕ್ಷಾಲಂಕಾರ, 21). ರುಕ್ಮಿಣೀಶ ವಿಜಯದಲ್ಲಿ ವಸಂತತಿಲಕ – ಇಂದ್ರವಜ್ರ – ಶಾರ್ದೂಲ ವಿಕ್ರೀಡಿತ – ದ್ರುತವಿಲಂಬಿತಾದ್ಯನೇಕ ಛಂದೋವೃತ್ತ ಉಚಿತವಾಗಿ ಬಳಕೆಗೊಂಡಿವೆ.

ವಾದಿರಾಜರ ಕಾಲಕ್ಕೇ ಉದಿಸಿದ 'ವೃತ್ತರತ್ನಸಂಗ್ರಹ'ವು –

ವಿರಕ್ತಿ ವಿಜ್ಞಾನಸುಭಕ್ತಿಯುಕ್ತಿ
ಪ್ರಾಥ್ಯಾದಿಪೂರ್ಣಸ್ಯ ಮಹೋಹರಸ್ಯ ।
ಶ್ರೀವಾದಿರಾಜಃ ಸ್ವಕೃತಸ್ಯ ಕಾವ್ಯ
ರಾಜಸ್ಯ ಸಾಮ್ಯಂ ಸ್ವಯಮೇವ ಧತ್ತೇ ॥ 1–37 ॥

ಎಂದು ಬಣ್ಣಿಸಿದ ಈ ಕೃತಿ ವಾದಿರಾಜರ ಉಜ್ವಲ ಪ್ರತಿಭೆಗೆ ಒಂದು ಉದಾಹರಣೆಯಷ್ಟೇ! ಆದರೂ ಕಾವ್ಯಾಲಾಪವೇ ವರ್ಜ್ಯವೆಂದ ನಮ್ಮವರ ಔದಾಸೀನ್ಯ ಹಾಗೂ ಮತೀಯ ದಿಗ್ಬಂಧನದಿಂದ ಈ ಕೃತಿ ಮಹಾಕಾವ್ಯವೆಂದೂ ಪರಿಗಣಿತವಾಗಿಲ್ಲ, ಮಧ್ವವಿಜಯದ ಮಹತಿಯನ್ನೂ ಹೊಂದಿಲ್ಲ. 'ಇನ್ನಾದರೂ ಇಂತಹ ಕಾವ್ಯಗಳ ಅವಲೋಕನ– ಅಧ್ಯಯನ– ಚಿಂತನ ಮಾಡಿದರೆ ನಮ್ಮನ್ನೇ ನಾವು ಉದ್ಧರಿಸಿಕೊಂಡಂತಾಗುವುದು' (ಲಕ್ಷಾಲಂಕಾರ, 23).

ವಾದಿರಾಜರ ಸಾಕ್ಷಾತ ಶಿಷ್ಯ ನಾರಾಯಣಾಚಾರ್ಯರ ವ್ಯಾಖ್ಯಾನದೊಡನೆ ಈ ಕೃತಿ ಬೆಳಗಾವಿಯಿಂದ ಪ್ರಕಟಗೊಂಡುದಲ್ಲದೆ, ಈಚೆಗೆ ಕೆ. ನರಸಿಂಹಾಚಾರ್ಯರ ಗದ್ಯಾನುವಾದ, ಡಾ. ಕೆ. ಆರ್. ಮುಳಗಿಯವರ ವಾರ್ಧಕ ಷಟ್ಪದಿಯ ಪದ್ಯಾನುವಾದ ಸಹ ಬಂದಿವೆ.

25. <u>ತೀರ್ಥಪ್ರಬಂಧ:</u> ವಾದಿರಾಜರು ತಮ್ಮ ಹೆಸರು ಅನ್ವರ್ಥಕವಾಗಲು ಎಳೆವರೆಯದಲ್ಲೇ ತೀರ್ಥಾಟನ ಹೊರಟು ಮತಪ್ರಸಾರ ಮಾಡಿದರು, ಜೊತೆಗೆ ಕಾವ್ಯ ಸೃಷ್ಟಿಸಿದರು. ಅದು ಸು. 20ರ ಪ್ರಾಯವೆಂದರೂ 16ನೆಯ ಶತಕವಿಡೀ ಅವರ ಸಾಂಸ್ಕೃತಿಕ ಚಟುವಟಿಕೆ ಅಬಾಧಿತ ಸಾಗಿವೆ. Even granting that his religious activities started in 1500 (though there are evidences to prove that he began to compose poems even in his teens) his cultural activities continued unabated for full 100 years' (Thus sang Vadiraja, 3). ಆದರೆ ಈ ಕಾರಣದಿಂದ ಅವರು ತೀರ್ಥಕ್ಷೇತ್ರ ಸಂದರ್ಶಿಸಿ ಅಲ್ಲಲ್ಲಿ ವರ್ಣಿಸಿ ರಚಿಸಿದ 'ತೀರ್ಥಪ್ರಬಂಧ'ವೇ ಬಹುಶಃ ಪ್ರಥಮ ಕೃತಿ ಎಂದು ಮಾತ್ರ ಭಾವಿಸುವಂತಿಲ್ಲ. ಏಕೆಂದರೆ —

ತ್ರಿವಿಕ್ರಮಂ ರಮ್ಯಗದಾರಿಶಂಖ
ಸರೋಜ ಮಾಲಾಧರಮಿಂದುವರ್ಣಂ।
ಮನೋಹರಾಂಗಂ ಯತಿ ವಾದಿರಾಜ
ಪ್ರತಿಷ್ಠಿತಂ ನೌಮಿ ಸದಾ ಪ್ರಸನ್ನಂ ॥ ಪಶ್ಚಿಮ ಪ್ರಬಂಧ 75,76 ॥

ಎಂದು ಬಣ್ಣಿಸಿದ ದೇವಾಲಯ 1582ರಲ್ಲಿ ನಿರ್ಮಿತವಾದುದು ಶಾಸನೋಕ್ತ. 1595ರ ಸುಮಾರು ಬಂದ 'ವೃತ್ತರತ್ನಸಂಗ್ರಹ' ವಾದಿರಾಜರ ತೀರ್ಥಾಟನದ ರೀತಿಯನ್ನು ವರ್ಣಿಸಿ (1,14–19) 'ತೀರ್ಥಪ್ರಬಂಧ'ವನ್ನುಲ್ಲೇಖಿಸಿದೆ — 'ತೀರ್ಥಪ್ರಬಂಧಂ ಕೃತವಾನ ದಯಾಲುಃ' (1,34). ಆದ್ದರಿಂದ 'ಸೋದೆಯ ಪರಿಸರದಲ್ಲಿ ವಾದಿರಾಜರು ಕಾಲು ಶತಮಾನ ಕಳೆದಿರಬೇಕು ... ತೀರ್ಥಪ್ರಬಂಧವನ್ನವರು ಇಲ್ಲಿಯೇ ರಚಿಸಿರಬೇಕು' (ಪಾ. ವೆಂ. ಆಚಾರ್ಯ, ಲಕ್ಷಾಲಂಕಾರ, 52) ಎಂಬ ಅಭಿಪ್ರಾಯ ಸರಿ ಎನಿಸುತ್ತದೆ. ಬಹುಶಃ ತೀರ್ಥಕ್ಷೇತ್ರ ಸಂದರ್ಶಿಸಿದಾಗಲೇ ರಚಿಸಿದ ಶ್ಲೋಕಗಳನ್ನು 1585–95ರ ಅವಧಿಯಲ್ಲಿ

ಸಂಕಲಿಸಿರಬೇಕು. ಆರಂಭಕಾಲಕ್ಕೆ ರಚಿಸಿದ 'ರುಕ್ಮಿಣೀಶ ವಿಜಯ'ದ ಯಮುನಾ ವರ್ಣನೆ (7–35) ಇಲ್ಲಿಯ ಉತ್ತರ ಪ್ರಬಂಧದಲ್ಲಿ (12) ಇರುವುದೂ, ಅಂತ್ಯಶ್ಲೋಕ 'ಅಧ್ವರ ಸಿದ್ಧ ಸತ್ಕೃತಿಜಯ' ಎಂದಿರುವುದೂ ಇದಕ್ಕೆ ಪೋಷಕ. ದೇಶದ 4 ಭಾಗ ಪಾಂಡವರು ಪ್ರದಕ್ಷಿಸಿ ಕೃಷ್ಣಾರ್ಪಣಗೈದಂತೆ (ಭಾ.ತಾ.ನಿ.22–278, ಕನ್ನಡ ನಿರ್ಣಯ 2–252), ವಾದಿರಾಜರೂ ಪಶ್ಚಿಮ–ಉತ್ತರ–ಪೂರ್ವ–ದಕ್ಷಿಣ ಪ್ರಬಂಧಗಳಲ್ಲಿ ಹಲವೆಡೆಗಳನ್ನು 235 ಶ್ಲೋಕಗಳಿಂದ ವರ್ಣಿಸಿ ಜನತಾ ಜನಾರ್ದನಾರ್ಪಿಸಿದ ಖಂಡಕಾವ್ಯವಿದು, ಸಂಸ್ಕೃತ ಸಾಹಿತ್ಯದಲ್ಲೇ ಅಪೂರ್ವ ಪ್ರವಾಸ ಕಥನದ ಮಾದರಿ, ಎಲ್ಲರ ಯಾತ್ರಾ ಕೈಪಿಡಿ. ಯಾತ್ರೆಗೈಯದವರೂ ಓದಿದ ಮಾತ್ರಕ್ಕೆ ಯಾತ್ರೆಯ ಫಲ ಪಡೆಯುವಂಥ ಸತ್ಕೃತಿ.

ಪಶ್ಚಿಮ ಪ್ರಬಂಧ 99 ಶ್ಲೋಕಗಳಲ್ಲಿ 20 ಮುಖ್ಯ ತಾಣಗಳನ್ನು ಬಣ್ಣಿಸಿದೆ.[25] ವಾದಿರಾಜರು ವಿಗ್ರಹಗಳ ಭಂಗಿ ವಿಶೇಷಗಳಿಗೆ ಸಮುಚಿತಾರ್ಥ ಕಲ್ಪಿಸುವುದನ್ನು ಆರಂಭದ ಉಡುಪಿ ಕೃಷ್ಣನ ವರ್ಣನೆ ನಿದರ್ಶಿಸಿದೆ —

ನಿಮಜ್ಜದ್ಭ್ಯೋಗ್ರೇ ಭವಾರ್ಣವೇ ನಿಜಮನೋಭೀಷ್ಟಂ ದಿಶಾಮೀತಿ ಯಃ
ಸಮ್ಯಗ್ ಜ್ಞಾಪಯಿತುಂ ಕರೇಣ ವಿಲಸನ ಮಂಥಾನಮನ್ಯೇನ ಚ ।
ರಮ್ಯಂ ದಾಮ ದಧನ ಮಹೇಶರಜತಗ್ರಾಮ ಶ್ರಿಯೋಲಂಕೃತಿಃ
ಕರ್ಮಂದೀಶ್ವರ ಭಕ್ತಿಬಂಧನವಶಃ ಪ್ರೀತೋಸ್ತು ಕೃಷ್ಣಪ್ರಭುಃ ॥

'ಭವಸಾಗರ ಮಥಿಸಿ ಅಭೀಷ್ಟಪ್ರದನೆಂದು ನೆನೆಯಿಸಲು ಕಡೆಗೋಲು–ಹಗ್ಗ ಹಿಡಿದು, ಯತಿಗಳ ಭಕ್ತಿವಶನಾಗಿ ಶಿವಬೆಳ್ಳಿಯನ್ನಲಂಕರಿಸಿದ ಕೃಷ್ಣ ಪ್ರೀತನಾಗಲಿ' ಎನ್ನುವ ಪದ್ಯದ ಆದಿಪ್ರಾಸ ಕನ್ನಡದ ಪ್ರಭಾವ. ಮುಂದೆ ವಿಠಲ–ವೆಂಕಟೇಶರನ್ನೂ ಹೀಗೆಯೇ ವರ್ಣಿಸಿದ್ದು, ಹಯಗ್ರೀವ ಮುದ್ರೆಗಳ ಸಂಕೇತ ಸಹ ಇದರಂತೆ ಅನ್ಯತ್ರ ವಿವೃತ (ರುಕ್ಮಿಣೀಶ ವಿಜಯ 1–2, ಸರಸ ಭಾರತೀ ವಿಲಾಸ 1–24). ಹರಿಯಿಂದ ಗುರುಗಳತ್ತ ಸರಿವ ದೃಷ್ಟಿ —

ದ್ವಾರಾವತೀಂ ಸಕಲ ಭಾಗ್ಯಮಪೇಕ್ಷ್ಯ
ಗೋಪಾಲಬಾಲ ಲಲನಾಕರಪೂಜನಂ ಚ ।

---

25. ಉಡುಪಿ ನೇತ್ರಾವತಿ ಸುಬ್ರಹ್ಮಣ್ಯ ಪಯಸ್ವಿನಿ ಕುಂಭಾಸಿ ಕೋಟೇಶ್ವರ ಕ್ರೋಡ ಕೊಲ್ಲೂರು ಸಹ್ಯಾಚಲ ಹರಿಹರ ಬಿದರಹಳ್ಳಿ ಬಂಕಾಪುರ ವರದಾ ಬನವಾಸಿ ಸೋದೆ ಗೋಕರ್ಣ ಕೊಲ್ಲಾಪುರ ಪ್ರಭಾಸ ದ್ವಾರಕಾ ಪುಷ್ಕರ.

ವಾರ್ಧಿಂ ವಧೂಗೃಹಮವೇತ್ಯ ಚ ಮಧ್ವನಾಥೋ
ಯತ್ರಾಸ್ತಿ ರಜತಪೀಠಪುರಂ ಗರೀಯಃ ॥ 9 ॥

ಎಲ್ಲ ಭಾಗ್ಯದ ದ್ವಾರಕೆಯನ್ನೂ ಗೋಪಿಯರ ಪೂಜೆಯನ್ನೂ ಮಡದಿಯ ಮನೆಯಾದ ಕಡಲನ್ನೂ ಬಿಟ್ಟು ಮಧ್ವಪತಿ ಬಂದು ನಿಂತ ಉಡುಪಿಯೇ ಹಿರಿದು. ಮಾಧ್ವತತ್ತ್ವ ವಾದಿರಾಜರಲ್ಲಿ ಸದಾ ಧ್ವನಿತ — ರುದ್ರನು ಭಾವಿ ಶೇಷನಾದ ಕಾರಣ ಅನಂತೇಶ್ವರಾಲಯದಲ್ಲಿ ಶಿವಾಂತರ್ಯಾಮಿ ಹರಿಯೇ ಲಿಂಗಶಾಯಿಯಾಗಿದ್ದಾನೆ (14); 'ದ್ವಾಸುಪರ್ಣಾ' ಶ್ರುತಿಯ ಮಾನವಾತ್ಮ ಪಕ್ಷಿ ಹಣ್ಣು ತಿಂದೂ ಸೊರಗಿ ದೇವಾತ್ಮ ಪಕ್ಷಿ ತಿನ್ನದೆಯೇ ಬೆಳೆದಂತೆ, ಕ್ರೋಡದ ಶಂಕರಲಿಂಗಕ್ಕೇ ನೈವೇದ್ಯ ಸಂದರೂ ನಾರಾಯಣಲಿಂಗ ಬೆಳೆದಿದೆ (52); ಯಾವೊಬ್ಬ ದೇವರಿಂದ ಸಾಯದ ವರ ಪಡೆದ ಗುಹಾಸುರನನ್ನು ಹರಿ ಹರನ ಧರಿಸಿಕೊಂದ, ಹರಿಹರ ಒಂದೇ ಆಗಿದ್ದರೆ ಅಸುರ ಗೆಲ್ಲಬೇಕಿತ್ತು ('ಐಕ್ಯಂ ಚೇತ್ ಶತ್ರುಣಾ ಜಿತಂ' ಎಂಬಂಥ ತರ್ಕ ಈ 61ನೆಯ ಶ್ಲೋಕದಲ್ಲಿದೆ, 'ಯುಕ್ತಿ ಮಲ್ಲಿಕಾ'ದ ಚತುರ ಯುಕ್ತಿಯಂತೆ). ವಾದಿರಾಜರು ಉಡುಪಿಯಿಂದ ಮೊದಲು ದಕ್ಷಿಣಕ್ಕೆ ಪಾಜಕದ ಮೂಲಕ ಸುಬ್ರಹ್ಮಣ್ಯನಲ್ಲಿಗೈದಿ ಆತ ಗುಹೆಯಲ್ಲಿ ಗುಟ್ಟಾಗಿ ಹರಿಯನಾರಾಧಿಸುವುದನ್ನರಿತು, ಬಳಿಕ ಪರಶುರಾಮ ಕ್ಷೇತ್ರದ ಸಪ್ತ ಸ್ಥಳ[26] ಸಂದರ್ಶಿಸಿ, ಕೊಲ್ಹಾಪುರದ ಮಾರ್ಗವಾಗಿ ಉತ್ತರಕ್ಕೆ ಸಾಗಿ, ಮರಳುವಾಗ ದ್ರಾವಕೆಯತ್ತ ತೆರಳಿದಂತಿದೆ (ವಾ.ಗು.ಚ.3—24). 94ನೆಯ ಶ್ಲೋಕ ವರ್ಣಿಸಿದ ಪುಷ್ಕರ ಕ್ಷೇತ್ರಸಧ 'ಸಿದ್ಧಪುರಿ'ಯೇ ಭಾರತ ವನಪರ್ವದ ಧರ್ಮಾರಣ್ಯ— ವರಾಹ ಕಡಲು ಹೊಕ್ಕ ಎಡೆ — ಸಮುದ್ರಮಥನದ ಶ್ರೀಸ್ಥಳ — ಕರ್ದಮ ತುಷ್ಟಿಯ ಕೋರಿಕೆಗೆ ಹರಿದ ಹರಿಯ ಕಂಬನಿ ಬಿಂದು ಸರವಾಗಿ ಕಪಿಲನಾಮಕ ಪುತ್ರನಾಗಿ ಅವತರಿಸಿದ ಕಪಿಲಾಶ್ರಮ— ಪಾಪ ಪರಿಹಾರಕ್ಕೆ ಪರಶುರಾಮ ತರ್ಪಣವಿತ್ತ ಮಾತೃಗಯಾ— ಶೀಘ್ರ ಫಲದಾಯಕ ಅನ್ವರ್ಥಕ ಕ್ಷೇತ್ರ.

ಉತ್ತರ ಪ್ರಬಂಧದ 46 ಶ್ಲೋಕ ಪಂಢರಪುರ, ಕಾಶಿ, ಗಯಾ, ಮಥುರಾ, ವೃಂದಾವನ, ಅಯೋಧ್ಯಾ, ನೈಮಿಷಾರಣ್ಯ, ಹಸ್ತಿನಪುರ, ಕುರುಕ್ಷೇತ್ರ, ಬದರಿ ಕ್ಷೇತ್ರಗಳನ್ನು

---

ರೌಪ್ಯಪೀಠಂ ಕುಮಾರಾದ್ರಿಃ ಕುಂಭಾಸೀ ಚ ಧ್ವಜೇಶ್ವರಃ
ಕ್ರೋಡ ಗೋಕರ್ಣ ಮೂಕಾಂಬಾಃ ಸಪ್ತೈತಾ ಮೋಕ್ಷದಾಯಕಾಃ ॥

ಕೃಷ್ಣಾ, ಗೋದಾ, ಗಂಗಾ, ಯಮುನಾ ನದಿಗಳನ್ನು ವರ್ಣಿಸಿದೆ.[27] ಕೃಷ್ಣೆಯ ವರ್ಣನದಿಂದಾರಂಭವಾದ ಈ ಭಾಗ, ಪಂಡರಿಗೆಯ ವಿಠಲನೂ ತನ್ನ ಪಾದ ಧ್ಯಾನಿಸುವರಿಗೆ ಸಂಸಾರ ಸಾಗರ ಕಟಿಮಾತ್ರವಾಗುವುದೆಂದು ಸೂಚಿಸುವ ನಿಲುವನ್ನು ಇಂತು ಬಣ್ಣಿಸಿದೆ —

ತೀರೇ ಸತ್ಸರಿತಸ್ತಿರಸ್ಕೃತಧನಾಸಕ್ತಿರ್ವಿರಕ್ತಿಪ್ರಿಯಃ
ಪಾದಾಂಭೋಜಯುಗಂ ಮದಂಕಸಹಿತಃ ಸಂಚಿಂತಯಾಂತರ್ಹೃದಿ।
ಪಶ್ಚಾತ್ತ್ವೇ ಕಟಿಮಾತ್ರ ಏವ ಭವಿತಾ ಸಂಸಾರವಾರ್ಧಿರ್ನ ಚೇತ್
ಶಿಕ್ಷಾಮೀತಿ ಹಿ ಲಕ್ಷಯತ್ಯನುದಿನಂ ಸ್ವಾವಸ್ಥಯಾ ವಿಠ್ಠಲಃ ॥ 6 ॥

9ನೆಯ ಶ್ಲೋಕದಲ್ಲಿ ಗೋದಾ ನದಿಯ ಕಥಾ ಮೂಲವಿದೆ: ಗೌತಮಾಶ್ರಮದಲ್ಲಿದ್ದ ಕ್ಷಾಮಪೀಡಿತ ಋಷಿಗಳು ನಿರ್ಗಮಿಸುವಾಗ ಸೃಜಿಸಿದ ಕೃತಕ ಹಸು ನೀರೆರಚಿದ ಮಾತ್ರಕ್ಕೆ ಸತ್ತು, ಗೌತಮರ ತಪಕ್ಕೊಲಿದು ಬಂದ ನದಿ ಕಲಶದಿಂದಾವರ್ತಿತಳಾಗಿ ಗೋವನುಜ್ಜೀವಿಸಿ ಗೋದಾ ಎನಿಸಿದಳು (ಪು.ನಾ.ಚ.194). ಅವಳಲ್ಲಿ ಪ್ರಾರ್ಥಿಸಿದ್ದು — 'ಗೋದೆ ನೀನು ಸದಾ ಪಾಪಹಾರಿಣಿ, ಗುರು ಸಿಂಹ ರಾಶಿಯಲ್ಲಿರುತ್ತ ಪುಣ್ಯಪ್ರದಾಯಿನಿ; ಆದರದನ್ನು ಕೇಳೆ ನಾನು; ನಮಸ್ತೆ ಫಲದೆ, ಕೃಷ್ಣನಡಿಗಳತ್ತ ಭಕ್ತಿ ವಿರಕ್ತಿ ಮುಕ್ತಿಗಳ ಮಾರ್ಗದೋರು. ಮೊದಲು ಧವಳಗಂಗೆ, ಮಧ್ಯಂತರಿಕ್ಷದಲ್ಲಿ ಗಂಗಾದ್ವಾರ, ಭುವಿಯಲ್ಲಿ ಕುಶಾವರ್ತಪದೆ ಎನಿಸಿದ ಗೋದಾ ಸದಾ ಮೋದವಮಾಲ' (10,11). ಕನ್ನಡದ 'ಗೋದೆ ನಮಸ್ತೆ ಫಲದೆ' ಎಂದು ಮೊದಲಾಗುವ ಕೀರ್ತನೆ ಇಂಥದೇ ಶಬ್ದ—ಪ್ರಾಸಗಳ ಸಾಮ್ಯವುಳ್ಳುದು. 'ರುಕ್ಮಿಣೀಶವಿಜಯ'ದಲ್ಲಿ ಗೋಪಿಕೆಯರು ಕೃಷ್ಣಾನ್ವೇಷಣೆಗೈವಾಗ ಯಮುನೆಯನ್ನು ಪ್ರಾರ್ಥಿಸಿಕೊಂಡು 7—35ನೆಯ ಶ್ಲೋಕವೇ ಉತ್ತರ ಪ್ರಬಂಧದ 12ನೆಯ ಶ್ಲೋಕವೆನಿಸಿದೆ, ಹಿಂದಣ ಬಿಡಿ ರಚನೆಗಳಲ್ಲಿ ಪ್ರಬಂಧಿತವೆನ್ನುವಂತೆ —

---

27. ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವಂತಿಕಾ
ಪುರೀ ದ್ವಾರಾವತೀ ಚೈವ ಸಪ್ತೈತಾ ಮೋಕ್ಷದಾಯಕಾ: ॥

ಗಂಗ ಇಲ್ಲ ವಸ್ತುತ: 8 ಎಡೆಗಳಿದ್ದು, ಮಾಯಾ (ಹರಿದ್ವಾರ) ಅವಂತಿಕಾ (ಉಜ್ಜಯಿನಿ) ತೀರ್ಥಪ್ರಬಂಧದಲ್ಲಿಲ್ಲ.

ಗಂಗೇಚ ಯಮುನೇಚೈವ ಗೋದಾವರಿ ಸರಸ್ವತಿ
ನರ್ಮದಾ ಸಿಂಧು ಕಾವೇರೀ ಜಲೇಸ್ಮಿನ್ ಸನ್ನಿಧಿಂ ಕುರು ॥

ಇಲ್ಲಿಯ ಸಿಂಧು ನದಿಯು ವಾದಿರಾಜರಿಂದ ವರ್ಣಿತವಾಗಿಲ್ಲ.

ಕಾಳಿಂದಿ ತ್ವಮುಷಾನಿತ್ಯಾಪಿ ಸತಃ ಕೃತ್ವಾ ಪವಿತ್ರಾತ್ಮನೋ
ಗಂತುಂ ನೈವ ಕದಾಪಿ ಮುಂಚಸಿ ತವಭ್ರಾತುರ್ನಿಕೇತಂ ಪ್ರತಿ।
ಕಿಂತು ಕ್ಷೀರಪಯೋಧಿವಾಸನಿರತಾನ ಪ್ರೀತಾ ಕರೋಷ್ಯಚ್ಯುತಾನ
ಸ್ತ್ರೀಗೇಹೇ ಭರ್ತರಿ ಕಾಮಿನೀಜನರುಚಿಸ್ತ್ವತ್ಸ್ವ ಏವೋಜ್ವಲಂ ॥ 12 ॥

'ಯಮುನೆ ನಿನ್ನ ಬಿಂದ ಸುಜನರ ಪಾಪ ಕಳೆದು ಪವಿತ್ರಗೊಳಿಸುವಿ, ನಿನ್ನಣ್ಣನ(ಯಮ) ಮನೆಗೈದಗೊಡದೆ ಕ್ಷೀರಸಾಗರ (ಶ್ವೇತದ್ವೀಪ)ದಲ್ಲಿರಿಸುವಿ; ಹೆಂಗುಸರು ಪ್ರೀತಿಸುವ ಪತಿಯ ಪಥವನ್ನೇ ಹಿಡಿವರು'; ಗಂಗಾವರ್ಣನದ ಕಲ್ಪನೆಯಲ್ಲಿ ತ್ರಿವೇಣೀ ತೋರಿಗಳೂ ಉಕ್ತ — 'ಸರಸ್ವತಿಯ ಕೆಂಪು ಯಮುನೆಯ ಕಪ್ಪು ಗಂಗೆಯ ಬಿಳುಪು ತ್ರಿವೇಣಿ ಯಲ್ಲಿರಲು ಕಾರಣ ಹರಿಪಾದಮೂಲ. ಆಗಸದಪ್ಸರೆಯರು ಬಿಂದುಲು ಸ್ನಾನದ ಕುಂಕುಮದಿಂದ ಕೆಂಪಾಗಿ, ನಿಶ್ಚಲಕಂದನ ಕುರುಳಕಪ್ಪು ಕೊರಳ ಹಾವುಗಳ ನೀಲವರ್ಣ ಬೆರೆತು, ಸರಸ್ವತಿ—ಯಮುನೆಯರ ಸಂಗ ಗಂಗೆಗೆ ಊಮದಿಂದಲೇ ಒದಗಿದಂತಿದೆ (16)'; ತೀರ್ಥಗಳಂತೆ ಕ್ಷೇತ್ರಗಳನ್ನೂ ನವೀನಾರ್ಥ ನಿರ್ವಾಹಕ ಕಲ್ಪನೆಗಳಿಂದ ವರ್ಣಿಸಿದ್ದಾರೆ ವಾದಿರಾಜರು; ಬದರಿಯ ಸುಂದರ ವರ್ಣನೆ ಇದಕ್ಕೊಂದು ಉದಾಹರಣೆ —

ಅಮರೀ ಭ್ರಮರೀಪುಂಜ ಸುಮರೀಚಿಕಧರಂಚಿತಾ
ಬದರೀ ವದರೀ ಕಿಂ ಕಿಮುಧರೀ ಕುರುತೇ ನ ಸಾ ॥ 40 ॥

'ದೈವೀ ಭ್ರಮರಿಗಳ ಕಿರಣಗಳಿಂದಲಂಕೃತವಾದ ಬದರಿ ತನ್ನ ಬದಿಯುಂದಾವ ಎಡೆಯನ್ನು ತಾನೇ ಕೀಳಾಗಿಸದು?'

ಪೂರ್ವ ಪ್ರಬಂಧ 43 ಶ್ಲೋಕಗಳಿಂದ ಪುರಿ—ತುಂಗಭದ್ರಾ—ಹಂಪೆ—ತಿರುಪತಿ—ಕಾಂಚಿ, ಅರುಣಾಚಲ—ಕುಂಭಕೋಣಗಳನ್ನು ವರ್ಣಿಸಿದೆ. ಗಂಗಾಸ್ನಾನ ತುಂಗಾಪಾನ ಸುಪ್ರಸಿದ್ಧವಲ್ಲವೇ? 'ಗಂಗಾಜನಕ ವರಾಹಮೂರ್ತಿ ಕೋರೆಹಲ್ಲುಗಳಿಂದ ಎತ್ತಿದ ಕಾರಣ ತುಂಗೆಯ ನೀರು ಸಿಹಿ' ಎಂಬ ಕಲ್ಪನೆ ಇಲ್ಲಿದೆ; ಜೊತೆಗೆ ಮಧ್ಯಾಂತ ಪ್ರಾಸಪೂರ್ಣ ವರ್ಣನೆ —

ನ ತೋಷಿಸ್ಯ ತುಂಗಾ ವಿಲಸತ್ತರಂಗಾಂ
ಅಘೌರ್ಘ ಭಂಗಾಂ ಹರಿಪಾದ ಸಂಗಾಂ।
ಪ್ರತೋಷಿಸ್ಯಭದ್ರಾಂ ಹತಪಾಪನಿದ್ರಾಂ
ವಿಮುಕ್ತಿಪದಾಂ ವಿಮಲೈಕಸಾಧ್ಯಾಂ ॥ 4 ॥

ಹಂಪೆಯ ವಿಠಲನನ್ನು[28] ಕುರಿತ ಮಾತಿದು — 'ಯಶೋದೆ ಕಟ್ಟಿಹಾಕಿದ್ದೂ, ಪಾಪಾಪಹಾರಿ ಎನಿಸಿ ಬದ್ಧಬಂಧಿತನಾದದ್ದೂ, ಪುಂಡರೀಕ ಜಾರನೆಂದುದೂ ತಿಳಿಯದಿರಲೆಂದು ವಿಠಲರೂಪದಲ್ಲಿ ಬಂದ ಕೃಷ್ಣ, ನನಗೆ ಮುಕ್ತಿ ಕೊಡದಿದ್ದರೆ ನಿನ್ನ ಗುಟ್ಟು ರಟ್ಟಾಗಿಸುವೆ' (13). ಪಂಪಾ ಸರೋವರದ ವರ್ಣನೆ ಚಮತ್ಕಾರಪೂರ್ಣ —

ಪಂಪಾ ಸಂಪತ್ಕರೀ ಸೇಯಂ ಕಿಂ ಪಾಪಂ ನ ಹರೇತ್ ನೃಣಾಂ
ಯಾ ಅಧೋಮುಖೀ ಕರೋತ್ಯೇತನ್ನಾಮೋಚ್ಚಾರಣಮಾತ್ರತಃ ॥ 15 ॥

"ಪಂಪಾ ಎಂಬ ನಾಮೋಚ್ಚಾರವೇ 'ಪಾಪಂ' ಎಂಬುದರ ತಲೆಕೆಳಗಾಗಿಸುವುದು". ತಿರುಪತಿಯ ಒಡೆಯನೂ ಬಲಗೈಯಿಂದ ಪಾದದೋರುತ್ತ ತದ್ಭಕ್ತರಿಗೆ ಭವಸಾಗರ ಕಟಿಪ್ರಮಾಣವೆಂದರುಹಲು ಎಡಗೈ ಕಟಿಯಲ್ಲಿರಿಸಿಕೊಂಡಿರುವ —

ಯೋ ಶಂಖ ಚಕ್ರೋಜ್ಜ್ವಲ ಬಾಹುಯುಗ್ಮಃ
ಸ್ವಾಂಘ್ರಿಂ ಭಜಂತೇ ಭವಸಿಂಧುರೇಷಾಂ।
ಕಟಿಪ್ರಮಾಣಸ್ತ್ವಿತಿ ವೆಂಕಟೇಶಃ
ಸ್ಪಷ್ಟೀಕರೋತ್ಯಾತ್ಮಕರಾಂಬುಜಾತೈಃ ॥ 21 ॥

ಇದು ಉತ್ತರ ಪ್ರಬಂಧದ ವಿಠಲನ ಚಿತ್ರದಂತೆಯೇ ಇದೆಯಲ್ಲವೇ?

ದಕ್ಷಿಣ ಪ್ರಬಂಧದಲ್ಲಿ ಶ್ರೀರಂಗ—ರಾಮೇಶ್ವರ, ಧನುಷ್ಕೋಟಿ, ತಾಮ್ರಪರ್ಣಿ, ಕನ್ಯಾಕುಮಾರಿ, ತಿರುವನಂತಪುರಗಳನ್ನು 48 ನುಡಿಗಳಿಂದ ಬಣ್ಣಿಸಿದೆ. ಶ್ರೀರಂಗದ 'ಅನಂತಶಯನ'ನ ವರ್ಣನೆಗೆ ಮಧ್ಯಾಂತಪ್ರಾಸಭರಿತ 'ಭುಜಂಗಪ್ರಯಾತ' ವೃತ್ತವನ್ನು, ಉಚಿತವಾಗಿ ಬಳಸಿದ್ದು —

ನವಾಂಭೋದನೀಲಃ ಸ್ಫುರದ್ಧೇಮ ಚೇಲಃ
ಸ್ಮರದ್ವೃತ್ತಲೋಲಃ ಸುರಶ್ರೇಣಿಪಾಲಃ।

---

28. ಕೃಷ್ಣದೇವರಾಯ ತಂದ ಪಂಢರಿಯ ಮೂರ್ತಿಯು ಹೋಗಿ 1571 ರಲ್ಲಿರಿಸಿದನ್ನ ಪ್ರತಿಮೆಯನ್ನಿಲ್ಲಿ ವರ್ಣಿಸಿರಬಹುದೆಂಬ ಬರೆಯುವರ (ವಿಜಯನಗರ ಷಷ್ಠ ಸಾಂವತ್ಸರಿಕ, ಪು.194ರ) ಊಹೆಗೆ ಆಧಾರವಿಲ್ಲ; ಮೊದಲ ಮೂಲ ಮೂರ್ತಿಯೇ ಇಲ್ಲಿ ವರ್ಣಿತ, ಶ್ಲೋಕಗಳು ಬಿಡಿ ರಚನೆಯಾಗಿ.

ಶ್ರಿಯೋ ರಂಗಧಾಮಾನ್ಯೋಯಂ ಪುಣ್ಯನಾಮಾ
ಮಹೇಶ್ವರಸ್ಯೇಮಾ ಗುಣಸ್ತೋಮ ಭೂಮಾ ॥ 6 ॥

ರಾಮೇಶ್ವರನನ್ನು ಬಣ್ಣಿಸುತ್ತ 'ಬ್ರಹ್ಮಹತ್ಯಾನಿವಾರಣೆಗೆ ರಾಮ ಲಿಂಗ ಸ್ಥಾಪಿಸಿದ್ದು ಲೋಕಶಿಕ್ಷಾರ್ಥವಷ್ಟೇ! ಪ್ರಳಯದಲ್ಲಿ ಎಲ್ಲರ ಸಂಹರಿಸುವಾಗ ಯಾವ ಶಿವನನರ್ಚಿಸುವ? ಅಹಲ್ಯೋದ್ಧಾರಿ—ಮುಕ್ತಿಪ್ರದನ ಲೀಲೆ ಅದು. ರಾಮಧ್ಯಾನ—ಬ್ರಹ್ಮಮಂತ್ರವುಳ್ಳ ರುದ್ರನ ಪೂಜೆ ಆವಗೇಕೆ? ಬ್ರಹ್ಮ ಶಿರ ಕಡಿದು ಕಪಾಲಹಸ್ತನಾದ ರುದ್ರ ಅನ್ಯರ ಬ್ರಹ್ಮಹತ್ಯೆ ನಿವಾರಿಸುವನೇ? ಸೇತುದರ್ಶನವೂ ಬ್ರಹ್ಮಹತ್ಯಾನಿವಾರಕವಾದರೆ ರಾಮಗೆಲ್ಲಿ ಪಾಪಲೇಪ?' ಎಂದಿರುವುದಕ್ಕೆ 'ಹರಿಸರ್ವೋತ್ತಮಸಾರ'ದಲ್ಲೂ ಸಂವಾದಿ ನುಡಿಗಳಿಗೆ (2—5). ತಾಮ್ರಪರ್ಣಿ ವರ್ಣನೆ ಶ್ಲೇಷಯುಕ್ತ —

ತಾಮ್ರಪರ್ಣೀ ಸರಿತ್ತೋಯಂ ಸೇವನೀಯಂ ಮುಮುಕ್ಷುಭಿಃ
ಮುಕ್ತೀಕರೋತಿ ಯತ್ರಾಪ್ಯ ಶುಕ್ತಿಷು ಪತಿತಂ ಜಲಂ ॥

ನೀರಹನಿಯನ್ನೂ ಮೌಕ್ತಿಕವಾಗಿಸುವ ನದಿಯನ್ನೆಲ್ಲ ಮುಕ್ತಿಗಾಮಿಗಳೂ ಸೇವಿಸಬೇಕು.

ಹೀಗೆ ರಮ್ಯಕಲ್ಪನೆಯುಳ್ಳ ವಾದಿರಾಜರ ಕಾವ್ಯ ಕಾಳಿದಾಸನ ಕೃತಿಗಳನ್ನು ನೆನಪಿಗೆ ತಾರದಿರದು. Kalidasas flights of imagination moved and soared high in the poetic sky. Vadiraja is also an equally gifted poet and his imaginative mind takes us from one poetic imagery to another. (Thus sang Vadiraja, 29). ಮಾತ್ರವಲ್ಲ, ಮಾನುಷ್ಯ ಮಾತ್ರರಲ್ಲಿ ಮಹಾಕವಿ ಎನಿಸಿದ ಕಾಳಿದಾಸನನ್ನೂ ಮೀರಿಸುವ ರೀತಿ ಈ ದೇವಕವಿಗಳಲ್ಲಿ ಕೆಲವೆಡೆಯುಂಟಿದೆ. ರಘುವಂಶದಲ್ಲಿ 'ಮರಗಳನ್ನು ಸಮೂಲ ಉರುಳಿಸಬಲ್ಲ ವಾಯುವಿನ ವೇಗ ಬಂಡೆ—ಬೆಟ್ಟಗಳಲ್ಲಿ ಪ್ರಭಾವಿ ಎನಿಸದು' ಎಂಬ ನುಡಿಯಿದೆ (2ನೆಯ ಸರ್ಗ). ಭಾವಿ ಸಮೀರರು ರಾಮಸೇತುವನ್ನು ವರ್ಣಿಸುತ್ತ ಇದಕ್ಕುತ್ತರಿಸಿದ್ದು —

ನ ಮಾರ್ಷ್ಟಿ ಶಿರೋಽದ್ರಿಣಾಂ ಯೋ ಪವನವೇಗ ಇತ್ಯಜ್ಞವಾಕ
ಯತೋ ಹನುಮತಾಹೃತಾಃ ಸುಬಹವೋ ಮರುತ್ಸೂನುನಾ ।
ಗಭೀರತರವಾರಿಧಿದೃಢನಿಬಂಧವಃ ಪರ್ವತಾಃ
ಜಯಂತಿ ಕೃತಸೇತವಃ ಕ್ಷಪಣಹೇತವೋ ರಕ್ಷಸಾಂ ॥

ಬಂಡೆಯು ಬೆಟ್ಟದಲ್ಲಿ ವಾಯುವೇಗ ಪ್ರಭಾವಿಯಾಗಬೆಂಬುದು ಅಜ್ಜನ ನುಡಿ. ವಾಯುವಿರಾ, ಅವನ ಮಗ (ಹನುಮ) ಹೊತ್ತು ತಂದ ಬೆಟ್ಟಗಳು ಸಮುದ್ರದಾಳವನ್ನೇ ಮುಚ್ಚಿ ಸೇತು ವಾಗಿ ರಕ್ಕಸನಾಶಕ್ಕೆ ಕಾರಣವಾದುವು. (ಇನ್ನು ವಾಯು ಬಂಡೆ ಜರುಗಿಸನೇ?)

ತೀರ್ಥಪ್ರಬಂಧ 'ಹರಿಕ್ಷೀರಾಂಬುಧೇ:' ಎಂದಾರಂಭವಾಗಿ 'ಉದಾಂಮಧ್ವಾಮ ಶ್ರೀಯ:' ಎಂದು ಮುಗಿದಿದೆ; ಆದ್ಯಂತಾಕ್ಷರ 'ಹಯ:' ವಾದಿರಾಜರ ಆರಾಧ್ಯದೈವ, ಆದ್ಯಂತ ಶಬ್ದ 'ಹರಿ—ಶ್ರಿಯ:' ಜಗದ ತಾಯ್ತಂದೆಗಳನ್ನು ಧ್ವನಿಸುವಂಥವು. ಈ ವಿಶಿಷ್ಟ ಕೃತಿ ವಾದಿರಾಜ ಶಿಷ್ಯ ನಾರಾಯಣಾಚಾರ್ಯರ ವ್ಯಾಖ್ಯಾನದೊಡನೆ ಹಿಂದೆ ಬೆಳಗಾವಿಯಿಂದ ಬಂದಿದ್ದು, ಈಚೆಗೆ ಭೀಮಭಟ್ಟರ ಕನ್ನಡಾನುವಾದದೊಡನೆ ಪ್ರಕಟವಾಗಿದೆ.

ಸ್ವಾಪ್ನ ಕೃತಿ

26. ವೃಂದಾವನಾಖ್ಯಾನ: ವಾದಿರಾಜರನ್ನು ಸೇವಿಸಿಕೊಂಡಿದ್ದ ಏಡವುರಾಕ ಬ್ರಾಹ್ಮಣ ಲಕ್ಷ್ಮೀಪತಿಯು ಗುರುಗಳ ಹಾಗೂ ತಮ್ಮ ಸ್ವರೂಪ ಅರಿಯಲೆಳಸಿ ಸನ್ನಿಯಿಂದ ಕೇಳಿಕೊಂಡರೂ, ಆಶ್ವಾಸಿಸಿದ ಗುರುಗಳು ವೃಂದಾವನಸ್ಥರಾದರು. ನಂತರ ವೇದವೇದ್ಯ ವೇದನಿಧಿಗಳನ್ನೂ ಸೇವಿಸಿಕೊಂಡಿದ್ದ ಅವರಿಗೆ 1630ರ ಸುಮಾರು ಸ್ವಪ್ನದಲ್ಲಿ ಕಾಣಿಸಿ ವಾದಿರಾಜರು ಕೆಲ ಶ್ಲೋಕ ಹೇಳತೊಡಗಿದರು; ಬೆಳಗ್ಗೆ ಬಾಯಿ ಕಟ್ಟಿ ವೇದನಿಧಿಗೆ ಹೇಳಿಸಿದರು; ವೇದನಿಧಿಗಳು ರಾಮಚಂದ್ರಾಚಾರ್ಯರಿಂದ ಬರೆಯಿಸಿದರು.[29] ಹೀಗೆ 12 ವರ್ಷಗಳಲ್ಲಿ 22 ಅಧ್ಯಾಯ (21 ಸಾವಿರ ಶ್ಲೋಕ)ಗಳ 'ಸ್ವಾಪ್ನವೃಂದಾವನಾಖ್ಯಾನ' ಸಿದ್ಧವಾಯಿತು. ಅದರಲ್ಲಿ ಹೇಳಿದಂತೆ 1640ರ ಸುಮಾರು ಧ್ವಜಸ್ತಂಭ—ಅಣು ವೃಂದಾವನಾಖ್ಯಾನ ಶಿಲಾಶಾಸನಗಳಾದುವು. ಅದರ ಸ್ವಪ್ನಾಖ್ಯಾನದ ಪುನರುಕ್ತಿ — ಗೂಢ ಶ್ಲೋಕ ಅರ್ಥವಾಗುತ್ತಿರಲಿಲ್ಲ. 1776ರಲ್ಲಿ ಲಕ್ಷ್ಮೀಪತಿಗೆ ಪುನರ್ಜನ್ಮವಾಯಿತು. ಅವರೇ ವಿಶ್ವಪ್ರಿಯತೀರ್ಥ ಎನಿಸಿ 1794ರಲ್ಲಿ ಸೋದೆಯ ಸಂಸ್ಥಾನ ವಹಿಸಿಕೊಂಡು, ವೃಂದಾವನಸ್ಥ ಗುರುಗಳನ್ನು ಸೇವಿಸಿ ಹೊರಡಲಪ್ಪಣೆ ಕೇಳಲು ಮಂತ್ರಾಕ್ಷತೆಯಾಗಿ ಜಾತಿ ಸ್ಮರಣೆ ಒದಗಿತು;

---

29. ವಾ.ಗು.ಚ.7,17–22; 6,56 ಹಾಗೂ 8,20–22ರಲ್ಲಿ ಆಖ್ಯಾನ ಶ್ಲೋಕ ಸಹ ಉದ್ಧೃತ.

ಆಖ್ಯಾನೋಕ್ತವಾದಂತೆ ಅವರೇ ವೃಂದಾವನಾಚಾರ್ಯರೆನಿಸಿ, ನಂತರ ಆಖ್ಯಾನದ ಇತರ ವ್ಯಕ್ತಿ ಪ್ರಕರಣ ವಿಂಗಡಿಸಿ ಸರ್ವಾರ್ಥ ನಿರೂಪಿಸಿದರು. ಭೀಮನಕಟ್ಟೆಯ ರಘುಪ್ರವೀರತೀರ್ಥರು ಅದಕ್ಕೆ 'ಕಾವ್ಯಮಾಣಿಕ್ಯ ಬೋಧಿನಿ'ಯನ್ನೂ (1834) ಮುಷ್ಣಾಚಾರ್ಯರು ಇನ್ನೊಂದು ವ್ಯಾಖ್ಯಾನವನ್ನೂ[30] (1860) ರಚಿಸಿದರು. ಮೂಲಗ್ರಂಥ ಶ್ರೀನಿವಾಸಾಚಾರ್ಯ ವಾದಿರಾಜಾಚಾರ್ಯ ಜಮಖಂಡಿಯವರಿಂದ ಬೆಳಗಾವಿಯಲ್ಲಿ ಪ್ರಕಟವಾಯಿತು (1925). ಎಂ. ಗೋವಿಂದರಾಯರ ಕನ್ನಡ ತಾತ್ಪರ್ಯ ಸಹ ಬಂದಿದೆ (1971). ವೃಂದಾವನಾಚಾರ್ಯರ ತುಳು ಪ್ರತಿ ಸಹ 4 ಹಸ್ತಪ್ರತಿಗಳಿಂದಶೋಧಿಸಿದ ಪ್ರತಿ ನೀಡಿದ ಎಚ್. ಸುಬ್ಬರಾಯರೇ ಪ್ರತ್ಯೇಕ ಕೈಪಿಡಿಯನ್ನೂ ಕನ್ನಡದಲ್ಲಿ ನೀಡಿದ್ದಾರೆ (1980).

ವಾದಿರಾಜರ ಋಜುಸ್ವರೂಪ–ವೃಂದಾವನಾಚಾರ್ಯರ ಇಂದ್ರಸ್ವರೂಪಗಳ ಜೊತೆಗೆ ಆಖ್ಯಾನವು ಮೋಕ್ಷಶಾಸ್ತ್ರ ಪ್ರತಿಪಾದಿಸುವ ಕೃತಿ. ಇದರ ಮೊದಲ 4 ಅಧ್ಯಾಯ ಹರಿ–ಗುರು ಭಜನೆಯೊರೆವ ಭಜನಪರ್ವ, ನಂತರದ 7 ವೈಭವ ಬಣ್ಣಿಸುವ ವೈಭವಪರ್ವ, ಕೊನೆಯ 11 ಭವಿಷ್ಯ ನಿದರ್ಶಿಸುವ ನಿದರ್ಶನಪರ್ವ. ಆರಂಭದ ಸ್ತುತಿ –

ಹಯಗ್ರೀವಂ ಚಿದಾನಂದ ವಿಗ್ರಹಂ ಸದನುಗ್ರಹಂ
ದಶಗ್ರೀವಜಿತಂ ಶಾಪಾನ್ನಗ್ರೀವ ವಿಮೋಚನಂ ॥ 1 ॥

ವೃಂದಾವನ ಮಹಿಮೆ – ಲಕ್ಷ್ಮೀಸಹಿತ ಹರಿಸ್ತೋತ್ರಗಳಲ್ಲಿ ವಾದಿರಾಜೀಯ ಶೈಲಿಯಲ್ಲಿದೆ –

ಕ್ಷೇತ್ರಾಣಾಮುತ್ತಮಂ ಕ್ಷೇತ್ರಂ ಮಮ ವೃಂದಾವನಂ ದ್ವಿಜ ॥ 16 ॥
ಲಕ್ಷ್ಮೀಂ ಲಕ್ಷಣ ಸಂಪನ್ನಾಂ ಲಕ್ಷ್ಮಣಾಗ್ರಜ ಕಾಂಕ್ಷಿಣೀಂ
ಲಕ್ಷಯಾಮಿ ಕ್ಷಣಂ ಲಕ್ಷ ವಿಶ್ವದಾತ್ರೀಂ ಕಟಾಕ್ಷತಃ ॥ 60 ॥

2ನೆಯ ಅಧ್ಯಾಯದಲ್ಲಿ ಇಂದ್ರಾದಿಗಳೂ ವೃಂದಾವನಕ್ಕೆ ಹರಿಯನಾರಾಧಿಸುವರೆಂದು, ವಿಶ್ವಪ್ರಿಯರು ನಡೆಸುವ ಉತ್ಸವ ವರ್ಣಿಸಿದ್ದಾರೆ (20, 31, 32). 'ನೀವು ಬರೆಸದುಳಿದ ಶ್ಲೋಕಗಳನ್ನು ದೇವತೆಗಳು ಅಪಹರಿಸುವ ಪ್ರಮಾದಕ್ಕೆ ವೇದವೇದ್ಯರನ್ನು ಸ್ಮರಿಸಿ – ಇಂದ್ರಪದಾರ್ಹರು ಈ ಸೇವೆಯಿಂದ ಕೃತಾರ್ಥರಾಗಿ' ಎಂದಿದ್ದಾರೆ.

---

30. ಮುಷ್ಣಾಚಾರ್ಯರದು 17 ಅಧ್ಯಾಯ ಮಾತ್ರ, ಮಿಕ್ಕುದು ಈಚೆಗೆ ಟೀಕೆಯಾಗಿ ಶ್ರೀನಿವಾಸಾಚಾರ್ಯರಿಂದಾಗಿದೆ.

3ನೆಯ ಅಧ್ಯಾಯದಲ್ಲಿ ತನ್ನ ನಮನ ಮಂತ್ರ ನೀಡುತ್ತ ನನ್ನನ್ನು ಋಜು ಎಂದರಿತವನು ಮುಕ್ತನೆಂದು ಸಾರಿದ್ದಾರೆ —

ಯೋ ಮಾಂ ದೇವಂ ವಿಜಾನಾತಿ ಋಜುಸ್ಥಂ ಪುಣ್ಯಕೃನ್ನರಃ
ನ ಯಾತಿ ನಿಲಯಂ ಪುಣ್ಯಂ ಯಾದ್ಗತ್ವಾ ನ ನಿವರ್ತತೇ ॥ 7 ॥

ಇದು ಶಾಸನಸ್ಥವಾಗಿದೆ ವೇದನಿಧಿಗಳಿಗಾದೇಶವಾಗಿ (13). 22ರಲ್ಲಿ ತನ್ನ ಗುಣಗಳನ್ನರುಹಿ, ಕೈಲಾಸದ ನೃತ್ಯ ನೋಡಿದವರಲ್ಲಿ ಕಾಮವಿಕಾರ ಹೊಂದಿದರು, ತನ್ನ ವಿನಾ ಎಂದಿದ್ದಾರೆ (35); ಹರಿ ಪ್ರಸಾದದಿಂದಮರ ರಾಜರಾಗಲು ದ್ವಿಜರನ್ನು ಹರಸಿದ್ದಾರೆ (60). ತನ್ನ ಅಷ್ಟಸಿದ್ಧಿ ಸೂಚಿಸಿ, ವಿಪ್ರಪ್ರಾಣಾವಧಿಯನಕ ಆಖ್ಯಾನವೆಂದಿದ್ದಾರೆ (62–71, 82) — ವ್ಯಾಸಭಕ್ತ[31] ಲಕ್ಷ್ಮೀಪತಿಗೆ; ಅಲ್ಲದೆ ವಿಪ್ರ ಮೊದಲೇ ತನ್ನಭಿಲಾಷೆ ತಿಳಿಸಿದ್ದನ್ನರುಹಿ, ಆ ಏಡಮೂಕರು ಆಖ್ಯಾನೇತರ ಶ್ಲೋಕ ಉಚ್ಚರಿಸಲಾರದ ಕಾರಣ ಕೃತಿಯ ಸ್ವಕರ್ತೃತ್ವ ದೃಢಪಡಿಸಿದ್ದಾರೆ (85, 101–2).

ಅಧ್ಯಾಯ 4ರಲ್ಲಿ ವಾದಿರಾಜಭಟ್ಟರನ್ನು ಕುರಿತು ಮೇರು ಪರ್ವತದಲ್ಲಿ ಹರಿ ತನ್ನನ್ನು ಮಗನೆಂದು ಲಕ್ಷ್ಮಿಗೊಪ್ಪಿಸಿದ್ದನ್ನೊರೆದು,[32] ವಿಪ್ರರನ್ನು ವೃಂದಾವನಾಚಾರ್ಯ ಎಂದು ಕರೆಯಹೇಳಿದ್ದಾರೆ (14, 18). ವಿಪ್ರರಿಗೆ 'ನೀವು ಇಂದ್ರಪದವಿ ಪಡೆದಂತೆ ಕಾಣುತ್ತಿದ್ದೇನೆ. ನನ್ನ ದೇವಲೋಕ ವೈಭವ ಹೇಳಲು 100 ವರ್ಷ ಸಾಲದು. ಬ್ರಹ್ಮ ವಾಯುಗಳ ಬಲ–ಎಡಭುಜ ಹಿಡಿದು ಹರಿತತ್ತ್ವ ಸಂಪಾದಿಸುವೆ. ಹರಿಯ ಕರಸ್ಪರ್ಶ ರೋಮಾಂಚಿತನಾಗಿ ನಿನ್ನೆ ಆಖ್ಯಾನ ಹೇಳಲಿಲ್ಲ' ಎಂದಿದ್ದಾರೆ (23, 46, 48, 49, 51). ವ್ಯಾಸ ಭಕ್ತರನ್ನುದ್ದೇಶಿಸಿ "ಇದಕ್ಕೆ ವ್ಯಾಖ್ಯಾನ ರಚಿಸಿ ಬದರಿಯಲ್ಲಿ ವೇದವ್ಯಾಸರು ನನಗೊಂದು ದಿವ್ಯ ಮಾಲೆಯಿತ್ತು 'ಭಾರತಾರ್ಥ ಹೇಳಿ ವ್ಯಾಸ ಪ್ರತೀಕ ತಂದು ಯುಕ್ತಿ ಮಲ್ಲಿಕೆಗಳಿಂದರ್ಚಿಸಿದ್ದಕ್ಕೆ ಮೆಚ್ಚಿದೆ; ಈ ಮಾಲೆ ಹಸಿವು ತೃಷೆ ಕಳೆದು ಮುಕ್ತಿ ಕೊಡುವುದು' ಎಂದು ಮೈದಡವಿ, ಮಾರುತಿಯಂತೆ ಮಾರುತಿಯಾಗುವ ನೀನೂ ಭಾರತವನ್ನು ನಿತ್ಯ ಕೀರ್ತಿಸೆಂದರು, ಭೀಮನ ಕತೆ ಹೇಳಿದರು. ಪೂರ್ಣಪ್ರಜ್ಞರೂ ನನ್ನ ನೋಡಿ ಹರ್ಷಿಸಿದರು.

---

31. ಇವರೇ ವ್ಯಾಖ್ಯಾನ ಕರ್ತೃ ಮುಷ್ಣಾಚಾರ್ಯರು.

32. ಲಕ್ಷ್ಮೀಕಾಂತನ ಕಂದ (ಲಕ್ಷ್ಮೀ ಶೋಭಾನೆ, 109).

ನನ್ನ ಮಹಿಮೆ ನಿರೂಪಿಸುವ ವಿಪ್ರರಿಗೆ ಪಲ್ಲಕ್ಕಿಯ ಮೆರವಣಿಗೆ ಒದಗಲೆಂದರು ವೇದವ್ಯಾಸರು" ಎಂದಿದ್ದಾರೆ (55,57,63—66, 69,74,81,84,90). ಹೀಗೆ ಸ್ತೋತ್ರ—ಉತ್ಸವ—ಮಂತ್ರ—ದೇವದರ್ಶನ ಭಜನಪರ್ವದಲ್ಲಿ ಬಂದಿವೆ.

ವೈಭವಪರ್ವ ಆರಂಭಿಸಿದ 5ನೆಯ ಅಧ್ಯಾಯದಲ್ಲಿ 'ವಿಪ್ರೋಕ್ತವಲ್ಲ ತಮ್ಮದು — ತಾವೇ ಅವರ ಅಂತರ್ಯಾಮಿ — ದಶಾವತಾರಿಗಳ ದಾಸ—[33] ವಿಪ್ರಕರ್ಣಸ್ಥ ಕಾಪಾಡಿ ಸನ್ನಿಧಿ ಬದಲಿಸಿದ್ದು ಕೃತಕ ವ್ಯಾಖ್ಯಾನ ಪ್ರತೀಕ ಮೂಲ ಪ್ರತೀಕ ಸ್ಥಳಾಂತರದ ಸಂಕೇತ — ವಿಪ್ರೋಕ್ತ್ಯುಚಿತ ಕೃತಿ ತಮ್ಮದು' ಎಂದರುಹಿ (13,17—24, 32—78,40—41,67) ಶೇಷಾಚಾರ್ಯರು ನೀಡುವ ಅನ್ವಯವನ್ನು ತಾವು ವಿಪ್ರಮುಖೇನ ಸ್ವೀಕರಿಸುವೆವೆಂದಿದ್ದಾರೆ (68,81,82).

ಮುಂದಣಧ್ಯಾಯದಲ್ಲೂ 'ವಿಪ್ರರ ಸ್ವಾಪ್ನಗ್ರಹಣ ವೀಕ್ಷಿಸಿ — ನನ್ನ ರೂಪಕ್ಕೆ ಯಮನೂ ಚಕಿತನಾದ — ರಾಮ ನನ್ನನ್ನು ಸನಿಹದ ಭೃತ್ಯನಾಗೆಂದ — ವೃಂದಾವನ ವೇದನಿಧಿ ವಿಪ್ರರಲ್ಲಿ ನನ್ನ ಸನ್ನಿಧಾನ' (12,16,21,45) ಎಂದುಸುರಿ, ವಿಪ್ರರಿಗೆನ್ನುತ್ತಾರೆ 'ವೇದನಿಧಿ ಸೀತಾಪತಿ ವ್ಯಾಖ್ಯಾನ ಶೇಷರಿಗೆ ನಿನ್ನಲ್ಲಿ ವಿಶ್ವಾಸವಿರಲು ಸ್ವರ್ಗಲಾಭ' (54). ವೇದನಿಧಿಗಳಿಗೆ 'ನಿಮ್ಮ ಶಾಸ್ತ್ರಪ್ರಣೀತನಾಗುವೆ — ವಿಶ್ವಾಸದಿಂದ ಭಜಿಸಿ ಆಯುಷ್ಯವಂತರಾಗಿ — ಭಾರತೀಪತಿಯಂತೆ ನಾನು ಗೈದ ಕಾರ್ಯ ಕೊಂಡಾಡಿ ಕುಬೇರಾದಿಗಳೂ ತತ್ವ ತಿಳಿದರು' ಎಂದು ನುಡಿದಿರುವರು (73,94).

7ನೆಯ ಅಧ್ಯಾಯ ವೇದನಿಧಿ ಪ್ರಕರಣ. 'ಹಯಗ್ರೀವೋಪದಿಷ್ಟ ಶ್ರುತ್ಯರ್ಥಗಳನ್ನೊರೆವ ಆಖ್ಯಾನವನ್ನು ಸಹಸ್ರದಲಕಮಲದಂತಾಖ್ಯಾಯಿಸಿ ತಲೆಗಿರಿಸಿಕೊಂಡ ಸ್ವಾಮಿ. ಇಂಥ ಆಖ್ಯಾನ ಕೃತ್ರಿಮವೇ? ಇದರ ರಹಸ್ಯ ಲೋಕ ಜನಯೋಗ್ಯವಲ್ಲದ ಕಾರಣ ದೇವತಾಪಹೃತ. ವಿಪ್ರರಲ್ಲಿದ್ದುದು ಹೇಳಿದ್ದು ನಿಸ್ಸಂಗತ್ವದಿಂದ ನಿರ್ದೋಷವಾದರೂ

---

33. ಇತರ ಕೃತಿಗಳಲ್ಲಿ ಮುಖ್ಯವಾಗಿ ಬಂದ ದಶಾವತಾರ ನಿರೂಪಣೆ ಸ್ವಪ್ನಾಖ್ಯಾನದಲ್ಲೂ ಬಂದಿರುವುದು ಗಮನಾರ್ಹ ಅಂಶ (5,32—38).

ಲೋಕಶಿಕ್ಷಾರ್ಥ ನಿತ್ಯ ಬೆಳಗ್ಗೆ ಧವಳಗಂಗೆಯಲ್ಲಿ ಮಿಂದು ಮೂಲರೂಪ ನೋಡುವೆ. ಚಂದ್ರಮಂಡಲದಲ್ಲಿ ನನಗಮೃತ ಕುಡಿಸಿ ದಿವ್ಯಜ್ಞಾನವಿತ್ತ[34] ಧನ್ವಂತರಿ ನನಗೆ ಪೂರ್ವ ಭವದಲ್ಲಿ ವೈದ್ಯನಿತ್ತ ಅದಿವಾಹ ಶಾಪದ ರೋಗ ಈ ಜನ್ಮಕ್ಕಾಗುವಂತೆ ಅನುಗ್ರಹಿಸಿ ಕೃಷ್ಣನ ಪ್ರಸಾದ ಒದಗಿಸಿದ ವೈದ್ಯ.[35] ಮಗನು ಮಾಡಬೇಕಾದ (ವಚನಪಾಲನ–ಪಿತೃಕಾರ್ಯ–ಕ್ಷೇತ್ರಪಿಂಡದಾನ) ಕಾರ್ಯಗಳಂತೆ ನೀವು ಆಖ್ಯಾನಾಧ್ಯಾಯ ವಿಂಗಡಿಸಿ, ವಿಪ್ರನನ್ನು ಸ್ವೀಕರಿಸಿ, ಅನುಆಖ್ಯಾನ ಶಾಸನವನ್ನಗೊಳಿಸಿ, ತುಂಗಾ ತೀರದಲ್ಲಿ ತಪಗೈವ ರುದ್ರಾಂಶ ಮುದ್ಗಲ ನಾರಸಿಂಹರನ್ನು[36] ಅನುಗ್ರಹಿಸುವೆ' (8,11,12,18,23–25,32–33,86–87, 108–9,124,127–8).

8ನೆಯ ಅಧ್ಯಾಯದಲ್ಲಿ ವಿಪ್ರರಿಗೆ 'ತುಂಗಾ–ಭದ್ರಾ ತೀರಗಳಲ್ಲಿ 12 ನಿಷ್ಕ ಉತ್ಪನ್ನದ 2 ಭೂಮಿ ದಾನ ಬಂದಿವೆ. ಹೋಮಿಸು ಎಂಬುದಕ್ಕೆ ಹಸು ಎಂದು ಬರೆಸಿರುವಿರಿ – ಅದು ನಿಜವಾಗುವುದು.[37] ಹಿಮವಂತ–ಮೇನಾದೇವಿಯರು ನನಗೆ ರತ್ನಪದಕವಿತ್ತರು. ಮಂದಿರದಲ್ಲೂರ್ವಶಿಯು ನನ್ನ ಸೌಂದರ್ಯಕ್ಕಾನಂದಿಸಿ ಅನಂತ ಭಾವದಂಗಾಂಗದೋರಿದರೂ ನನ್ನ ನಿಸ್ಸಂಗತೆಗಚ್ಚರಿಗೊಂಡು ಭವ ಭವಕಿಂಥ ಪತಿಯನ್ನು ಹಾರೈಸಿದಳು. ವಿಮಲನು ನನ್ನನಾಲಿಂಗಿಸಿಕೊಂಡು ಭವಾಂತರದಲ್ಲಿ ಅವಳಿಷ್ಟದಂತಾಗುವುದೆಂದ. ಅವಳೂ ನನ್ನ ಕಾಮರಾಹಿತ್ಯ–ಆರ್ಜವಗಳನ್ನು ಪ್ರಸಿದ್ಧಿಸಿದಳು[38] (4,6,11,19–25) ಎಂದು, ಲಕ್ಷ್ಮೀಪತಿಗೆ ಹೇಳುತ್ತಾರೆ – 'ನನ್ನ ವಿಮಾನ ದೇವಲೋಕ ಸಂಚಾರಿ. ನಾನು

---

34. ಇಲ್ಲಿಯ 4 ನುಡಿ ಮಧ್ವ ಸಿದ್ಧಾಂತ ಸಂಗ್ರಹಿಸಿವೆ (26–30).

35. ವಾದಿರಾಜರೇ ರುಕ್ಮಿಣೀಪತ್ರವಾಹಕರೆಂಬುದು ಇದರಿಂದ ಸ್ಪಷ್ಟ.

36. ಇವರೇ ಹೊಳೆಹೊನ್ನೂರಲ್ಲಿ ವೃಂದಾವನಸ್ಥರಾದ ಉತ್ತರಾದಿಮಠೀಯ ಸತ್ಯಧರ್ಮತೀರ್ಥರು; ವೃಂದಾವನದೆಡೆ ಬಿದ್ದ ಗಂಗೋದಕದಿಂದ ಲಿಂಗೋದ್ಭವವಾಗಿ ರುದ್ರಾಂಶರು. ಮುದ್ಗಲ ನಾರಸಿಂಹ ಎಂಬುದು ಮುದಗಲ್ ಕುಲದೇವತೆಯ ಹೆಸರು. (ಇವರ ಕಾಲ 1798–1830).

37. ವಿಶ್ವಪ್ರಿಯ ವಿಲಾಸ 218ರಂತೆ ಈ ಅಗ್ನಿಸ್ಪರ್ಶ ನಿಜವಾಗಿದೆ.

38. ಇವಳೇ ಭಾವಿ ಭಾರತಿ ಎಂಬುದಿಲ್ಲಿ ಧ್ವನಿತ.

ಭಾನುಮಂಡಲಸ್ಥ ಹರಿಯ ಆರಾಧಕ. ಹರಿಸರ್ವೋತ್ತಮತ್ವ ನಂಬದ ಸುರರು ಹರಿ ಹರ ಗುರು ಸಾಮ್ಯ ಹೇಳಿ ತಾಮಸರೆನಿಸಿದರು, ನನ್ನ ಜೀವೋತ್ತಮತ್ವ ಕೇಳಿದ ಸಾತ್ವಿಕರು ಗುರ್ವಂತರ್ಯಾಮಿಗೆ ನಮಿಸಿ ವೈಕುಂಠಕ್ಕೈದಿದರು. ನಕ್ಷತ್ರಲೋಕದ ತೇಜವೂ ನನ್ನ ತೇಜದಿಂದ ತಿರಸ್ಕೃತವಾಯಿತು. ತ್ರಿವಿಕ್ರಮಾನುಗ್ರಹದಿಂದ ಸಾಕ್ಷಾತ ಲಕ್ಷ್ಮಿ ನನ್ನ ವಾಗಭಿಮಾನಿ' (45,50–55,59,62). ಪುನಃ ವಿಪ್ರರನ್ನು ಕುರಿತು 'ಏಕಕಾಲಕ್ಕೆ ಅಷ್ಟದಿಕ್ಪಾಲರ ಕರೆಯಂತೆ ಅನಂತಬಹುರೂಪದಿಂದ ಹೋಗಿ ಸತ್ಕೃತನಾದೆ. ಮುಕ್ತಿಪರ್ಯಂತ ಬ್ರಹ್ಮವಾಯು ನನ್ನಲ್ಲಿರುವುದರಿಂದ ಅಧಿಕಾರಿಗಳಲ್ಲಿ ನಾನು ಉತ್ತಮ; ದೇವ ಋಷಿ ಗಂಧರ್ವರಿಗಿದು ಗೊತ್ತು, ಮಾನವ–ದಾನವರರಿಯರು' ಎನ್ನುವರು (92,97–99).

ಅಧ್ಯಾಯಾಂತರದಲ್ಲೂ ಮುಂದುವರಿದು 'ಹನುಮನ ಸೇವೆಗೆ ರಾಮ ತನ್ನನ್ನೇ ಇತ್ತಂತೆ ಹಯಗ್ರೀವ ನನ್ನನಪ್ಪಿದ, ಗರುಡನ ಮೇಲೇರಿಸಿಕೊಂಡು ಪಕ್ಷಿದ್ವೀಪಕ್ಕೆ ತಂದು ಗರುಡನಿಂದ ಅಮೃತ ತರಿಸಿ ಕುಡಿಯಿಸಿದ–ಶೇಷವನ್ನು ಗೋದೋಹನಗೈದ ಕೈಗಳಿಂದ ಕುಡಿಸಿದ, ಅನಂತಾಸನಕ್ಕೆ ತಂದು ಅನಂತಶಯನನಲ್ಲಿ ಐಕ್ಯನಾಗಿ ಸ್ವರೂಪಗಳಲ್ಲಿ ಭೇದವಿಲ್ಲೆಂದು[39] ನಿದರ್ಶಿಸಿದ. ಇಂದ್ರಾದಿಗಳು ನನ್ನನ್ನು ಅಖ್ಯಾನವನ್ನು ಅರ್ಚಿಸಿದರು. ಅರಗಿನ ಮನೆ ಸುಟ್ಟ ವೇದವ್ಯಾಸರತ್ತ ಬಂದ ಭೀಮನಂತೆ, ಮಧ್ವರಂತೆ ನಾನೂ ಯೋಗಬಲದಿಂದ ಹರಿಯನ್ನೈದುವೆನು, ನನ್ನ ಅಸ್ಥಿಗಳೂ ಶಂಖಚಕ್ರಾಂಕಿತವಾಗುತ್ತ' (3,5,12,15,16, 20,25,26–29,33–47) ಎಂದುಸುರಿ, ಲಕ್ಷ್ಮೀಪತಿಗೆ ನುಡಿಯುತ್ತಾರೆ – 'ಹರಿವಾಸರದಂದು ಹಂಸನಲ್ಲಿ ಹೋಗಿ ಬ್ರಹ್ಮನೊಡನೆ ಉತ್ತಮ ಜ್ಞಾನ ಹೊಂದಿದೆ. ಕೃಷ್ಣ ಅರ್ಜುನ ಉದ್ಧವರಿಗೆ ಹೇಳಿದ್ದನ್ನು ನನಗೂ ಹೇಳಿದ. ಆನಂದತೀರ್ಥರೊಡನೆ ಬದರಿಗೈದಿ ವೇದವ್ಯಾಸರ ಕಂಡೆ, [illegible] ದಾತ ಮಧುಭೇದಕ ಹಯಗ್ರೀವಾಯುಧಗಳನ್ನು ನೋಡಿದೆ – ಇದೆಲ್ಲ ದಾಸೋಹಂ ಭಾವದ[40] ಫಲ' (52,55–57,59–64). ಮತ್ತೆ ವಿಪ್ರರಿಗೆಂದುದು – 'ಹೃದಯಾಕಾಶದ ಬಿಂಬರೂಪಿ ಬತ್ತದ ತುದಿಯಾಕಾರದ ಸ್ವರ್ಣಜ್ಯೋತಿಯು

---

39. 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತ್ಯುಕ್ತಿಯಂತೆ.

40. ಸಹಜವಾಗಿ ಇಲ್ಲಿಯ ಭಾಗ ಸೋಹಂ ಖಂಡನಾತ್ಮಕ, ದ್ವೈತದರ್ಶನಾತ್ಮಕ(65–75).

ಮಧ್ವ ಕೋಟಿ ಸೂರ್ಯರಂತೆ ಹೊಳೆಯುತ್ತ ಅತ್ಯಚ್ಛನಾಗಿ ಕೊಳದ ಆಗಸದಂತೆ ಪ್ರತಿಬಿಂಬ ಭಿನ್ನವಾಗಿದ್ದುದನ್ನು ದಾಸರಾಗಿ ಅರಿಯಿರಿ. ನಾನು ಸಂಚಾರಿಯಾಗಿ ವೆಂಕಟಾದ್ರಿ-ರಜತ ಪೀಠ ಸೋದೆಗಳನ್ನು ಸಂದರ್ಶಿಸುತ್ತಿರುವೆ; ನಿಮ್ಮಂಥ ಜ್ಞಾನಿ—ನನ್ನಂಥಯತಿಗಳಿಲ್ಲ' (76—82,90—94,100).

ಮತ್ತೆ ಅಧ್ಯಾಯಾಂತರ ಮುಂದುವರಿಸಿದ್ದು — 'ಭೂತರಾಜರು ಕುಬೇರನಿತ್ತ ಕಿರೀಟ ನನಗೆ ತೊಡಿಸಿದರು. ವೇದವೇದ್ಯರನ್ನೂ ಭಜಿಸಿ. ಶೈಲಜೆ ಪೈಲಋಷಿಗೆ ಕೈಲಾಸದಲ್ಲಿ ದೀಪಾವಳಿಗೈಯಂತು ಹೇಳಿದರೆ (ಶೇಷಾವೇಶದ) ಅವರು ಶ್ರೇಷ್ಠವಾದ ನನ್ನ ವೃಂದಾವನದೆದುರು ಅದನ್ನು ಮಾಡುವೆನೆಂದರು, ಉಳಿದವರೂ ಅನುಸರಿಸಿದರು. ನಿಮಗೊದಗಿರುವ ಅಪಮೃತ್ಯುವನ್ನು ಕಳೆಯುವೆ. ವೇದವ್ಯಾಸ ಹಯಗ್ರೀವರನ್ನು ಒಟ್ಟಿಗೆ ಪೂಜಿಸಿ' (3,6,7—12,21). ಲಕ್ಷ್ಮೀಪತಿಗೆಂದುದು — "ಶಾಲ್ಮಲೀ ದ್ವೀಪದ ಸುಮಾಲಿರಾಜನು ನನ್ನ ನೋಡಿ, 'ರುದ್ರನೋ — ಕಪಾಲವಿಲ್ಲ, ಗರುಡನೋ — ಅರ್ಣವೋತ್ತೀರ್ಣರು, ಶೇಷನೋ — ಸದೋಷರಲ್ಲ, ಇಂದ್ರನೋ — ಸಾಂದ್ರಸಂತೋಷಿ, ಚಂದ್ರನೋ — ಕಲಂಕವಿಲ್ಲ, ಕಾಮನೋ ರಾಮನಂಥ ರೂಪ, ರವಿಯೋ — ರಾಹುಗ್ರಸ್ತರಲ್ಲ, ಋಷಿಯೋ — ಮೃದುಭಾಷಿ, ಕುಬೇರನೋ — (ಹರಿ) ಮಹಾಧನಿಕರು, ವರುಣನೋ — ನಿರ್ವ್ಯಾಜಕರುಣಿ, ಕವಿಯೋ — ಕೋವಿದೇಶ್ವರ, ವಾಗೀಶಕರಜಾತ ವಾದಿರಾಜರೋ — ಹೌದು ವಾದೀಭ ಮೃಗರಾಜರು, ವ್ಯಾಖ್ಯಾದರ್ಶನೂ ನಿಮಗೆಅಗ್ರಪೂಜೆ ಸಲ್ಲಿಸಿದ' ಎಂದ. ಆವನನ್ನನುಗ್ರಹಿಸಿ ವಾನಪ್ರಸ್ಥರಲ್ಲಿಗೈತಂದೆ, ಅವರು ಹರಿ ಬ್ರಹ್ಮನಿಗೆಂದುದನ್ನುಸುರಿದರು — 'ಮಧ್ವಮತ ಉದ್ಧರಿಸಿ ಯುಕ್ತಿಮಾಲಾದಿಗಳಿಂದ ಪ್ರತಿಷ್ಠಾಪಿಸಿದ ಸಿದ್ಧಾಂತದಲ್ಲಿನ ಆಸಕ್ತರು ಮುಕ್ತರಾಗುವರು' (43—50,55—59). ವಿಪ್ರಪ್ರಕರಣ — 'ಕಾಮಧೇನುಂಯಥಾಪೂರ್ವಂ' ಎಂಬ ಶ್ಲೋಕ ವೇದವೇದ್ಯರಿಗೂ ಅನ್ವಯಿಸಿರಿ, ಭಾರತಾರ್ಥ ಹೇಳುವ ಅವರೂ ಪೂಜ್ಯರು. ಅಣುವೃಂದಾವನಾಖ್ಯಾನ ಶಾಸನ ಬರೆಸಿ, ಸುಜನರು ನೋಡಿ ನಲಿಯಲಿ. ಪಂಚವೃಂದಾವನದ ಸೇವೆಗೆ ವರವೀವೆ. ಸೇವೆ ಪೂರ್ಣಕಾಮನಾಗಿ ನನಗೆ ಬೇಕಿಲ್ಲ, ನಿಮ್ಮ ಅನುಗ್ರಹಾರ್ಥ.[41]

---

41. ಕಾಂಚಿಯಲ್ಲಿ ವರದರಾಜನನ್ನಲ್ಲದೆ ಬೇರೆ ಯಾಚಿಸಿದವರಲ್ಲ. (ಪೂರ್ವತೀರ್ಥ ಪ್ರಬಂಧ, 32).

ಇದನ್ನೆಲ್ಲ ಹಯಗ್ರೀವ ಮುನಿ[42]ಗಳಿಗರುಹಿರಿ; ನನ್ನ ನೈವೇದ್ಯದನಕ ನಿರಶನದಿಂದಿರಿ, ಚಾಮರ ಬೀಸಿ, ಭಾರತ ಪಠಿಸಿ; ವೇದವೇದ್ಯರ ಪಾದೋದಕ ನನ್ನದೆಂದೇ ಬಗೆಯಿರಿ' (65–68, 74, 80–86, 88, 106, 110, 111). ವೇದವೇದ್ಯರಿಗೆ 'ಸಿಂಹಶಾರದ ನನ್ನ ಕವಿಯುಕ್ತಿಗಳಿಂದ ಮದಾಂಧಪರವಾದಿ ದಂತಿಗಳನ್ನು ಜಯಿಸಿ' ಎಂದು ಹೇಳಿ, ಅವಿಶ್ವಾಸಿಗಳಿಗೆನ್ನುತ್ತಾರೆ — 'ಕವಿತ್ವ ವಿಪ್ರರಿಗಿರದು, ಅಂತೆಯೇ ನಂಬಿಕೆ ಬರಲು ವಾಗೀಶ್ವರೀ ಕುಮಾನ್ಯ ವಿಪ್ರಮುಖದಿಂದ ವೃಂದಾವನ ವೈಭವ ಹೇಳಿದ್ದೇನೆ' (114, 120, 121, 126). 'ವಿಪ್ರರೇ ಇನ್ನು ಆಖ್ಯಾನ ಕೆಲವೊಮ್ಮೆ ಮಾತ್ರ ಹೇಳುವೆ' (135) ಎಂದು ಶೇಷನಿಗೆ[43] 'ಘೋಷೋತ್ಸವ — ರಥೋತ್ಸವ — ಭೋಜನೋತ್ಸವ — ಅರ್ಘೋತ್ಸವ — ನೇತ್ರೋತ್ಸವ ಈ ಪಂಚೋತ್ಸವಗೈಸು' (136–39) ಎಂದರುಹಿ, ವಿಪ್ರರು ಶೇಷನಿಗಾಖ್ಯಾನ ಹೇಳಬೇಕೆಂದೂ ತಿಳಿಸಿದ್ದಾರೆ (146).

ಅಧ್ಯಾಯ 11ರ ಆದಿಯಲ್ಲಿ ಲಕ್ಷ್ಮೀಪತಿಗೆನ್ನುತ್ತಾರೆ — 'ಸ್ವಾಪ್ನಕೃತಿಯ ಶಬ್ದಕ್ಕಿಂತ ಅರ್ಥ ಮುಖ್ಯ! ವಿಶ್ವಾಧೀಶತೀರ್ಥರಿಗೆ — 'ಸೋದರಳಿಯಂದಿರಾದ ನಾಗಶಯನ (ಕೃಷ್ಣಾಚಾರ್ಯ) — ಹನುಮಂತ — ವಿಠಲರ ಕೈಬಿಡಬೇಡಿ'. ವಿಪ್ರರಿಗೆ — 'ಸೀತಾಪತಿ ವಾಕ್ಯನ ಶೇಷರಿಗೆ ಆಖ್ಯಾನ ಹೇಳಿ! ಶೇಷನಿಗೆ — 'ರಾಜನಿಂದ ರಥೋತ್ಸವಾದಿಗಳನ್ನು ಮಾಡಿಸಿ'. ಸೀತಾಪತಿಗೆ — 'ಚಾಮರಪಾಣಿ ವಿಪ್ರರ ಕೈಬಿಡಬೇಡಿ, ಅವರ ಋಣ ಪರಿಹರಿಸ ಹೇಳಿ ಶೇಷನಿಗೆ.' ವಿಶ್ವಾಧೀಶರಿಗೆ — 'ಮಠಾಧಿಪತ್ಯ ವಿಠಲನಿಗಿತ್ತು, ನಾಗಶಯನನ ಇಷ್ಟ ಪೂರೈಸಿ (ವಿಶ್ವಪ್ರಿಯರಿಗೆ ಹೀಗಾಗಲಿ)! ಅವಿಶ್ವಾಸಿಗಳಿಗೆ — 'ಸ್ವಾಪ್ನಶಬ್ದಗಳ ಭಾವ ಮಾತ್ರ ಗಮ್ಯ. ನನ್ನ ಕೃತಿಯನ್ನು ಶಂಕಿಸುವವರು ತಮ್ಮ ತಂದೆಯ ಬಗೆಗೂ ಶಂಕಿಸಬೇಕು'. ವಿಪ್ರರಿಗೆ — 'ಅಪ್ಪಣ್ಣ ಕೃಷ್ಣಭಟ್ಟ ಗೋವಿಮುಖ ವಾಕ್ಛಲನಾದ್ದರಿಂದ ದೂರವಿರಿಸಿರಿ ಸದ್ಯಕ್ಕೆ. ತ್ರಿವಿಕ್ರಮಾಲಯಧ್ವಜಸ್ತಂಭವನ್ನು ನನ್ನ ಭೀಮ ಭುಜಸ್ತಂಭದಿಂದೆತ್ತಿ ಹಿಡಿದಿದ್ದೇನೆ' —

---

42. ಭೀಮನಕಟ್ಟೆಯ ರಘುಪ್ರವೀರತೀರ್ಥರು.

43. ಕೂಬ್ಬೆಯ ರಾಜಾ ರವಿವರ್ಮನ ಮಂತ್ರಿ ನಾಗರಾಜ.

ಧ್ವಜಸ್ತಂಭೋ ದ್ವಿಜಶ್ರೇಷ್ಠ ಭುಜಸ್ತಂಭೇ ಧೃತೋ ಮಯಾ ॥ 80 ॥
ಕುಂಜರಾಯುತ ಸತ್ತ್ವೋಹಂ ಕಂಜನಾಭಪ್ರಿಯೋ ಹ್ಯಯಾ
ಮಂಜುಮತ್ಪ್ರಾಣಿನಾ ಧರ್ತುಂ ಕಂಜರೋದನ ಸನ್ನಿಧೌ ॥ 81 ॥[44]

ಇದನ್ನೇ ಮುಂದೆ ವೇದನಿಧಿಗಳನ್ನು ಕುರಿತು ಹೇಳುವಲ್ಲೂ ಸಮರ್ಥಿಸಿದ್ದಾರೆ —

ಸ್ತಂಭಪ್ರಪಾತನಾದೀನಿ ತಾನಿ ಪಾರಿತವಾನಹಂ ॥ 93 ॥

(1,10,11,16,20–22,37,38,40,43,46,47,71–75,80,81,93).

ಅಧ್ಯಾಯ 12ರಿಂದ ನಿದರ್ಶನ ಪರ್ವ ಆರಂಭ. 'ವಿಪ್ರರೇ, ನನ್ನ ಅನುಗ್ರಹದಿಂದ ನಿಮಗೆ ಶೇಷನ ಸಹಾಯ, ಪಲ್ಲಕ್ಕಿಯ ಸೇವೆ ಸಿಕ್ಕಿತು' (1,2) ಎಂದು ಭಕ್ತರಿಗೆ ಅವರನ್ನು ವೃಂದಾವನಾಚಾರ್ಯರೆಂದೇ ಕರೆಯಲಾದೇಶಿಸಿದ್ದಾರೆ (3,4). ಯುಕ್ತಿಮಲ್ಲಿಕೆಗೆ ಅನುಜರು ವ್ಯಾಖ್ಯಾನಿಸಿದಂತೆ ಲಕ್ಷ್ಮೀಪತಿಗೆ ಇದನ್ನು ವ್ಯಾಖ್ಯಾನಿಸಹೇಳಿದ್ದಾರೆ (6–10). ಸಾಲಗಾರನಿಂದ ಬಳಲಲ್ಲಿ ನಿಂತ ವಿಪ್ರರನ್ನು ಸೀತಾಪತಿ ಬಿಡಿಸಬೇಕು, ಭೋಜ್ಯ ದ್ರವ್ಯವನ್ನೂ ಒತ್ತೆಯಿಟ್ಟು ಅವರಿಗೆ ಶೇಷನೂ ಸಹಾಯವಾಗಲು, ಶರಣಾಗತ ವಿಪ್ರರಿಗೆ ಇಂದ್ರಪದವಿಯ ಪ್ರಾಪ್ತಿ ಎಂದುಸುರಿದ್ದಾರೆ (15,16,34,44,47). ಸ್ವಪ್ನದಲ್ಲಿ 1–3–5 7–8–9–10–12–15 ಶ್ಲೋಕ ಹೇಳಿ ದೇವಲೋಕಕ್ಕೊಯ್ಯುವ ಕ್ರಮ ನಿರೂಪಿಸಿದ್ದಾರೆ. (83,84).

ಮುಂದಿನ ಅಧ್ಯಾಯದಲ್ಲಿ ಲಕ್ಷ್ಮೀಪತಿ 'ಇತಿಶ್ರೀ'ತ್ಯಾದಿ ಅಧ್ಯಾಯಾಂತ ವಾಕ್ಯ ಸೇರಿಸಲೆಂದು, ವಾದಿರಾಜಭಿಕ್ಷುರಿಗೆ ಆಖ್ಯಾನ ಶ್ರವಣ ಹೇಳಿ, ವಿಪ್ರರು ಒತ್ತೆಯಿಟ್ಟ ಕರ್ಣಾಭರಣವನ್ನು ಪತಿವ್ರತೆಯ ನಿಷ್ಕ್ರಯ ದಾನದಿಂದ ಬಿಡಿಸಿ ತಂದು ಧರಿಸುವವನಿಗೆ ಆಖ್ಯಾನವಿಲ್ಲ ಎಂದಿದ್ದಾರೆ (33,88,93,95).

---

44. ಇಲ್ಲಿಯ ಆದಿ ಮಧ್ಯ ಪ್ರಾಸಗಳು ವಾದಿರಾಜೀಯ ಶೈಲಿಗೆ ಸಹಜವಾಗಿವೆ. ಈ ಸ್ವಪ್ನೋಕ್ತಿ 1640ರ ವಾಸ್ತವಿಕ ಘಟನೆಗೆ ಸ್ವಪ್ನೋಕ್ತಿಯಾಗಿಯೂ ಆಗಿವೆ. ಕುಂಜರಾಯುತಸತ್ವ = 10 ಸಾವಿರ ಆನೆಯ ಬಲ (ಭೀಮನದು).

14ನೆಯ ಅಧ್ಯಾಯ ವಿಜಯಾಚಾರ್ಯ (ವಿಶ್ವೇಶತೀರ್ಥ)ರು ವಿಪ್ರರಿಗೆ ಅನುಕೂಲರಿನರೆಂದು, ಲಕ್ಷ್ಮೀಪತಿ 100 ಶ್ಲೋಕಗಳ ಅಧ್ಯಾಯವುಳ್ಳದೆಂದಿದೆ[45](11,16). ಅವರ ಪ್ರಕರಣಾಂತರ್ಗತವಾಗಿ ವಿಪ್ರರೇ, ನಿಮ್ಮ ಗುರು (ವಿಶ್ವೇಶತೀರ್ಥರು) ಕಾಲವಾಗಿ ಪರಮ ಗುರು (ವಿಶ್ವಾಧೀಶತೀರ್ಥರು) ಕೇಳಿದರೆ ಆಖ್ಯಾನ ವಿಚಾರ ತಿಳಿಸಿ, ತಿಳಿದುಕೊಳ್ಳಿ,ನೋಡಿಸಿ ಎಂದು ಸೂಚಿಸಿ, (ಪೀಠ ತಪ್ಪಿಸಲು) ಪಾಪಿಗಳು ವಿಪ್ರರೇ ಸ್ವಾರ್ಥದಿಂದ ಆಖ್ಯಾನ ಹೇಳಿದರೆಂದು ಅವರನ್ನು ವೃಂದಾವನಾಚಾರ್ಯ ಎನ್ನುವುದಿಲ್ಲ, ಇದಕ್ಕೆಲ್ಲ ಆಖ್ಯಾನೋಕ್ತ ಫಲ ಪ್ರಾಪ್ತಿಯೇ ನಿದರ್ಶನವೆಂದಿದೆ (26–29,40,42,48,85–6).

ಅಧ್ಯಾಯಾನಂತರ ಸೀತಾಪತಿ ಪ್ರಕರಣ — ವಿಪ್ರರಿಗೆ ರಾಜನಿತ್ತ ಭೂದಾನ ಅಪಹರಿಸಿ ಶಿಕ್ಷಿತನಾದವನು ಅದನ್ನು ಮರಳಿಸಿದರೂ ಅವಿಶ್ವಾಸಗೊಂಡು ಕಷ್ಟಕ್ಕೀಡಾಗುವ, ಆವನು ವೃಂದಾವನ ಸೇವಿಸಲು (17,18,36,39) ಅಪುತ್ರಕ ಶೇಷನು ಪೂರ್ವ ಭವದಲ್ಲಿ ಕೂರ್ಮನೆಂಬ ರಾಜನಾಗಿದ್ದು ಸ್ತ್ರೈಣನೆನಿಸಿ ಶಪಿತನಾಗಲು ವಿಪ್ರನ ಕಣ್ಣು ಕೀಳಿಸಿ ಜ್ಞಾನನೇತ್ರವಿಲ್ಲದಾಗಿರುವ, ಆದರೆ (ಭಾವಿ ಅಹಂಕಾರಿಕ ಪ್ರಾಣನಾಗಿ) ಗುರುಗಳನಾರಾಧಿಸಿ ಬ್ರಾಹ್ಮಣನಾಗಿರುವ. ಶೇಷನೂ ರಾಜನೂ ವಿಪ್ರರ ಋಣ ಪರಿಹರಿಸದೆ ಕಷ್ಟಕ್ಕೀಡಾದರು. ಶೇಷ ಹರಿವಾಸರಾದಿ ವ್ರತದಿಂದ ಉದ್ಧಾರವಾಗಲು (42,44–56,58,59,67,69,73–80,95–6).

16ನೆಯ ಅಧ್ಯಾಯ: 'ಶೇಷಾದ್ರಿಪಂಡಿತನಿಗಿಂತ ಜ್ಞಾನವಂತ ಶೇಷ, ವಿಪ್ರನೋರ್ವನಿಂದ ವಿಮಲಮೂರ್ತಿಯನ್ನು ಹೊಂದುವರೆ' (12). 'ವಿಪ್ರರೇ ನಿಮ್ಮ ವಿಸ್ಮೃತಿ ಪರಿಹಾರಕ್ಕೆ ಭುಜಗೇಶ್ವರನನ್ನು ಭಜಿಸಿ, ಪಂಚಪ್ರಾಣಾಸ್ಯಪದಾರ್ಹೋಪದಿಷ್ಟ ಕೃತಿಯಿದು ಪಂಚಲಕ್ಷಣಯುಕ್ತ' (19,24). 'ಶೇಷ, ಕುಮಾರಿಲಭಟ್ಟ ವೇದಪ್ರಾಮಾಣ್ಯ ಒಪ್ಪದೆ ಒಕ್ಕಣ್ಣನಾದಂತೆ, ಕಮಲನಾಭ ಜ್ಞಾನಚಕ್ಷುರಹಿತನಾಗುವ; ತಮ್ಮಣ್ಣನೂ ಕಾಣ ನನ್ನನ್ನು ಪೂರ್ಣತಃ; ಶ್ರೀನಿವಾಸನು ನಿಃಶ್ರೀನಿವಾಸ–ಭ್ರಾಂತಬುದ್ಧಿಯಿಂದೆನ್ನ ಕೃತಿಯನ್ನು ನಂದಿ. ನಿಮ್ಮ ಪತ್ನೀಗರ್ಭದ ಹೆಣ್ಣು ಕೂಸಿನ ಪುಂಸ್ತ್ವಸಿದ್ಧಿಗೆ ನಾನೇ ಪ್ರಾಣದೇವರೊಡನೆ ಆ ದೇಹ

---

45. ಇದು ಪೂರ್ಣವಾಗಿಲ್ಲವೆಂದು ಎಂ.ಆರ್.ಗೋವಿಂದರಾಯರು ತಮ್ಮ ಅನುವಾದಾಂತ್ಯಕೊಂಡು ವಿಭಜನೆ ಸೂಚಿಸಿದ್ದಾರೆ.

ಪ್ರವೇಶಿಸಿ ಜೀವಾಂತರವಿಸಿರಿದೆ. ಅದು ನನ್ನ ಭಜಿಸಿ ಬ್ರಾಹ್ಮಣತ್ವಕ್ಕೆಳಸಿದ ಶೂದ್ರ ಜೀವ' (30–32, 35–6, 40–50). 'ವಿಪ್ರರೇ, ಕೃಷ್ಣಾಚಾರ್ಯಸುತ ಶ್ರೀನಿವಾಸಾಚಾರ್ಯನೂ ಅರಿಯದೆ, ಸ್ವಸ್ಥವಾಗುವ ನಿಮಗೇಕೆ ಜ್ವರ ಎನ್ನುವ; ಭೂಮಿಯಲ್ಲಿದ್ದಾಗ ನಾನೂ ಜ್ವರಗ್ರಸ್ತನಾದೆ. ಗುಣವಾಗುವನಕ ಆಖ್ಯಾನವಿಲ್ಲ. ದೇವತೆಗಳು ಪರೋಕ್ಷಪ್ರಿಯರಾಗಿ ನಾನು ಪರೋಕ್ಷ ಹೇಳುವೆ,[46] ಪ್ರತ್ಯಕ್ಷಪ್ರಿಯ ಮನುಜರು ಕೃತಿ ವಿಪ್ರರದೆಂದು ಶಂಕಿಸುತ್ತಾರೆ' (53, 55, 59, 66, 74). 'ಲಕ್ಷ್ಮೀಪತೀ, ವಾಸುದೇವಮುನಿ ಯಾತ್ರೆಯಿಂದ ಬಂದವನೇ ನಾನು ವೃಂದಾವನಸ್ಥನಾದೆನೆಂದು ತಾನೂ ಪುಣ್ಯಗತಿ ಐದಿದ. ಅವಿಶ್ವಾಸಿಗಳು ನಂಬಿದ ಮಾತ್ರಕ್ಕೆ ನಾನೊರೆದ ವೈಭವ ಸುಳ್ಳಾಗದಲ್ಲ. ಇನ್ನೊರ್ವ ಪಂಡಿತ ಅಪಶಕುನವಾಗಲು ಧವಲಾಸ್ನಾನ–ವೃಂದಾವನದರ್ಶನ ಮಾಡದೆ ಮರಳಿದ್ದು ಜನ ನಗಲು ಮತ್ತೆ ಬಂದು ಸೇವಿಸಿದ' (85–90, 93, 101–11).

ಮುಂದಿನ ಅಧ್ಯಾಯ ಇನ್ನೂ ಕೆಲ ಅವಿಶ್ವಾಸಿಗಳನ್ನುಲ್ಲೇಖಿಸಿದೆ. 'ಶೇಷ, ನಾನೊರೆದ ಶ್ಲೋಕಾರ್ಥ ವಿಪ್ರರಿಗರಿದು, ಶನಿ ಅರ್ಥಜ್ಞಾನಮೋಜನೆ ವಾಕ್ಯಗ್ರೈವನಾಗಿ ಇದು ನನ್ನ ಕೃತಿ–ವಿಪ್ರರದಲ್ಲ. ನನ್ನ ವೃಂದಾವನ ಪ್ರಸಿದ್ಧಿಗಾಗಿಯೇ ಇವರನ್ನು ವೃಂದಾವನಾಚಾರ್ಯ ಎಂದುದು' (4, 5, 17, 18). ವಿಪ್ರರಿಗೆ ಅನ್ನ ಸಿದ್ಧಿಸುವನಕ ಆಖ್ಯಾನವಿಲ್ಲೆಂದು, ಪೂರ್ವ ಭವದಲ್ಲಿ ವಾಸುದೇವ ಮುನಿಯಿಂದಲೂ ಉತ್ತರ ಭವದಲ್ಲಿ ಲಕ್ಷ್ಮೀಪತಿ ಶ್ರೀನಿವಾಸರಿಂದಲೂ ಅನ್ನ ಒದಗಿಸಿದ್ದಾರೆ (21, 24, 25); ರಾಜನ ಅಣ್ಣನಿತ್ತ ಕೇದಾರ ಗ್ರಾಮ (ಭೂ)ದಾನ ಮರಳಿಸಿ ಅನುಜ ಪುಣ್ಯ ಪಡೆಯಲೆಂದು,[47] ವಿಪ್ರರ ಕಂಠಗತ ಪ್ರಾಣ ನಿಲ್ಲಿಸಿದ್ದಾರೆ (43, 49, 53–4). "ವಿಪ್ರರೇ, ಕನಕಾ ಕೃಷ್ಣಭಟ್ಟ–ಹಿರಣ್ಯಭಟ್ಟ 'ಸರಸ ಭಾರತೀ' ನರಸಿಂಹ–ದಾಂಬಲ ಹರಿ(ಸುತ) ನಾರಾಯಣರು ಸುಧಾಕೋವಿದರು, ಆಖ್ಯಾನ ವಿರೋಧಿಗಳು. ಕೆಲವು ಇದಿಯ ಕೃತಿ, ಕೆಲರು ಲೌಕಿಕ ಭಾಗ ವಿಪ್ರರದೆನ್ನುವರು. ವಿಪ್ರ ಕಾರ್ಪಣ್ಯವನ್ನೇಕೆ ಒರೆವನೆಂದು ಪ್ರಾಣಘಾತಕ ಬಾಣ ಬಿಡುವ ತಮ್ಮಣ್ಣ" (63–74).

---

46. 'ಪರೋಕ್ಷಪ್ರಿಯಾ ಹಿ ದೇವಾಃ ಪ್ರತ್ಯಕ್ಷ ದ್ವಿಷಃ' ಶ್ರುತಿ 2.15, 17–18ರಲ್ಲುಕ್ತ

47. 7, 127–8ರಲ್ಲುಕ್ತ ಮುದ್ಗಲ ನಾರಸಿಂಹ (ಸತ್ಯಧರ್ಮತೀರ್ಥರು); ನೋಡಿ 18, 56–74.

'ಶ್ರೀಪತೀ, ನಿನ್ನ ಸ್ನೇಹದಿಂದ ಮುಖ್ಯಪ್ರಾಣ ವಿಪ್ರನಲ್ಲಿದ್ದು ಪ್ರಾಣಾವಧಿ ಹೇಳುವ ಪ್ರತಿಜ್ಞೆ ಪೂರೈಸಿದೆ. ಚಿಂತಾಮಣಿ ವಿಪ್ರರಲ್ಲಿ ಋಣಾರೋಪವಿತ್ತು, ನತ್ತನೆಂದೋರಿದು ಶಿಕ್ಷಿತನಾಗಿ ಕಾಡು ಪಾಲಾದ (79–83,93–4). 'ವಿಪ್ರರೇ, ಪರಮಹಂಸನಾಗಿ ಜನರ ಗುಣದೋಷ ಅರಿತು ಪೋಷಣ ದೂಷಣೆಗೈವುದೂ ಭೂಷಣ. ನಾನು ರಾಗದ್ವೇಷರಹಿತ' (104–12).

ಅಧ್ಯಾಯ 18: 'ವಿಪ್ರರೇ, ಇದಕ್ಕೆ ಹಯಗ್ರೀವ ಮುನಿಗೈವ ವ್ಯಾಖ್ಯಾನ ಸರ್ವಗ್ರಾಹ್ಯ. ಮುಖ್ಯಪ್ರಾಣ ನಿಮ್ಮನುಳಿದು ಹೋದಾಗ ನಾನೂ ಹರಿಯೂ ಬೇಡವೆಂದೆವು; ಲಕ್ಷ್ಮೀಪತಿ ಕುರುಕ್ಷೇತ್ರದ ಪರೀಕ್ಷಿತನನ್ನುಳಿಸಿದಂತೆ ನಿಮ್ಮನುಳಿಸಿದ' (21–28). "ಲಕ್ಷ್ಮೀಪತೀ, ನಾನು ಯಮಲೋಕಕ್ಕೈದ ಪಾಪಿಗಳನ್ನು ದರ್ಶನದಿಂದಲೇ ಮುಕ್ತಗೊಳಿಸಿದೆ. ಯಮನಾದರೋ ನಿಮ್ಮನ್ನೂ ಆಖ್ಯಾನವನ್ನೂ ನಿಂದಿಸುವವರನ್ನು ಮಾತ್ರ ಬಿಡುವುದಿಲ್ಲೆಂದ"[48] (32–3,35–6). 'ನಾರಸಿಂಹ, ನರಸಭಾರತಿಯಂತೆಯೇ ಆಖ್ಯಾನವೂ ನಿಮ್ಮ ನಾಲಗೆಗೆ ಬರಲಿ. ನಿಮಗೆ ದ್ರೋಹ ಬಗೆದ ಶೇಷಾದ್ರಿ ನಿಮ್ಮ ಶಿಷ್ಯಮರ್ದಿತನಾಗಿರುವ, ಕ್ಷಮಿಸಿ ಉದ್ಧರಿಸಿ. ಇದೆಲ್ಲ ನನ್ನ ಉಕ್ತಿ, ವಿಪ್ರರದೆಂಬ ಶಂಕೆ ಬೇಡ. ನಿಮ್ಮ ಸೇವೆಯಿಂದಾಗಿ ನಿಮ್ಮ ಸಂಸಾರ ಹಾಗೂ ಪಿಲ್ಲೆಯಬಂಧನ ಬಿಡಿಸುವೆ'[49] (56,62,71,74). 'ಹಯಗ್ರೀವ ಮುನಿಗಳೇ ಸಜ್ಜನ ಸಾಧನಾರ್ಥ 2 ಸಾವಿರದ ಮೇಲೆ ಕೆಲ ಪದ್ಯ ಹೇಳುವೆ. ವಿಪ್ರರನ್ನುಳಿದು ನೋಡೆಯ ಉತ್ಸವ ಶೋಭಿಸದು (78–81,85). 'ಭಕ್ತರೇ, ಹಯಗ್ರೀವ ಮುನಿಗಳಿಲ್ಲದೆಯೂ ನೋಡದೆ ನೊಗಯಿಸದು. ಅಕ್ರೂರನಂಥ ನನ್ನ ಮನೋರಥ ಸಾರಥಿಯ ಕಳಿಸುವೆ. ನೀವು ಸ್ವಾಗತಿಸಿ, ನಾನು ಸಂತೋಷಿಸುವೆ' (86–90,94).

ಮುಂದಣಧ್ಯಾಯದಲ್ಲಿ ದುಷ್ಟರನ್ನು ತಿದ್ದುವ ವಾದಿರಾಜರ ಕರುಣೆಗೆ ಉದಾಹರಣೆ: 'ಅಪ್ಪಣ್ಣ, ಕೃಷ್ಣನ ಹೆಸರ ಪ್ರಭಂಜನ, ನೀನು ಶ್ರೀವತ್ಸಧರನಲ್ಲ ವತ್ಸಶ್ರೀಧರ (ಹಸು),

---

48. 'ವಾದಿರಾಜ ಮುನಿ ಸಾಮಾನ್ಯನೆಂದೆಣಿಸಿದ ನರರಿಗೆ ಘನವಾದ ಶಿಕ್ಷೆ ಈವನು ಇನಸೂನು' — ವಿಜಯದಾಸರ ಸುಳಾದಿ (4).

49. 17–65ರಲ್ಲುಕ್ತ ಸತ್ಯಧರ್ಮತೀರ್ಥರು, ಪೂರ್ವಾಶ್ರಮದ ಅಣ್ಣಯ್ಯಾಚಾರ್ಯರು. ಸವಣೂರ ನವಾಬನಿಂದ ಬಂಧಿತರಾಗಿ ಬಿಡುಗಡೆಯಾಗಿದ್ದುದು ಇಲ್ಲಿಯ ನಿದರ್ಶನ. ಹೊಳೆಹೊನ್ನೂರಲ್ಲಿಂದಿಗೂ ವಾದಿರಾಜರಿಗೆ ಅಗ್ರ ನೈವೇದ್ಯವಿದೆ.

ವಿಪ್ರನಿಂದಕ, ಕೃಷ್ಣ ಕ್ಷೇತ್ರದಲ್ಲೂ ಸುಳ್ಳಾಡಿದ ಪಾಪಿಯಾಗಿ ಅಪುತ್ರಕ' (4–10). 'ಲಕ್ಷ್ಮೀಪತಿ, ಈ ದಿವ್ಯ ಗ್ರಂಥದ ಅವಿಶ್ವಾಸಿಗಳನ್ನು ಯಮ ಬಿಡುವುದಿಲ್ಲ. ಆಖ್ಯಾನ ಹೇಳುವನೊಬ್ಬನನ್ನು ಯಮನಿಂದ ಬಿಡಿಸಿದ ನನ್ನಂಥ ಯತಿ ಯಾರು (ಕೋವಾ ಮತ್ಸದೃಶೋ ಯತಿಃ)?' (17) 'ಶ್ರೀಪತೀ ರಾಜಹಂಸದಂತೆ ಬಂದ ಹಯಗ್ರೀವ ಮುನಿಗಳಿಗೆ ಆಖ್ಯಾನಾಮೃತ ಕುಡಿಸು' (26). 'ಸೀತಾಪತಿ, ವಾಮನಾಂಕಿತ ಸಂಪೆಸರು ಗ್ರಾಮದಾನವನ್ನು ರಾಜನಿಗೆ ಮರೆಸೆನ್ನು' (36,43). 'ಶ್ರೀಪತೀ, ಶ್ರೀನಿವಾಸ ವಿಪ್ರದಾನಕ್ಕೆ ಅಡ್ಡಿಮಾಡಿ ಬ್ರಹ್ಮರಾಕ್ಷಸನಾದ, ಬಹುವರ್ಷ ಬೆಂಕಿಗೆ ಬಿದ್ದಂತಾದನೆಂಬ ಆಖ್ಯಾನ ಶ್ಲೋಕ ಕೇಳಿ ಉದ್ಧೃತನಾದ' (46–7). 'ಚಿಂತಾಮಣಿಸುತ (ಲಕ್ಷ್ಮೀನಾರಾಯಣ), ಕೃತಿ ವಿಪ್ರರದೆಂದು ಪ್ರಮಾಣ ಮಾಡು, ಪಾರದಲ್ಲಿ ಸಾಯುವಿ' (52). 'ಶೇಷ, ನನ್ನ ಆಶ್ರಿತ ತಂದೆ ಮಗ ಸಾಯಕೂಡದು — ನೀನು ವಿರುದ್ಧ ಪ್ರಮಾಣ ಮಾಡಬೇಡ' (53–5). 'ಲಕ್ಷ್ಮೀನಾರಾಯಣ, ವಿಪ್ರಕೃತಿ ಎಂದು ಮಗನ ಮುಟ್ಟು — ಲೌಕಿಕಾಲೌಕಿಕ ಭಾಗ ಭಿನ್ನಕೃತವೆಂದೆನ್ನ ಪಾದ ಮುಟ್ಟು, ಸುಟ್ಟು ಹೋಗುವಿ; ಪ್ರಾಯಶ್ಚಿತ್ತಕ್ಕೆ ನಮಿಸು' (56–7,59). 'ಶೇಷ, ನಮನವೇ ದೇವತಾ ಕೋಪಕ್ಕೆ ಉಚಿತೋಪಾಯ. ನಿನ್ನ ಹೆಸರಿನ ಇನ್ನೊಬ್ಬ ಲಕ್ಷ್ಮೀಪತಿಯು ಮನೆಯಲ್ಲಿ ಇದು ವಿಪ್ರಕೃತಿ ಎಂದು ನನ್ನನ್ನು ವಿಷಣ್ಣಗೊಳಿಸಿದ' (80,82). 'ಲಕ್ಷ್ಮೀಪತಿ, ಈ ತಪೋಹಾನಿಯಾಗುವುದರಿಂದ ನಾನು ಶಪಿಸೆ. ವೃಂದಾವನ ಇರುವನಕ ನಾನಿಲ್ಲಿರಬೇಕು. ಕ್ಷಮೆ ದೇವಗಣ, ಕಾರಣ ಕ್ಷಮಿಸುವೆ' (86,89,99,100).

20ನೆಯ ಅಧ್ಯಾಯದಲ್ಲೂ ನುಡಿದಿದ್ದಾರೆ — 'ಲಕ್ಷ್ಮೀನಾರಾಯಣ, ನೀನು ದರಿದ್ರನಾದರೂ ಅಮಂಗಳವಾರ ಮಂಗಳವಾರವೆನಿಸಿದಂತಿದೆ ನಿನ್ನ ಹೆಸರು[50] — 3 ಸಲ ಕೈ ಎತ್ತಿ ಸಾರುವೆ ಕೃತಿ ನನ್ನದೆಂದು' (33,37). 'ಶೇಷಾದ್ರಿ ಪಂಡಿತರೇ, ವೃಂದಾವನಸ್ಥರಲ್ಲಿ ನನ್ನಂಥ ಅಭೀಷ್ಟಪ್ರದರಿಲ್ಲ' (41). 'ಲಕ್ಷ್ಮೀಪತಿ, ಇನ್ನೂ ಅಧ್ಯಾಯಗೈದಿಲ್ಲ — ನಾನಿನ್ನು ಹಿಮಕೋಕಿಲದಂತೆ ಮೌನ ಧರಿಸುವೆ' (62,3).

---

50. 'ರುಕ್ಮಿಣೀಶ ವಿಜಯದ ಶಿಶುಪಾಲ–ಜರಾಸಂಧರ ಹೆಸರು ಅನ್ವರ್ಥಕವೆಂದಿದೆ (14,16).

'ವಾಸುದೇವ ಮುನಿ, ನನ್ನ ವೃಂದಾವನಕ್ಕೆ ಶ್ರೀನಿವಾಸ ಬಿಂದುಮಾಧವರೆಲ್ಲ[51] ಬಂದಿದ್ದಾರೆ, ಇಲ್ಲೇ ಸೇವಿಸಿ ಪುಣ್ಯವಂತರಾಗಿ' (91,5).

ಅಧ್ಯಾಯಾಂತರ ಹೇಳಿದ್ದು — 'ಪಂಡಿತರೇ, ಕಮಲನಾಭ ಅದ್ವೈತ ಅನುಸರಿಸುತ್ತಾನೆ ನನ್ನಲ್ಲಿರುವ ಬ್ರಹ್ಮ-ಮಾಯ ಮತ ಬಿಟ್ಟ. ಬ್ರಹ್ಮ-ಮಾಯ ಮಾಣೀ ಪತಿತ್ವ ಬಿಟ್ಟು ಎಲ್ಲ ವೈಭವ ನನಗಿತ್ತಿದ್ದಾರೆ' (10). 'ಶೇಷ, ಕಲಿ-ಮಯ-ಮಣಿಮಂತರೇ ಕಮಲನಾಭ-ತಮ್ಮಣ್ಣ-ಶ್ರೀನಿವಾಸರಾಗಿದ್ದು, ಕಮಲನಾಭ ನಾನು ಕೊಡಿಸಿದ ನಿರ್ಮಾಲ್ಯ ಸ್ವೀಕರಿಸದೆ ನನ್ನ ಉಪಾಧ್ಯಾಯ ಸಹಿಸದೆ ಕಲಹೋದ್ಯುಕ್ತನಾಗಿರುವ[52] (13-15). 'ಹಯಗ್ರೀವ ಮುನಿ, ವಾದಿರಾಜಭಟ್ಟ-ವಿಪ್ರ-ಶ್ರೀಪತಿ (ಸೋದರ) ವ್ಯಾಸರಾಜ-ವಾಸುದೇವ ಮುನಿ-ಉಪೇಂದ್ರ-ಸೂರಣ-ಕನಕಕೃಷ್ಣ-ಹಿರಣ್ಯ-ಶೇಷಾದ್ರಿ-ವಿಠಲಾಚಾರ್ಯರು ಭಕ್ತರು. ಕಮಲನಾಭ-ದಾಂಬಲನಾರಾಯಣ-(ಪುತ್ರ) ಹರಿ- ಚಿಂತಾಮಣಿಸುತ ಲಕ್ಷ್ಮೀನಾರಾಯಣ-ತಮ್ಮಣ್ಣ ಅಭಕ್ತರು. ಅಪ್ಪಣ ಕೃಷ್ಣಭಟ್ಟ ಕೃಷ್ಣಾಚಾರ್ಯಸುತ ಶ್ರೀನಿವಾಸ ಈಗ ಬದಲಾಗಿದ್ದಾರೆ' (20-33). 'ವೇದನಿಧಿ, ವೇದವೇದ್ಯರ ಬಗ್ಗೆ ಇನ್ನೆರಡು ಅಧ್ಯಾಯಗಳಿಗೆ. ಅವರ ಪಾದೋದಕವು ಜ್ವರನಾಶಕವೆನಿಸಿದೆ ವಿಪ್ರರಿಗೆ. ನನಗೆ ಭೋಜನಾನಂದವಿತ್ತು ನಿಮ್ಮ ಗರುಡ ಕಲ್ಪಭೋಗ ಸಾಧನ ಹೇಳುವ ವಿಪ್ರರಿಗನುಕೂಲಿಸಿ, ಇದು ಅನ್ನದಾನ ಮಂತ್ರ' (41-45, 52-54). 'ಭಕ್ತರೇ, ವೇದವೇದ್ಯರೂ ಅದರ್ಶಮೂರ್ತಿ; ಸ್ನಾನ-ಧ್ಯಾನ-ಅರ್ಚನ-ಭೋಜನ-ಪ್ರವಚನ ನಿರತರು.[53] ಕಲಿಯುಗದಲ್ಲಿಂಥ ಶಿಷ್ಯರಿಂದ ನನ್ನ ತಪ ಸಫಲವೆನಿಸಿತು. ಈ ಲೋಕೋಪಕಾರಿ ನನ್ನ ಸಮ' (ಗದ್ಯ ಮುಜು; 67-72). 'ವಾದಿರಾಜಭಟ್ಟರೇ, ವಿಪ್ರರಿಗೆ ಮನೆಯಿತ್ತು ಪುಣ್ಯ ಪಡೆದಿರಿ' (75).

---

51. 'ದಯಮಾಡೊ (ಬಿಂದುಮಾಧವ) ಎಂಬ ಕೀರ್ತನೆ ಇದಕ್ಕೆ ಸಂವಾದಿ.

52. ಕಮಲನಾಭ ಎಂಬವರೇ ಅಷ್ಟಯತಿಗಳಲ್ಲೊಬ್ಬರು.

53. ಈ ವರ್ಣನೆ ವಾದಿರಾಜರಿಗೂ ಅನ್ವಯಿಸುವಂಥದು.

ಕೊನೆಯ ಅಧ್ಯಾಯ: 'ವೇದವೇದ್ಯರೇ, ಉಪಕ್ರಮಾದಿಗಳಿಂದ ನನ್ನಭಿಪ್ರಾಯವನ್ನು ಕಣ್ಯಶ್ರಾವ್ಯವಾಗಿ ನಿರೂಪಿಸುವ ನಿಮಗೆ ನನ್ನ ಸಾದೃಶ್ಯ ಒದಗಿದೆ; ನನ್ನ ಪದಕ್ಕೇರುವ ನಿಮಗೆ ಮಂಗಳವಿರಲಿ' (8–11). ಹಯಗ್ರೀವ ಮುನಿ, ದುರ್ವಾದೀಭಸಿಂಹರಾಗಿ ನಿಮ್ಮ ಯುಕ್ತಿನಖದಿಂದ ಅದರ ನೆತ್ತಿ ಸೀಳಿರಿ. ನನ್ನ ಪಟ್ಟಪರ್ವತದಿಂದುದಿಸಿದ ವೇದವೇದ್ಯರವಿಯಿಂದ ಅದ್ವೈತವೆಂಬ ಕತ್ತಲೂ ಕಳೆಯಿತು' (23–24).[54] 'ವೇದವೇದ್ಯರೇ, ದುಸ್ತರ್ಕ ತಮಕೆ ಅರ್ಕಪ್ರಭ, ಸತ್ತರ್ಕ ಕುಮುದಕೌಮುದೀಶ ನೀವು' —

ಹೇ ವೇದವೇದ್ಯ ದುಸ್ತರ್ಕ ತಮಸೋರ್ಕಪ್ರಭಾಯುತ
ಸತ್ತರ್ಕ ಕುಮುದಾನಾಂ ಚ ಕೌಮುದೀಶ ನತೇ ನಮಃ ॥ 25 ॥

'ಲಕ್ಷ್ಮೀಪತಿ, ಮಗನಂತೆ ಅಧ್ಯಾಯ ವಿಭಾಗ–ಅನ್ವಯಂತ್ರಪಠಣ–ವ್ಯಾಖ್ಯಾನ ಕಾರ್ಯತ್ರಯ ಪೂರೈಸಿ' (38). 'ಹಯಗ್ರೀವ ಮುನಿ, ಜಗನ್ಮಿಥ್ಯಾವಾದಿಗಳ ಮತವೂ ಮಿಥ್ಯೆ, ದ್ವಂದ್ವಗಳೂ ಹರ್ಯಧೀನ ಮಧ್ವಮತದಂತೆ'[55] (44,47). 'ಲಕ್ಷ್ಮೀಪತೀ, ಪಾಣಿಪಾಲಿ ರಾವಣನು ದಾಂಬಲನಂತೆ ವಿಪ್ರವಿರೋಧಿಯಾಗಿದ್ದು ಈಗ ಶರಣು ಬಂದಿರುವ; ಆಖ್ಯಾನ ಕಾರ್ಯವಾಗುವನಕ ನಾನು ತಪಸ್ಥನಾಗಿರುವೆ' 74–6,80) ಎಂದು ಮಂಗಳ ಮಾಡಿದ್ದಾರೆ.

ಇಂತು ಸರ್ವದೇವತಾಧಿಷ್ಠಿತ ವೃಂದಾವನ ಕೇಂದ್ರ ಪರಿಸರದ ವೈಭವ, ತಮ್ಮ ಹಾಗೂ ವಿಪ್ರರ ಸ್ವರೂಪ, ಜೊತೆಗೆ ಸಜ್ಜನೋದ್ಧಾರಕ ಪ್ರಮೇಯಗಳನ್ನು ದಿವ್ಯಾದ್ಭುತ ಕಥಾಶ್ರಯ ಪಡೆದು ಸ್ವಪ್ನದ್ವಾರಾ ನಿರೂಪಿಸಿದೆ 'ಸ್ವಪ್ನವೃಂದಾವನಾಖ್ಯಾನ'. ಸ್ವಪ್ನಮಾಧ್ಯಮದಿಂದಾಗಿ ಕೆಲ ಅಂಶ ಸೂಚ್ಯವಾಗಿ ಸಂಕೇತಿತವಾದರೂ, ವಿಪ್ರರು ಮರೆತಲ್ಲಿ ತಪ್ಪು ಬರೆಸಿದಲ್ಲಿ ವಾದಿರಾಜರು ಮತ್ತೆ ನೆನಪಿಸಿ ತಿದ್ದಿಸಿರುವುದರಿಂದ ಕೃತಿ ನಿರೂಪಣೆಯಲ್ಲಿ ಎಚ್ಚರ–ಹೊಣೆ ಸ್ಪಷ್ಟವಾಗಿವೆ. ಸ್ವಪ್ನ ಕೃತಿಯಾದ್ದರಿಂದ ವಿಪ್ರಸ್ವಾರ್ಥಕೃತವೆಂಬ ಆಪಾದನೆ ಪ್ರಚಲಿತವಾಗುವುದನ್ನರಿತು ಮೊದಲೇ ಉತ್ತರ ಕೊಡಲಾಗಿದೆ. ಅವಿಶ್ವಾಸಿಗಳನ್ನು ಬೈದರೂ

---

54. ಈ ವರ್ಣನೆ ವಾದಿರಾಜರಿಗೂ ಅನ್ವಯಿಸುವಂಥದ್ದೇ.

55. 55–56ರಲ್ಲಿ ಮಧ್ವಮತ ನಿರೂಪಣೆಯಿದ್ದು, ಹರಿ ಪಾದಸೇವೆಯಿಂದ ನನಗೂ ಯೋಗ್ಯ ವೈಭವದ ಪದವೀವನೆಂದಿದ್ದಾರೆ.

ಅರ್ಹರ ಮೇಲೆ ದೈವ ಸ್ವಭಾವದ ಕರುಣಾವರ್ಷವೇ ಆಗಿದೆ. ಕಾರಣ ಕೃತಿ—ಋಜುತ್ವಗಳೆರಡೂ ನಿಜವಾಗಿ ಪರಿಣಮಿಸಿವೆ. ತಮ್ಮ ಪಶ್ಚಾತ್ ಋಜು ಸ್ವರೂಪ ಸಾರಿ, ಇಂದ್ರಪದಾರ್ಹ ವಿಪ್ರರಿಗೆ ನೆರವಾಗಿರೆಂಬ ಪಲ್ಲವಿಯೊಡನೆ ಭವಿಷ್ಯದ್ಘಟನೆಗಳನ್ನು ನಿರವಿಸಿ, ಅವುಗಳೊಡನೆ ಸತ್ಯಸಂವಾದ ಹೊಂದಿದ ಕೃತಿ ಸ್ವತಃಪ್ರಮಾಣವುಳ್ಳದು.[56] ಇಂಥ ಅಪೂರ್ವಾದ್ಭುತ ಕೃತಿಯ ಬಗ್ಗೆ ಅಚ್ಚರಿ—[57] ಅವಿಶ್ವಾಸವೆನಿಸುವುದೂ ಸಹಜ. ಪ್ರಾಸಪೂರ್ಣ ಶೈಲಿಯಂತೂ ಕೃತ ವಾದಿರಾಜೀಯವೆಂದೇ ಘೋಷಿಸುತ್ತದೆ. 'The style bears an unmistakable affinity to Vadiraja's'(H.D.S.V.II,211,B.N.K.Sharma). ಬೃಹತ್ ಗಾತ್ರದ ಕೃತಿಯಾಗಿ ಕನ್ನಡದ 'ಶ್ರೀಕೃಷ್ಣ ಬಾಲಲೀಲೆ'ಯಂತೆ ಹಲವೆಡೆ ಶ್ಲೋಕಗಳು ಪುನರಾವರ್ತಿತ; ಇದೂ ಇವೆರಡರ ಏಕಕರ್ತೃಕತ್ವಕ್ಕೆ ಪೋಷಕವಾಗುವ ಇನ್ನೊಂದಂಶವೆನ್ನಬಹುದಲ್ಲವೇ? ಆತ್ಮಚರಿತ್ರೆಯನ್ನು ವೈಶಿಷ್ಟ್ಯಪೂರ್ಣವಾಗಿ ಕಾವ್ಯಮಯ ಶೈಲಿಯಲ್ಲಿ ನಿರೂಪಿಸಿದ್ದರೂ ವಿಷಯದ ದೃಷ್ಟಿಯಿಂದ ಇದನ್ನು ಮೋಕ್ಷಶಾಸ್ತ್ರದ ಕೃತಿ ಎನ್ನಬೇಕು. ಸ್ವಾಪ್ನ ಕೃತಿಯಾಗಿ ಮಾತ್ರ ಸಾಹಿತ್ಯ ಪ್ರಪಂಚದಲ್ಲೇ ಇದು ಅದ್ವಿತೀಯವೆನಿಸಿದೆ.

## ಸ್ತೋತ್ರಗಳು

ಋಜುವಾದಿರಾಜರು ದುಃಖರಹಿತರಾದರೂ, ಪರರ ದುಃಖಪರಿಹಾರಾರ್ಥ ಫಲದಾಯಕವಾದ ಹಲವು ಕಾವ್ಯಮಯ ಸ್ತೋತ್ರ ರಚಿಸಿದ್ದಾರೆ. ಸ್ತೋತ್ರ ಸಂಗ್ರಹಗಳಲ್ಲಿ 60ಕ್ಕಿಂತ ಹೆಚ್ಚಿನ ಸಂಖ್ಯೆಯವು ಇವರ ಹೆಸರಿನಿಂದಲೇ ಕಾಣಸಿಗುತ್ತವೆ. ಇವುಗಳ ಪದಲಾಲಿತ್ಯ—ಅರ್ಥಗಾಂಭೀರ್ಯ—ರಚನಾಕೌಶಲ—ಛಂದೋವೈವಿಧ್ಯ—ಗೇಯ ಗುಣಗಳು ವಾದಿರಾಜರ ಪ್ರತಿಭೆ—ರೀತಿಗಳಿಂದ ವಿಶಿಷ್ಟವೆನಿಸಿವೆ, ಇ ಎಂದಿಗೂ ಹಾಡಲು, ಕೇಳಲು ರಮ್ಯವೆನಿಸಿವೆ. 'ಸ್ತೋತ್ರಮಾಲಾ, ಸ್ತೋತ್ರ ಮಂಜರಿ, ಸ್ತೋತ್ರಮಹೋದಧಿ'ಗಳಿಂದ ಇವುಗಳ ಕೆಲವು ವಿವರ ಹೀಗೆ ಪಟ್ಟಿ ಮಾಡಬಹುದು —

---

56. ವಿವರಕ್ಕೆ ಋಜುತ್ವ ಸಿದ್ಧಾಂತ, ಪು.353—77 ನೋಡಿ.

57. ವಾದಿರಾಜರೇ 'ಇದಮದ್ಭುತಮಾಖ್ಯಾನಂ' (3—49) ಎಂದಿರುವುದಕ್ಕಿಯೇ ಸ್ವ.

| ಸ್ತೋತ್ರದ ಹೆಸರು | ಆರಂಭ | ಶ್ಲೋಕ ಸಂಖ್ಯೆ | ವಿಶೇಷಾಂಶ |
|---|---|---|---|
| 1. ಪ್ರಾತಃಸ್ತೋತ್ರ | ಪ್ರಾತಃಸ್ಮರಾಮಿ | 3 | ಹರಿವರ್ಣನೆ |
| 2. ಸದಾಚಾರಸ್ಮೃತಿ | ಬುಧ್ವಾ ಬ್ರಾಹ್ಮೇ ಮುಹೂರ್ತೇ | 6 | ದಿನಚರಿ (ವಾಂತು ಸ್ಮೃತಿ ಧಾಟಿ) |
| 3. ಸಂಕಲ್ಪ ಪದ್ಧತಿ | ವಿಷ್ಣೋರ್ದೇಶೇ ವರ್ತಮಾನೇ | 6 | ಸ್ನಾನಸಂಕಲ್ಪ |
| 4. ಕೃಷ್ಣಾಷ್ಟಕ | ಪಾಲಯಮಾಚ್ಯುತ ಪಾಲಯಮಾಜಿತ | 9 | ಉಡುಪಿ ಕೃಷ್ಣನ ವರ್ಣನೆ |
| 5. ಕೃಷ್ಣಸ್ತವ | ಹಿತಂ ನ ಜಾನಾಮ್ಯಹಿತಂ ನ ಜಾನೆ | 27 | ಹರಿಸರ್ವೋತ್ತಮತ್ವಸಹ |
| 6. ಕೃಷ್ಣಸ್ತುತಿ | ಯದಿ ದಿಶಸಿ ನಯನ ಪಟುತಾಂ | 9 | ದರ್ಶನಕ್ಕೆ ದೃಷ್ಟಿ ಯಾಚನೆ (45ರಲ್ಲಿನಂತೆ) |
| 7. ಅಷ್ಟಮಹಿಷಿ ಕೃಷ್ಣ ಸ್ತೋತ್ರ | ಹೃದಯಗುಹಾಶ್ರಿತ ಪಕ್ಷೀಂದ್ರ | 9 | ಅಷ್ಟಮಹಿಷೀಪತಿ ನಮನ |
| 8. ಕೃಷ್ಣಸ್ತೋತ್ರ | ಶ್ರೀಬ್ರಹ್ಮರುದ್ರಗರುಡೇಂದ್ರನತಂ | 9 | ಕೃಷ್ಣನ ಆಪಾದ ವರ್ಣನೆ (7ನೆಯ ಶ್ಲೋಕ ದಶಾವತಾರ) |
| 9. ಆಪಾದ ಸ್ತೋತ್ರ | ಮಧ್ವಾದೃತಂ ರಜತಪೀಠ | 11 | ಕೃಷ್ಣನ ಆಪಾದ ವರ್ಣನೆ |
| 10. ಉಕ್ತಿ ಪ್ರತ್ಯುಕ್ತಿ ಸ್ತೋತ್ರ | ಅಂಗುಲ್ಯಾ ಕಃ ಕವಾಟಂ ಪ್ರಹರತಿ | 3 | ರಮಾ ರಮೇಶ ಸಂವಾದ |
| 11 ರಾಮಕವಚ | ಕಪಿಕಟಕಧುರೀಣಃ | 24 | |
| 12. ರಾಮದಶಕ | ಹೇ ರಾಮ ಜಲದಶ್ಯಾಮ | 11 | |
| 13. ಕವಿಕದಂಬ ಕಂಠಭೂಷಾ | ಕ್ಷೀರಾಂಬುಧೌ ಫಣಿಪತೇಃ | 15 | ದಶಮಸ್ಕಂಧ ಪಠಿಸಲಾಗದವರಿಗೆ 10,2,1 ಶ್ಲೋಕಗಳ ಕೃಷ್ಣಚರಿತೆ, 14ನೆಯ ಶ್ಲೋಕ ರಾಮಚರಿತೆ. |
| 14. ಅವತಾರತ್ರಯ ಸ್ತೋತ್ರ | ಮಧ್ಯಹೃತ್ಕಮಲಸ್ಥಿತಂ | 3 | ರಾಮಕೃಷ್ಣವೇದವ್ಯಾಸ ಸ್ತುತಿ |
| 15. ಪಾಷಂಡ ಖಂಡನ | ಭೀಷ್ಮೇಣ ಕಾಮ್ಯಕವನೇ | 30 | 'ಪಾಷಂಡ ಮತಖಂಡನ' ಭಿನ್ನ |

| ಸ್ತೋತ್ರದ ಹೆಸರು | ಆರಂಭ | ಶ್ಲೋಕ ಸಂಖ್ಯೆ | ವಿಶೇಷಾಂಶ |
|---|---|---|---|
| 16. ವ್ಯಾಸಾಷ್ಟಕ | ಶ್ರೀಶಂ ವಿಚಿತ್ರಚರಿತಾ | 9 | ವ್ಯಾಸ ಪ್ರಾರ್ಥನೆ |
| 17. ವ್ಯಾಸವರ್ಣನ | ವ್ಯಾಸಾಂಘ್ರಿಪ್ರತಿಮೋತಿ ಹಾಸಶ್ಚ | 2 | |
| 18. ತ್ರಿವಿಕ್ರಮ ಸ್ತೋತ್ರ | ವಿದಾರಿತಾರಿಸಂಘಾತಂ | 18 | ಸೋದೆ ತ್ರಿವಿಕ್ರಮನ ವರ್ಣನೆ |
| 19. ಹರ್ಯಷ್ಟಕ | ಸ್ವಮುದ್ಧರ್ತುಂ ಹವೇರ್ವೇತಿ | 9 | ನರಹರಿಸ್ತುತಿ (ಅಂತ್ಯ 32ರಂತೆ) |
| 20. ಹಯಾಸ್ಯದಶಕ | ಶ್ರೀಯುಗೇ ಅಷ್ಟಯುಗೇಷು | 11 | ಹಯಗ್ರೀವ ಪ್ರಾರ್ಥನೆ |
| 21. ಹಯಾಸ್ಯಾಷ್ಟಕ | ದಾಸಸ್ಯ ಮೇ ಶಿರಸಿ | 9 | " " |
| 22. ಹಯಗ್ರೀವ ಷಂಡಕ | ಉಪಾಶಯ ರಮಾಶಯಾ | 6 | ಪ್ರಾಸಪೂರ್ಣ ಹಯಸ್ತುತಿ |
| 23. ಹಯಗ್ರೀವ ಧ್ಯಾನಪ್ರಕರಣ | ಸದಾತವ ಶ್ವೇತಹಯತಯಾ | 39 | |
| 24. ಹಯಗ್ರೀವ ಸ್ತುತಿ | ಉಪದಾಸ್ಯ ಹಯಗ್ರೀವ | 17 | ಹೊಳೆವ ಅಂಗವರ್ಣನೆ, ಪ್ರಾರ್ಥನೆ |
| 25. ಹಯಗ್ರೀವ ಸಂಪದಾಸ್ತೋತ್ರ | ಹಯಗ್ರೀವ ಹಯಗ್ರೀವ | 4 | ತ್ರಿಪಾಠೋಚ್ಚಾರಕರಿಗೆ ಸಂಪತ್ಪ್ರದ |
| 26. ಭಯಪರಿಹಾರ ಸ್ತೋತ್ರ | ಗಿರಾಂ ತೀರ್ಥಾನುಸಂಧಾತ್ಮನ | 6 | ಅಘಪಂಚಕವೆಂದೂ ಉಕ್ತ |
| 27. ನೃಸಿಂಹ ವರಾಹ ಷಟ್ಕ | ಪ್ರಹ್ಲಾದಾಹ್ಲಾದ ಹೇತುಂ | 5 | ಧನ್ಯವೃತ್ತ, ಅಂಕಿತ ವೃತ್ತರಹಿತ |
| 28. ಪ್ರಾರ್ಥನಾ ದಶಕ | ರಮಾರಮಣ ಮಧ್ವಾದಿ | 11 | ದುರ್ಗುಣ ಕಳೆದು ರಕ್ಷಿಸಲು ಕೋರಿಕೆ |
| 29. ವರಾಹ ಹಯ-ಗ್ರೀವ ಸ್ತೋತ್ರ | ವಿದಾರಿತ ನಿಶಾಚರಾ | 6 | ಎರಡೂ ರೂಪ ನಮಿಸಿದ ಸ್ತುತಿ |
| 30. ಹಯಗ್ರೀವ ಸ್ತೋತ್ರ | ಹಯಗ್ರೀವ ದಯಾಸಿಂಧೋ | 11 | |
| 31. ಹಯಗ್ರೀವ ವರಾಹ ಸ್ತುತಿ | ವಹಾಶ್ವಕಾಂಕುರ ಕಲ್ಪ-ದಂಷ್ಟ್ರ | 9 | ಪರ್ಯಾಯತಃ ದ್ವಿರೂಪ ವರ್ಣನೆ (ಕೃಷ್ಣಾಷ್ಟಕ ಧಾಟಿ) |

| ಸ್ತೋತ್ರದ ಹೆಸರು | ಆರಂಭ | ಶ್ಲೋಕ ಸಂಖ್ಯೆ | ವಿಶೇಷಾಂಶ |
|---|---|---|---|
| 32. ನರಹರ್ಯಷ್ಟಕ | ಯದ್ಹಿತಂ ತವ ಭಕ್ತಾನಾಂ | 9 | 19ರಂತೆ ಅಂತ್ಯಶ್ಲೋಕ |
| 33. ಋಣಮೋಚನ ಸ್ತೋತ್ರ | ದೇವತಾಕಾರ್ಯ ಸಿದ್ಧ್ಯರ್ಥಂ | 9 | ನೃಸಿಂಹ ಪ್ರಾರ್ಥನೆ, ಅಂಕಿತವೃತ್ತರಹಿತ |
| 34. ವೆಂಕಟೇಶ ಮಂಗಲಾಷ್ಟಕ | ಶ್ರೀ ಹೋಲೋಕ್ಯೋರಮಣೀಯಯುಗಂ | 9 | ವಿವಾಹಾರ್ಥ' ಕುರ್ಯಾತ್ಸದಾಮಂಗಲಂ' ಶ್ಲೋಕ |
| 35. ದಶಾವತಾರ ಸ್ತೋತ್ರ | ನಮೋಸ್ತು ನೀರಾಯಣ ಮಂದಿರಾಯ | 9 | ದಶಾವತಾರ ಸಂಗ್ರಹ, ಹಯಾಸ್ಯನಮನ |
| 36. ದಶಾವತಾರ ಸ್ತುತಿ | ಪ್ರೋಷ್ಠೀಶ ವಿಗ್ರಹ ಸುನಿಷ್ಠೀವನೋದ್ಧತ | 34 | (ಆದಿಪ್ರಾಸಸಹ) ತ್ರಿಪ್ರಾಸಗಳ ಭರ |
| 37. ಕೇಶವಾದಿ ಸ್ತುತಿ | ಅಧರಂ ದಕ್ಷಿಣಂ ಹಸ್ತಂ | 7 | ಚರಣಕ್ಕೊಂದರಂತೆ ಕೇಶವಾದಿ 24 ರೂಪವರ್ಣನೆ |
| 38. ಧೀಶುದ್ಧಿ ಸ್ತೋತ್ರ | ಚಿಂತಾಮಣಿರ್ಹಯಗ್ರೀವೋ | 12 | |
| 39. ಚಿಂತಾಖಂಡನ | ಯಯಾ ತೇ ಧರ್ಮಕಾವಹಾ ಚ | 15 | |
| 40. ಶ್ರೀಶಗುಣದರ್ಪಣ | ಯಾ ಸುಗಂಧಾನ್ಯನಾಸಾದಿ | 19 | 'ಲಕ್ಷ್ಮೀಹೃದಯ' ಶಬಿತವಾಗಿ ಬಂದ ಲಕ್ಷ್ಮೀ ಸ್ತುತಿ |
| 41. ನೈವೇದ್ಯಪ್ರಕಾರ | ನಿತ್ಯಾನಂದ ಚಿದಾಕೃತೇ | 4 | ಪೂಜಾಂತ್ಯದ ಶ್ಲೋಕತ್ರಯ |
| 42. ಸಪ್ತರಾತ್ರೋತ್ಸವ ಪ್ರಕಾರ | ದೇಹೋಪದೇಶಾಃ ಪಿತರೋ | 23 | ತ್ರಿವಿಕ್ರಮೋತ್ಸವ ಕ್ರಮನಿರೂಪಣೆ |
| 43. ಸುದರ್ಶನಸ್ತುತಿ | ಸುದರ್ಶನ ಪದಾಂಭೋಜ | 2 | |
| 44. ಅಭಯಸ್ತವ | ಯಸ್ಯಾಸ್ಯೇಯ ದಯಾ ಲಸ್ಯಂ | 11 | ದೇವರಕ್ಷಣೆಗೆ ಸಾಕ್ಷೀದಶಕ |
| 45. ಲಕ್ಷ್ಯಾರ್ಯಾವೃತ್ತ | ಅರ್ಯಾವೃತ್ತಂ ವಿಚಿತ್ರನಾರ್ಯಾಸ್ಯಾ | 13 | ಕೃಷ್ಣ ದರ್ಶನಕ್ಕೆ ದೃಷ್ಟಿಯಾಚನೆ (8ರಲ್ಲಿನಂತೆ) |
| 46. ದುರ್ಗಾಸ್ತವ | ಸನ್ನದ್ಧ ಸಿಂಹಸ್ಕಂಧಸ್ಥಾಂ | 15 | ಕನ್ಯರ್ಪಾಡಿಯ ದುರ್ಗಾವರ್ಣನೆ |

| ಸ್ತೋತ್ರದ ಹೆಸರು | ಆರಂಭ | ಶ್ಲೋಕ ಸಂಖ್ಯೆ | ವಿಶೇಷಾಂಶ |
|---|---|---|---|
| 47. ಮಧ್ವಾಷ್ಟಕ | ಭಕ್ತ್ಯಾ ಶ್ರೀರಮಣಸ್ಯ ಪಾದಯುಗಳೇ | 9 | ಹನುಮದ್ಭೀಮಮಧ್ವ ಸ್ತುತಿ |
| 48. ವಾಯುಸ್ತುತಿ | ಕಸ್ಮಾದನ್ಯದ್ವನಸ್ಯಾಂಭಸ ದಯಂ | 15 | ವಿಭೀಷಣ— ಹನುಮ ಸಂವಾದ, ಭೀಮ ಮಧ್ವಾವತಾರ (ವಾಯುಸ್ತುತಿ ಧಾಟಿ) |
| 49. ಮಧ್ವಪ್ರತಾಪಾಷ್ಟಕ | ಕ್ವಚಿತ್ಸ್ವರಾನ ಶಾಸ್ತಿ ಸುರಾಂಗನಾ: | 9 | 'ಅಯಂ ಮಧ್ವಮುನಿ: ಪ್ರತಾಪವಾನ್' ಎಂದು ಮುಗಿವ ಶ್ಲೋಕಗಳು |
| 50. ಸಹಸ್ರಾರ ಸ್ತುತಿ | ಸಹಸ್ರಾರ ಮಹಾಶೂರ | 13 | ಸುದರ್ಶನಚಕ್ರ ಸ್ತುತಿ |
| 51. ಚಕ್ರಸ್ತುತಿ | ದೋಷಾಘವಾರಣಂ ಯಸ್ಯ | 76 | ತಪ್ತಚಕ್ರಾಂಕನ ವಿವೇಚನೆ |
| 52. ಹಿತೋಪದೇಶ | ಸ್ಮರಕೃಷ್ಣಂ ಭಜ ಹರಿಂ | 7 | ಅಂಕಿತಶ್ಲೋಕರಹಿತ, ಅದು ಈಚೆ ಸಿಕ್ಕಿದುದು ಅಕ್ಷೋಭ್ಯತೀರ್ಥಾಂಕಿತ (ಕೋರಿಚ, ಪು.404) |
| 53. ಗುರುಸ್ತುತಿ | ವಾಕ್ಯಗುರ್ವನಿಲ ಸಹಾಸ್ತ್ರಂ | 15 | 'ಗುರು'ಕ್ರಿಯಾಪದ ರೂಪದ ಹಿತೋಪದೇಶ |
| 54. ನವಗ್ರಹ ಸ್ತೋತ್ರ | ಭಾನ್ವನ್ವೇ ಭಾಸ್ವಯತ್ತತ್ವಂ | 6 | ಹರಿಯ ಅನುಗ್ರಹಾರ್ಥ |
| 55. ಹರಿಭಕ್ತ್ಯಾಷ್ಟಕ | ಶ್ರೀಮಧ್ವಶುದ್ಧ ರಾದ್ಧಾಂತ | 9 | |
| 56. ವಿಷ್ಣುಸ್ತುತಿ | ಬಹುದುಃಖಭರೋದರ್ಕ | 9 | ನರಕಾದ್ಯನರ್ಥ- ನಿವಾರಣಾರ್ಥ |
| 57. ಹಯಗ್ರೀವ ದಂಡಕ | ಜಯ ಜಯ ತುರಗಾಸ್ಯ | ಗದ್ಯ | ಶ್ರೀಮುಷ್ಣಕೋಣೇ ರಾಘವಾಚಾರ್ಯರದೆಂದು ಪ್ರಭಂಜನ (ವಾದಿರಾಜ ಸ್ತೋತ್ರಮಂಜರಿ, ) |
| 58. ವಿಘ್ನಪರಿಹಾರ ಸ್ತೋತ್ರ | ಯಯಂ ಯಯಂ ಚಿನ್ತಯ ಸನ್ಮಾರ್ತೇ | 11 | |
| 59. ಮಂಗಳಾಷ್ಟಕ | ಲಕ್ಷ್ಮೀರ್ಯಸ್ಯ ಪರಿಗ್ರಹ: | 9 | ವಿವಾಹಾರ್ಥ, ರಾಜರಾಜೇಶ್ವರ ದೆಂದು ಪ್ರಭಂಜನ (ವಾದಿರಾಜ ಸ್ತೋತ್ರ ಮಂಜರಿ, ) |
| 60. ಶ್ರೀಪಾದರಾಜಾಷ್ಟಕ | ದ್ವೈಪಾಯನಸೋತ್ತಮ | 8 | ವಕಾರಾದಿ ಪ್ರಾಸ, ಅಶ್ವಧಾಟಿ |

ಇವಲ್ಲದೆ 'ಮುಹೂರ್ತರಾಜ' ಎಂಬ ಜ್ಯೋತಿಷ್ಯಶಾಸ್ತ್ರದ ಕಿರುಕೃತಿ, 'ಜಯತೀರ್ಥ ಗುರುಂ ಭಜೇ' ಎಂಬ 222 ಶ್ಲೋಕಗಳ ಜಯತೀರ್ಥ ಸ್ತೋತ್ರ, 'ಪುರುಷಸೂಕ್ತ ವ್ಯಾಖ್ಯಾನ', ಭಾಗವತ ತಾತ್ಪರ್ಯ ಮೂಣಿಕ, ವಿರಾಡ್ರೂಪದರ್ಶನ' ಇತ್ಯಾದಿ ಕೃತಿ ಕೆಲವು ತಮ್ಮ ಸಂಗ್ರಹದಲ್ಲಿರುವುದಾಗಿ ವ್ಯಾಸನಕೆರೆಯ ಪ್ರಭಂಜನರು ತಿಳಿಸುತ್ತಾರೆ. ವಾದಿರಾಜರ ಕೃತಿಗಳು ಇಷ್ಟೇ ಎನ್ನುವ ಆಧಾರವಿಲ್ಲದ ಕಾರಣ ಪ್ರಕಟವಾದಂತೆ ಪರಿಶೀಲಿಸಬೇಕಿದೆ. ಅವರ 'ತೈತ್ತಿರೀಯ ಉಪನಿಷತ್ ವಿವೃತಿ—ಉಪನ್ಯಾಸರತ್ನಮಾಲಾ' ಅರ್ಧಮರ್ಧ ಸಿಕ್ಕಿರುವುದೂ 'ಗೀತಾಭಾಷ್ಯ ವಿವೃತಿ, ತಂತ್ರಸಾರ ಟೀಕಾ, ಮಧ್ವವಾಗ್ವಜ್ರಾವಳಿ' ಸಿಕ್ಕದಿರುವುದೂ ಇದಕ್ಕೆ ಸಾಕ್ಷಿ.

ಹೀಗೆ ಶಾಸ್ತ್ರ—ವ್ಯಾಖ್ಯಾನ—ಕಾವ್ಯ—ಸ್ತೋತ್ರದ ಹಲವು ಕೃತಿಗಳನ್ನು ಗದ್ಯ ಪದ್ಯಗಳೆರಡರಲ್ಲೂ ನೀಡಿದವರಲ್ಲಿ ಮಧ್ವರ ನಂತರ ವಾದಿರಾಜರೇ ಅಗ್ರಗಣ್ಯರು. ಶಾಸ್ತ್ರ ಗೌರವ—ಸರಸಯುಕ್ತಿ—ಕಾವ್ಯಮಾಧುರ್ಯ—ಪ್ರಾಸಪೂರ್ಣ ಶೈಲಿ ಅವರ ಕೃತಿಗಳ ವೈಶಿಷ್ಟ್ಯವೆನಿಸಿವೆ. ಮಹಾ ಪ್ರತಿಭಾವಂತರಿಂದಲ್ಲದೆ ಈ ಪರಿಯ ಸಾಹಿತ್ಯ ಸೃಷ್ಟಿಯಾಗಲಾರದು. ಸಂಸ್ಕೃತವಿರಲಿ, ಕನ್ನಡವಿರಲಿ, ವಾದಿರಾಜರ ಪ್ರತಿಭಾಸ್ಪರ್ಶ ಏಕಪ್ರಕಾರವೆಂದು ಯಾರಿಗಾದರೂ ಗೋಚರಿಸುತ್ತದೆ.

## 4. ಕನ್ನಡ ಕೃತಿಗಳ ಅಂತರಂಗ ಸಮಾಲೋಚನೆ

### ಕನ್ನಡ ಕೃತಿಗಳ ಅನುಗ್ರಹ

ವಾದಿರಾಜರ ಪ್ರತಿಭೆ ಸಾಧಾರಣ ಪಾಂಡಿತ್ಯವುಳ್ಳವರಿಗೆ ಸಂಸ್ಕೃತ ಕೃತಿ ನೀಡಿದಂತೆ, ಸಂಸ್ಕೃತವರಿಯದ ಸಾಮಾನ್ಯರಿಗೆಂದು ತಾವು ಅವತರಿಸಿದ ನಾಡ ನುಡಿ ಕನ್ನಡದಲ್ಲೂ ತಮ್ಮ ತಾಯ್ನುಡಿ ತುಳುವಿನಲ್ಲೂ ಕೃತಿಗಳನ್ನಿತ್ತಿದೆ. ಇಲ್ಲಿಯೂ ಮಧ್ವಮತ ನಿರೂಪಣೆ ಅವರ ಗುರಿಯಾಗಿ, ಮೇಲ್ನೋಟಕ್ಕೆ ಅವರೆಲ್ಲ ಶಾಸ್ತ್ರಸಾಹಿತ್ಯವೆನಿಸಿದರೂ, ಆಳವಾದ ಅಭ್ಯಾಸದಿಂದ ಅವರು ಹೊಳೆಯಿಸುವ ಪ್ರತಿಭಾಸ್ಪರ್ಶ — ಕಾವ್ಯಧರ್ಮ ವಿದಿತವಾಗುತ್ತವೆ. ಶಾಸ್ತ್ರವನ್ನು ಸರಳಗೊಳಿಸಿ, ಜೀವನಾನುಭವದ ನಿದರ್ಶನಗಳಿಂದ ಶ್ರೀಮಂತಗೊಳಿಸಿ, ಯುಕ್ತಿಯುಕ್ತವಾದವನ್ನು ನಗುನಗುತ್ತಲೇ ಎದುರಾಳಿಗಳೂ ಒಪ್ಪುವಂತೆ ಒಪ್ಪಗೊಳಿಸಿ, ಸಾಮಾನ್ಯರಿಗೂ ಹಿಡಿಸುವ ಕಲ್ಪನೆಗಳಿಂದ ಕಾವ್ಯಮಯಗೊಳಿಸಿ, ಪ್ರಾಣಪೂರ್ಣವಾದ ಮಧುರ ಭಾಷೆಯಲ್ಲಿತ್ತ ಕನ್ನಡ ಕೃತಿಗಳೂ ಸಂಸ್ಕೃತ ರಚನೆಗಳಿಗೆ ಕಡಿಮೆ ಎನಿಸದ ಕೊಡುಗೆಯಾಗಿವೆ. ಆ ಋಜುದೇವತೆ ಕನ್ನಡ ನಾಡಿಗವತರಿಸಿ, ಇಲ್ಲಿಂದಲೇ ಸಿದ್ಧಾಂತವೆನಿಸಿದ್ದ ತತ್ವವಾದವನ್ನುದ್ಧರಿಸಲು, ಕನ್ನಡದಲ್ಲೂ ನೂರಾರು ಕೃತಿ ರಚಿಸಿ, ಮಧ್ವರೇ ಮಾಡಬೇಕಿದ್ದ ಕಾರ್ಯವನ್ನು ಪೂರೈಸಿದ್ದು, ಕನ್ನಡಿಗರ ಮೇಲಿನ ಒಂದು ಅನುಗ್ರಹವೇ ಸರಿ. 'ಅಷ್ಟಮಠದ ಯತಿಗಳಲ್ಲಿ ಕನ್ನಡ ಕೃತಿ ಬರೆದ ಮೊದಲಿಗರು ವಾದಿರಾಜರು' (ವಿಷಯ ವಿಶ್ವಕೋಶ, ಕೆ.ಎಂ.ಕೃಷ್ಣರಾವ್). ವಾದಿರಾಜರಂಥವರೂ 'ಕನ್ನಡವನ್ನು ಅನಾದರಣೆ ಮಾಡದೆ ಮೈಲಿಗೆಂದು ಮಾತೆಂದು ತಿಳಿದೆ ಈ ಭಾಷೆಯಲ್ಲಿಯೂ ಪರಮಾತ್ಮನನ್ನು ಕೀರ್ತಿಸಿದರು, ಲೋಕಕ್ಕೆ ಉಪದೇಶವನ್ನಿತ್ತರು' (ಅನುಭವಾಮೃತ ಹರಿಕಥಾಮೃತಸಾರ, ಡಿ.ಕೆ.ಭೀಮಸೇನರಾವ್). ಕನ್ನಡಕ್ಕೆ ಕೋಡು ಮಾಡಿಸಿದ ಅನುಗ್ರಹವಿದು ಕೃತಜ್ಞತೆಯಿಂದ ಕೊಂಡಾಡಬೇಕಾದ್ದು.

ಮಧ್ವಮತವನ್ನು ಕನ್ನಡಿಸುವ ಕಾರ್ಯ ಶ್ರೀಪಾದರಾಯ — ವ್ಯಾಸರಾಯರಿಂದ ಆರಂಭವಾಗಿ ಪುರಂದರ — ಕನಕದಾಸರಿಂದ ವಿಸ್ತಾರಗೊಳ್ಳುವಾಗಲೇ ವಾದಿರಾಜತೀರ್ಥರು ಉನ್ನತಮಟ್ಟದ ವಿಶಿಷ್ಟ ಕೃತಿ ರಚಿಸಿ ಹರಿದಾಸ ಸಾಹಿತ್ಯಕ್ಕೆ ಅಧಿಕೃತ ಮುದ್ರಾಂಕನವಿತ್ತರು.

ರತ್ನತ್ರಯರಂಥ ಈ ಯತಿಗಳು ಹಾಕಿಕೊಟ್ಟ ಮಾರ್ಗದಲ್ಲೇ ಇತರ ಹರಿದಾಸರು ಮುನ್ನಡೆದರು. ಪುರಂದರ — ಕನಕದಾಸರಿಗೆ ಮೊದಲೇ ಆರಂಭವಾದ ವಾದಿರಾಜರ ಸಾಹಿತ್ಯ ಸೃಷ್ಟಿ ಅವರ ಕಾಲಾನಂತರವೂ ಅಬಾಧಿತ ಸಾಗಿದೆ. ಯತಿಧರ್ಮದ ಎಲ್ಲ ಚಟುವಟಿಕೆಗಳ ನಡುವೆ ಕೂಡ ಸಮಾಜ ಸುಧಾರಿಸುವ, ಮತ ಪ್ರಸಾರಗೈವ, ಸಾಹಿತ್ಯಸೃಷ್ಟಿ ಮಾಡುವ ಹವ್ಯಾಸ ಅಚ್ಚರಿ ಹುಟ್ಟಿಸುವಂತಿದೆ. ಅವರು ಕಂಡ ರಾಜ್ಯಗಳೆಲ್ಲ ನಾಮಾವಶೇಷವಾದುವು, ಕಂಡರಿಸಿದ ಕೃತಿ ಮಾತ್ರ ಕೀರ್ತಿಶೇಷವಾದುವು, ಅವರನ್ನು ಕೃತಿಕಾಯರನ್ನಾಗಿಸಿದುವು.

ಸಂಸ್ಕೃತದಂತೆ ಕನ್ನಡದಲ್ಲಿ ಕೂಡ ಗದ್ಯ—ಪದ್ಯ, ಶಾಸ್ತ್ರ ಕಾವ್ಯ, ಹಾಡು—ಸುಳಾದಿ ಮೊದಲಾದ ಬಗೆಬಗೆಯ ಕೃತಿಯಿತ್ತವರು ವಾದಿರಾಜರು. ಅವರ ಇಡಿಯಾದ ಕನ್ನಡ ಕೃತಿ ಅಂತಹ ಸಂಸ್ಕೃತ ಕೃತಿಗಳಿಗಿಂತ ಸಂಖ್ಯೆಯಲ್ಲಿ ಕಡಿಮೆಯಾದರೂ ಸತ್ವದಲ್ಲಿ ಕಡಿಮೆಯಿಲ್ಲ; ಬಿಡಿಯಾದ ಹಾಡುಗಳು ಸಂಸ್ಕೃತ ಸ್ತೋತ್ರಗಳಿಗಿಂತ ಸಂಖ್ಯೆಯಲ್ಲಿ 5 ಪಟ್ಟು ಹೆಚ್ಚಿದ್ದು ಗುಣದಲ್ಲಿ ಅವಕ್ಕೆ ಸರಿಸಮಾನವಾಗಿವೆ, ಸಹಜವಾಗಿ ಹೆಚ್ಚು ಜನಪ್ರಿಯವೆನಿಸಿವೆ. ಇವೆಲ್ಲವುಗಳ ಧರ್ಮ, ಕಾವ್ಯಧರ್ಮಗಳನ್ನು ಸಹ ತುಸು ವಿವರದಲ್ಲಿ ಸಮಾಲೋಚಿಸುವ.

## (1) <u>ಇಡಿಯ ಕೃತಿಗಳು</u>

### <u>ಶಾಸ್ತ್ರಕಾವ್ಯ</u>

1) <u>ಲಕ್ಷ್ಮೀಶೋಭಾನೆ</u>: ಕೃತಿಯ ಹೆಸರೇ ಹೇಳುವಂತೆ, ಇದು ಲಕ್ಷ್ಮೀ ಸ್ವಯಂವರದ ಕಥೆಯನ್ನೊಳಗೊಂಡಿದ್ದು, ರಚನೆಯಾದಾಗಿನಿಂದ ಮದುವೆಯಲ್ಲಿ ಮದುಮಕ್ಕಳ ಕಲ್ಯಾಣಾರ್ಥ ಹಾಡುವ ಶೋಭಾನೆ ಪದವೆನಿಸಿದೆ.[1] ಲಕ್ಷ್ಮಿಯು ದೇವೋತ್ತಮ ವಿಷ್ಣುವನ್ನೇ ವರಿಸಿದಳಾಗಿ, ಹರಿಸರ್ವೋತ್ತಮತ್ವ ಪ್ರತಿಪಾದಕ ತತ್ವವಾದವೂ ಇಲ್ಲಿ ಹುದುಗಿದೆ. ಅಲ್ಲದೆ 'ವಿವಾಹ ಮಹೋತ್ಸವದ ವರ್ಣನೆ ಮನೋರಂಜಕ—ಲೋಕಶಿಕ್ಷಾರೂಪವಾಗಿದೆ. ಹನೆಗೆ

---

1. 1500ರ ಸುಮಾರು ವಾದಿರಾಜರು ಕನ್ನಡ ನಾಡಿನಿಂದ ತೀರ್ಥಾಟನೆ ಹೊರಟಾಗ ಮದುವೆಯೊಂದರಲ್ಲಿ ಹಾವು ಕಚ್ಚಿದ ವರನನ್ನುಜ್ಜೀವಿಸಲು ಕೃತಿ ಪಠಿತ (ವಾ.ಗು.ಚ.2,18—21) ಕಾರಣ ಇದು ಪ್ರಾಯದ ರಚನೆಯಾದರೂ ಮಂತ್ರಶಕ್ತಿಯುಕ್ತ.

ಕರೆಯುವುದು, ಆರತಿ ಬೆಳಗುವುದು, ಆಶೀರ್ವದಿಸುವುದು, ಉಡುಗೊರೆಗಳ ವಿತರಣೆ, ಬಂಧು ಜನರ ಆದರಣೆ, ಭೋಜನಾದಿ ಸಂಭ್ರಮ ವರ್ಣನೆಗಳು ವಿವಾಹ ಕಾರ್ಯಕ್ರಮಗಳಲ್ಲಿ ಮಾರ್ಗ ದರ್ಶಕ ಹರ್ಷೋತ್ಸಾಹಜನಕ (ಬಿ.ಶ್ರೀಮರಾವ, ಲಕ್ಷ್ಮೀಶೋಭಾನೆ, ಪ್ರಸ್ತಾವನೆ ). ಮದುವೆಯ ಶುಭ ಸಂದರ್ಭದಲ್ಲಿ ಸುಮಂಗಲಿಯರು ಶೋಭನ ಪದ ಹಾಡುವುದು ಸಂಪ್ರದಾಯ. ಜಾನಪದರು ಇವುಗಳ ಅಂತ್ಯದಲ್ಲಿ 'ಸೋ' ಎಂಬ ಸೊಲ್ಲನ್ನು ಸರಾಗವಾಗಿ ಸೇರಿಸುವುದರಿಂದ ಇವನ್ನು ಸೋಬಾನೆ ಪದ ಎನ್ನುವುದುಂಟು. ಇವು ಹೆಣ್ಣುಮಕ್ಕಳಿಗುಚಿತವಾದ ತ್ರಿಪದಿ ಸಾಂಗತ್ಯದಂಥ ದೇಸಿಲಯ ಛಂದಸ್ಸಿನಲ್ಲಿರುತ್ತವೆ. ಪ್ರಸ್ತುತ ಕೃತಿ ಸಾಂಗತ್ಯದಲ್ಲಿದೆ.

ಪಲ್ಲವಿ ಸಹ 113 ನುಡಿಗಳ ಈ ಹಾಡಿಗೆ 'ಪಂತುವರಾಳಿ ರಾಗ— ಧ್ರುವ ತಾಳ' ಸೂಚಿತ. ಯಮಕಾಲಂಕಾರದ ಹರಿಸ್ತುತಿರೂಪದ ಪಲ್ಲವಿ ಇದು —

ಶೋಭನವೆನ್ನಿರೆ ಸುರರೊಳು ಸುಭಗನಿಗೆ
ಶೋಭನವೆನ್ನಿ ಸುಗುಣನಿಗೆ
ಶೋಭನವೆನ್ನಿರೆ ತ್ರಿವಿಕ್ರಮರಾಯನಿಗೆ[2]
ಶೋಭನವೆನ್ನಿ ಸುರಪ್ರಿಯಗೆ ॥ ಶೋಭಾನೆ

ಇಲ್ಲಿಯ ಸುಭಗ ಶಬ್ದವು ಐಶ್ವರ್ಯ — ವೀರ್ಯ — ಯಶಸ್ಸು — ಕಾಂತಿ — ಜ್ಞಾನ — ವಿಜ್ಞಾನಾದಿ ಗುಣಸೂಚಕವಾದರೆ, ಸುಗುಣವೆಂಬುದರಿಂದ ಹರಿಯ ಗುಣಪೂರ್ಣತ್ವ, ದೋಷರಾಹಿತ್ಯಗಳು ಧ್ವನಿತ. ತ್ರಿವಿಕ್ರಮರೂಪವು ಋಜುಪೂಜಿತವಾಗಿ ವಾದಿರಾಜರ ಸ್ವರೂಪಸೂಚಕ. ಅವರು ಯತಿಗಳಾದರೂ ಮದುಮಕ್ಕಳ ಪರವಾಗಿ —

ಲಕ್ಷ್ಮೀನಾರಾಯಣರ ಚರಣಕ್ಕೆ ಶರಣೆಂಬೆ
ಪಕ್ಷಿವಾಹನಗೆರಗುವೆ
ಪಕ್ಷಿವಾಹನಗೆರಗುವೆನನುದಿನ
ರಕ್ಷಿಸಲಿ ನಮ್ಮ ವಧುವರರ (1)

---

2. ತ್ರಿವಿಕ್ರಮಾಲಯ 1582ರಲ್ಲಾದರೂ, ಇಲ್ಲಿ ಋಜುಗಳ ಆರಾಧ್ಯದೈವ ಎಂಬ ಸಾಮಾನ್ಯಾರ್ಥ.

ಎಂದು ಬಣ್ಣಿಸಿದ್ದು ಅವರ ಸರ್ವಜೀವಾಭಿಮಾನಿತ್ವದ ಮುಖ್ಯಲಕ್ಷಣಕ್ಕೆ ದ್ಯೋತಕ. ತಾರತಮ್ಯದಂತೆ ಲಕುಮಿಯನ್ನೂ ಪುನಃ ಪ್ರಾರ್ಥಿಸಿ, ಲಕ್ಷ್ಮೀನಾರಾಯಣರ ಜನ್ಮಕ್ಕೆ ಅವತಾರವೇ ಅರ್ಥವೆಂದು, ಸಾಗರೋದ್ಭವೆಯು ಕಂಬುಕಂಧರ ಮಂಗಳಸೂತ್ರ ನಿತ್ಯ ದಾಂಪತ್ಯದ ಸಂಕೇತವೆಂದಿದ್ದಾರೆ. ಈ ಕಥಾನಾಯಿಕೆಯ ದಿವ್ಯಸ್ವರೂಪವನ್ನು 'ಅಂಬುಜವೆರಡು ಕರದಿ, ಒಂದು ಕರದಿಂದ ಅಭಯವೀವಳೆ, ಮತ್ತೊಂದು ಕೈಯಿಂದ ವರಗಳ' ಎಂದು ಬಣ್ಣಿಸುತ್ತ, ಕಾಂಚಿಯದಾಮ — ಕಿಂಕಿಣಿ — ಕಾಲಂದುಗೆಗಳ ಚೆಲುವೆ, ರನ್ನದ ಪೊರೆಗಟ್ಟು ಚಿನ್ನದಾಭರಣಗಳ ಚೆನ್ನೆ, ಕುಂಭಕುಚದ ಮೇಲೆ ಇಂಬಿಟ್ಟ ಹಾರ, ತುಂಬಿಗುರುಳ ಮುಖಕಮಲದ ಜಗದಂಬೆ ಮುದ್ದುಮಕ್ಕಳ ಸಲಹಲೆಂದು ಭಕ್ತಿಯಿಂದ ಬೇಡಿದ್ದಾರೆ; ಮುತ್ತಿನ ಓಲೆ ಕಸ್ತೂರಿ ತಿಲಕ ಶಶಿಬಿಂಬದಂತೆಸೆವ ಮೂಗುತಿಯ ಮಹಲಕುಮಿ ಅಂಬುದಕೇಯೂರ, ಮುತ್ತಿನಪತಕ ಮುಕುಟ ಧರಿಸಿ ಕುಸುಮ ತುರುಬಿನಳೆ ಅರವಿಂದ ಮಾಲೆಯ ಧರಿಸಿ ದೇವಾಂಗ ಉಟ್ಟವಳೆ ಸೇವಕರ ಸಲಹು ಎಂದು ವಿನಮ್ರರಾಗಿ ವರ್ಣಿಸಿದ್ದಾರೆ (2—14). ಇದರಿಂದ ಶೃಂಗಾರಕ್ಕಿಂತ ಭಕ್ತಿಯೇ ಇಲ್ಲಿ ಮುಖ್ಯ.

ಇನ್ನು ಮುಂದಿನ ಅವಳ ಸ್ವಯಂವರ ನಾಟಕ ಹರಿಸರ್ವೋತ್ತಮತ್ವ ನಿರೂಪಣೆಗೆ ಸಹಾಯಕ[3]—

ಈ ಲಕುಮಿದೇವಿ ಕಾಲುಂಗುರ ಘಲಕೆನಲು
ಲೋಲಾಕ್ಷಿ ಮೆಲ್ಲನೆ ನಡೆತಂದಳು
ಸಾಲಾಗಿ ಕುಳ್ಳಿರ್ದ ಸುರರ ಸಭೆಯ ಕಂಡು
ಆಲೋಚಿಸಿದಳು ಮನದಲ್ಲಿ (15)

ಅವರಲ್ಲಿ ತನ್ನ ಮಕ್ಕಳಂತಾಗಿ, ಹೆಸರೆತ್ತಿ ಹೇಳದೆ, ಕುಂದ ಹೇಳುವುದಕ್ಕೆ ನಾಚಿ, ನೆನೆದಳು ಮಾತ್ರ. ತಪಸ್ವಿಯಾದರೂ ಶಾಪ ಕೊಡುವ ದುರ್ವಾಸರಂತಹರು ಲಲನೆಯ ಒಲಿಸುವರೇ? ಬೃಹಸ್ಪತಿ—ಶುಕ್ರರಂತಹ ಗುರುಗಳೂ ಧನದಾಸೆಯಿಂದ ಪೌರೋಹಿತ್ಯಕೊಳಗಾದರು![4]

---

3. ರುಕ್ಮಿಣೀಶ ವಿಜಯ 16ರಂತೆ.

4. ಬೃಹಸ್ಪತಿ ಮರುತ್ತನ ಯಜ್ಞದಕ್ಷಿಣೆಗಾಶಿಸಿ ಪೌರೋಹಿತ್ಯಕ್ಕೆಳಸಿದ್ದರೆ, ಶುಕ್ರಾಚಾರ್ಯರು ಕುಬೇರನ ಧನ ಕದ್ದು ತಮ್ಮನ್ನೇ ನುಂಗಿದ ಶಿವನ ಲಿಂಗದಿಂದ ಹೊರಬಂದವರು!

ಬ್ರಹ್ಮ ಮಗಳಿಗೇ ಸೋತ, ರುದ್ರ ಮೋಹಿನಿಯ ಹಿಂದೆ ಹಾರಿದ, ಇಂದ್ರ ಮುನಿಯ ಕಾಮಿನಿಗೈದಿದ, ಚಂದ್ರ ಗುರುಪತ್ನಿ (ತಾರೆಯ) ತಲ್ಪಗಾಮಿ. ನಶ್ವರೈಶ್ವರ್ಯಕ್ಕಾಗಿ (ನನ) ಬಯಸಿದವ ಇಂದ್ರ, ಹರಿಬ್ರಹ್ಮಾದಿಗಳನ್ನಾಶ್ರಯಿಸಿ ಬಾಳುವವ ಈಶ್ವರ,[5] ದಕ್ಷಾಧ್ವರದಲ್ಲಿ ಶಿವನ ಹಾಸ್ಯ ಮಾಡಿ ವೀರಭದ್ರನಿಂದ ಹಲ್ಲುದುರಿಸಿಕೊಂಡವ ಪೂಷಾದಿತ್ಯ, ಕಾಚರದವ[6] ಶೇಷ, ರಾಮನಿಂದ (ಸೀತೆಯ ಮೊಲೆ ಮುಟ್ಟಿಹೋಗಿ) ಒಕ್ಕಣ್ಣನಾದ ಕಾಕಾಸುರನ್ನ (ಇಂದ್ರಸುತ ಜಯಂತ). ದಕ್ಷನನ್ನು ಕೊಂದು ಮತ್ತೆ ಬದುಕಿಸಿದ ಮರುಳಶಿವ, (ಚಿತ್ರಕೇತು ರಾಜ ಶಿವೆಯ ಶಾಪದಿಂದ ತ್ವಷ್ಟೃಸುತ ವೃತ್ರಾಸುರನಾಗಿರಲು, ಕೆಳಗೆ ಬಿದ್ದ ತನ್ನ ವಜ್ರಾಯುಧವೆತ್ತಿ ಹೊಡೆದು ಹರಿಸಂಕಲ್ಪ ನಡೆಸಿದರೂ ವಿಪ್ರೋತ್ತಮ) ಗಾಢಜ್ಞಾನಿಯನ್ನು ಕೊಂದುದಕ್ಕೆ ಕಮಲತಂತುವಿನಲ್ಲಡಗಿ ಬಳಲಿದ ಇಂದ್ರ, ಜೀವರನ್ನು ಕೊಂದೊಯ್ಯುವ ಕುಲಗೇಡಿ ಮೃತ್ಯು ಶಿವನಿಂದ ಬಯಲಾದ ಅನಂಗ; ಧರ್ಮವೆಂಬಂಥ ಹೆಸರಿನಲ್ಲಿದ್ದರೂ ಜೀವರ ಕೊಲ್ಲುವ ನಿಷ್ಕರುಣ ಯಮ; ಬಲಿ ಅಸುರಾವಿಷ್ಟನಾಗಿ ತನ್ನ ಪ್ರತಿಜ್ಞೆಗಂಜಿ (ತನ್ನದಲ್ಲದ) ಭೂದಾನಗೈದು ಮುಕ್ತಿದೂರವಾದ ಪಾತಾಳಕ್ಕಿಳಿದ.[7] ಕಾಲ ನಾಮಕನಾಗಿ ಎಲ್ಲರಾಯುಷ್ಯ ಮುಗಿಸುವ ಶಿಂಶುಮಾರರೂಪಿ[8] ಹರಿಯ ನಿತ್ಯ ಮುತ್ತೈದೆ ಎನಿಸುವ ನಾನು ಪಿತಾಯುಗಳನ್ನೊಲ್ಲೆ. ಇವರು ದುಃಖದೂರಳಾದ ನನಗೆಂತು? ಬ್ರಹ್ಮ ಮಗ, ರುದ್ರ ಮೊಮ್ಮಗ, ಶೇಷ ಶಯನ, ಗರುಡ ವಾಹನ, ಜಯವಿಜಯರು ಬಂಟರು. ಯಮನೂ ಅಂಜುವ ಹೆಸರಿದ್ದ,[9] ಮೋಕ್ಷ ಕೊಡಬಲ್ಲ ಹರಿಯೊಬ್ಬನೇ ನಿರವದ್ಯ.

---

5. ನ ಈಶ್ವರಃ ಕಿಂ ಪರತೋ ವ್ಯಪಾಶ್ರಯಃ (ಭಾಗವತ).

6. ಅದ್ಯಶಾಖ್ಯಂಘ್ರಿ = ಕಾಲು ಮುದುಗಿಸಿಕೊಂಡವ (ಗೂಢಪಾತ್); ವಸ್ತುತಃ "ವಂದ್ಯಚರಣ ನಾಗಪತಿ" (ದ್ವಾದಶಸ್ತೋತ್ರ).

7. ಧರ್ಮಃ ಕ್ವಚಿತ್ತತ್ರ ನ ಭೂತಸೌಹೃದಂ; ತ್ಯಾಗಃ ಕ್ವಚಿತ್ತತ್ರ ನ ಮುಕ್ತಿಕಾರಣಂ; ದಾನಂ ಕ್ವಚಿತ್ತತ್ರ ನಮುಕ್ತಿಸಾಧನಂ (ಭಾಗವತ).

8. ಸೂರ್ಯಾದಿ ಗ್ರಹ ನಿಯಂತೃಕ ಧ್ರುವನೂ ದೇಹಿನಾಕಾರದ ಶಿಂಶುಮಾರನನ್ನು ಆಶ್ರಯಿಸಿರುವ (ಭಾಗವತ, 5).

9. ಯದ್ಭಯಂ ಚ ಬಿಭ್ಯತಿ ತತಃ ಪ್ರಭೃತಿ (ಭಾಗವತ); ಧರ್ಮೋತ್ಯ ಸಹೋಽಪಿ ದಂಡ ಪಾಣಿಃ (ರುಕ್ಮಿಣೀಶ ವಿಜಯ, 4,6); ಅಜಾಮಿಳವೃತ್ತಾಂತದಲ್ಲಿ ಲಕ್ಷ್ಯ.

ಇಂಥವನೊಡನೆ ಜೀವೈಕ್ಯಾದಿ ನುಡಿ ಮರುಳತನ (16—28) — ಇಂತು:

ಒಂದೊಂದು ಗುಣಗಳು ಇದ್ದಾವು ಇವರಲ್ಲಿ
ಸಂದಣಿಸಿವೆ ಬಹುದೋಷ
ಕುಂದೆಳ್ಳಷ್ಟಿಲ್ಲದ ಮುಕುಂದನೆ ತನಗೆಂದು
ಇಂದಿರೆ ಪತಿಯ ನೆನೆದಳು (29)

ಕಾರಣ, ಹರಿಯ ಹಿರಿಮೆಯನ್ನು ನಿರೂಪಿಸಲು ಇದು ಸುಸಂದರ್ಭ: ಸರ್ವರನ್ನು ಸಂಹರಿಸಿ ತನ್ನಲ್ಲಿರಿಸಿಕೊಂಡ ಪ್ರಳಯ ಕಾಲದ ಹರಿಯ ಬದಲು ಆಲದೆಲೆಯ ಮೇಲೆ ಯಾರಾದರೂ ಶಿವಲಿಂಗವ ನಿಲಿಸುವರೇ? ಪ್ರಾಣಿಗಳು ನೆನೆಯದಿದ್ದರೂ ನಾರಾಯಣ ಅವುಗಳನ್ನು ಪೊರೆವ. ಅವನೇ ದುಃಖಿಯಾದರೆ ಅನ್ಯರ ದುಃಖ ಕಳೆಯಲು ಅವತರಿಸುವನೇ?' 'ಕೆಸರೊಳು ಮುಳುಗಿದವ ಪರರ ಬಾಧಿಪ ಕೆಸರ ಬಿಡಿಸೋನೆ'?[10] ಅನಾದ್ಯನಂತನಿಗೆ ಲಯ ಉಂಟೇ? ಅವನಿಗೆ ಅಮ್ಮಿಯನುಣಿಸಿದ ಯಶೋದೆ ಅಮ್ಮ ಎನ್ನಬಹುದೇ? ಹಸಿವು ತೃಷೆಗಳಿದ್ದರೆ ಅವನಿಗೆ ಪ್ರಳಯ ಕಾಲದಲ್ಲಿ ಎಡೆ ನೀಡುವವರಾರು? ಆಗಲೂ ರಮಾರಂಗನ ದಲ್ಲಿದ್ದು ಆನಂದಪ್ರದನಾದ ಗುಣನಿಧಿಗೆ ಋಣ ಉಂಟೇ? ಅಂತಹನಿಗೇ ವೀರ್ಯ ಜನಿಸಿದರೆ ಪ್ರಳಯದಲ್ಲಿ ಮಕ್ಕಳೇಕೆ ಹುಟ್ಟರು?'[11] ಆತ ದೋಷದೂರನೆಂಬುದು ಸದಾ ತಿಳಿದಿರಬೇಕಾದುದು. ಎಲ್ಲ ಜಗತ್ತನ್ನು ನುಂಗಿ ದಕ್ಕಿಸಿಕೊಂಡವಗೆ ಅಜೀರ್ಣ ಮೂಲದ ರೋಗರುಜಿನಗಳಿಲ್ಲ. ಇಂಥವನನ್ನು ಒಳಗೊಂಬ ದುಃಖವೆಲ್ಲಿದೆ? ಅದ್ವೈತಿಯೇ, ಸರ್ವಾಂತರ್ಯಾಮಿಯೂ ಜನನರಹಿತನೂ ಆದ ನರಸಿಂಹನ ಅವತಾರ.[12] ಅವನದೋ ನಿನ್ನದೋ? ಅಂಬುಧಿಯಲ್ಲಿ ಮಾಡಿದ ಕೂರ್ಮನಹಿತನಾರು? ಕೃಷ್ಣನಿಗೆ ಜನ್ಮ[13]ವನ್ನೆಂದು ನುಡಿವೆ? (30— 42). ಇದಕ್ಕೆ

---

10. ಅನುತ್ತೀರ್ಣಃ ಸ್ವಯಂ ಪಂಕಾತ ಕಿಮನ್ಯೋತ್ತಾರಕೋ ಭವೇತ (ಯುಕ್ತಿಮಲ್ಲಿಕಾ, 2).

11. ತತ್ವಗಳನ್ನು ಪರಿಣಾಮಗೊಳಿಸಿ ಲಕ್ಷ್ಮಿಯಲ್ಲಿರಿಸಿ ಬ್ರಹ್ಮಾಂಡ ನಿರ್ಮಿಸಿದ, ವೀರ್ಯದಿಂದಲ್ಲ (ಸರಸಭಾರತೀವಿಲಾಸ).

12. 'ಕಾ ಸ್ತ್ರೀ ಸುಷುವೇ ಮುಕುಂದಂ? ಕಸ್ಯ ವೀರ್ಯಾದಜನಿಷ್ಟ ಕಾಯಃ?' (ರುಕ್ಮಿಣೀಶ ವಿಜಯ, 1— 54).

13. ದೇವಕಿಯಲ್ಲಿ ಚಂದ್ರನಂತುದಿಸಿದ ಹರಿ ಚತುರ್ಭುಜಾದಿಗಳ ಮೂಲರೂಪ ತೋರಿದ (ಶ್ಲೋ.62) ಕಾರಣ, ಗರ್ಭವಾಸ—ಪ್ರಾಕೃತದೇಹ ರಹಿತನಿಗೆ ಜನ್ಮವಿಲ್ಲ, ಅದು ಬರಿ ಪ್ರತ್ಯಕ್ಷತ್ವ.

ವಾದಿರಾಜರ ವಾದವೈಖರಿಯಿದು —

ಅವಳಿಸುವಾಗ ಯಶೋದಾದೇವಿಗೆ
ದೇವ ತನ್ನೊಳಗೆ ಹುದುಗಿದ್ದ
ಭುವನವನೆಲ್ಲವ ತೋರಿದುದಿಲ್ಲವೇ?
ಆ ವಿಷ್ಣು ಗರ್ಭದೊಳಡಗುವನೇ? (43)

'ಅನಂತ ಮಾನದಿ ಅಡಗಿಸಿದವರುಂಟೇ?' ಅನಾದಿಯಿಂದನೇಕ ಕೋಟಿ ಬ್ರಹ್ಮಾಂಡ ತನ್ನ ರೋಮಕೂಪಗಳಲ್ಲಿರುವವನನ್ನು ತಾಯಿ ಹೊಟ್ಟೆ ಒಳಗೊಂಬುದೇ? ಕೃಷ್ಣನ ಮಗನಾದ ಕಾಮ ತಂದೆಗೇ ಕಣಿ ಎನಿಸನೇ? ಸುದತೇರಿಗೆ ಸಿಲುಕುವನೇ? ಇವಗೆ ಪರನಾರಿ ಸಂಗವಿಲ್ಲ,[14] ಕುಂದುಕೊರತೆಯಿಲ್ಲ[15] (44— 47). ಅಲ್ಲದೆ —

ಹತ್ತು ವರ್ಷದ ಕೆಳಗೆ ಮಕ್ಕಳಾಟಿಕೆಯಲ್ಲಿ
ಚಿತ್ತ ಸ್ತ್ರೀಯರಿಗೆ ಎರಗುವುದೆ
ಅರ್ತಿಯಿಂದಾರ್ಚಿಸಿದ ಗೋಕುಲದ ಕನ್ಯೆಯರ
ಸತ್ಯಸಂಕಲ್ಪ ಬೆರೆತಿದ್ದ[16] (48)

16108 ಸ್ತ್ರೀಯರಲ್ಲಿ ಹತ್ತು ಹತ್ತರಂತೆ ಪುತ್ರರ ಸೃಷ್ಟಿಸಿದವರುಂಟೇ? ಹರಿಗಿದು ಆರ್ತಿಯ ಲೀಲೆ.[16] ಗೋಪಾಲಕರು ವೃಂದಾವನಕ್ಕೆ ಸರಿಯಾದಾಗ ರೋಮ ರೋಮ ಕೂಪ ಕೋಟಿ ವೃಕ ನಿರ್ಮಿಸಿ ತೆರಳಿಸಿದ;[17] ಈ ಮಹಿಮೆ ಭಕ್ತರ ಸಲಹಲಿಕೆ. ತಾಯಿಗೆ ವಿಶ್ವರೂಪದೋರಿದ್ದೂ[18] ಭಕ್ತರನ್ನು ಅಜ್ಞಾನದಿಂದ ರಕ್ಷಿಸಲು. ಇಲ್ಲದಿದ್ದರೆ ಸರ್ವಸಂಗ ಪರಿತ್ಯಕ್ತ ನಾರದಾದಿಗಳು ಇವನ ಭಜಿಸುವರೇ? ಇವನಂಗುಷ್ಠ ತೊಳೆದ ಗಂಗೆ ಜೀವರ ಪಾಪ ಕಳೆವಳು. ಇವನಲ್ಲಿ ಕಿಲ್ಬಿಷವಿದ್ದರೆ ಧರ್ಮಜ ಅಗ್ರಪೂಜೆಗೈವನೇ? ಬ್ರಹ್ಮನ 100 ವರ್ಷಗಳನಕ[19]

---

14. ಸ್ವರಮಣನು ತನ್ನ ಸ್ತ್ರೀರೂಪ ರಮೆಯೊಡನೆ ಕ್ರೀಡಿಸುವಲ್ಲಿ ಆಕೆ ಕ್ರೀಡಾ ಪಾತ್ರ ಮಾತ್ರ, ರತಿಪ್ರದಳಲ್ಲ (ಐತರೇಯ ಭಾಷ್ಯ).

15. ಇತರತ್ರ ದೋಷವೆಂಬುವು ಹರಿಯಲ್ಲಿ ಗುಣವೆನಿಸುತ್ತವೆ. (ಉದಾ — ಬಹು ಭೋಕ್ತೃತ್ವ).

16. ಕಾತ್ಯಾಯನೀ ವ್ರತ ಮಾಡಿ ವರ ಪಡೆದ ರಮಾವಿಷ್ಟ ಗೋಪಿಯರನ್ನು ಮಾತ್ರ (ಭಾರತ, ಭಾಗವತ ತಾತ್ಪರ್ಯ ನಿರ್ಣಯ).

17. ವಿಚಿತ್ರ ಶಕ್ತಿಯವನ ಮಹಿಮೆಗಳೂ ವಿವಿಧ (ಶ್ರುತಿ). (ನೋ — ಶ್ರೀಕೃಷ್ಣ ಬಾಲಲೀಲೆ ಉತ್ತರಾರ್ಧ 322).

18. ವೃಕಾನನೇಕಾಂಶ್ಚ ಸಸರ್ಜ ರೋಮಭ್ಯಃ (ಯು.ವಿ.4— 17).

19. ನಮ್ಮ ವರ್ಷ ದೇವತೆಗಳ ದಿನ. ಅವರ 12— 3— 4 ಸಾವಿರ ವರ್ಷ ಕಲಿ ದ್ವಾಪರಾದಿ ಯುಗ. ಸಂಧಿಕಾಲ 2000 ವರ್ಷ ಸಹ ಮಹಾಯುಗ. 1000 ಮಹಾಯುಗ ಬ್ರಹ್ಮನ ಹಗಲು. ಅವನ ಶತಾಯುವಿನಷ್ಟೇ ಪ್ರಳಯಾವಧಿ.

ಕೊಂಬು ಡೊಂಬು ಕಹಳೆಗಳು ತಾಳ ಮದ್ದಳೆಗಳು
ತಂಬಟೆ ಭೇರಿ ಪಟಹಗಳು
ಘೂಂಘೂಂ ಎಂಬ ಶಂಖ ಡೊಳ್ಳು ಪತಾರಿಗಳು
ಅಂಬುಧಿಯು ಮನೆಯುಲ್ಲಸಿದವು (71)

ವರುಣ ಷೋಡಶೋಪಚಾರದಿಂದರ್ಚಿಸಿದಳಿಯನಿಗೆ ಮಗಳ ಧಾರೆಯೆರೆದು ಸದ್ಗತಿ ಕೇಳಿದ. ಮಂತ್ರ ಪೇಳಿದ ಮುನೀಂದ್ರರು ಅಕ್ಷತೆ ತಳಿದರು, ತುಂಬುರು ನಾರದರು ಪಾಡಿದರು, ದೇವಾಂಗನೆಯರು ಓದಿ ಹಾಡಿ ಕುಣಿದು ಹೂಮಳೆಗರೆದರು. ಮುತ್ತೈದೆಯರುವರನ ಬಣ್ಣಿಸಿ ಹಸೆಗೆ ಕರೆದರು — 'ದೋಷದೂರ, ಕುಂಜರವರದಾಂತಕ, ಆಲದೆಲೆಯ ಮೇಲಣ ಅನಾದಿಮೂರುತಿ, ರಮಾರಮಣ, ದಶಾವತಾರಿ, ಬ್ರಹ್ಮಾರ್ಚಿತ, ಭಾರತಿ — ರುದ್ರಾಣಿಯ ರಲ್ಲಿ ಪರಮಾನ್ನ ಸವಿದರೆ ಗಗನ ಮಾರ್ಗದಲ್ಲಿ ಗಂಧರ್ವಗಾನ ಸವಿಯುವಾತ, ಇಂದ್ರ ಸಭೆಯ ಉಪೇಂದ್ರ, ಅದಿತಿಯ ಆಭರಣವಿತ್ತು ಪಾರಿಜಾತ ತಂದವ, ಮುನಿ ಪೂಜಿತನೇ ಹಸೆಗೆ ಬಾ.' ದಿವ್ಯ ದಂಪತಿ ಹಸೆಯೇರಿ, ದೇವತೆಗಳು 4 ದಿನ ವಿವಾಹೋತ್ಸವಗೈದರು. ಅತ್ತೇರೆನಿಸಿದ ಗಂಗಾದಿಗಳೂ ಭಾರತ್ಯಾದಿ ದೇವತೆಗಳೂ ಶೋಭಾನದಕ್ಷತೆ ತಳಿದು, ಪದವ ಪಾಡುತ್ತ ಆರತಿ ಎತ್ತಿದರು (72—94). ಬ್ರಹ್ಮಾದಿಗಳೆರಗಿ ಉಡುಗೊರೆಯಿತ್ತ ನುಡಿ ಅನುಪ್ರಾಸಪೂರ್ಣ —

ಸತ್ಯಲೋಕದ ಬೊಮ್ಮ ಕೌಸ್ತುಭ ರತ್ನವಿತ್ತ
ಮುಕ್ತ ಸುರರ ಮುದದಿಂದ
ಮುಕ್ತಿಯ ಕಂಠಿಸರ ಮುಖ್ಯಪ್ರಾಣನಿತ್ತ
ಮಸ್ತಕದ ಮಣಿಯ ಶಿವನಿತ್ತ (95)

ವರುಣಾಲಯಸ್ಥ ಹರಿ ತಾನೇ ಮುಖದ ಅಗ್ನಿಯುರಿಯದಂ ಆರಗೊಡದೆ ತನ್ನ ಆಹುತಿ ಪಾಕವಾಗಿ ದಿಬ್ಬಣಕ್ಕೆ ಮುಟ್ಟುವಂತೆಸಗಿದ. ಮಥಿತಾಮೃತವನ್ನು ವರುಣ ಉಣಬಡಿಸಿದ. ದಾನವರು ಔತಣ ಕೆಡಿಸದಿರಲು ಹರಿ ಹೆಣ್ಣಾದ (96—98). ಆಗ

ತನ್ನ ಸೌಂದರ್ಯದಿಂದುನ್ನತಮೆಯ ಆ
ವರ್ಣದಿಂದ ಮೆರೆವ ನಿಜಪತಿಯು
ಹೆಣ್ಣು ರೂಪವ ಕಂಡು ಕನ್ಯೆ ಮಹಲಕುಮಿ ಇವ
ಗನ್ಯಳೇಕೆಂದು ಬೆರಗಾದಳು. (99)

— ಇಂಥ ಮೋಹಿನಿ ಸುರರಿಗುಣಿಸಿದರೆ, ಸುರರು ಹರಿಗೆ ನಾಗಬಲಿ ನಡೆಸಿದರು (100—101).

ವರುಣ ದೇವತೆಗಳಿಗಿತ್ತ ಉಡುಗೊರೆಗಳ ವಿವರವು ಪ್ರಾಸಾನುಪ್ರಾಸಯುಕ್ತ

ಕ್ಷುಧೆಯ ಕಳೆವ ನವರತ್ನದ ಮಾಲೆಯ
ಮುದದಿಂದ ವಾರಿಧಿ ವಿಧಿಗಿತ್ತ
ಚದುರ ವರವ ವಾಯುದೇವರಿಗಿತ್ತ
ವಿಧುವಿನ ಕಲೆಯ ಶಿವಗಿತ್ತ (102)

ಇದರಂತೆಯೇ (ಲೌಕಿಕಾರ್ಥ) ಶಕ್ರಾದಿಗಳಿಗೆ ದಾದಂತಗಜ, ಪಾರಿಜಾತ, ಅಪ್ಸರೆಯರನಿತ್ತ ವರುಣ ಹೊರಗೆ ಮದುಮಕ್ಕಳ ಹರಸಿದೆಂದು, ಒಳಗೆ ಹರಿಭಕ್ತಿಯ ಕೋರಿದ. ಎಲ್ಲರ ಕಳುಹಿ ಅಳಿಯನಿಗೆ ಅರಮನೆ ಕಟ್ಟಿಸಿ ಕೊಟ್ಟ, ಅನ್ಯತ್ರ ಅದಿ ಇದರಂತೆನಗಿದ (103—106).

ಹೀಗೆ ಲಕುಮಿಗೆ ಜಯವಿತ್ತು ಹಯವದನ ಎಲ್ಲರ ನಲಿಸಿ, ತಮ್ಮನ್ನು ಪರಮ ಸನ್ನಿಧಿಯಲ್ಲಿರಿಸಲಿ ಎಂದಿದ್ದಾರೆ 'ಏಕಾಂತ ಭಕ್ತ' ವಾದಿರಾಜರು (107—108). ಜೊತೆಗೆ

ಇಂತು ಸ್ವಪ್ನದಿ ಕೊಂಡಾಡಿಸಿಕೊಂಡ ಲಕ್ಷ್ಮೀ
ಕಾಂತನ ಕಂಡನೆನಿಸುವ
ಸಂತರ ಶರಣಮುಖ್ಯನ ವಾದಿರಾಜೇಂದ್ರ ಮುನಿ
ವಂಧವಿ ಪೇಳಿದ ಪದವಿದು (109)

ಎಂಬಲ್ಲಿ ಹರಿ ಸ್ವಪ್ನದಲ್ಲಿ 'ಮದುವೆ ಮಾಡಿಸೆ'ಂದ ವೃತ್ತಾಂತ ಸೂಚಿಸಿದ್ದಾರೆ, ಜಾಗ್ರತ ಸ್ವಪ್ನ ಸುಷುಪ್ತಿಗಳಾಚೆ ಇರುವ ತಮ್ಮಂಥ ಋಜುಗಳ ಧ್ಯಾನವೇ ಸ್ವಪ್ನವೆನಿಸುವುದನ್ನು ಧ್ವನಿಸಿದ್ದಾರೆ; ಇದಕ್ಕೆ ಪೂರಕವಾಗಿ ಲಕ್ಷ್ಮೀಕಾಂತನ ಕಂಡನೆಂದುದು 'ವೇದವ್ಯಾಸರು ನಿನ್ನ ಕಂಡನೆಂದು ನನ್ನನ್ನು ಲಕ್ಷ್ಮಿಯ ಕೈಗಿತ್ತರು' ಎಂಬ ಸ್ವಾಪ್ನವೃಂದಾವನಾಖ್ಯಾನದುಕ್ತಿಗೆ ಸಮನಾಗಿದೆ (4—14); 'ವಂಧವಿ' ಎಂಬ ಪದ ಮಾರ್ಗಮಧ್ಯೆ ಈ ಕೃತಿ ರಚಿತವಾದುದನ್ನು ವ್ಯಕ್ತವಾಗಿಯೂ, ಹರಿಸರ್ವೋತ್ತಮತ್ವ ನಿರೂಪಣ ಪ್ರತಿಜ್ಞೆಯನ್ನು ಸೂಚ್ಯವಾಗಿಯೂ ತಿಳಿಸಿದೆ. ಈ ಮದುವೆ ಅಸುರ ಮೋಹನದ ನಟನೆಯಾದರೂ, ಮದುವೆಯಲ್ಲಿ ಈ ಪದನ ಹಾಡಿದರೆ ಓಲೆಭಾಗ್ಯ ಹೆಚ್ಚುವುದು ಇದರ ಮಂಗಳಕರ ಫಲಶ್ರುತಿ (110—112). ಇದರಿಂದ ಇದನ್ನು ನಿತ್ಯ ಪಠಿಸುವ ಸಂಪ್ರದಾಯವೂ ಇಂದು ಪ್ರಚಲಿತ. (ಅಂತೆಯೆ ಕನ್ನಡ ಅಧ್ಯಯನ ಸಂಸ್ಥೆಗೆ ಇದರ 9 ಆಕರ ಉಪಲಬ್ಧವಾಗಿವೆ).

ಒಟ್ಟಿನಲ್ಲಿ, ಲಕ್ಷ್ಮೀ ಸ್ವಯಂವರ ವೃತ್ತವನ್ನಾಧರಿಸಿ, ಆವಳು ಗುಣಪೂರ್ಣನೂ ದೋಷರಹಿತನೂ ಆದ ಹರಿಯನ್ನಾಯ್ದುಕೊಳ್ಳುವಲ್ಲಿ, ಅವನ ಸರ್ವೋತ್ತಮತ್ವವನ್ನು ತರ್ಕಬದ್ಧವಾಗಿಯೂ ಕಾವ್ಯಮಯವಾಗಿಯೂ ನಿರೂಪಿಸಿದ ವಾದಿರಾಜರ ಚಾತುರ್ಯ ಮೆಚ್ಚುವಂತಹದು. ಅದರಲ್ಲೂ ಅವರ ಮೆಚ್ಚಿನ ಕೃಷ್ಣಾವತಾರದ ನುಡಿಗಳು (42—64) ತುಸು ಹೆಚ್ಚಾಗಿ ಬಂದು ಪೋಷಿಸಿರುವುದು ಗಮನಾರ್ಹ. ಲಕ್ಷ್ಮೀ ಸ್ವಯಂವರದ ಕಥಾವಸ್ತುವಿನಲ್ಲಾಗಲಿ ಲಕ್ಷ್ಮೀನಾರಾಯಣರ ಪಾತ್ರ ಚಿತ್ರಣದಲ್ಲಾಗಲಿ ಅಂಥ ನಾವೀನ್ಯವಿಲ್ಲದಿದ್ದರೂ, ಈ ಕಥೆ ತತ್ವಗಳನ್ನಿಂತು ಮೇಳವಿಸಿಕೊಟ್ಟದ್ದು ನವೀನವೇ ಸರಿ. ಸ್ವತಃ ಯತಿಗಳಾದರೂ ದಿವ್ಯ ದಂಪತಿಯ ಕಲ್ಯಾಣ ವರ್ಣನೆಯೊಡನೆ ತತ್ವವಾದವನ್ನು ಬೆರೆಸಿ ಈ ಲೋಕದ ಮದುಮಕ್ಕಳ ಕಲ್ಯಾಣ ಸಾಧಿಸಿದ ಕವಿಕೌಶಲ ಪ್ರಶಂಸಾರ್ಹ. ಅದರಲ್ಲೂ ಸಾಂಗತ್ಯದಂಥ ದೇಶೀಯ ಛಂದಸ್ಸು, ನಡುಗನ್ನಡದ ಶೈಲಿನುಡಿಗಳನ್ನು ಬಳಸಿ ಸ್ತ್ರೀ ಸಾಮಾನ್ಯರಿಗೆ ಉಪಯುಕ್ತವೆನಿಸುವಂತೆ ತತ್ವಸಹಿತ ಶೋಭಾನೆ ಪದವಾಗಿ ಕಟ್ಟಿಕೊಟ್ಟದ್ದು ವಿಶೇಷ. ವಾದಿರಾಜರ ಪ್ರಾಸಾನುಪ್ರಾಸಗಳ ಪ್ರೀತಿ, 'ಉಂಬುದಕೆ ತುರುಬಿಲಿ ಬಾಹನೆ ಬಿಡಿಸೋನೆ ಮಲ್ಲಿಕಾಹರಿ ಪಟ್ಟದ' ಎಂಬಂಥ ದೇಸೀಯ ಹಾಗೂ ಪ್ರಾಚೀನ ಪದ ಪ್ರಯೋಗ ಇತರತ್ರದಂತೆ ಇಲ್ಲಿಯೂ ಕಂಡುಬರುತ್ತವೆ. ಅವರ ಉಳಿದ ಅನೇಕ ಕೃತಿಗಳಂತೆ ತತ್ವಪ್ರಸಾರವೇ ಮುಖ್ಯೋದ್ದೇಶವಾದರೂ, ಅದನ್ನಿಂತು ಕಾವ್ಯರೂಪದಲ್ಲಿ ಜನಸಾಮಾನ್ಯರಿಗೆ ಅಳವಡಿಸಿಕೊಟ್ಟ ಹೊಸ ರೀತಿಯ ತಂತ್ರವೇ ಈ ಶಾಸ್ತ್ರಕಾವ್ಯದ ಯಶಸ್ಸಿಗೆ ಕಾರಣ.

2) ಸ್ವಪ್ನಪದ: ಶೋಭಾನೆಯ 'ಸ್ವಪ್ನ' ಶಬ್ದದ ಧ್ಯಾನವೆಂಬರ್ಥ ವಾದಿರಾಜರ ಈ ಕೃತಿಯ ಅದ್ಯಂತ ಧ್ವನಿತವಾಗಿದೆ. 'ಹಯವದನ ಸ್ವಪ್ನದೊಳೆನಗೆ ಪೇಳಿದ ಪದವ ಸಂಗ್ರಹ ಮಾಡುವೆ... ಇಂತು ಸ್ವಪ್ನಾವಸ್ಥೆಯಲಿ ವಾದಿರಾಜರಿಗೆ ಪೇಳಿದ ಪದಗಳು' ಎಂಬಲ್ಲಿ ಋಜುಗಳಾದ್ದರಿಂದ ವಾದಿರಾಜರಿಗೆ ಹರಿಯ ಸಾಕ್ಷಾದುಪದೇಶ ಸೂಚಿತವಾಗಿದ್ದು, ನಿದ್ರಾ—ಸ್ವಪ್ನಾವಸ್ಥೆಗಳಿರದ ಅವರ ಸ್ವಪ್ನಕ್ಕೆ ಧ್ಯಾನಾರ್ಥವೇ ಗಮ್ಯ. ಜಾಗ್ರದಾದ್ಯವಸ್ಥಾತ್ರಯದಾಚೆಯ ಧ್ಯಾನದ ತುರೀಯಾವಸ್ಥೆಯಲ್ಲಿ, ಈ ಋಜುಯೋಗಿಗಳ ದೃಢತರ ನಿಶ್ಚಯ ಜ್ಞಾನದ ಪ್ರಜ್ಞೆ ಸ್ಫೂರ್ತವಾಗಿ, ಪ್ರತಿಭಾತವಾದ ಹರಿಸರ್ವೋತ್ತಮತ್ವಾದಿ

ಪ್ರಮೇಯಗಳಲ್ಲಿ ಪ್ರತಿಪಾದಿತವಾಗಿವೆ. ಆದರಿಂದ ಜಾಗ್ರದವಸ್ಥೆಯಲ್ಲಿ ಅರಿತ ತತ್ವಗಳಂತೆ ಹರಿ ಹೇಳಿದ ಪ್ರಮೇಯಗಳೂ ಯಥಾರ್ಥ ಪ್ರಮಾಣವುಳ್ಳವು. ಹೀಗೆ ಸ್ವಪ್ನದಲ್ಲಿ ಗದಿತ ಎಂದರೆ ಹೇಳಿದ ಎಂಬರ್ಥದಲ್ಲಿದನ್ನು ಕೆಲವರು 'ಸ್ವಪ್ನಗದ್ಯ' ಎಂದಿದ್ದಾರೆ.[26] ಆದರೆ ಇದರಲ್ಲಿ 45 ಭಾಮಿನಿ ಷಟ್ಪದಿಯ ನುಡಿಗಳಿವೆ. ಈ ದೇಸೀಯ ಛಂದದಿಂದಲೂ ತತ್ವ ವಾದದಂಥ ಪ್ರೌಢ ವಿಷಯ ಸಾಮಾನ್ಯರಿಗೂ ಮನದಟ್ಟಾಗುವಂತೆ ಸರಳವಾಗಿ ಇಳಿದಿರುವುದು ಗಮನೀಯವಾಗಿದೆ.

ಮೊದಲ ನುಡಿ ತಾರತಮ್ಯಾನುಸಾರ ದೇವತಾಸ್ತುತಿಯನ್ನೂ, ಸ್ವಪ್ನೋಕ್ತ ಪದಸಂಗ್ರಹದ ಪ್ರತಿಜ್ಞೆಯನ್ನೂ ಪ್ರಾಸಪೂರ್ಣವಾಗಿ ಸೂಚಿಸಿದೆ —

ನೆನೆವೆ ನಾರಾಯಣನ ಪಾದವ,
ನೆನೆವೆ ನಾರಾಯಣಿಯ ಚರಣವ
ನೆನೆವೆ ಪ್ರಾಣನ ಪದವ, ಭಾರತೀದೇವಿಯಂಘ್ರಿಯನು
ನೆನೆಯ, ಶ್ರೀ ಹಯವದನ ಸ್ವಪ್ನದೊ
ಳೆನಗೆ ಪೇಳಿದ ಪದವ, ಲೋಕದ
ಜನರಿಗಿದ ಸಂಗ್ರಹವ ಮಾಡುವೆನವನ ಕೃಪೆಯಿಂದ (1)

ಮುಂದಿನದು ಪ್ರಭುಸನ್ನಿಧಿಯಿಂದ ಹರಿಯ ಸರ್ವೋತ್ತಮತ್ವ ನಿರೂಪಣೆ: ಜೀವರು ಸ್ವಧರ್ಮಾಚರಣ ಎನ್ನ ಸೇವೆಯ ಮಾಡುವುದು, ಪ್ರಸನ್ನನಾಹೆ; ಬೇಸತ್ತರೆ ಮಣ್ಣು ಹೊಯಿಸುವೆ.[27] ಭಕ್ತರು ಪೇಳಿದಂದದಿ ನಡೆವೆ, ಪಾಲಿಸುವೆ. ಅವರೇನು ಮಾಡಿದರದನು ಕೈಗೊಂಬೆ. ಮುಕ್ಕ ದೇವರ್ಕಳ ತೆರದಿ ಮರೆ ಹೊಕ್ಕವರ ಬಿಡೆನು,[28] ಎನ್ನ ಕರುಣಾಕಟಾಕ್ಷ ವೀಕ್ಷಣ ಖಳರ ಶಿಕ್ಷಿಸಿ ಸುಜನರ ರಕ್ಷಿಸುವುದು.[29] (ಉದಾ—) ನಾ ಕುಂಜರನ ಕಾಯ್ದವ, ಪರರಿಗೆ

---

26. ವಾದಿರಾಜ ಗುಣರತ್ನಮಾಲಾ, 7,13.

27. ಬೇಸರದೆ ದುರ್ವಿಷಯಗಳಭಿಲಾಷೆಯಲಿ ಬಳಲುವವ ನಾನಾ ಕ್ಲೇಶಗಳನನುಭವಿಪ ಭಕ್ತಿ ಸುಮಾರ್ಗ ಕಾಣದಲೆ. (ಹರಿಕಥಾಮೃತಸಾರ).

28. 'ಅನನ್ಯಾಶ್ಚಿಂತಯಂತೋ ಮಾಂ' ಎಂಬಂತೆ ದಾಸೋಹಂ ಭಾವದವರ ಕೈಬಿಡದ ಭರವಸೆ.

29. ವಿಶ್ವಸ್ಥಿತಿ ಪ್ರಳಯ ಸರ್ಗಾದಿಗಳನ್ನೆಲ್ಲ ಹರಿಯು ಪಾಂಗಲಮಾತ್ರದಿಂದ ಲಕ್ಷ್ಮಿಯೇ ನಿರ್ವಹಿಸುವಳು (ದ್ವಾದಶ ಸ್ತೋತ್ರ).

ಸಂಜೆ ತೋರಿಸಿ ಧನಂಜಯನ ಪೊರೆದವ, ಕಂಜಲೋಚನೆ ಕರೆಯೆ ವಸ್ತ್ರದ ಪುಂಜಗಳ ಕೊಟ್ಟು ಸಲಹಿದೆ, ನಂಜುಗೊರಳನ ರಿಪುವ ಕುಂದಿಸಿದೆ (2– 6). ವಾದಿರಾಜಪ್ರಿಯ ದಶಾವತಾರಿಯ ನುತಿಗಳು —

ಜಲಧಿಯೊಳಗಾಡಿದನು ಬೊಮ್ಮಗೆ
ಕಲಿಸಿದನು ಶ್ರುತಿತತಿಯ, ನೀರೊಳು
ಮುಳುಗಿದದ್ರಿಯನೆತ್ತಿಕೊಟ್ಟನು ಸುರರ ಸುಧೆಗಾಗಿ,
ಇಳೆಯ ವೈರಿಯ ಕೊಂದೆ, ಪಿತನಿಂ
ದಳಿವ ಶಿಶುವನು ಪೊರೆದೆ, ಬಳಿಕಲಿ
ಬಲಿಯ ಬೇಡಿದೆ, ರಾಮರನು ತಲೆಕೆಳಗು ಮಾಡಿದನು (7)

ಅಂಬುಧಿಯನಂಬಿನಲಿ ಎಸೆದು, ನಿ
ತಂಬಿನಿಯ ಕಂಬನಿಯ ತೊಡೆದೆ,[30] ತ್ರಿ
ಯಂಬಕನ ಹಿತಕಾಗಿ ತ್ರಿಪುರದ ವಧುಗಳ ನಾ ಕೆಡಿಸಿ,[31]
ಇಂಬುಗೊಡದಲೆ ಕಲಿಯ ಧರ್ಮಕ
ದಂಬವನು ತುಂಡಿಸಿದನು[32] ಎನ್ನಾಣೆ
ಎಂಬ ದೇವನದಾವನ್ಯ ಈರೇಳು ಲೋಕದಲಿ (8)

ಅಷ್ಟೇ ಅಲ್ಲ, ಎನ್ನ ಚರಣೋದಕವ ಶಿವ ಆದರದಿ ಧರಿಸಿದ, ಎನ್ನ ಕಾರುಣ್ಯಬಲದಿ ವಿಧಿ ವೇದ ಓದಿದ, ರಮೆ ಸಕಲಗುಣ ಸಂಪನ್ನನೆನುತ ಮುನ್ನ ವರಿಸಿದಳು. ಎನ್ನ ವೈಕುಂಠಾವಲೋಕನ ಜನರ ಭವಬಂಧಮೋಚನ, ನಾಮಸ್ಮರಣೆ ಪಾಪಾಟವಿಗೆ ಕಾಳ್ಗಿಚ್ಚು;[33] ಎನ್ನ ಚರಣದೊಳಿಟ್ಟು ಮನವನು ಭಕುತಿಯ ಮಾಡು, ಸುಖ್ಯಾತಿಯ ತೊಡು, ನಲಿದಾಡು.[34] ಸ್ನಾನ ಧ್ಯಾನಾದಿಗಳಿಂದೇನು ಹಾನಿ ಬಾರದು, ಎನ್ನ ಚರಿತ್ರೆ ಕೇಳುವುದು ಮೋಕ್ಷ ಕಾರಣ (9– 11).

---

30. ಕೃಷ್ಣಾವತಾರ ಮಾಡಿ ಭೂಭಾರ ಹರಣದಿಂದ ಭೂಮಾತೆಯ ಕಂಬನಿ ತೊಡೆದ.

31. ತಾರಕಸುತ ವಿದ್ಯುನ್ಮಾಲಿ ಕಮಲಾಕ್ಷ ತಾರಾಕ್ಷರಿಗೆ ಮಯನಿರ್ಮಿತ ತ್ರಿಪುರ, ವಿದ್ಯುನ್ಮಾಲಿ ಶುದ್ಧೋದನನಾಗಲು ಧರ್ಮಮಾರ್ಗಚ್ಯುತರನ್ನಾಗಿಸಲು ಬುದ್ಧಾವತಾರ, ಆಗ ಶಿವನಿಂದ ತ್ರಿಪುರಭೇದನ— ಸಂಹಾರ.

32. ಶಂಬಲದ ವಿಷ್ಣುಯಶನಲ್ಲವತರಿಸುವ ಕಲ್ಕಿ ಕಲಿಯ ಧರ್ಮನಾಶಗೈವ. (ಕ. ತಾತ್ಪರ್ಯ ನಿರ್ಣಯ, 3,165).

33. ನಾಮಸ್ಮರಣೆ ನಿವಾರಿಸುವಷ್ಟು ಪಾಪಗಳು ಎಲ್ಲ ಪಾಪಿಗಳಿಂದಲೂ ಆಗವು. (ಕೃಷ್ಣಾಮೃತ ಮಹಾರ್ಣವ).

34. ಸ್ಮರಣಕ್ಕಿಂತ ಮೇಲಾದ ಧ್ಯಾನ ವಿಚ್ಛಿತ್ತಿಗೊಳ್ಳುತ್ತಿದ್ದರೆ ಧಾರಣ, ಸತತವಾದರೆ ಸಮಾಧಿ ಅಪರೋಕ್ಷದರ್ಶನ.

ಈ ಭಾಗವತಧರ್ಮವೆಲ್ಲ ಪ್ರಾಸಪೂರ್ಣ ವಾಣಿಯಲ್ಲಿದಿದೆ –

ನೋಡು ಪುಣ್ಯಕ್ಷೇತ್ರಗಳಲೆಡೆ
ಯಾಡು, ಕೀರ್ತಿಯ ಪಾಡು, ಭಕುತಿಯ
ಕೂಡು, ದುರಿತಂಗಳನು ತರಿದೀಡ್ಯಾಡು, ದಿನದಿನದಿ
ಮಾಡು ಮಾಡೆನ್ನುಂಬ ಪ್ರಮಾಜೆಯ,
ಬೇಡು ಮೇಲಣ ಮುಕುತಿ ಫಲವನು
ನೀಡು ಸಂತತವೆನ್ನ ಸುಕಥಾಮೃತವ ಸುಜನರಿಗೆ (12)

ಎನ್ನ ಮಹಿಮೆಯ ತುತಿಸಲು ಅದು ಭವಕಾನನ ಕೃಶಾನು, ತಮಿಸ್ರಕೆ ಭಾನು. ಜೀವ ರಾಶಿಯ ಪುಟ್ಟಿಸಿ ರಕ್ಷಿಪೆನು,[35] ದುರ್ಜನರ ಕೊಲಿಸಿ ಸುಜನರ ಕಾವೆನಿದು ಸಿದ್ಧಾಂತ (13– 14).

ಹರಿಯ ಪ್ರಭುತ್ವಕ್ಕೆ ಪ್ರಮಾಣಗಳಿವು ಋಷಿಮುಖೋದ್ಗತ (ಜನ್ಯವಲ್ಲ)–[36]

ಏಷ ಸರ್ವೇಶ್ವರಃ ಏಷ ಸರ್ವಜ್ಞಃ ಏಷೋಽಂತರ್ಯಾಮಿ
ಏಷ ಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಂ
(ಮಾಂಡೂಕೋಪನಿಷತ್),

ಏಷ ಭೂತಾಧಿಪತಿರೇಷ ಭೂತಪಾಲ ಏಷಸೇತುಃ ವಿಧರಣ ಏಷಾಂ ಲೋಕಾನಾಂ (ಕಾಣ್ವೋಪನಿಷತ್), ಏಷ ಸರ್ವೇಶಾನಃ (ಋಗ್ವೇದ), ಅಗ್ನಿರ್ವೈ ದೇವಾನಾಂ ಅವಮಃ[37] ವಿಷ್ಣುಃ ಪರಮಃ (ಬ್ರಾಹ್ಮಣ ಶ್ರುತಿ) (15– 16)

ಜೀವೇಶ ಭೇದಕ್ಕೆ ಅಥರ್ವಣೋಪನಿಷತ್ತಿನ 'ದ್ವಾಸುಪರ್ಣಾ'ದ್ಯನುವಾದ –
ಶ್ರೀಶನೆಂದೊಬ್ಬಗೆಯ ಖಗ ಶರೀರದೊಳು ಕ್ಲೇಶವನುಣದೆ ಇಹುದು, ಎರಡನೆಯ ಜೀವ ಖಗೇಶನಾಜ್ಞೆಯರಿದು ಕ್ಲೇಶವನುಣುತಿಹುದು; ಶ್ರೀಕಾಂತ ಚಿಂತಾದೂರ,[38]

---

35. ಸೃಷ್ಟಿ ಸ್ಥಿತಿ ಲಯ ನಿಯಮನ ಜ್ಞಾನ ಅಜ್ಞಾನ ಬಂಧ ಮೋಕ್ಷ – ಎಂಬ ಅಷ್ಟಕರ್ತೃತ್ವವೂ ಅವನದೇ.

36. ವೇದಾಪೌರುಷೇಯತ್ವ ಅನಾದಿ ನಿತ್ಯತ್ವ ಪ್ರಮಾಣ ಮಧ್ವರ ವಿಷ್ಣು ತತ್ವ ನಿರ್ಣಯೋಕ್ತ. ಪ್ರತಿ ಕಲ್ಪದಲ್ಲವತರಿಸಿದ ಋಷಿಗಳು ಇದ್ದ ಮಂತ್ರವನ್ನು ಕಂಡ ದ್ರಷ್ಟಾರರು, ಅಷ್ಟೇ.

37. ಅಗ್ನಿಯ ನಂತರದ ಅಶ್ವಿನೀದೇವತೆ ಮುಂತಾದವರು ಪ್ರಾಣದೇಹದ ತತ್ತ್ವಾಭಿಮಾನಿಗಳು, ಬ್ರಹ್ಮಾಂಡ ತತ್ತ್ವಾಭಿಮಾನಿಗಳಲ್ಲ.

38. ಚಿಂತಾಸಂತಾಪಲೇಪೋದ್ಭವ ವ್ಯತಿಮುಖರಾಶೇಷದೋಷಾತಿದೂರ (ಜಯತೀರ್ಥರು).

ಚಿಂತೆಯುಳಿಹ ಜೀವರದು ಬೇರೆ.[39] ಹಿಂದೆ (ಇಂದ್ರನ ಯಾಗದಲ್ಲಿ ಹೋತೃ ವಿಶ್ವಾಮಿತ್ರ ಬೃಹತೀ ಸಹಸ್ರ ಪಠಿಸಲು ಪ್ರೀತನಾದ ಹರಿ ಪ್ರಾಣನೊಡನೆ ಇಂದ್ರಾವಿಷ್ಟನಾಗಿ ಪುನಃ ಪುನಃ ಪಠಿಸಿಕೊಳ್ಳುವಾಗ, ಋಷಿ ನೀನಾರೆನ್ನಲು) 'ಪ್ರಾಣೋ ವಾ ಅಹಮಸ್ಮಿ' ಎಂದ ಇಂದ್ರನ ನುಡಿಗೆ, ವಿಷ್ಣು ಸಂಬಂಧ ಬಾಹುಳ್ಯದಲಿ ನಾನೇ ಪ್ರಾಣನೆಂದ ಆಶಯ ಬ್ರಹ್ಮ ಸೂತ್ರದಲ್ಲಿದೆ. ಕಾರಣ 'ಅಹಂ ಬ್ರಹ್ಮಾಸ್ಮಿ' ಎಂಬಲ್ಲೂ ಅಂತರ್ಯಾಮಿ ಬ್ರಹ್ಮೋಕ್ತಿತ್ವ ಹೇಳಬೇಕು.[40] ಲೋಕದಲ್ಲಿವನೆ ನಾನೆಂದರಸು ಸಚಿವನ ವಿಷಯಕ್ಕೆ ಒಂದು ನೆವದಿ ನುಡಿದರೆ ಗ್ರಾಮಸ್ಥರವರ ಕಂಡು ರಾಯನ ಸಚಿವನೆನ್ನುವರೆ? ದಿವಿಜ ದನುಜರೊಂದಾದರಾ ಸಿಂಧುವನು ಕಡೆವುದಕೆನಲು (ಸ್ಥಳೈಕ್ಯವನ್ನಲ್ಲದೆ ಸ್ವರೂಪದ) ಐಕ್ಯ ಭ್ರಮಿಸುವರೆ? ಬೊಮ್ಮ ಹೆಮ್ಮಗ, ರುದ್ರ ಮೊಮ್ಮಗ;[41] ಸುರರಿಗೆ ಸುಧೆಯುಣಿಸಿದೆ, ಕಾಲಚಕ್ರ ನಡೆಸುವೆ; ಅಮರೇಶಗೆ ಭಾಗ್ಯವಿತ್ತೆನು ಅಮರ ತಲೆ ತರಲು ಅಮರರ ಹೆಮ್ಮೆಗಳನಿಬ್ಬಿಟ್ಟೆದೆನು. ರಾಮನ ಸೇವೆಗೆ ಅಮರರು ಕೋಡಗತನುವಾಂತು ಕೋಡಗಲ್ಗಳ ಹೊತ್ತು ಸೇತುವೆ ಮಾಡಿ ಭಟರೆನಿಸಿದರು. ನಾನು ದುಃಖರಹಿತ, ಜೀವನು ದುಃಖಭರಿತ — ಇದು ಲೋಕಾನುಭವಸಿದ್ಧ.[42] ಸ್ವತಂತ್ರನಾಗಿ ಸ್ವಶಕ್ತಿಯಿಂದ ದಾನವನ ಮರ್ದಿಸುವೆ; ಜೀವರಿಗೆ ಶಕ್ತಿಯನಿತ್ತುದೆ ಉಂಟು, ಇಲ್ಲದೊಡೆ ಜಡಕೆ ಸಮ;[43] ಕುಂಟ ಕಿವುಡ ಕಾಣರು ಹೀನ ಭಂಗವನೇಕೆ ಬಿಡಿಸಿಕೊಳರು?[44] ಜೀವೇಶರಿಗಿಷ್ಟೊಂದು ಅಂತರ —

---

39. ಇಲ್ಲಿ ದ್ವೈತವೂ ಸಿದ್ಧಿಸಿತು.

40. ಅಹಂ ತ್ವಂ ಭಿನ್ನವಸ್ತುವಾಚಕವಾದರೂ ಅಂತರ್ಯಾಮಿ ಸೂಚನೆಗೆ ಪ್ರಯುಕ್ತ (ಭಾಷ್ಯ).

41. ಲಕ್ಷ್ಮೀಶೋಭಾನೆ 26ರಲ್ಲೂ ಉಕ್ತ ನುಡಿಗಳಿವು.

42. ನಚಾನುಭವವಿರೋಧೇ ಆಗಮಸ್ಯ ಪ್ರಾಮಾಣ್ಯಂ (ವಿಷ್ಣು ತತ್ವ ನಿರ್ಣಯ).

43. ಬಿಂಬ ಪ್ರತಿಬಿಂಬತ್ವೇನ ದತ್ತ ಸ್ವಾತಂತ್ರ್ಯವಿರುವುದರಿಂದ ಜಡನೇ ಅಲ್ಲ.

44. ತನ್ನ ಹಿತ ಮಾಡಿಕೊಳ್ಳಲಾರನೆಂಬ ದೋಷವಿರುವುದರಿಂದ ಸ್ವತಂತ್ರನಲ್ಲ, ಜೀವಯೋಗ್ಯತಾನುಸಾರ ಕರ್ಮಫಲ.

ನಾನು ಸದ್ಗುಣಪೂರ್ಣ ವಂದ್ಯನು,
ಹೀನ ಗುಣದಿಂ ಜೀವ ನಿಂದ್ಯನು,
ನಾನು ಲಕ್ಷ್ಮೀರಮಣ, ಜೀವನು ಶತದರಿದ್ರನಲ್ಲೆ[45]
ನಾನು ಸುರಮುನಿಸೇವ್ಯ ಚರಣನು,
ಕಾಣು ಜೀವ ಖಳರಂಘ್ರಿಶರಣನು
ನಾನು ಸಾವಿಲ್ಲದನು, ಜೀವನ ಮೃತ್ಯು ಕೊಲುವುದಲ್ಲೆ (25)

ನಾನು ಸುಜ್ಞನು, ಜೀವನಜ್ಞನು,
ನಾನು ಮುಕ್ತನು, ಜೀವ ಬದ್ಧನು
ನಾನು ಪಾತಕಹೀನ, ಜೀವನು ಪಾಪಭರಿತನಲ್ಲೆ[45]
ನಾನು ಜನ್ಮವಿದೂರ,[46] ನಾನಾ
ಯೋನಿಯಲಿ ಜನಿಸುತಿಹ ಜೀವನು
ಉಣು ಫಲವನು ನನ್ನ ಜನಕನ ಹೆಸರ ಹೇಳಿನ್ನು (26)

ದೇವಕಿಯಲಿ ನಾ ದೇವಕಾರ್ಯಕೆ ಬಂದ ಬಗೆಯು (ಮೂಲರೂಪವ)ನು ಕೋವಿದರು ಬೋಧಿಸರೆ? ಮೃತ್ಯುವ ಕಾವ[47] ಮೂಲರೂಪದ ಶ್ರೀವತ್ಸವನು ಧರಿಸಿದ್ದನಾಗ. ನಂದನ ರಾಣಿ, ಪಾರ್ಥರು ವಿಶ್ವರೂಪವ ಕಾಣಲಿಲ್ಲವೇ?[48] ಈ ಅಪ್ರಾಕೃತ ದೇಹವಳಿದರೆ ಚರಾಚರಗಳಿಗೆಂದೆ ನಿರ್ಬಂಧ. ನೃಸಿಂಹಗೆ ತಂದೆ ತಾಯಿ ದಾರು ಕೂರ್ಮನ ಪೆತ್ತವರು ದಾರು?[48] ಪ್ರಳಯದಿ ವಟಪತ್ರದಲಿ ಮಲಗಿದ ಇಂದಿರಾಪತಿ ನಾ ನಿತ್ಯ[49] (27–29).

ದ್ವೈತ ಮಂಡನದೊಡನೆ ಅದ್ವೈತ ಖಂಡನ: ಇಂಥ ವಿರುದ್ಧ ಧರ್ಮಗಳ ಜೀವ ಪರಮರಿಗೈಕ್ಯವೆಂತು, ಬೆಳಕು ಕತ್ತಲೆಯಹುದೆ?[50] ಕುಂಭದ ಉಪಾಧಿಯಿದ್ದರೂ ವ್ಯಾಪ್ತಾಕಾಶ ಸ್ತಂಭಿಸುವುದೇ? ಇನ್ನು ಬ್ರಹ್ಮಚೈತನ್ಯ ವ್ಯಾಪ್ತಿಗೆ ಅಡ್ಡಿ ಏನು? ಆದರೆ

---

45. ಕ್ವಾಹಂ ದರಿದ್ರಃ ಪಾಪೀಯಾನ್ ಕ್ವ ಕೃಷ್ಣಃ ಶ್ರೀನಿಕೇತನಃ (ಕುಚೇಲ, ಭಾಗವತದಲ್ಲಿ)

46. ಪ್ರತ್ಯಕ್ಷತ್ವ ಅವತಾರ, ಅಂತರ್ಧಾನವೇ ಕೊನೆ. ಜನ್ಮಕರ್ಮ ಚ ಮೇ ದಿವ್ಯಂ (ಗೀತೆ)

47. ದೇವತೆಗಳನ್ನೆಲ್ಲ ಗರ್ಭೀಕರಿಸಿ ರಕ್ಷಿಸುತ್ತಿರುವ ಪ್ರಳಯ ರೂಪ.

48. ಈ ನುಡಿಲಕ್ಷ್ಮೀಶೋಭಾನೆಯ 40–43ರ ನುಡಿಗಳ ಪ್ರತಿಧ್ವನಿ. ಬಾಲಲೀಲೆ, ನಿರ್ಣಯಗಳಲ್ಲೂ 'ದಾರು' ಪ್ರಯುಕ್ತ.

49. ಜನ್ಮವಿರದಲ್ಲಿ ನಾಶವೂ ಇಲ್ಲದ್ದು ಸ್ವತಃ ಸಿದ್ಧ.

50. ಮುಕ್ತರ ಆನಂದಕ್ಕಿಂತ ಹರಿಯ ಆನಂದ ಕೂಡ ಬೇರೆ.

ಜಡದೇಹಸ್ಥ ಬ್ರಹ್ಮಚೈತನ್ಯವೇ ಜೀವವಲ್ಲ. ದೇಹಕೆ ಮೃತ್ಯು ಬರುದಾಗಿ; ಜಡ ದೇಹಕ್ಕೆ ಸ್ವಪ್ರವೃತ್ತಿಯಿಲ್ಲ, ದೇಹಸ್ಥಬ್ರಹ್ಮಚೈತನ್ಯವೇ ಪ್ರವರ್ತಿಸುವುದೆಂದರೆ ದುಃಖ ವಶ ದೇಹಕ್ಕೆ ಸಲ್ಲದು ಈ ಧರ್ಮ, ಬ್ರಹ್ಮನಿಗಷ್ಟೇ ಅಚಿಂತ್ಯ ಶಕ್ತಿಯ ಗುಣ. ಮಾಯೆ ಇಂತೆಂಬ ದುರ್ಮಾಯೆ ಜಡವಾದ್ದರಿಂದ ಮಾಯೆಯೂ ಮತವನೆಂತು ನಿಲಿಸುವೆ? ತಾಂತು ಪೊಟ್ಟೆ ಪೊಕ್ಕರಿಯು[51] ನುಡಿವ ಅಂಯುತವರಿತವರು ನಿನ್ನ ಬಾಯಿ ತೆರೆಯುರೀಯುರು, ನಿಧಾನಿಸಿ ಪಾಂಯುಮತವೆ ಮತ. ಒಂದು ಚಿತ್ತಿಂದುದಿಸಿದ ಈಶ್ವರ, ಮತ್ತೊಂದು ಸ್ಥಾನದಿಂದ (ನಿರ್ವಿಶೇಷವಾಗುಳಿದ ಶುದ್ಧ ನಿರ್ಗುಣ) ಬ್ರಹ್ಮ, ಜೀವರೂಪದ ಮಗುದೊಂದು ಜಪ ತಪ ಮಾಡಿತೆಂಬ 3 ಅವಸ್ಥೆ ಮಾಯೆಗಳ ಬ್ರಹ್ಮನಿಗೆ.[52] ಆದರಿಂದ ದೇಹದ ಮಿಥ್ಯೋಪಾಧಿ ಸಂಬಂಧಿಸಲು ಜೀವನು ಬ್ರಹ್ಮನಿಂದ ಬೇರೆನ್ನುವುದು ವ್ಯರ್ಥ. ಬ್ರಹ್ಮನಿಗೆ ಅಕಾರಣ ಬಂಧನವೇ?[53] ಒಂದೊಂದು ದೇಹದಲೊಂದೊಂದು ಜೀವವಲ್ಲ — ಎಲ್ಲ ದೇಹಗಳ ಜೀವ ಒಂದೇ ಎಂಬವನೇ ಮರಣ ಬಂದರೆ ಏಂಯೋಗ ಒಂದೇ ದೇಹಕೆ.[54] ಜೀವ ಭೇದ ಅನಾದಿ ಎಂಬುದು ಶ್ರುತಿ. ಮೊಪ್ಪುದಂಗಕೆ ನೋವ ಕೊಡುವ ದೇಹ ಕೂಡಿಸಿ ಜೀವರಾಶಿಗೆ ನೆಳೆವುದೆಂತು? ಮೊಮ್ಮ ನಿರ್ವಿಕಾರ (30—36). (ಇಲ್ಲಿಯೂ ವಾದಿರಾಜರ ಪ್ರಾಸ ಪ್ರೀತಿ) —

ಇಂತು ದುರ್ಮತ ಜೀರ್ಣ ಕಂತೆಯ
ತಂತುವಾಯ್ಯ, ಮಹಂತರಿದಿರು
ನಿಂತ ಹೆಜ್ಜೆಯ ನೋಡಿ, ನಿಲ್ಲದ ಭ್ರಾಂತಿಗೊಳಿಸಿತಲ್ಲೆ,
ಹಂತನಿವನೆಂತಾದರೂ ವೇ
ದಾಂತ ಮುನಿ ಪಂಥಗಳನು, ಸ
ಭ್ರಾಂತರದಂಭ್ಯಾವ ಬಗೆಯಲಿ ನಿಂತು ನಿಲಿಸುವನು[55] (37)

---

51. ರನ್ನನ ಗದಾಯುದ್ಧದ ಭೀಮವಾಕ್ಯವನ್ನು ನೆನಪಿಗೆ ತರುವುದಿದು.

52. ದೇಹೋಪಾಧಿನಾಶದಿಂದ ಬ್ರಹ್ಮೈಕ್ಯವೆಂಬವರಿಗೆ ಜಪ ತಪಗಳೂ ವ್ಯರ್ಥ.

53. ಜೀವನಿಗಾದರೆ ಅನಾದಿಕರ್ಮಗಳಿಂದ ಬಂಧನ.

54. ಜೀವ ಜೀವಕೆ ಭೇದ — ಎಂಬ ತತ್ವ ಇಲ್ಲದೆ.

55. ನಿಲಲಾರದ ಹುಸಿಪಂಥವನೆಂತು ನಿಲಿಸುವ?

ಮರ್ತ್ಯರಿಗೆ ಮುಕ್ತಿ ಎಂದರೆ ಎನ್ನ ಕೀರ್ತಿಯ ಸಾಧನಗಳು, ಮೃತ್ಯುವನೊತ್ತಿ ಭಕ್ತಿಯ ಶಕ್ತಿಯಿಂದ ಹತ್ತಿ ಮತ್ಪದದ ಹತ್ತಿರ ಸುಳಿಸುವುದು. ಎನ್ನ ಭಕ್ತರಿಗೆ ಬೇಡವಿತ್ತು ಮಾಯಿ ಮರ್ತ್ಯನು ವ್ಯರ್ಥ ಕೊರಗಿಸಲು ನಾನು ಸುಮ್ಮನಿರುವುದಿಲ್ಲ.[56] ಮನುಷ್ಯ ಸದಾ ಮೃತ್ಯುಸರ್ಪ ಭೀತನಾಗಿರಲು (ದೇಹೋಪಾಧಿನಾಶವೆಂದು) ಅದನ್ನು ಪಡೆಯುವುದು ಮುಕ್ತಿಯೇ? ಮೃತ್ಯುವಿಗೆ ಶತ್ರು ಸರ್ವೋತ್ತಮನಾದ ನಾನು (ಅದರ ಪರೀಕ್ಷೆಗೆ) ಭೃಗು (ಎದೆಯ) ಮೆಟ್ಟಿದರೆ ಉತ್ತಮೋತ್ತಮನಾಗಿ ತಾಳಿಕೊಂಡೆನು. ಮಿಥ್ಯಾವಾದಿಗೆ (ಒಳಿತ) ನುಡಿವುದಕಿಲ್ಲ ನಾಲಗೆ, ಕೇಳ್ವ ಕರ್ಣಗಳಿಲ್ಲ, ಪೇಳ್ವ ಆಚಾರ್ಯರಿಲ್ಲ, ವಿವೇಕವಿಲ್ಲ. ಕಲ್ಲ ಕಂಬ ಪೋಲ್ವ ನಿನ್ನನು ಎನ್ನಾಳುಗಳು ನೋಡಿಸಿ ಚಳ್ಳು ಮಾಡುವರು. ಈಗಲುಂಟೆಂದು ತೋರಿ ಬ್ರಹ್ಮೈಕ್ಯ ಒದಗಲು ಪೋಗುವುದು ಜಗವೆಂಬ ನುಡಿ ಸಲ್ಲ; ತ್ರಿಕಾಲ ಇರದು (ಪಾರಮಾರ್ಥಿಕ ಸತ್ಯ), ಇರುವಂತೆ ತೋರುವುದು (ವ್ಯಾವಹಾರಿಕ ಸತ್ಯ) ಎಂಬುವಗೆ ಆಗಮವರಿಯದವ[57] ಪೋಗೆನ್ನುತ ಬೇಗ ಬಾಯ್ಗಿಕ್ಕಿ ಪೊರಗಟ್ಟುವರೆನ್ನ ಕಿಂಕರರು (38— 41).

ಇಂತು ಸರ್ವೋತ್ತಮನಾದ ಎನ್ನ ಭಜಿಸು, ಸುರ—ಸುಜನರಿಗೆ ಗುರುಗಳೆಂದರಿಯಿಸು,[58] ಧ್ಯಾನಗೋಚರನಾಗಿ ಮುಕ್ತಿಯನೀವೆ. ನಿನ್ನ ಪೊಗಳುವ ಪೂರ್ಣಪ್ರಜ್ಞರ ಮತವೆ ಸುಮತ, ಭವವಿಮುಕ್ತಿಯ ಸತ್ಪಥ; ಈ ಮತವ ಮನ್ನಿಸಿ ಮನನ ಮಾಳ್ಪರ ಸಲಹುವೆ (42— 43).

---

56. ಜ್ಞಾನವಿತ್ತು ಮುಕ್ತಿಗೇರಿಸುವೆ.

57. ಜಗತ್ಸತ್ಯತ್ವಕ್ಕೆ ಆಗಮ ವಾಕ್ಯಗಳಿವೆ — ವಿಶ್ವಂ ಸತ್ಯಂ ಮಘವಾನಾ (ಋಗ್ವೇದ), ಕವಿರ್ಮನೀಷೀ ಪರಿಭೂಃ ಸ್ವಯಂಭೂಃ ಯಾಥಾತಥ್ಯತೋಽರ್ಥಾನ ವ್ಯವಧಾತ ಶಾಶ್ವತೀಭ್ಯಃ ಸಮಾಭ್ಯಃ (= ಸರ್ವಜ್ಞ ಸರ್ವಪ್ರೇರಕ ಸರ್ವಶ್ರೇಷ್ಠ ಸ್ವತಂತ್ರ ಸರ್ವೇಶ ಸರ್ವ ಕಾಲಕ್ಕೂ ಶಾಶ್ವತವಾದ ಮಹದಾದಿ ತತ್ವಗಳನ್ನು ನಿರ್ಮಿಸಿದ — ಈಶಾವಾಸ್ಯೋಪನಿಷತ್) ನೋ. ಗುಂಡಕ್ರಿಯೆ 41.

58. ರಮೋತ್ತಮರಿಲ್ಲ ಗುರುಗಳು, ಅವರ ಪ್ರಸಾದ ಬಲವತ್ತರ.

ಇನ್ನು ಫಲಶ್ರುತಿ: ಮಾಧವನ ಈ ಗುಣಮಾಲೆಯನು ಬರೆದೋದಿ ಪಠಿಸುವರಿಗೆ ಮುಕ್ತಿಪಥವಹುದು. ವಾದಶಕ್ತಿಯನಿತ್ತು ಪಾದಪದ್ಮದ ನೆನಹ ನೀವ ಹಯವದನ ಸಲಹುವ (44).

ಕೃತಿಯ ಕೊನೆಗೆ ಪ್ರಾಸಪೂರ್ಣ ಮಂಗಳ ಮಾಡುತ್ತ, ಹರಿ ಮಹಿಮೆ ಹೇಳಿದಲ್ಲದೆ, ಧ್ಯಾನಗೋಚರ ಹರಿತತ್ತ್ವ ಜ್ಞಾನವನ್ನು ಹರಿಭಕ್ತರಿಗೆರೆದಿದ್ದಾರೆ ಕವಿ —

ಇಂತು ಸ್ವಪ್ನವನ್ನೆಯಲಿ, ಮಾ
ಕಾಂತ ಕರುಣಾವಂತನತಿ ಬಲ
ವಂತ ಸರ್ವಮಹಂತ ಮಹಿಮದುರಂತ ನಿಜ ಜನ
ಶಾಂತ,[59] ಶ್ರೀ ಗುರು ವಾದಿರಾಜಗೆ
ನಿಂತು ಪೇಳಿದ ಪದಗಳ ನಲಿದ
ವಂತರಂಗದಲೊರೆದ ಸಿರಿ ಹಯವದನ ಕೃಪೆಯಿಂತು (45)

ಇಲ್ಲಿ ಕೃತಿಯ ನಾಮೌಚಿತ್ಯ, ಕೃತಿಕಾರರ ಹೆಸರು, ಅಂಕಿತಗಳೂ ಬಂದುದು ಗಮನಾರ್ಹವಾಗಿದೆ.

ಹೀಗೆ ಋಜು ವಾದಿರಾಜರು ತಮ್ಮ ಧ್ಯಾನದಲ್ಲಿ ಹರಿಯುಪದೇಶದ ತಂತ್ರವನ್ನಳವಡಿಸಿ, ಕೃತಿಗೆ ಶ್ರುತಿಯ ಪ್ರಾಮಾಣ್ಯ ಒದಗಿಸಿ, ಹರಿಸರ್ವೋತ್ತಮತ್ವ ಜೀವೇಶಭೇದಗಳ ತತ್ತ್ವವಾದ ಮಂಡಿಸಿ, ವಿರುದ್ಧದ ಮಾಯಾವಾದ ಖಂಡಿಸಿ, ಸೂಕ್ತ ಫಲಶ್ರುತಿಯೊಡನೆ ಮಂಗಳ ಹಾಡಿರುವುದು ತುಂಬ ಉಚಿತವಾಗಿದೆ. ಲೌಕಿಕ ಯುಕ್ತಿಗಳನ್ನುದಾಹರಿಸಿ ಸರಳವಾಗಿ ನಿರೂಪಿಸಿದ ಪ್ರೌಢ ಪ್ರಮೇಯಗಳಿಂದಾಗಿ, ವಾದಿರಾಜೀಯಶೈಲಿಯಲ್ಲಿರುವ ಈ ಶಾಸ್ತ್ರ ಕಾವ್ಯ ಪಂಡಿತ ಪಾಮರರಿಬ್ಬರಿಗೂ ಹಿಡಿಸುವಂತಿದೆ. ಆದರೂ ಕನ್ನಡ ದೇಸೀಯ ಛಂದದಲ್ಲಿರುವ ಕೃತಿ ಜನಸಾಮಾನ್ಯರಿಗಾಗಿ ರಚಿಸಿದ್ದೆಂಬಲ್ಲಿ ಸಂದೇಹವಿಲ್ಲ.

---

59. ರಮಾಕಾಂತನು ಸರ್ವಶ್ರೇಷ್ಠ, ಅನಂತಮಹಿಮ, ಸ್ವಭಕ್ತರಿಗೆ ಶಾಂತ.

3) ಹರಿಸರ್ವೋತ್ತಮಸಾರ: ಅಸಾರೇ ಖಲು ಸಂಸಾರೇ ಸಾರಾತ್ ಸಾರತರೋ ಹರಿಃ (ಮಧ್ವರ ಕೃಷ್ಣಾಮೃತ ಮಹಾರ್ಣವ). ಸಕಲ ಶಾಸ್ತ್ರ ತತ್ತ್ವಗಳಲ್ಲಿ ಸಾರಭೂತವಾದ ಹರಿಸರ್ವೋತ್ತಮತ್ವವನ್ನೇ ಸಾರಿವೆ ಎಲ್ಲ ಶ್ರುತಿ.[60] ಸಾಮಾನ್ಯರಿಗೆ ಸುಲಭ ಯುಕ್ತಿಗಳಿಂದ ಅದನ್ನು ಸಾಧಿಸಿ ಸುದೃಢ ಜ್ಞಾನ—ಭಕ್ತಿ ಹುಟ್ಟಿಸುವ ವಾದಿರಾಜರ 16 ನುಡಿಗಳ ಈ ಕಿರು ಕೃತಿಗೂ 'ಹರಿಸರ್ವೋತ್ತಮಸಾರ' ಎಂಬ ಸಮುಚಿತ ಹೆಸರು. ಈ ಮುಖ್ಯ ತತ್ತ್ವದಿಂದ ತತ್ತ್ವವಾದದ ಜಗತ್ಸತ್ಯತ್ವ—ಪಂಚಭೇದ—ತಾರತಮ್ಯಾದಿ ಪ್ರಮೇಯಗಳು ತಾವೇ ಸಿದ್ಧಿಸುತ್ತವೆ. ಈ ಜ್ಞಾನದಿಂದಲೇ ಹರಿಭಕ್ತಿ ಪ್ರಸಾದ ಮುಕ್ತಿ. ಅದರಿಂದ ಅವನ ಗುಣಗಾನ ತತ್ಕಾಲಕ್ಕೂ ಅಂತಿಮವಾಗಿಯೂ ಆನಂದಪ್ರದ. ಇಂಥ ಸಾರಾಮೃತವನ್ನು ವಾದಿರಾಜರು ಇತರತ್ರ ಮಾತ್ರವಲ್ಲದೆ ಈ ಪ್ರತ್ಯೇಕ ಕೃತಿಯಲ್ಲೂ ಉಣಬಡಿಸಿದ್ದಾರೆ. ಇದಕ್ಕಾಗಿ ಅವರು ಕಲ್ಪಿಸಿಕೊಂಡ ಹೊಸ ದೇಸೀಯ ಛಂದಸ್ಸಿನ ಪ್ರತಿ ಪದ್ಯ ಅಂಕಿತಯುಕ್ತವಾಗಿ ಸ್ವತಂತ್ರವೆನಿಸಿ ಮುಖ್ಯ ತತ್ತ್ವ ಪ್ರತಿಪಾದಿಸಿವೆ. ಮೊದಲ ನುಡಿಯೇ ಇದಕ್ಕೆ ನಿದರ್ಶನ —

ಕಾಲ ತೊಳೆದವನೊಬ್ಬ, ತೊಳೆಸಿಕೊಂಡವನೊಬ್ಬ,
ವಹಿ ಮೇಲಾ ಜಲವ ಸತತ ಧರಿಸಿದನೊಬ್ಬ
ಪಾಲಿಸುವ ಪ್ರಭುವೊಬ್ಬ, ಕೊಲುವ ತಳವಾರನೊಬ್ಬ,
ಮೂರ್ಲೋಕವರಿಯೆ ಹುಟ್ಟಿಸಿದ ಪಿತನೊಬ್ಬ,
ಆಲೋಚನೆಯ ಬಲ್ಲವಗೆ ಸಂಶಯ ಸಲ್ಲ
ಮಾಲೆಯನು ಮಹಲಕುಮಿ ಹಯವದನಗಿತ್ತಳಾಗಿ (1)

ಗಂಗೆಯಿಂದ ಕಾಲು ತೊಳೆದ ಬ್ರಹ್ಮ, ತೊಳೆಸಿಕೊಂಡ ತ್ರಿವಿಕ್ರಮ (ಉತ್ತಮ), ಅದನ್ನು ಶಿರಸಾವಹಿಸಿದವ ರುದ್ರ; ಪಾಲಿಸಲು ಹರಿ, ಕೊಲ್ಲಲು ಹರ, ಹುಟ್ಟಿಸಲು ಬ್ರಹ್ಮ;[61] ಲಕ್ಷ್ಮಿಯ ಆಯ್ಕೆಯರಿತವರಿಗೆ ಉತ್ತಮತ್ವ ಧ್ವನಿತ.

---

60. ವಿಷ್ಣುವಿಗೆ ತನ್ನ ಗುಣೋತ್ಕರ್ಷ ಜ್ಞಾನಿಯಲ್ಲಿರುವ ಪ್ರೀತಿ ಅನ್ಯರಲ್ಲಿಲ್ಲ. ಅವನ ಪ್ರೀತಿಪಡಿಸಿದವರೆಲ್ಲ ಮುಕ್ತರು. ಅದರಿಂದೆಲ್ಲ ವೇದಗಳೂ ತದುತ್ತಮತ್ವಸಾಧಕ (ಸೌಪರ್ಣ ಶ್ರುತಿ).

61. ವಾಸುದೇವನೇ ಶ್ರೀಭೂದುರ್ಗೆಯರಲ್ಲಿ ವಿಷ್ಣು ಬ್ರಹ್ಮ ರುದ್ರರಾಗಿ ಅವತರಿಸಿದ (ಮ.ತಾ.ನಿರ್ಣಯ). ಹರಿಯೇ ತ್ರಿರೂಪಗಳಲ್ಲಿದ್ದು ತ್ರಿಕಾರ್ಯಗೈವ (ಭಾಗವತ); ಆ ಮತ್ಸ್ಯ ನೃಸಿಂಗ ವಿಷ್ಣು ಎಂಬ ಅಂತರ್ಯಾಮಿರೂಪ ಒಂದೇ (ಭಾಗ.ತಾ.ನಿ.).

ಪೌಲಸ್ತ್ಯ ಬ್ರಾಹ್ಮಣ ರಾವಣನ ಕೊಂದ ಪಾಪ ಕಳೆಯಲೆಂದು ರಾಮ ಈಶ್ವರನ ಪೂಜಿಸಿದನೆನ್ನುವರು; ಆದರೆ ಶಿವ ವಿಧಿಯ ಐದನೆಯ ತಲೆ ಕಡಿದ ಕಪಾಲಕರದಲ್ಲಿ ಕಾಣನೇ? ('ಸೇತುಂ ದೃಷ್ಟ್ವಾ ಬ್ರಹ್ಮಹತ್ಯಾ ವ್ಯಪೋಹತಿ' ಎಂಬ ಶ್ರುತಿ ಹಾಗೂ ಕೂರ್ಮಾದಿ ಪುರಾಣವೃತ್ತಗಳಂತೆ) ಶಿವನೇ ಪಾಪ ಪರಿಹಾರಕ್ಕೆ ಸೇತುವನ್ನೂ ರಾಮನನ್ನೂ ಭಜಿಸುವ; ಹರಿಗೆ ಜೀವರಂತೆ ಪಾಪ ಲೇಪವಿಲ್ಲ (2).[62]

ರಾಮಾಯಣದ ಕಥೆ ಪುಣ್ಯಕರವಾಗಿ ರಾವಣ ವಧೆ ಪಾಪವೆಂತು? ಮನ್ವಾದಿಗಳಿದನ್ನು ಪಾಪವೆಂದರೆ, ಪ್ರಳಯದಲ್ಲಿ ರುದ್ರನ ಪ್ರೇರಿಸಿ ಬ್ರಹ್ಮನನ್ನು ಕೊಲಿಸುವುದೂ ನರಸಿಂಹನಾಗಿ ಹಿರಣ್ಯಕಶ್ಯಪಾದಿಗಳನ್ನು ಕೊಂದುದೂ ಪಾಪವೇ (3).[63]

ಸೇತುದರ್ಶನದಿಂದ ಪಾಪ ಪರಿಹಾರವಾಗುವ ಶ್ರುತಿ ಇರುವುದರಿಂದ, ಬ್ರಹ್ಮನ ತಲೆ ಕಡಿದ ಶಿವನನ್ನು ಸೇತು ಮುಖವಾಗಿರಿಸಿದ ಭಕ್ತ ಬಂಧು ರಾಮ[64](4).

ಆತ ಕರ್ಮಗಳಿಂದ ವೃದ್ಧಿ ಹ್ರಾಸ ಹೊಂದಲಾರ — ನ ಕರ್ಮಣಾ ವರ್ಧತೇ ನೋ ಕನೀಯಾನ (ಶ್ರುತಿ). ಮಾಯೆಗಳ ನಿರ್ಗುಣ ಬ್ರಹ್ಮಗಂತೂ ಕರ್ಮವಿಲ್ಲ. ಸೇತು ಪತಿತ ಪಾವನವಾಗಿರಲು ರಾಮನೂ ಪತಿತಪಾವನ ಎಂಬುದು ಉಚಿತ ಯುಕುತಿ. (ಪಾಪಿಗಳ ಉದ್ಧಾರಕಗೆಲ್ಲಿಯ ಪಾಪ?) ವಸ್ತುತಃ ಆವನೊಬ್ಬನೇ ಶುದ್ಧ (5).

ಒಂದೆಡೆ ವಿಭೀಷಣ ಇನ್ನೊಂದೆಡೆ ಶಿವನ ಇರಿಸಿದ ಪುರಾಣೋಕ್ತಿ ತರ್ಕದಿಂದ ಸಮುಚಿತ ತೋರುತ್ತದೆ. ಏಕೆಂದರೆ ರಾಮನಿಗಿಬ್ಬರೂ ಭಕ್ತರೇ (6).[65]

---

62. ತೀರ್ಥಪ್ರಬಂಧ (ದಕ್ಷಿಣ)ದ 'ಕಲ್ಯಾಂತೇತ್ಯಾದಿ 4 ಶ್ಲೋಕಗಳಲ್ಲದೇ ವಿಷಯ (2—5) ವಿವೃತ.

63. ನಿರ್ದೋಷ ಹರಿಯನ್ನು ಪಾಪಿ ಎಂಬುದಕ್ಕಿಂತ ಹೆಚ್ಚಿನ ಪಾಪವೇನು?

64. ಭಕ್ತರ ಶಕ್ತಿ ಬಿಡ, ಹರ ಮುಖ ಇತರರಲ್ಲಿ ಹರಿಭಕ್ತಾಗ್ರಣಿ. (2ನೆಯ ನುಡಿಯ ವಿವರವಿಲ್ಲಿದೆ).

65. ವಿಭೀಷಣನಂತೆ ಶಿವನ ಸ್ಥಾಪನೆ, ಪಾಪ ಪರಿಹಾರಕ್ಕಲ್ಲ. (ಹಾಗೆಂದರೂ ಲೋಕ ಶಿಕ್ಷಾರ್ಥ ಮಾತ್ರ).

ಶ್ರೀರಾಮ ರಾಮ ರಾಮೇತಿ ರಮೇ ರಾಮೇ ಮನೋರಮೇ
ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ ॥

ವಿಷ್ಣು ಸಹಸ್ರನಾಮದಂಥ ರಾಮನಾಮ ಸ್ಮರಣದಲ್ಲಿ ರಮಿಸುವೆನೆಂದ ಮಹದೇವ ಭಾಗವದ್ಭಕ್ತನಾದ್ದರಿಂದ, ದಯಾನಿಧಿ ತನ್ನ ಭಕ್ತರನ್ನರಿಸಿ ಪೂಜ್ಯರನ್ನಾಗಿಸಿದ.[66] ರಾಮನೆ ಕಾಶಿಯ ಶಿವನಾಶ್ರಯಿಸಿದ ತಾರಕ ಬ್ರಹ್ಮ.[67](7)

ಅದಲ್ಲಾ ರಾಮಚಂದ್ರ ಉಪದೇಶಿಸುವ ಹರ ಜಗದ್ಗುರು; ಏಕೆಂದರೆ ತನ್ನ ಮಂತ್ರ ದೇವತೆ ವಾಸುದೇವ ಜಗಕೆ ಪರದೈವವೆಂಬ ಸುತತ್ವ ಪೇಳುವನು. ಇಂಥವಗೆ ಹಯವದನ ಏನು ಮನ್ನಣೆಗೈದರೂ ಉಚಿತವೇ.[68](8).

ವರದ ನೆಪ[69]ದಲ್ಲಿ ಕರವ ತಲೆಯ ಮೇಲಿರಿಸಬಂದ ಖಳಗಂಜಿ ಹರ ಸಕಲರಲ್ಲಿ ಮೊರೆಗಿ ಪರಿಹರ ಕಾಣದೆ, ಸಿರಿವರನ ಮರೆ ಹೊಗಲು ಪೊರೆದ. ಶರಣ ರಕ್ಷಕ ಹರಿಯಲ್ಲದೆ ಪಿರಿದು ಪರದೈವವಿಲ್ಲ (9).

ರೋಮಕೋಟಿಲಿಂಗ[70]ನೆನಿಸಿದ ಹನುಮ ಒಂದು ರೋಮಕೆ ಕೋಟಿಶಿವರ ಸೃಜಿಸುವ ಶಕ್ತ. ಅಂಥವನ ಆಳಿದ ರಾಮನೆ ಪರದೈವ. ಮಧುಕೈಟಭರಿಂದ ವೇದ ತಂದು ಬ್ರಹ್ಮನಿಗಿತ್ತ ಹಯವದನನೆ[71] ಜಗದೊಡೆಯ (10).

---

66. 4ನೆಯ ನುಡಿಯ ವಿವರ ಇಲ್ಲಿದೆ.

67. ತಾರಕಮಂತ್ರ ರಾಮನಾಮ ಮಹದೇವಿಗೂ ಉಪದಿಷ್ಟ ( 'ಸೋಮಶೇಖರ ತನ್ನ ಸತಿ ಪೇಳಿದ ಮಂತ್ರ, ಗಿರಿಜೆ ರಾಮಮಂತ್ರ ಜಪಿಸಿ ಪರಮ ಮಂಗಳೆಯಾದಳೊ' — ಪುರಂದರ, ಗೋಪಾಲ ದಾಸರು).

68. ರಾಮೇಶ್ವರ ಸ್ಥಾಪನೆ, ಕೃಷ್ಣನ ಕೈಲಾಸದ ತಪ ಇತ್ಯಾದಿ ಸನ್ಮಾನ ಶಿವ ತನ್ನ ಸರ್ವೋತ್ತಮತ್ವ ತೋರಿದ್ದಕ್ಕೆ, ಕಾಶಿಯ ಪಾವಿತ್ರ್ಯ ಪ್ರಸಿದ್ಧಿಗೆ ಕಾರಣ ಹರಿಪಾದಜೆ ಹಾಗೂ ಶಿವ ಬೋಧಿಸುವ ರಾಮಮಂತ್ರ (ರು.ವಿ.47— 41).

69. ಗೌರಿಯ ಆಸೆಗೆ ಹರನ ಸುಡಹೊರಟ ವೃಕಾಸುರನೇ ಭಸ್ಮಾಸುರನಾದ.

70. 'ರೋಮ ರೋಮಕೆ ಕೋಟಿಲಿಂಗ ಉದುರಿಸಿದ ಭೀಮ' (ಪುರಂದರದಾಸ) ತಾರತಮ್ಯದಂತೆ ವಾಯು ಹರಗೆ ಅನಂತ ಗುಣಾಧಿಕ.

71. ಬ್ರಹ್ಮಾಕ್ಷಿಯರದೆ ತನ್ಮುಖದ ವೇದ ಕೇಳಿಕೊಂಡು ಹೋಗುವದೇ ವೇದಾಪಹರಣ. ಹಯಗ್ರೀವಾಸುರ ಅಪಹರಿಸಲು ಮತ್ಸ್ಯ ಉದ್ಧರಿಸಿದ, ಮಧುಕೈಟಭರಿಂದ ಹಯಗ್ರೀವ ಉದ್ಧರಿಸಿದ.

ನೂರು ರುದ್ರರೂ 14 ಲೋಕ ಸಂಹರಿಸಲರಿಯರು. ಅಂತರ್ಯಾಮಿ ಹರಿಯೇ ಸಂಹರಿಸುವ (ಬ್ರಾಹ್ಮಣರಿಲ್ಲದುಂ ನೃಪನುವಂತೆ). ಪೂರ್ಣಪ್ರಜ್ಞರ ಮತವಿದು (11).

ಹೀಗೆ 10 ನುಡಿಗಳಲ್ಲಿ ರಾಮಕಥಾನಕ ಬಳಸಿದ್ದರೆ, ಮುಂದಿನ 3 ನುಡಿ ಕೃಷ್ಣನ ಕಥೆ ಬಳಸಿವೆ: ಸುರ–ಹರ–ಹರಿಯ ಯಾತ್ರೆ ಗಮನಿಸಿ – ಮೂಲ ರೂಪದಿ ಸುರರು ಪಾಲಸಾಗರಯಾತ್ರೆ, ಗರ್ಭವಾಸ ಯಾತ್ರೆ, ದ್ವಾರಕಾಪುರ ಯಾತ್ರೆಗೈದರು; ಶಿವ ನಾದರೋ ಭಸ್ಮಾಸುರಗಂಜಿ ವೈಕುಂಠಯಾತ್ರೆಯಿಂದುಳಿದ; ಪುತ್ರಾರ್ಥಿ ಕೃಷ್ಣನ ಕೈಲಾಸ ಯಾತ್ರೆ ಮಾತ್ರ ಲೋಕಶಿಕ್ಷಾರ್ಥ ಲೀಲೆ (12). ವಾದಿರಾಜರ ವಾದಕೌಶಲವೂ ಈ ಸಂದರ್ಭದಲ್ಲಿ ಗಮನಾರ್ಹವಾಗಿದೆ – ಯಾತ್ರೆ ಮಾಡಿಸಿಕೊಂಡ ಹರ ಹಿರಿಯನಾದರೆ ಹರಿ-ಹರೈಕ್ಯದ ಯುಕ್ತಿ ಬಾಧಿತವೆನಿಸಿ, ನಿನ್ನ ಮತಕೆ ನೀನೆ ಶತ್ರುವಾದೆ; ನಿನ್ನ ಉಕ್ತಿ ಯಲ್ಲಿ ಜಾತಿ[72] ಎಂಬ ಸ್ವವಚನ ವಿರೋಧ ಹೇಳಿದರೆ ನಿನಗೆ ಪರಾಜಯ; ಹರಿಗಿದು ಲೀಲೆಯಾದರೆ ಹರಿಸರ್ವೋತ್ತಮ ಶ್ರುತಿಗೆ ಸತ್ವ ಹೆಚ್ಚಿತು (13).

'ವಂದ್ಯಮಾನಂ ಪಿತಾನಾಂ ಪ್ರತಿ ಪ್ರಮಾಣಂ' (ಜಗತ್ಪಿತ ಸರ್ವವಂದ್ಯ) ಎಂಬ ರುದ್ರೋಪದಿಷ್ಟ ಶ್ರುತಿಯಿಂದಾಗಿ, ಕೃಷ್ಣನ ಕೈಲಾಸ ಯಾತ್ರೆಗೆ ಯುಕ್ತಾಯುಕ್ತ ಅರ್ಥಾಂತರವಿದೆ. ಪ್ರದ್ಯುಮ್ನಾದಿಗಳು ಹುಟ್ಟಿದ್ದರೂ ಉತ್ತಮ ಪುತ್ರ ಬೇಕೆಂದ ರುಕ್ಮಿಣಿ ಯೊಡನೆ ಮಕ್ಕಳ ಮನೆಗೆ ಪೋದಂತೆ ಪೋಗಿ, ಮೊಮ್ಮಗನಿಗೆ ಹಿರಿಯತನ ಕೊಡಲೆಂದು ತಪಗೈಯಲು, ಶಿವ ಬಂದು 'ರತಿಗಿತ್ತ ವರದಂತೆ ಕಾಮನನ್ನೇ ಪ್ರದ್ಯುಮ್ನನಾಗಿತ್ತಿರುವೆ' ಎಂದ. ಮೊದಲೇ ಹುಟ್ಟಿದ ಮಗನನ್ನು ಮತ್ತೆ ಹಿರಿಯ ಕುವರನಂತೆ ಪಡೆದ ಚತುರ ಕೃಷ್ಣ[73](14):

---

72. ಇದರಂತೆ 16ನೆಯ ನುಡಿಯಲ್ಲಿರುವ ಅಸಂಗತಿ ಎಂಬ ಫಲವಾ ಯುಕ್ತಿ ದೋಷ; 'ಮಾಯಾವಾದ ಇಭಗಳ ಪಾರಿಧಿ' (ಮಧ್ವವಿಜಯ). ವಾದಿರಾಜರ ಇಂಥ ವಾದಕೌಶಲ ತೀರ್ಥಪ್ರಬಂಧ (ಪಶ್ಚಿಮ 61) ಮುಂತಾದವುಗಳ ಸ್ಮಾರಕ.

73. ಕನ್ನಡ ತಾತ್ಪರ್ಯ ನಿರ್ಣಯ 2,242; ಮ.ವಿಜಯ 13,24 ಮತ್ತು 14,6–27 ಹಾಗೂ 19,16–24ರಲ್ಲೂ ಇದೇ ತತ್ವ ಉಕ್ತ.

ಹರಿಹರಿಂದರ ● ಆರಾರು ಪುರಾಣಗಳಂತೆ ಅವರು ಸರ್ವೋತ್ತಮರಲ್ಲೆಂದು ಹಿರಿಯರೇ ಮನ್ನಿಸಿರುವುದರಿಂದ, ಮಧ್ವ[74] ಮತದಂತೆ ಹಯವದನನ 6 ಪುರಾಣ ಸೂಕ್ತಿ (15).

ಜೀವ ಬ್ರಹ್ಮರು ಭಿನ್ನರೆಂದು (ದ್ವಾಸುಪರ್ಣಾದಿ) ಶ್ರುತಿ ಸಾರುತ್ತಿರಲು, ಜೀವ ಬ್ರಹ್ಮ ಜಡವೆಲ್ಲ ಒಂದೆಂಬವರಿಗೆ ಹರಿ–ಹರರೂ ಜಡ! ಇಂತು ವಾದಿಸುವವರೂ ಹಿಂದುಮುಂದರಿಯದ ಜಡರೆಂದು ನನನೆ ಹಯವದನ?[75](16)

ಈ ರೀತಿ ರಾಮ–ಕೃಷ್ಣ–ಶಿವರ ಕಥೆಗಳನ್ನು ಬಳಸಿ ಸಂಸ್ಕೃತವರಿಯದ ಸಾಮಾನ್ಯರಿಗೂ ದ್ವೈತದಲ್ಲಿ ನಂಬಿಕೆ ಮೂಡುವಂತೆ, ಚತುರ ವಾದಗಳಿಂದ ಅದ್ವೈತ ಖಂಡಿಸಿ, ಹರಿಸರ್ವೋತ್ತಮತ್ವವನ್ನೊರೆದಿದೆ ಈ ಅನ್ವರ್ಥಕನಾಮದ ಸದಾಗಮಸಾರ. ಲಲಿತ ಲಯದಲ್ಲಿ ಬ್ರಹ್ಮ–ವಿಷ್ಣು ಗಣ ಪ್ರತಿ ಸಾಲಿಗೆ 3 ಸಲ ಬರುವಂತೆ ಷಟ್ಪದ ನುಡಿಗಳನ್ನೇರ್ಪಡಿಸಿ ಕೊಂಡ ಛಂದಃಪ್ರಯೋಗ, ತಾಳ ಸೂಚನೆಯಿರದ ಕಾರಣ ರಾಗಮಾಲಿಕೆಯಲ್ಲಿ ಹಾಡಿಕೊಳ್ಳಬಹುದಾದಂಶಗಳಲ್ಲಿ ಗಮನಾರ್ಹ. ಶಾಸ್ತ್ರ ಸಂಗತಿಗಳನ್ನಿಂತು ಕಾವ್ಯ ರೂಪಕ್ಕಿಳಿಸುವ ವಾದಿರಾಜರ ಜಾಣ ರೀತಿ ಮೆಚ್ಚುವಂಥದು.

4) <u>ತತ್ತ್ವ ಸುವ್ವಾಲಿ</u>: ಸಾಮಾನ್ಯರಿಗೆ ತತ್ತ್ವವಾದ ತಿಳಿಸುವ, ತ್ರಿಪದಿಯಂತೆ ಪುನರಾವರ್ತನಗೊಂಡು ಸಾಂಗತ್ಯದಂತೆ 4 ಚರಣವುಳ್ಳ 35 ನುಡಿಗಳ ಸುವ್ವಿ ಪದವಿದು, 'ತತ್ತ್ವ ಸುವ್ವಾಲಿ' ಎಂದೇ ಹೆಸರಾಗಿದೆ.[76] ಹರಿಗೆ ಸುವ್ವಿ ಹೇಳುವ ಪಲ್ಲವಿ –

---

74. ಸಂಶಯ ಪರಿಹಾರಕ ಗುರು ಬ್ರಹ್ಮಪದಾರ್ಹ ಮಧ್ವರು ಹಾಗೆಯೇ ವಾದಿರಾಜರು.

75. ಮೈ.ವಿ.ವಿ.ದ ಪ್ರತಿಯಲ್ಲಿ 17ನೆಯದಾಗಿ ತ್ರುಟಿತ ಚರಣದ ನುಡಿಯೊಂದಿದೆ.

76. ಸುವ್ವಿ ಸುವ್ವಿ ಎಂಬ ಸುವ್ವಿಗಳ ಆದಿಯೇ ಸುವ್ವಾಲಿ. ಜಗನ್ನಾಥದಾಸರ ತಾತ್ವಿಕ ತ್ರಿಪದಿಗಳ ಕೃತಿಗೂ ಇದೇ ಹೆಸರು. ಪ್ರಸ್ತುತ ಕೃತಿಯ ಪಲ್ಲವಿಯನ್ನು ಮೈ.ವಿ.ವಿ.ದ ಪ್ರತಿ ತ್ರಿಪದಿ ರೂಪದಲ್ಲಿತ್ತಿದೆ – ನುಡಿ ಸಾಂಗತ್ಯದಲ್ಲಿದ್ದರೂ.

ಸುವ್ವಿ ಸುವ್ವಿ ನಮ್ಮ ಶ್ರೀರಮಣಗೆ ಸುವ್ವಿ
ಸುವ್ವಿ ಸುವ್ವಿ ನಮ್ಮ ಶ್ರೀರಮಣಗೆ
ಸುವ್ವಿ ಸುವ್ವಿ ನಮ್ಮ ಶ್ರೀರಮಣನೆನಿಸಿದ
ದಿನ್ನೋದಿ ಹರಿಸರ್ವೋತ್ತಮಗೆ ಸುವ್ವಿ (2)

ಮೊದಲ ನುಡಿ ಹರಿ–ಸಿರಿ–ಪರಮೇಷ್ಠಿ – ಮಧ್ವರಿಗೆ ಶರಣು ಹೇಳಿ, ಮುಂದಣದು ಪುರುಷಾಕಾರ ವಾಸುದೇವನ ಸೃಷ್ಟ್ಯಾದಿ ಕರ್ತೃತ್ವದ 4 ರೂಪ ಅರುಹಿದೆ. ಬಳಿಕ ಒಂದೇ ನುಡಿಯಿಂದ ವಾದಿರಾಜರಿಗೆ ಪ್ರಿಯವಾದ ದಶಾವತಾರ ಸೂಚಿತ –

ಮತ್ಸ್ಯ ಕೂರ್ಮ ರೂಪ ಸೂಕರ ನರಹರಿ ಕಾಂಯ
ವಾಮನ ಭಾರ್ಗವ ರಾಮನೆನಿಪ ಭೂಪ ಕೃಷ್ಣ ಸುವ್ವಿ,
ವಾಮನ ಭಾರ್ಗವ ರಾಮನೆನಿಪ ಭೂಪ ಕೃಷ್ಣನಾದ
ಬೌದ್ಧ ಕಲ್ಕಿ ರೂಪ ಪ್ರಸಿದ್ಧವಂತೆ ಸುವ್ವಿ (3)

ಅತ್ಯುನ್ನತ ತತ್ವವಾದ ಸರಳ ನುಡಿಗಳಿಂದೀದ ರೀತಿಯಿದು –

ಆತ್ಮನು ಅತಂತ್ರ, ಪರಮಾತ್ಮನು ಸ್ವತಂತ್ರ, ದು:
ಖಾತ್ಮನು ಜೀವಾತ್ಮ, ಪರಮಾತ್ಮನಲ್ಲ ಸುವ್ವಿ, ದು:
ಖಾತ್ಮನು ಜೀವಾತ್ಮ, ಪರಮಾತ್ಮನಲ್ಲ ವಾದಿ,
ಜ್ಞಾನಾನಂದಕ ಹರಿಗೆ ಸಮರಿಲ್ಲ ಸುವ್ವಿ (5)

ಹೀಗೆಂಯೇ ಜಡ ಜೀವರಲ್ಲಿ ಪರಮಾತ್ಮನ ವ್ಯಾಪ್ತಿ, ಪಂಚಭೇದ, ಚತುರ್ವಿಧ ಮುಕ್ತಿ, ಭಾಗವತೋಕ್ತ ನವವಿಧ ಭಕ್ತಿ, ಜೀವ ಪರಮ ಬ್ರಹ್ಮರಲ್ಲಿ ಒಂದೆಂಬ ಅದ್ವೈತ, ಹರಿಯವತಾರಗಳಲ್ಲಿಯ ಅಭೇದ, ಸಂಸಾರಿಗಳ ಕರ್ಮಶರೀರ– ಮುಕ್ತರ ಆನಂದ ಶರೀರ, ನಮ್ಮ ಶರೀರದ 72000 ನಾಡಿ,[77] ಇಳಾನಾಡಿಯನ್ನು ಸಾವಿರ ಏಳರಂತೆ ಸೀಳಿದಲ್ಲಿಹ ರಕ್ತವರ್ಣದ ನಾರಾಯಣ, ಸುಷುಮ್ನ ನಾಡಿಯ ಅಂತ್ಯರಂಧ್ರದ ಕಮಲಸ್ಥ ವಿಮಲ ಹರಿ, ನಾಭಿ ಮೂಲದ 4 ದಳ ಕಮಲದ ನೀಲ ಅನಿರುದ್ಧ, ಪೊಕ್ಕುಳದ 6 ದಳ ಪದ್ಮದ ಪಿಂಗಳ ಸಂಕರ್ಷಣ, ಸುಷುಮ್ನದ ಸುತ್ತಣ ಇಡಾ ಪಿಂಗಳ ಧಾರಿಣಿ ವಜ್ರಕಾ ನಾಡಿ, 8 ದಳದ ಹೃದಯಕಮಲದ ವಾಯು, ಕೂದಲ ಕೊನೆಯನ್ನು 10000 ಸೀಳಿದಷ್ಟು ಜೀವ ಪರಿಮಾಣ, ಹೃತ್ಕಮಲದ ಹರಿಯ

---

77. ಕಾಲಿನ 12000 + ಕಾಯದ 14000 + ಕೈಯ 4000 + ತಲೆಯ 6000 = 36,000 ಬೃಹತಿ ವಾಸುದೇವನ ಪುರುಷರೂಪದವು + ಅಷ್ಟೇ ಸ್ತ್ರೀ ರೂಪದವು. (ಹ.ಕ.ಸಾರ 12, 1–3).

ರಕ್ಷಣ, ಕಂಠದ ಸ್ವಪ್ನಪ್ರೇರಕ ತೈಜಸ, ಕಿರುನಾಲಗೆಯ ದ್ವಿದಳ ಕಮಲದ ನಾರಾಯಣ, ಬಲಗಣ್ಣ ಜಾಗರ ಕಾಣಿಸೋ[78] ವಿಶ್ವ, ಹೃದಯದ ನಿದ್ರಾಪ್ರೇರಕ ಪ್ರಾಜ್ಞ, ಭ್ರೂಮಧ್ಯದನಿರುದ್ಧ, ಶಿರಃ ಕಮಲದ ನಾರಾಯಣ, ಬ್ರಹ್ಮಹತ್ಯಾದಿ ಪಾಪ ಕಾರಣಗಳ ಅಂಗಾಂಗ, ರಕ್ತನೇತ್ರ ನೀಲವರ್ಣಗಳ ವಾಮಕುಕ್ಷಿಯ ಪಾಪ ಪುರುಷ, ದೇಹಕೋನಗಳ ಪ್ರದ್ಯುಮ್ನ ಸಂಕರ್ಷಣ ವಾಸುದೇವ, ತಲೆಯ ಮೇಲೆ 12 ಅಂಗುಲದಲ್ಲಿರುವ ಆನಂದಪ್ರದ ತುರೀಯ ರೂಪ — ಇವು ಕ್ರಮಶಃ ವರ್ಣಿತವಾಗಿವೆ (6—32).

ಕೊನೆಗೆ ಮುಖ್ಯಪ್ರಾಣ ಹರಿಗೆ ಸಖ್ಯವಾಗಿದ್ದು ಜೀವರ ದುಃಖ ಪರಿಹರಿಸುವನೆಂದು ಹನುಮ—ಭೀಮಾವತಾರ ಸೂಚಿಸಿದ್ದಾರೆ; 3ನೆಯ ಅವತಾರದ ಗುರು ಪಾದ ನೆನೆದರೆ ಸಂಸಾರ ನೀಗಿಸುವ ಭರವಸೆ ನೀಡಿದ್ದಾರೆ (33—34). ಅಂಕಿತದ ಮಂಗಳ ನುಡಿಯೂ ಹರಿಯ ರಕ್ಷೆಯ ಭರವಸೆಯುಳ್ಳದ್ದು —

ಘೋರ ಸಂಸಾರವನು ನೀಗಿಸುವ ಹಯವದನ ತನ್ನ
ಪಾದದ ಸಮೀಪದಲಿಟ್ಟು ಸಲಹುವ ಸುದ್ದಿ,
ಪಾದದ ಸಮೀಪದಲಿಟ್ಟು ಸಲಹುವ ಹಯವದನ
ವೇದಗಳ ಬಿಡಿಸಿ ರಕ್ಷಿಸುವ ಸುದ್ದಿ (35)

ಈ ತಾತ್ವಿಕ ಕೃತಿ ಹರಿಸರ್ವೋತ್ತಮಾದಿ ತತ್ವವಾದಗಳನ್ನಲ್ಲದೆ, ನಮ್ಮ ಶರೀರದ ತತ್ವಾಭಿಮಾನಿ ದೇವತಾ ರೂಪಗಳನ್ನು ಮುಖ್ಯವಾಗಿ ನಿರೂಪಿಸಿದೆ. 'ಈ ಶರೀರ ರಚನೆಯ ಚಿತ್ರ ಮೆಟ್ಟಿಲು ಮೆಟ್ಟಿಲಾಗಿ ಮುಂದೆ ಸಾಗುತ್ತದೆ'.[79] ತಾತ್ವಿಕ ವಿಷಯ ಪ್ರಧಾನವಾಗಿ ಕಾವ್ಯಕ್ಕೆ ಹೆಚ್ಚು ಇಂಬಾಗಿಲ್ಲ; 'ವಾದಿರಾಜರು ಎಲ್ಲರಿಗೂ ಸುಲಭಸಾಧ್ಯವಾಗಲೆಂಬ ಸದಾಶಯದಿಂದ ಸರಳವಾದ ತ್ರಿಪದಿಯ ಧಾಟಿಯಲ್ಲಿಯೇ ಬರೆದಿದ್ದರೂ, ವಿಷಯದ

---

78. ಇಂಥ ದೇಸೀಯ ರೂಪ ಬಾಲಲೀಲೆಯ 'ಕಾಣಿಸೋದು ಪೂರ್ಣವಾಗೋದು' (ಉ.12,390) ಮುಂತಾದಲ್ಲಿವೆ.

79. ಜಿ.ವರದರಾಜರಾವ್, ವಾದಿರಾಜರ ಕೃತಿಗಳು, ಪೀಠಿಕೆ 37. ಇಂಥ ವಿವರ 'ಒಂದು ಪ್ರಕಾರವ ಸ್ವಾಮಿ ವಾದಿಯ ರಚಿಪುದು' ಎಂಬ ಕೀರ್ತನದಲ್ಲೂ ಉಂಟು.

ಗಹನತೆಯಿಂದ ಒಟ್ಟು ರಚನೆ ಪಾರಿಭಾಷಿಕವಾಗಿ ಪರಿಣಮಿಸಿದೆ ಎಂದು ಒಪ್ಪಬೇಕಾಗುತ್ತದೆ.' ಇಷ್ಟೊಂದು ಪ್ರೌಢ ವಿಷಯ ತಿಳಿಗನ್ನಡದ (ಕೆಲ ದೇಸಿ ನುಡಿ ಹಾಗೂ) ದೇಸೀಯ ಛಂದಕ್ಕಿಳಿದಿರುವುದೇ ಮೆಚ್ಚತಕ್ಕ ಅಂಶ. ತತ್ವವಾದಕ್ಕೆ ನುಡಿಯ ಪೂರ್ವಾರ್ಧ ಉತ್ತರಾರ್ಧಗಳ ಕೊನೆಯಲ್ಲಿ ಸುವ್ವಿ ಹೇಳುತ್ತ, 2ನೆಯ ಸಾಲು ತ್ರಿಪದಿಯಂತೆ ಪುನರಾವರ್ತನಗೊಳ್ಳುತ್ತ ಸಾಗುವ ಈ ಸುವ್ವಾಲಿಯ ಸಾಂಗತ್ಯದ ಚೌಕಟ್ಟು ತುಂಬ ಸೊಗಸಾಗಿದೆ. ವಾದಿರಾಜರು ಶಾಸ್ತ್ರವನ್ನು ದೇಸೀಯಗೊಳಿಸಿದ್ದರ ಫಲವಿದು.

5) ಬಿರುದಿನ ಸುವ್ವಾಲಿ: 'ತತ್ವಸುವ್ವಾಲಿ'ಯಂತೆಯೇ ಪುನರುಚ್ಚರಿತ ತ್ರಿಪದಿಯ ಸಾಲು ಚೌಕಂಗೊಂಡ 35 ನುಡಿಗಳ ಈ ಕೃತಿ ಹರಿಯ ಮಹಿಮೆಯನ್ನು ಹೇಳಿದ್ದಲ್ಲದೆ, ಅದ್ವೈತವನ್ನು ಖಂಡಿಸಿದೆ. ಅಂತೆಯೆ, 'ವಾದಿಸುವರ ಬಾಯ ಮುದ್ರಿಸಿ ಕಲಿವನ ಪಾದಕ್ಕೆ ಬಿರುದ ಕಟ್ಟಿ ಜಗವ ಗೆಲಿಸುವ ಸುವ್ವಾಲೆಯ ಪದವಿದು — ಬಿರುದಿನ ಸುವ್ವಾಲಿ' ಎನಿಸಿದೆ. ಇದರ ಪಲ್ಲವಿಯೂ ಸುವ್ವಿಗಳ ಆರಿಯುಕ್ತ, 'ತತ್ವಸುವ್ವಾಲಿ'ಯ ಪಲ್ಲವಿಗೆ ಸದೃಶ.[80]

ಸುವ್ವಿ ಸುವ್ವಿ ನಮ್ಮ ಶ್ರೀರಮಣಗೆ ಸುವ್ವಿ
ಸುವ್ವಿ ಸುವ್ವಿ ನಮ್ಮ ಭೂರಮಣಗೆ
ಸುವ್ವಿ ಸುವ್ವಿ ನಮ್ಮ ಭೂರಮಣಗೆ ಸುವ್ವಿ
ಸುವ್ವಿ ಎಂದು ಪಾಡಿ ಸಜ್ಜನರೆಲ್ಲ ಕೇಳಿ (ಪ)

ಇಲ್ಲೂ ಮೊದಲು ಹರಿ– ಸಿರಿ– ವಾಣಿಗೆ ಶರಣೆಂದು, ತಮ್ಮ ಒಲವಿನ ಕೃಷ್ಣಾವತಾರಿಯ ಪೂತನಿ ಶಕಟ ಸಂಹಾರ, ಕಾಳಿಂಗಮರ್ದನ, ಪಾಲ್ಮೊಸರ ಸುರಿದು ಬೆಣ್ಣೆ ಕೊಂಡೋಡಿದ್ದು, ಮತ್ತಿಯ ಕಿತ್ತು ವರವಿತ್ತುದು, ಗಿರಿಯನೆತ್ತಿದ್ದು, ಬಕನ ಸೀಳಿದ್ದು, ಕೊಳಲೂದಿದ್ದು, ಶೃಂಗಾರ ರಸ ಬಸಿವ ರಾಸಕ್ರೀಡೆಯ ಮಂಗಳ ವಿಲಾಸ ರಚಿಸಿದ್ದು, ಮಧುರೆಗೆ ಪೋಗಿ ಮಲ್ಲರ ನೀಗಿ ಮಾವನ ಮಡುಹಿದ್ದು ಇವನ್ನು ಸಂಗ್ರಹಿಸಿದ್ದಾರೆ ಕವಿ (1– 10).

---

80. ಇವೆರಡೂ ಕೃತಿಗಳ ಪಲ್ಲವಿ ತ್ರಿಪದಿ ರೂಪದಿಂದ, ನುಡಿ ಸಾಂಗತ್ಯ ರೂಪದಿಂದ ಮುದ್ರಿತ ಮೈ.ವಿ.ವಿ.ದ ಪ್ರತಿಯಲ್ಲಿ; ತ್ರಿಪದಿ ಧಾಟಿಯ ಹಾಡೆಂದೂ ಟಿಪ್ಪಣಿಸಲಾಗಿದೆ. ಎರಡರ ಮೊದಲ ನುಡಿಗಳೂ ಸದೃಶ.

ಮುಂದಿನ 5 ನುಡಿಗಳಲ್ಲಿ 'ಧರ್ಮ ಬಿಡಬೇಡ, ದುಷ್ಕರ್ಮ ಬೇಡ, ಕಾಮಿನಿಯರೊಳಾಡಿ ಕೆಡಬೇಡ, ಹರಿಶರಣರಡಿಯೊಳು ಪೊಡಮಡು, 'ಎರಲೆಯಿಂದಾದ ಮೊರನೇರಿ ಬಿದ್ದು ಸಾವಂತೆ ನೀರ ಮೀನು (ನೆಲದಿ) ಕರಗುವಂತೆ' ಬಾರದ ಭಾಗ್ಯಕ್ಕೆ ಹೋರಬೇಡ, ಪುಣ್ಯದ ಬೀಜ ಬಿತ್ತಿದರೆ ಮಹದೈಶ್ವರ್ಯ, ನೊಂದು ವಿಧಿಯ ಬೈದರೆ ಕೆಡುವೆ, ಪರಸತಿಯ ಬಯಸಿ ಕೀಚಕ ಕೆಟ್ಟ, ಪರಧನಕೆ ಮರುಳಾಗಿ ಕುರುರಾಯ ಕೆಟ್ಟ" ಎಂದುಪದೇಶಿಸಿದ್ದಾರೆ (11– 15) ವಾದಿರಾಜರು.

ಬಳಿಕ ಅದ್ವೈತ ಖಂಡಿಸತೊಡಗುವಲ್ಲಿ 'ಭೇದವಿಲ್ಲೆಂಬ ಮತದಂತೆ ವಾದಿ ಪ್ರತಿವಾದಿಗಳೂ ಒಂದೇ ಆಗಿ, ತಾನೊಬ್ಬನೇ ವಾದಿ ಗೆದ್ದನೆಂತು ಬಿದ್ದನೆಂತು?' (16) ಎನ್ನುವ ವಾದಿರಾಜರ ವಾದ ಚಾತುರ್ಯ ವಿರೋಧಿಗಳನ್ನು ತಲೆದೂಗಿಸುವಂತಿದೆ. ಅವರ ಹರಿತ ತರ್ಕ ಕಾವ್ಯವೂ ಆಗಬಲ್ಲುದು, ದೇಸೀಯ ಶೈಲಿಯಲ್ಲಿಯೇ —

ಎಲ್ಲ ಒಂದಾದರೆ ಶಾಲ್ಯನ್ನನುಂಬುವರು
ಪುಲ್ಲನ್ಯಾಕೆ ಮೆದ್ದು ಬದುಕರು ಸುಮ್ಮ
ಪುಲ್ಲನ್ಯಾಕೆ ಮೆದ್ದು ಬದುಕರು, ಸ್ಥಳಚರರು
ಜಲದೊಳಗೆ ಚರಿತೆ ಅಳುವದ್ಯಾಕೆ ಸುಮ್ಮ (17)

ಸರ್ವತ್ರ ಜೀವಭೇದ ಬರೆವ ವ್ಯವಹಾರದಲ್ಲಿ ಐಕ್ಯ ಎತ್ತಿಹೋದು? 'ಅತ್ತೆ ಸೊಸೆಯರೊಳು ಮತ್ಸರವು, ಅದರಿಂದ ಪ್ರತ್ಯೇಕ ಜೀವರ ಇರವು. ಸತ್ಯವಾದ ಬೊಮ್ಮ ಮಿಥ್ಯವಲ್ಲ, ಮಿಥ್ಯ ಶಶಶೃಂಗ ಸತ್ಯವಲ್ಲ. ಸಾವು ಬದುಕು ಎರಡೂ ಇರುವ ಸತ್ಯ. ಜಗ ಮಿಥ್ಯವಾದರೆ ವ್ಯಾವಹಾರಿಕ ಸತ್ಯವೆನ್ನುವುದು ವಿಧವೆಯನ್ನು ಮುತ್ತೈದೆ ಎಂದಂತೆ ಯುಕ್ತಿಶೂನ್ಯ. ನಾವು ಕಂಡ ಜಗವನು ಇಲ್ಲವೆಂಬುದೆ ಮಿಥ್ಯಾವಾದ, ಅದೆಂದಿಗೂ ಸತ್ಯವಾಗದು. 'ಸತ್ಯ ಪಾನು ಸುಳಿವುತಿಪ್ಪುದೆ? ನಾಸ್ತಿ ಎಂಬ ವಸ್ತುವ ಅಸ್ತಿ ಎಂದರೆ ಅತಿ ಮೂರ್ಖ.' 'ಏಕಾಕಿ ನ ರಮತೆ' ಎಂಬುದು ವೇದ, ಎಲ್ಲ ಒಂದೆಂಬವರು ಮುಕ್ತಿಯಲ್ಲೂ ಏಕಾಕಿಯಾಗಿ ಶೋಕಕೊಳಗಾಗುವರು. ಅದರಿಂದ ಅಂಥ ಕೈವಲ್ಯದ ಘನಕ್ಕಿಂತ ಶ್ರೀವೈಕುಂಠದ ವಾಸನೆ ಲೇಸು (18–30).

ಎಂಥಾದೋ ಆ ವೈಕುಂಠವೆಂದರೆ — ಅಲ್ಲಿ ಸಹ ಬ್ರಹ್ಮ ಮರ್ತ್ಯರೆಲ್ಲ ಹರಿಯನುವ್ರತರಾಗಿ ಆನಂದಿಸುವರು (31). ಅಲ್ಲದೆ —

ಅಲ್ಲಿ ನರನಾರಿಯರು ಚಿನುಮಯರು ಚೆಲುವರಂತೆ
ಅಲ್ಲಿ ಚತುರ್ಬಾಹುಗಳಾಗಿಪ್ಪರಂತೆ ಸುವ್ವಿ
ಅಲ್ಲಿ ಚತುರ್ಬಾಹುಗಳಾಗಿಪ್ಪರಂತೆ ಅವರ ಶ್ರೀ
ವಲ್ಲಭ ಲಾಲಿಸಿ ಪಾಲಿಸುವನಂತೆ ಸುವ್ವಿ (32)

ಪಾಲ್ಗಡಲೊಳಚ್ಚ ಶ್ವೇತದ್ವೀಪ — ಅಲ್ಲಿ ಮುತ್ತಿನಂತೆ ಹೊಳೆವ ಮುಕ್ತರು. ಘನೋದಕದ ಮೇಲೆ ಮಿಂಚುವ ಅನಂತಾಸನ, ಅಲ್ಲಿ ಮನೆ ಮನೆಯಲಿ ಮುಕ್ತರ ಸಂದಣಿ. ಹರಿ ಸಂತರ ಸಲಹುವ, ಮಾರಾಂತರ ಕೃತಾಂತನಲಿ ಕಳುಹುವ (33—35). ಇದು ವೈಕುಂಠದ ಒಟ್ಟು ಚಿತ್ರ.

(ವ್ಯ·ವಿ·ವಿ·ದ ಪ್ರತಿಯಲ್ಲಿ ಪ್ರತ್ಯೇಕ ಇರುವ 3 ನುಡಿಗಳು ಫಲಸ್ತುತಿ ರೂಪದಲ್ಲಿದ್ದು, ಅವುಗಳಲ್ಲಿ ಬಿರುದಿನ ಸುವ್ವಾಲಿ ಎನಿಸಿದ ವಿಷಯ ಇತ್ಯಾದಿ ಸೂಚಿತ).

ಮುಖ್ಯವಾಗಿ 'ಬಿರುದಿನ ಸುವ್ವಾಲಿ' ಅದ್ವೈತ ಖಂಡಿಸುವ ತಾತ್ವಿಕ ಕೃತಿ. ಆದರೆ ದ್ವೈತವನ್ನು ಸಾಮಾನ್ಯರಿಗೆ ಬೋಧಿಸುವ ಸುವ್ವಾಲಿ ಪದವೆನಿಸುವುದರಿಂದ ಇದು 'ಗುಂಡ ಕ್ರಿಯೆ'ಯಷ್ಟು ಶಾಸ್ತ್ರೀಯವಾಗಿಲ್ಲ. ಪೂರ್ವಾರ್ಧ, ಉತ್ತರಾರ್ಧ ಚರಣಗಳಂತ್ಯಕ್ಕೆ 'ಸುವ್ವಿ' ಹೇಳುತ್ತ, 17ನೆಯ ನುಡಿ ನಿದರ್ಶಿಸಿದಂತೆ 'ಉಂಬುವರು ಯಾಕೆ' ಇತ್ಯಾದಿ ದೇಸೀಯ ಪ್ರಯೋಗಯುಕ್ತವಾಗಿ, ದೇಸೀಯ ಛಂದದ ಚೌಕಟ್ಟಿನಲ್ಲಿರುವ ಈ ಕೃತಿಯೂ 'ತತ್ವಸುವ್ವಾಲಿ'ಯಂತೆ ಶಾಸ್ತ್ರವನ್ನು ದೇಸೀಯ ಸತ್ವದಿಂದ ತುಂಬಿದ ವಾದಿರಾಜರ ಜಾಣ್ಮೆಗೆ ಕುರುಹು.

6) <u>ಗುಂಡ ಕ್ರಿಯೆ</u>: ಈ ಶಾಸ್ತ್ರ ಕಾವ್ಯದ ಹೆಸರು ವಿಚಿತ್ರವಾದರೂ ಅನ್ವರ್ಥಕ. ಇದೂ ತಾಳ ಸೂಚನೆಯಿರದ ರಾಗನಾಮ (ಎನ್ನಬಹುದು 'ಹರಿಸರ್ವೋತ್ತಮಸಾರ'ದಲ್ಲಿರುವಂತೆ). ಈ ಹೆಸರಿಗೆ ಕಾರಣವಾದ ಕತೆಯಂತೆ, ರಾಮನಾಮ ಹಾಡುವ ಹನುಮನಲ್ಲಿ ತಮ್ಮ ಪ್ರಾವೀಣ್ಯ ಪರೀಕ್ಷಿಸಿಕೊಳ್ಳ ಬಂದ ನಾರದ ತುಂಬುರರು ಹನುಮ ಹೇಳಿದ ಹಾಗೆ ಪಕ್ಕದ ಬಂಡೆಯ ಮೇಲಿನ ವಾದ್ಯ ಎತ್ತಿಕೊಳ್ಳಲು ಬಾರದೆ, 'ರಾಗ ತಾಳಮೇಳದಲ್ಲಿ ಜಾಣನೋ ಪ್ರವೀಣನೋ'[81] ಎನಿಸಿದ ಹನುಮ 'ಗುಂಡ ಕ್ರಿಯಾ' ರಾಗವನ್ನಾಲಾಪಿಸಿ

---

81. ವಾದಿರಾಜರ ಕೃತಿಗಳು, ಪು.273.

ವಾದ್ಯಗಳನ್ನೆತ್ತಿಕೊಂಡ. ಆ ನಾದ ಬ್ರಹ್ಮೋಪಾಸಕನ ಭಕ್ತಿ ಉಚಿತ ರಾಗಾಲಾಪನೆ ಬಂಡೆಯ ಹೃದಯವನ್ನೂ ಕರಗಿಸಿತೆಂಬುದಿಲ್ಲಿಯ ಧ್ವನಿತಾರ್ಥ. ಇಂಥ 'ಗುಂಡ ಕ್ರಿಯೆ' ಪ್ರಸ್ತುತ ಕೃತಿಯ ವಿಷಯ ಸೂಚಕ ಹೆಸರೂ ಹೌದು. ಗುಂಡ್ = to pound, to level[82] (ಹುಡಿಗಟ್ಟು, ನೆಲಸಮಗೊಳಿಸು) ಎಂದರ್ಥ. ಚಾರ್ವಾಕ–ಜೈನ ಬೌದ್ಧ ಪೂರ್ವಮೀಮಾಂಸಾ, ಸಾಂಖ್ಯ ಅದ್ವೈತ ಎಂಬ ಷಣ್ಮತ[83] ಖಂಡಿಸಿ, ಸುಜ್ಞಾನ ಭಕ್ತಿಗಳಿಂದ ಹರಿಯ ಮನ ಕರಗಿಸಿ ಒಲಿಸಿಕೊಳ್ಳುವಂಥದು ಈ 'ಗುಂಡ ಕ್ರಿಯೆ'. ಆದ್ದರಿಂದ 'ಗುಂಡ ಕ್ರಿಯೆ' ಎಂಬುದನ್ನು 'ರಾಗ ಪ್ರತಿಪಾದ್ಯ ವಿಷಯ ಎಂಬ ಉಭಯಾರ್ಥಗಳಲ್ಲಿಯೂ ತಿಳಿಯಬಹುದು' (ಬಿ. ಭೀಮರಾವ್ ಗುಂಡಕ್ರಿಯೆ viii). 'ಹರಿಸರ್ವೋತ್ತಮಸಾರ'ದಂತೆ ಇಲ್ಲಿಯ 40 ಪದ್ಯಗಳೂ ಅಂಕಿತದಿಂದ ಕೂಡಿ ಸ್ವತಂತ್ರವೆನಿಸುತ್ತವೆ, ಅಂಶಲಯದ ದಶಪದಿಗಳಾಗಿ ವಾದಿರಾಜರ ಪ್ರಯೋಗ ಕೌಶಲದೋರುತ್ತದೆ.

'ಸ್ವಪ್ನಪದ'ದಂತೆ ಕೃತಿಗೆ ಪ್ರಾಮಾಣ್ಯ ದೊರಕಿಸಲು ಪ್ರಾರಂಭದ ಪ್ರಾಸಭರಿತ ನುಡಿಯಲ್ಲಿ ಹರಿ ನೇರವಾಗಿ ತಮಗೀ ತತ್ವಗಳನರುಹಿದನೆಂದಿರುವುದು ತಮ್ಮ ಋಜುತ್ವ ಸೂಚಕವೂ ಹೌದು –

ಬರಿದೆ ಸಂಸಾರದಿ ಜರಿದೆ ಮರೆದೆ
ಹರಿ ನಿನ್ನ ಅನುಸರಿಸುತಿರದೆ,
ಕರಿ ದೇವದೇವ ಎನ್ನ
ಕರುಣಿ ಕಣ್ತೆರೆದೆ, ತರಿದೆ ಮು
ಕರಿಯ ಮುಖವ ನೀ ಬೇಸರದೆ,
ವರದೇಶ ಪಾಹಿ ಎನೆ ಅಜಮಿಳನ
ಪೊರೆದೆ, ಮುರಿದೆ ಯಮಭಟರ,
ತರಿದೆ ಪಾಶಗಳ, ಕರೆದೆನ್ನ ಹಯವದನ
ಒರೆದೆ ತತ್ವಗಳ, ಮೆರೆದೆ ಮಹಿಮೆಯ
ನಿನಗದೊಂದರಿದೆ (1)

---

82. ಆಪ್ಟೆ ಕೋಶ.

83. ಬ್ರಹ್ಮಸೂತ್ರ 2–2 ರಲ್ಲಿ ಖಂಡಿತವಾಗಿರುವ ಮತಗಳಿವು.

ಸಂಸಾರದಲ್ಲಿ ನಾನು ಮರೆತರೂ, ಕರಿವರದನೆನ್ನ ಕರೆದು ತತ್ವಗಳನೊರೆದ ಕಾರಣ, ಕರುಣ ಎಂಬುದನ್ವರ್ಥಕವಲ್ಲವೇ?

ವಿಮತಗಳಲ್ಲಿ ಮೊದಲು ನಾಸ್ತಿಕ ಚಾರ್ವಾಕನನ್ನು ಹಂಗಿಸಿದ್ದಾರೆ: ದೇಹವಲ್ಲದೆ ಬೇರೆ ಜೀವವಿಲ್ಲೆಂಬನೆ, ಮೋಹದ ಹೆಂಡತಿ ಸಾಯಲೇಕೆ ಅಳುವೆ?[84] ಕಾಯಕ್ಕೇನು ಹಾನಿ ಬಂದಿತು? ಬಾಹುಗಳಿಂದಪ್ಪಿ ರಮಿಸಬೇಕು. ಈ ಹದನನರಿಯದ ಮತ ದುರ್ವೃತ್ತ. ಅವಳ ಶ್ವಾಸವಿಲ್ಲದ್ದರಿಂದ ಜೀವವಿಲ್ಲೆಂಬೆಯ? ಡೊಂಬನ ಸತಿ ಶ್ವಾಸ ಕಟ್ಟಿ ಅಂಬರದಿ ನಲಿವಾಗ ದಾರ ಕಡಿದ ಮೇಲೆಯೂ ಚಲಿಸದೆ ನಿಲ್ವಳು; ಅವಧೂತರೂ ಪ್ರಾಣ ಮಾರ್ಗ ತಡೆದು ತಪಿಸುವರು. ತೊಲಗಿದನು ಎಲ್ಲೇದೆಂಬ ಯುಕ್ತಿ ಸಲ್ಲದು (2–3).

ಜೈನ ಸ್ಯಾದ್ವಾದ ನಿರಾಕರಿಸಿದ ಯುಕ್ತಿ ಚಮತ್ಕಾರ: ನಮ್ಮ ಪ್ರಮೇಯಕೂ ಸ್ಯಾದ್[85]ನ್ನುವಿಯಾಗಿ ವಾದಿಪೆ ಎಂತೋ? ಮೊದಲೇ ಸೋತೆ. ಆದಿಯನರಿಯದ ಮತ ಮೆಚ್ಚರು. ಈತ ತಾನೊಬ್ಬ, ಉಳಿದೈದು[86] ದರ್ಶನ ಹೀನವೆಂಬನು. ಜನನ ಮರಣಾದಿಗಳು ಸರ್ವರಿಗೆ ಸರಿ, ಆದರೂ ಮನುಜರೆಲ್ಲ ಮರುಳರು — ನಾನೇ ಪ್ರವೀಣನೆಂದರೆ ಸುಜನರು ನಗರೆ? ಅಹಂಕಾರದಿಂದ ನೀನೇ ಹೀನನಾದೆ. ಇವರು ಆಚಾರ್ಯರ ವಚನ ಯುಕ್ತಿ ತನ್ನೊಬ್ಬನ ಮಾತಿಂದ ಹಿಮ್ಮೆಟ್ಟುವುವೇ? ಅನಾದಿ ವೇದ ಪ್ರಮಾಣ ಬಲ್ಲದವಗೆ ಮೋಕ್ಷ ನಿರೂಪಣ ಬಾರದಾಗಿ ಹಯವದನ ನಿಗಮ ಬೋಧಿಸಿದ (4–6).

---

84. ಸಹೇದೇವ ಪಾಸಂಬದ್ಧಂ ವದತೋ ಮರಣೇ ಕಥಂ। ವಿಲಪೇತ ಪಟ್ಟಮಹಿಷೀ ಸ್ನೇಹೇರಸ್ತಾಡನಪೂರ್ವಕಂ॥ (ನೀ ಮಡಿಯಲು ಮಡದಿ ಎದೆ ಬಡಿದುಕೊಂಡಳುವುದೇಕೆ? — ಯುಕ್ತಿಮಲ್ಲಿಕಾ).

85. ಜಗತ್ತು ಸತ್— ಅಸತ್— ಸದಸತ್— ಸದಸದ್ವಿಲಕ್ಷಣ— ಸತ್ಸದ್ವಿಲಕ್ಷಣ— ಅಸತ್ ಅಸದ್ವಿಲಕ್ಷಣ— ಸದಸತ್ ಸದಸದ್ವಿಲಕ್ಷಣ 7ರಲ್ಲಿ ಹೇಗೆಂದರೆ ಹಾಗೆ ಸ್ಯಾತ್ ಎಂಬಲ್ಲಿ ಸ್ವವಚನ ವಿರೋಧವು 'ನಿಗ್ರಹ ದೋಷ' (ಕಲ್ಪಲತಾ ಸ್ಯಾದ್ವಾದ ಖಂಡನೋ ಮೊದಲಾದ ಸಂಸ್ಕೃತ ಕೃತಿ).

86. ಪ್ರಮಾಣತ್ರಯ ಒಪ್ಪಿದ ವೈದಿಕ ದರ್ಶನ 6 = ಗೌತಮನ ನ್ಯಾಯ, ಕಾಣಾದನ ವೈಶೇಷಿಕ, ಕಪಿಲನ ಸಾಂಖ್ಯ, ಪತಂಜಲಿಯ ಯೋಗ, ಜೈಮಿನಿಯ ಪೂರ್ವ ಮೀಮಾಂಸಾ, ಬಾದರಾಯಣರ ಉತ್ತರ ಮೀಮಾಂಸಾ (ವೇದಾಂತ ಆಚಾರ್ಯತ್ರಯರ ಮತಗಳ ಮೂಲ ಹಾಗೂ ದ್ವೈತ ಪ್ರಾಶಸ್ತ್ಯವಿತ್ತದರ್ಶನ); ಮೊದಲಿನ ಎರಡೂ ನ್ಯಾಯ (ತರ್ಕ) ಅವಲಂಬಿತ ಸಮಾನ ಟಿಸಿಲು; ಆದ್ದರಿಂದ 5 ದರ್ಶನ ಎಂದಿದ್ದಾರೆ.

ಬೌದ್ಧಮತ ನಿರಾಕರಣೆ: ಹರಿಮಹಿಮೆಯ ನಿರೂಪಣೆ : ದೇವಮಾನವರ ಮಾತಿನೊಳು ಶ್ರದ್ಧೆಯ ಮಾಡುವರು ಲೋಕದವರು; ಅದರಿಂದ ವೇದವ್ಯಾಸನೇ ಬಂದಿಲ್ಲ ಪೇಳ್ದ ಸಿದ್ಧಾಂತವನು ವಿರೋಧಿಸಲುದ್ಯುಕ್ತಿಸಿದ ಬುದ್ಧನ ಕಥೆ ಪ್ರಸಿದ್ಧವಾದುದು; ಹೀಗೆ ಜ್ಞಾನಿಪರಂಪರೆಯಿಂದ ಶುದ್ಧವಾಗಿಳಿದ ಶ್ರುತಿ ವಿದ್ಯೆಯ ರಕ್ಷಿಸಿದ ಹಯವದನ. ತನ್ನ ಮೊಗವ ಕಾಣಲರಿಯದೆ ಕನ್ನಡಿಯನವಲಂಬಿಸುವ ತನುವಿನ ಸ್ಥಿತಿಯರಿಯದೆ ವೈದ್ಯಗೆ ನಾಡಿ ತೋರಿಸುವ, ತಿಥಿ ತಿಳಿಯದೆ ಪಂಚಾಂಗ ನೋಡುವ ಮನುಜರಲ್ಲಿ ಸರ್ವಜ್ಞರಿಲ್ಲ. ಈ ಪ್ರಮೇಯ (ಕೃತಿ) ನಿರೂಪಿಸುವ ಹಯವದನನೊಬ್ಬನೆ ಸರ್ವಜ್ಞ ← ಅನುಪಮ ಶಕ್ತಿ; ಎಲ್ಲೆಲ್ಲೂ ತುಂಬಿದ ವಿಷ್ಣು ವಿಶ್ವತಶ್ಚಕ್ಷು. ಎಲ್ಲರ ಬಲ್ಲ — ಶರಣರಿಗೆ ಕೈವಲ್ಯ ಕೊಡಲು ಬಲ್ಲ, ಖಳರ ಗೆಲ್ಲಲು ಬಲ್ಲ, ಕಲ್ಲು ಕಂಭದಿ ಮೂಡಿದಾ ಕರುಣಾಗಷ್ಟೇ ಸರ್ವಜ್ಞತ್ವ ಸಲ್ಲುವುದನಾ ಬಲ್ಲ.[87] ಹೊನ್ನು ಹೆಣ್ಣು ಮಣ್ಣು ತೊರೆದು ಬಾಳುವನಾವ? ಪದ್ಮೆಯುಸಡ್ಡೆಗೊಳ್ಳದೆ ನಾಭಿಕಮಲದಿ ಕುವರನ ಪೆತ್ತುವನೊಬ್ಬನೆ ಗೆದ್ದ ಸಿದ್ಧ (7—10).

ಪೂರ್ವಮೀಮಾಂಸಾ ಖಂಡನ: ಮನೆಯ ಮೇಲಣ ಕಿಚ್ಚು ಮನೆಯೊಳಗಿನ ಕರ್ಮಕನುಕೂಲವೇ? 'ಕಾನನ ಮರದ ನೆಳಲು ಜನಪದದೊಳಗಣ ತಾಪವ ಕಳೆವುದೇ?' ಕಳ್ಳನ ಶೂಲಕ್ಕೆ ಕಳುಹದೆ ಅನಘರಿಗಪ್ಪಣೆ ಕೊಡುವ ಅರಸಿನಂತವು ವ್ಯರ್ಥ. ಇನಿತು ಕಾರ್ಯ ಈಶನೊಲ್ಲದಿದ್ದರೆ ಆಗವು, ಮೇಲಣ ಪದಕೆಂತೇರುವೆ?[88] ಕರ್ಮವೊಂದೇ ಸಾಕು, ಬೊಮ್ಮ ಬೇಕೆಂಬವ ಯಜ್ಞಾದಿ ಕರ್ಮವ ಸುಮ್ಮನೆ ಮಾಡುವನೇ (ಮೋಕ್ಷಾಪೇಕ್ಷೆಯಿರದೆ)? ಮಖವ ಮಾಡೆಂದ ಶ್ರುತಿಯೇ ಬೊಮ್ಮನನೂ ಪೇಳಿತು. ವೇದ ಪ್ರಾಮಾಣ್ಯ ಒಪ್ಪಿದ ಮೇಲೆ ಕರ್ಮ ಸಾಕೆಂಬ ಹೆಮ್ಮೆಯ ಬಿಡು, ಇಮ್ಮನವಿಲ್ಲದೆ ಕೈವಲ್ಯಪ್ರದ ಬೊಮ್ಮನ ನಂಬು (11—12).

ಸಾಂಖ್ಯ ನಿರಾಕರಣೆ: ಈ ಇನ್ನೊಬ್ಬ ವಾದಿ ಘಟಾದಿ ಜಡ ತತ್ವ ಜಗತ್ಕಾರಣ ಎನ್ನುವ,

---

87. ಮೊದಲು ದ್ವಿತೀಯ ಪುರುಷದ ಕೊನೆಗೆ ಪ್ರಥಮ ಪುರುಷದ ಪ್ರಯೋಗ ಕೌಶಲ!

88. ಸಾಧನೆಗೆ ಕರ್ಮವಷ್ಟೇ ಸಾಲದು, ಹರಿಯನುಗ್ರಹ— ಅದಕ್ಕಾಗಿ ಭಕ್ತಿಯೂ ಬೇಕು.

ಇವನ ಬಂಧ ಪರಿವುದೆಂತು? ಮಣ್ಣ ತಂದು ಘಟ ಮಾಡ್ದ ಕುಂಬಾರ ಜೆನ್ನಂತುಕ್ಕನೇಕೆ ಪೋಗ ಮುಕುತಿಗೆ? 'ತಮೇವಂ ವಿದ್ವಾನಮೃತ ಇಹ ಭವತಿ — ನಾನ್ಯಃ ಪಂಥಾ ಅಯನಾಯ ವಿದ್ಯತೇ' ಎಂಬ ಆಮ್ನಾಯ ಪೇಳ್ದ ಹರಿ ಇವರ ಯುಕ್ತಿಶೂನ್ಯ ಮಾತಿಗೆ ಮೆಚ್ಚ[89](13).

ಮಾಯಾವಾದ ಖಂಡನ: ತನ್ನ ನಾಲಗೆ ಕತ್ತರಿಸುವವ ಇನ್ನೇನು ನುಡಿವ? 'ಕೊಡಲಿಯ ಮೊನೆ ಮುರಿದವ ವನದ ತರುಗಳ ಕಡಿವನೇ?' ವೇದಾಂತ ಒಪ್ಪಿಯೂ ಮನ್ನಿಸದೆ ಜಗವು ಪುಸಿ[90] ಎಂಬವನೆ, ಜಗವ ಇನ್ಯಾತರಿಂದ ಕೆಡಿಸುವೆ, ನಿನ್ನರ್ಥವನೆಂತು ಸಾಧಿಪೆ, ತತ್ವವಾದಿ[91]ಗಳೊಳೆಂತು ವಾದಿಪೆ? 'ನೇಹ ನಾನಾಸ್ತಿ ಕಿಂಚನ' ಎಂಬ ಕಾಠಕ ಶ್ರುತಿ ಹರಿಯ ಗುಣ ರೂಪಗಳಿಗೆ ಭೇದವಿಲ್ಲೆಂಬುದು, ಜೀವ ಬ್ರಹ್ಮೈಕ್ಯ ಹೇಳದು.[92] ಸತ್ವ— ನಿತ್ಯತ್ವ— ಮಹತ್ವಗಳು ಜೀವ ಬ್ರಹ್ಮರಿಗೆ ಸಮವೆಂದೂಹಿಸಿ, 'ಏಕಮೇವಾದ್ವಿತೀಯಂ' ಛಾಂದೋಗ್ಯ ಶ್ರುತಿಗೆ ಒಬ್ಬನೇ ಇರುವ ಅರ್ಥಗೈವೆ, ಅದರದು ಪ್ರಳಯದಲ್ಲಿದ್ದ ಹರಿಯ ಸರ್ವೋತ್ತಮತ್ವ ಪ್ರತಿಪಾದಕ[93] (ಆಗ ಹರಿಯುದರದ ಜೀವ ಜಡರು ನಿಷ್ಕ್ರಿಯರು, ಸ್ವರೂಪತಃ ನಾಶವಿಲ್ಲ). 'ದ್ವಾಸುಪರ್ಣಾ — ಅನ್ಯಮೀಶಂ' ಎಂಬ ಜೀವೇಶ ಭೇದಕ

---

89. ಹರಿ ಸರ್ವೋತ್ತಮನೆನ್ನದೆ ಮುಕ್ತಿಯಿಲ್ಲ — ಮುಕ್ತಿಗನ್ಯ ಮಾರ್ಗವಿಲ್ಲ.

90. ವೇದ ಒಪ್ಪಿಯೂ ಜಗತ್ತು ಸುಳ್ಳೆನ್ನುವುದು (ಪ್ರಾತಿಭಾಸಿಕ, ವ್ಯಾವಹಾರಿಕ ಸತ್ಯವೆಂಬುದು) ಆತ್ಮವಂಚನೆ. ವೇದಾಂತಿಗಳೆಂದುಕೊಳ್ಳುವ ಅದ್ವೈತಿಗಳು ವೇದವು ಅವಾಚ್ಯ ಬ್ರಹ್ಮಸಾಧಕವಲ್ಲ (ಅತತ್ವಾವೇದಕ) — ಶೂನ್ಯರೂಪದ ನಿರ್ವಾಣವೇ ಬ್ರಹ್ಮ ಎನ್ನುವುದರಿಂದ ಪ್ರಚ್ಛನ್ನ ಬೌದ್ಧರು (ಮಧ್ವವಿಜಯ). ಇವರ ನಿರ್ಗುಣ ನಿರಾಕಾರ ನಿರ್ಲಿಪ್ತ ಬ್ರಹ್ಮ ಜನಸಾಮಾನ್ಯರ ದೈವವಲ್ಲ, ಜ್ಞಾನಮುಕ್ತಿಪ್ರದವಾದರೆ ಭಕ್ತಿ ಬೇಕಿಲ್ಲ.

91. ಅನಂತಗುಣಪೂರ್ಣ ಬ್ರಹ್ಮನು ಸಾಕಲ್ಯೇನ ವೇದವಿದಿತನಲ್ಲದ ಅವಾಚ್ಯ ತತ್ವವಾದರೂ, ಅವನ ಉತ್ತಮತ್ವ ಜಗತ್ಸತ್ಯತ್ವ ಮುಂತಾದುವು ಅಲ್ಲಿ ನಿರವಕಾಶ ನಿರೂಪಿತ (ನೋ. ಸ್ವಪ್ನಪದ 41).

92. ಯಮ ನಚಿಕೇತನಿಗೆ ಮುಂದೆ 'ಸಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ' (ಭಗವದ್ರೂಪ ಭೇದ ಬಗೆವಗೆ ಭೀಕರ ಮೃತ್ಯು) ಎಂದಿರುವುದರ ವಿವರ ಶ್ರುತಿ ತತ್ವಪ್ರಕಾಶಿಕಾದ 391, 423, 428ರಲ್ಲಿದೆ.

93. 'ಸ ದೇವ ಸೌಮ್ಯ ಇದಮಗ್ರಮಾಸೀತ್' ಎಂಬ ಪೂರ್ವ ವಾಕ್ಯವೂ ಆ ಬ್ರಹ್ಮವೇ ಈ ಶ್ರೇಷ್ಠ ತತ್ವ ಎನ್ನಲು ಸಾಧಕ.

ಶ್ರುತಿಯು ನಂಬದು. ಜನ್ಮಾಂತರ ಕರ್ಮಫಲಭೋಗಿ, ಜೀವ, ಈಶ ಬೇರೆ ಎಂಬುದು ಮುಸಿಯದೇ? ಕರ್ಮಫಲ ಉಣ್ಣದ ಈಶ ಪೂರ್ಣ ಸುಖಸ್ವರೂಪಿ.[94] ಆದರಿಂದ 'ದಾಸೋಹಂ' ಎಂದು ತತ್ವವಾದ ಮನ್ನಿಸಿ ಬಾಳು.[95] (ಇದಕ್ಕೆ ಲೌಕಿಕ ದೃಷ್ಟಾಂತ-) 'ಅರಸು ತಾನೆಂಬವಗೆ ನೆರೆಮನೆಯಿಕ್ಕೆಂಬ ಕ್ಲೇಶ,[96] ಅರಸಿನ ಆಳೆಂದು ಬಾಳುವರ ಭಾಗ್ಯ ನೋಡಿ. ಹರಿ ತಾನೆನ್ನಲು ಪೌಂಡ್ರಕ ವಾಸುದೇವನ ಚೆಂಡಾಡಿದನು, ನರನಹಂಬ್ರಹ್ಮ ಎನೆ ಕೊಲ್ಲದುಳಿಪನೆ ವೇದೋದ್ಧಾರಿ? ಲೋಕಮಾತೆ ಲಕುಮಿ, ಅಂಬಿಕಾದೇವಿ ಗೌರಿ; ಕುಮತಿಗಳಚ್ಯುತೋಹಂ ಶಿವೋಹಂ' ಎಂದೇಕೆ ಹೇಳುವರು? ಬೇಕಾಯಿತೇ ಮಾತೃಗಾಮಿ[97] ಎಂಬ ಬೈಗಳು? 'ಯೋ ನಃ ಪಿತಾ' ಎಂಬ ಋಗ್ವೇದ ಸೂಕ್ತಕ್ಕೆ ದೇವತೆಯಾದ ಶ್ರೀಕಾಂತನ ಕುವರರು ನಾವು. ಅದ್ವೈತದಲ್ಲಿ ಬುದ್ಧ ಮತದ ಸಿದ್ಧಾಂತಗಳೇ ಬದ್ಧವಾಗಿದ್ದರಿಂದ ಬುದ್ಧಿವಂತರೂ ದ್ವೈತ ಹೊದ್ದಿ ಬದುಕಿ (14–19).

---

94. ಸ್ವಪ್ನಪದ 17ರಲ್ಲಿಯೂ ಸಂಗ್ರಹಿತ ಶ್ರುತ್ಯರ್ಥ.

95. ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋಹಮಸ್ಮಿ (ಛಾಂದೋಗ್ಯ), ಬ್ರಹ್ಮ ವಾ ಇದಮಗ್ರ ಆಸೀತ್ ತದಾತ್ಮಾನಮೇವಾವೇತ್ ಅಹಂ ಬ್ರಹ್ಮಾಸ್ಮಿ (ಬೃಹದಾರಣ್ಯಕ) — ಇಲ್ಲಿ ಅಹಮಾದಿ ಶಬ್ದಗಳಿಗೆ ಅಂತರ್ಯಾಮಿಯು ಅರ್ಥ (ಭಾಷ್ಯ); ಅಂತರ್ಯಾಮಿ ಅಧಿಷ್ಠಾನ ಭಿನ್ನ. ಅವನೇ ನಾನೆನ್ನದೆ 'ದಾಸೋಹಂ' ಎಂಬುದು ಶರಣಾಗತಿ, ಮುಕ್ತಿ. ಅನ್ಯಥೋಪಾಸಕರಿಗೆ ಅಂಧಂತಮ (ಅಂಧಂತಮಃ ಪ್ರವಿಶಂತಿ ಯೇ ಅವಿದ್ಯಾಮುಪಾಸತೇ). ನೋ. ಶ್ರುತಿ ತತ್ವಪ್ರಕಾಶಿಕಾ 392–404.

96. ಅಭೇದ ಜ್ಞಾನಾದ ಪ್ರೀತಿರೇವೋತ್ತಮಾನಾಂ ಭವತಿ। ಘಾತಯಂತಿ ಹಿ ರಾಜಾನೋ ರಾಜಾಹಮಿತಿ ವದಂತಂ॥ (ವಿಷ್ಣು ತತ್ವ ನಿರ್ಣಯ).

97. ರುಕ್ಮಿಣಿಯನೆಳಸಿದ ಶಿಶುಪಾಲನನ್ನು ಹೀಗೆಂದೇ ಕರೆದಿದೆ (ರು.ವಿ.15,8).

ವ್ಯೋಮಕೇಶ[98]ನೊಬ್ಬ, ವ್ಯೋಮಪಾದ[99]ನೊಬ್ಬ,

ಭ್ರಾಮಕ ವರಜೀವ[100]ನೊಬ್ಬ, ಕೊಲ್ಲುವ[101]ನೊಬ್ಬ,

ಕಾಮದಕ್ಷಾದಿಗಳ

ನೀ ಮೆಯರಿಯೆ ಕೊಂದವನೊಬ್ಬ, ರಕ್ಷಿಸಿ

ದಾ ಮಹಾಪುರುಷನೊಬ್ಬ[102]

ರಾಮಾದ್ಯವ[103]ತಾರದಿಂದ ಮುರಿದ ಬಿಲ್ಲು

ಆ ಮಹೇಶನದಲ್ಲವೇ?

ಶ್ರೀ ಮುಡಿಯರಿ ವಿಷ್ಣುಪದಿ ಎಂಬ ನದಿ ಪೊತ್ತ

ಆ ಮಹಾದೇವ ಹಯವದನನೆಂತಾಹ,

ನೀ ಮಾನವನೆಂತಾಹೆಯೋ? (20)

(ಹರಿಸರ್ವೋತ್ತಮ ಸಾರದ ಮೊದಲ ನುಡಿಯಂತೆ ಪ್ರಾಸಯುಕ್ತವಾಗಿ, ಅದೇ ವಿಷಯ ಸೂಚಿಸಿದ ಈ ಪದ್ಯದಂತ್ಯ— ಹರಿಹರ ಭೇದವೊರೆದು, 'ಇದನರಿಯದವನೆಂತು ಮಾನವ' ಎಂದಿದೆ). 'ಸ್ತುಹಿ ಶ್ರುತಂ ಗರ್ತಸದಂ ಯುವಾನಂ ಮೃಗನ್ನಭೀಮಂ ಉಪಹಂತುಮುಗ್ರಂ। ಮೃಡಾ ಜರಿತ್ರೇ ರುದ್ರಸ್ತವಾನೋ ಅನ್ಯಂ ತೇ ಅಸ್ಮನ್ನಿವಪಂತು ಸೇನಾಃ (= ರುದ್ರನೇ, ಹೃದಯ ಗುಹೆಯ ತರುಣ ಮೃಗರಾಜನಂತೆ ಭಯಂಕರನಾಗಿ ಅಸುರನನ್ನು ಅಂಕದಲ್ಲೇ ಕೊಂದ ಶತ್ರುಭೀಕರ ಶ್ರುತಿನುತ ನೃಸಿಂಹನ ಸ್ತುತಿಸು; ನಿನ್ನ ನುತಿಸಿದ ಎನ್ನ ರಕ್ಷಿಸು, ಇತರರನ್ನು ನಿನ್ನ ಸೇನೆ ಸಂಹರಿಸಲಿ) ಎಂದು ತನ್ನ ಹೃದಯ ಗುಹೆಯ ನೃಸಿಂಹನ ಸ್ತುತಿಸಲು

---

98. ಹರ.

99. ತ್ರಿವಿಕ್ರಮ.

100. ಭಸ್ಮಾಸುರಗಿತ್ತ ವರ.

101. ಮೋಹಿನಿ ರೂಪದ ವಿಷ್ಣು.

102. ಎದೆಗೊದ್ದ ಭೃಗುವಿನ ರಕ್ಷಕ = ವಿಷ್ಣು.

103. ಕೃಷ್ಣ ಮುರಿದ ಕಂಸನ ಬಿಲ್ಲೂ ಶಿವನದೇ — ಹರಿಯ ಉತ್ತಮತ್ವ ಧ್ವನಿತ.

ಹರಗೆ ವೇದ ಪೇಳಿತಾಗಿ, ಹರಿ ಹರ ಭೇದ— ಅಂತರ್ಯಾಮಿ ಹರಿಯು ಉತ್ತಮೋತ್ತಮ ಧ್ವನಿತ. 'ನೀ ನಾನು' ಎಂದರೇಕೆ ಕೋಪ? ಜೀವೈಕ್ಯ ಪೇಳಲಿದು ಉತ್ತಮರಿಗೆ ಈ ಬೈಗಳಾದರೆ ದೀನ ಜೀವೈಕ್ಯವ ಶ್ರೀನಾಥಗೆ ಪೇಳುವುದೇನು ಬೈಗಳೋ? ಗುಣಶೂನ್ಯನೆಂಬುವುದು ಮಾನವಗೆ ಬೈಗಳಾದರೆ, ಹಯವದನಗೆ ಗುಣವಿಲ್ಲ[104]ವೆಂಬೋದು ಬೈಗಳಲ್ಲೇನೆಲೋ? (21— 22).

ಷಣ್ಮತ ಖಂಡಿಸಿದ ಮೇಲೆ ವಾದಿರಾಜರು ಯುಕ್ತಿಯುಕ್ತ ತತ್ವವಾದ ಹೂಡಿ, ಹರಿಸರ್ವೋತ್ತಮನೆನ್ನುತ್ತಾರೆ: ನರರೊಳು ಪರನಿಂದೆ ಸಲ್ಲದು, ಸರ್ವೇಶನ ನಿಂದೆ ಧರ್ಮವೇ? ಸಜ್ಜನರೊಡನಾಡು, ದುರುಳರ ಕೂಡಾಟವ ಬಿಡು, ಹರಿಯ ಚರಣ ಸೇವೆಯ ಮಾಡು, ದುರಿತಗಳ ನೀಡಾಡು, ಭಕ್ತಿಯ ಬೇಡು, ಪರಮ ಪುರುಷನ ನೋಡು, ಅವನ ಕರುಣ[105]ದಿಂದ ಸಿರಿ ಸೇರುತಿಪ್ಪುದು, ಪರಗತಿಯುಪ್ಪುದು, ನಿರುತ ಸುಖ ತಪ್ಪದು. ತ್ರಿಮೂರ್ತಿಗಳಲ್ಲಿ ಉತ್ತಮನ ಶೋಧಿಸೆ ಬಂದ ಭೃಗುವನರಿಯದೆ ಕ್ರೋಧ ಮಾಡಿ ವಿಧಿ— ರುದ್ರರಾಧಿಕ್ಯವಾದುದಿಲ್ಲ; 'ಈಶ ಸರ್ವಜ್ಞ' ಎಂದು ವೇದ ಪೇಳ್ದ ಆದಿ ಮಸ್ತುವ ಕಾಣ! ಬೋಧವಿಲ್ಲದ ವಿಧಿ ರುದ್ರರು ಆ ಸರ್ವಜ್ಞ ದೇವರೆಂತಪ್ಪರೈ? ಭೃಗು ಶ್ರೀಧವನೆದೆಯನೊದ್ದಾಗಲೆ ಸರ್ವವೇದಿಯಾದ ಕಾರಣ ಕೋಪಿಸದೆ ಹೆದ್ದೈವನಾದ.[106] ಇವನ ರೋಮಕೂಪದೊಳಗೆ ಬ್ರಹ್ಮಾಂಡರಾಶಿ[107] ತೀವಿಪ್ಪುದು; ಅಣುಜೀವಿಗಳು

---

104. ನೀಚೈಕ್ಯಸಂಧಾನ ನಿಂದ್ಯವೆಂಬುದು ಲೋಕಾನುಭವ ಸಿದ್ಧ. ಬ್ರಹ್ಮನೂ ಕರ್ಮದಿಂದ ಸಂಸಾರ ತಿರುಗಿದರೆ ಬೈಗಳು ಯಾರ ಕೊರಳಿಗಾದುವು? ಸದ್ಗುಣಾಭಾವದಿಂದ ನಿರ್ಗುಣ ಬ್ರಹ್ಮಗಲ್ಲವೇ? ಧ್ವಾಂತಾಶ್ರಿತ ಬ್ರಹ್ಮ ಅಜ್ಞ, ಕರ್ಮಬಂಧಿತನು ಪಾಪಿ ಎನಿಸುವ (ಯುಕ್ತಿ ಮಲ್ಲಿಕಾ).

105. ದೂಷಣ— ದ್ವೇಷ ಬಿಟ್ಟು ಸತ್ಸಂಗಾದಿ ಯತ್ನಗೈದರೆ ಹರಿಕರುಣ— ಸದ್ಗತಿ ಸಾಧ್ಯ.

106. ಭೃಗು ನಮಿಸದಿರಲು ಬ್ರಹ್ಮ ಸತ್ಕರಿಸಲಿಲ್ಲ, ಭಯಂಕರನೆಂದಾಲಿಂಗಿಸದಿರಲು ಸಿಟ್ಟಾದ ಶಿವನನ್ನು ಶಿವೆ ಸುಮ್ಮನಿರಿಸಿದಳು; ಶ್ರೀಯ ಅಂಕದಲ್ಲಿದ್ದವನೆದೆಗೊದ್ದರೂ ಸರ್ವಜ್ಞ ಕೋಪಿಸದಿದ್ದು ಸತ್ಕರಿಸಿದ (ಭಾಗವತ, ಉತ್ತರಾರ್ಧ 93).

107. ಬ್ರಹ್ಮಾಂಡಗಳ ಸೃಷ್ಟಿ ಸ್ಥಿತಿ ಲಯ ಅನಂತ ಕಾಲದಾಗಿ ಅನಂತಕೋಟಿ ಬ್ರಹ್ಮಾಂಡ ನಾಯಕ.

ಮಹತ್ತಿಗೆ ಮಹತ್ತಾಗಿರುವ ಈ ದೇವಗಾವ ಎಣೆ? ಸಾಮಾನ್ಯತಃ ಸ್ವರ್ಗದಲ್ಲಿ ದೇವತೆಗಳೂ ಭೂಮಿಯಲ್ಲಿ ಮನುಜರೂ, ಪಾತಾಳದಲ್ಲಿ ದೈತ್ಯರೂ ಇದ್ದು, ತ್ರಿವಿಧ ಜೀವರೂ ಪುಣ್ಯಕಾರ್ಯಗೈದು ಕೆಲಕಾಲ ಸ್ವರ್ಗದಲ್ಲಿರುವರು; ಎಲ್ಲದರ ಮೇಲಣ ವೈಕುಂಠದಧಿಪತಿ ಹಯವದನನೊಬ್ಬನೇ ಸರ್ವಾಗ್ರೇಸರ. 'ವಿಶ್ವತಶ್ಚಕ್ಷು' (ಪುರುಷಸೂಕ್ತದ) ಹರಿಯು ವ್ಯಾಪ್ತಿ ನೋಡಲು 'ಸರ್ವವ್ಯಾಪ್ತ ನಾರಾಯಣ ಸ್ಥಿತ' ಎಂಬ ಶ್ರುತಿಗೆ[108] ಪ್ರತಿಯಿಲ್ಲ. ಅಪ್ರಮತಿಮಲ್ಲನವ ಅನಂತಗುಣಮಹಿಮ. ಸಿರಿದೇವಿ— ನಾರಾಯಣರಿಂದ ದೂರನಾದ ಜೀವಿಗೆ ಕಾಲನೂರಲು ನೆಲವಿರದು, ಬಾಯಿಗೆ ಕೂಳು ಬಾರದು; ಅದರಿಂದ ಶಾಸ್ತ್ರಜ್ಞರೇ (ಪರಮಪತಿ) ಹರಿಪಾದ ಸರೋಜವನೆ ಸಾರಿ.[109] ಹರಿದ್ವೇಷಿಗಳು ನರಕಭಾಜನರಾಹರು — ಇದು ಶಾಸ್ತ್ರವಿದಿತ; ನಾರಾಯಣನೆಂದ ಅಜಮಿಳ ಹರಿಯರಮನೆ ಸಾರಿ ಬದುಕಿರನೆ? 'ಆದೇವ ಈ ದೇವನೆಂದ್ಯಾಕೆ ಕಲಹ?' ಸಕಲರ ಇಷ್ಟಪ್ರದ, ಮಹಂತರ ಮೂಲಕ ಕಡ ಮುಟ್ಟಿಸುವ, (ರಾಜ್ಯಾರ್ಥ)ವಾದ[110] ಮುರಿದ ತಿಮ್ಮರಾಯಗೆ ಕಾಣೆ — ಹಯವದನ ಪಾದಪದುಮದಾಣೆ! ಅವನ ನಾಭಿಕಮಲದಲ್ಲಿ ಪುಟ್ಟಿದ ಬೊಮ್ಮ ಜೀವರಿಗೆಲ್ಲ ಪಿತಾಮಹ ನಾಗಿ ವಿಷ್ಣುವಿಗೆ ವಿಬುಧರೇನಾಹರು? ಸರ್ವೇಶನಾವ? ಆ ದೇವನನೊಪ್ಪದವಗೆ 'ತಾ ಉದಿಸಿ ತಾಯಿಲ್ಲ'[111] ಎಂಬ ಗಾದೆ ಬಹುದು. ಹರಿ ಸೃಷ್ಟಿಯ ಆದಿಕಾಲದಲ್ಲಿ ಆಲದೆಲೆಯ[112] ಮೇಲೆ ಶ್ರೀಯೊಡನೆ ಮಲಗಿ, ಸೃಷ್ಟ್ಯಾಧಾರದ ಮಹದಾದಿ ಪ್ರಾಕೃತ

---

108. ಗೀತೆಯ ವಿಶ್ವರೂಪ ದರ್ಶನವೂ ಹೀಗೆಯೇ ವರ್ಣಿತ.

109. 'ಪಿಂಡಾಂಡದೊಳಗಿನ ಗಂಡನ ಕಾಣದೆ ಮಂಡೆಯರಾದರು ಪಂಡಿತರೆಲ್ಲ' (ಪುರಂದರದಾಸರೂ ಹರಿಯ ಕಾಣದ ಭಕ್ತರ ಮಧುರಭಾವ ನಿರವಿಸಿದ್ದಾರೆ).

110. ಆಕಾಶರಾಜನ ತಮ್ಮ ತೊಂಡಮಾನ, ಮಗ ವಸುದಾನರ ವಾರಸಾ ವಿವಾದ ಪದ್ಮಾವತೀ ಪ್ರಾರ್ಥಿಕ ಶ್ರೀನಿವಾಸನಿಂದ ಬಗೆಹರಿಯಿತು.

111. 'ತನ್ನ ತಾಯಿ ಬಂಜೆ' ಎಂಬಂಥ ವ್ಯರ್ಥಾಲಾಪ.

112. ಇದೂ ರಮಾ ರೂಪವೇ.

ತತ್ವಗಳೊಡನೆ ಅಳಿದ ವಿಧಿ ಮೊದಲಾದ ತತ್ವಾಭಿಮಾನಿಗಳು ಎಲ್ಲ ಮುಕ್ತರೊಡನೆ ವಿರಜಾ ಸ್ನಾನ ಮಾಡಿ ಲಿಂಗದೇಹ ಬಿಟ್ಟು ವೈಕುಂಠಪತಿಯ ಉದರ ಸೇರುವರು; ಆಗ 'ಏಕೋ ನಾರಾಯಣ ಆಸೀತ್ (ನ ಬ್ರಹ್ಮಾ ನ ಚ ಶಂಕರ:)' ಎಂದು ವೇದ ಹೇಳಿದ ಕಾರಣ, ಅವನೆ ಜಗದೊಳಧಿಕ ದೈವ. ಆತ ಹೊಟ್ಟೆ ಎಂಬ ಪೊನ್ನ ತೊಟ್ಟಿಲೊಳಿಟ್ಟು ಜೀವರ ನಿದ್ರೆಗೊಳಿಸುವ, ಸೃಷ್ಟಿಸಿ ಬಹುರೂಪದಾಟವಾಡಿಸಿ ಇಷ್ಟಂಗಳನೀವ, ದುಷ್ಟರ ಶಿಕ್ಷಿಸಿ ಶಿಷ್ಟರ ರಕ್ಷಿಸುವನಲ್ಲದೆ ಯಾರ ಸ್ವಭಾವವನ್ನೂ ಬದಲಿಸ;[113] ಇಂಥವನಾದಾಸೀನ ಮಾಡದು ಪಾಲಿಸುವುದು. ಮಕ್ಕಳ ತಪ್ಪೆಣಿಸದ ತಾಯಿ ಖಳಪುತ್ರರ ತಪ್ಪು ತಗ್ಗಿಸುವಂತೆ, ಭಕ್ತರೊಪ್ಪೆ ನೋಡಿ ನಡೆದರು ಹರಿ ಕಾವ ಕಾರುಣ್ಯದಲಿ; ರಕ್ಕಸರ ನಷ್ಟೇ ಶಿಕ್ಷಿಸುವ; ಇದಕ್ಕೆ ಅವನ ಗೀತೋಕ್ತಿಯೇ ಸಾಕ್ಷಿ—

ಕ್ಷಿಪಾಮ್ಯಜಸ್ರಂ ಅಶುಭಾನ್ ಆಸುರೀಷ್ವೇವ ಯೋನಿಷು ॥ 16,19 ॥
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ ॥ 16,20 ॥
ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತ: ಸಂಗವರ್ಜಿತ:
ನಿರ್ವೈರ: ಸರ್ವ ಭೂತೇಷು ಯ: ಸ ಮಾಮೇತಿ ಪಾಂಡವ ॥ 11, 55 ॥

(ದುಷ್ಟರನ್ನು ಅಸುರರಲ್ಲೇ ಹುಟ್ಟಿಸುವೆ, ಅಧಮಗತಿ ಹೊಂದುತ್ತ ಹೋಗುವರು; ನನ್ನನ್ನು ಸರ್ವೋತ್ತಮನೆಂದರಿತು, ನನ್ನ ಪ್ರೀತ್ಯರ್ಥ ಕರ್ಮ ಮಾಡುತ್ತ, ವಿಷಯಾಸಕ್ತಿ ಯುಳಿದು ನಿರ್ವೈರನಾದವ ನನ್ನನೈದುವನು). 84 ಲಕ್ಷ ಯೋನಿ ತುಂಬಿರ್ದ ಜೀವರಿಗವನ ಅಂತರ್ಯಾಮಿ ರೂಪಗಳೆ ಬಿಂಬರೂಪ, ಈ ನಿಶ್ಚಯವುಳ್ಳವಗೆ ಮುಕ್ತಿಸುಖವೀವ — 'ಅಹಂಕರ್ತಾ' ಎಂಬವಗಲ್ಲ; ಈ ಪ್ರಮೇಯ ಮಧ್ವ[114] ಗುರುಗಳಿಂದರಿವುದು. ಅಮೃತ ಮಥಿಸಿದ ದೇವದಾನವರಿಗೆ ಅಂಬುಧಿ ಕಡೆಗೋಲು — ನೇಣು ಈ ಸಾಧನಂಗಳು ಒಂದೇ, ಆದರೆ ಮುಂದೆ ಪಡೆವ ದೈತ್ಯರಿಗಿಲ್ಲದ ಸುಧೆ ವೃಂದಾರಕರಿಗುಂಟೆಂದು ಭಾಗವತ[114]

---

113. 'ಜೀವರಿಗೆ ಸ್ವಭಾವಾನುಗುಣ ಗತಿ ಕೊಡಲು ಸೃಷ್ಟಿ ಕ್ರೀಡೆ, ಪೂರ್ಣ ಕಾಮನಿಗೇನೂ ಪ್ರಯೋಜನವಿಲ್ಲ.

114. 'ಶಂಭುವಮುಖ್ಯ ಗುರುಗಳಿಂದ ಕೇಳಿರೆ' 'ಬಲ್ಲಿ ಮನೋಭಿಮಾನಿ ರುದ್ರ ವಾಚ್ಯನಾದರೂ, 'ಶಂಭೂ ಬ್ರಹ್ಮತ್ರಿಲೋಚನಾ' ಎಂಬ ಅಮರಕೋಶದಂತೆ ಬ್ರಹ್ಮನೂ, 'ಬ್ರಹ್ಮಾಂತಾಗುರವ: ಸಾಕ್ಷಾತ್' ಎಂಬುಕ್ತಿಯಂತೆ ಬ್ರಹ್ಮನೇ ಕಡೆಯಲ್ಲಿರುವ ತಾರತಮ್ಯ ಕಲಿಯ ವಾಯುರೂಪೀ ಮಧ್ವರು ಇಲ್ಲಿ ಗಮ್ಯ.

115. ಏವಂ ಸುರಾಸುರಗಣಾ: ಸಮದೇಶಕಾಲ ಹೇತ್ವರ್ಥಯೋಗ ಗತಯೋಪಿ ಫಲೇ ವಿಕಲ್ಪಾ: ತತ್ರಾಮೃತಂ ಸುರಗಣಾ: ಫಲಮಂಜಸಾಪು: ಯತ್ಪಾದಪಂಕರಜ ಶ್ರಯಣಾತ್ ನ ದೈತ್ಯಾ: ॥ (ದೇವ ದಾನವರಿಂತು ದೇಶಕಾಲ ಕಾರಣ ಪ್ರಯೋಜನ ಕರಣ ಸಮರಾದರೂ ಭಿನ್ನ ಫಲ ಪಡೆವರು, ಹರಿಪಾದ ಪದ್ಮರಜಕನಾಶ್ರಯಿಸಿದ ಸುರರು ಅಮೃತ ಪಡೆದರು — ಅಸುರರು ಪಡೆಯಲಿಲ್ಲ).

ನಿರ್ಣಯಿಸಿದ್ದರಿಂದ, ಮುಕುತಿ ಯೋಗ್ಯರಿಗುಂಟು, ಹರಿಯನೊಪ್ಪದ ಇತರರಿಗೆ ಅದರ ಯತ್ನ ಬೂದಿಯ ಹೋಮದಂತೆ ವ್ಯರ್ಥ. ಕಳ್ಳ ಭಕ್ತರಿಗೆ ಸಲ್ಲದು ಶುಭಫಲ — ಎಲ್ಲ ಬೀಜಕೆ ಸಲ್ಲದು ಸಲ್ಲಿಕೆ,[116] ಯೋಗ್ಯರಿಗೆ ಫಲ — ಅಯೋಗ್ಯರಿಗಲ್ಲ; ಸಾಧನಗಳಿಲ್ಲದವಗೆ ಫಲವಿಲ್ಲ — ಅಹಲ್ಯೆಯಂದು ಶಿಲೆ ರಾಮನೊಲಿದಾಗ ಹೆಣ್ಣಾದಂತೆ ಉಳಿದ ಶಿಲೆ ಆಯಿತೇ?[117]

ಕೃತಿಯ ಕೊನೆಗೆ ವಾದಿರಾಜರು ಸಾಮಾನ್ಯ ಭಕ್ತರ ಪರವಾಗಿ ಸಖ್ಯ ಭಾವದಿಂದ ಹರಿಗೆ ರಕ್ಷಿಸೆನ್ನುತ್ತಾರೆ: 'ನನಗೆ ಭಕ್ತಿ ಇರಲಿ ಇಲ್ಲದಿರಲಿ, ಜನ ಹರಿಭಕ್ತನೆನಲಾಗಿ ನೀನೆನ್ನ ಕಾಯಬೇಕಾಯಿತು; ಯಮಭಟರು ಕೊಂಡರೆ ನಿನ್ನ ಘನತೆಗೆ ಕುಂದು, ತನ್ನವರ ಅನ್ಯರಿಗೊಪ್ಪಿಸಿದನೆನ್ನುವ ದುರ್ವಾರ್ತೆ ತಪ್ಪಿಸಿಕೊ! ನಿನ್ನನೆ ನೋಡಿ ಪಾಡಿ ಬೇಡಿ ಕೊಂಡಾಡುವರೊಳೆಂತಿಪ್ಪುದೈ ನರಕಬಾಧೆ? ನಿನ್ನ ಮಹಿಮೆಗಿಷ್ಟು ಮಾತ್ರ ಉದ್ಧಾರ ಸಾಮರ್ಥ್ಯ ಸಾಕೇ ಅನಂತಗುಣಪೂರ್ಣ?'

ನಾ ನಿನ್ನ ಮರೆತರೂ ನೀನೆನ್ನ ಮರೆತರೆ
ಹಾನಿ ನಿನಗೆ, ನಿನ್ನ ಭಕ್ತವತ್ಸಲತೆಗೆ
ಹೀನತೆ ಬಂದಿತಾಗಿ,
ಆ ನ ಋತೇ ತ್ವತ ಕ್ರಿಯತೇ ಕಿಂಚನಾರೇ[118] ಎಂ
ಬಾದರ್ಯಂಯ ಏನೆಂದಿತಾಗಿ,
ನೀನುದಾಸೀನನಾಗೆ ಖಳರ ಸೇನೆ ಸ
ಜ್ಜನರ ಕೊಂದಿತಾಗಿ,
ಶ್ರೀನಾಥ ಹಯವದನ, ಶಿಶುಗಳ ತಪ್ಪನು
ಜನನಿ ಜರೆದರೆ ಜಗವೆಲ್ಲ ನಗುವುದೊ,
ಜಾಣರ ಜಾಣ ನೀನು (40)

ಕೃತಿಯ ಆದಿಯಲ್ಲಿ 'ನಾ ಮರೆತರೂ ಭಕ್ತರಕ್ಷಕನಾಗಿ ಕರೆದೆನ್ನ ತತ್ವಗಳ ಬರೆದೆ — ನಿನಗಿದೊಂದರಿದೇ' ಎಂದ ವಾದಿರಾಜರು, ಕೊನೆಯಲ್ಲಿ 'ನೀ ಮರೆತರೆ ಹಾನಿ ನಿನ್ನ

---

116. ಫಲ

117. ಅಹಲ್ಯೆಯ ಪತಿಸೇವೆ ರಾಮನ ಕೃಪೆಗೆ ಕಾರಣವಾಯಿತೆಂಬ ದೃಷ್ಟಾಂತ.

118. ನಿನ್ನನುಳಿದು ಯಾವುದೂ ಏನೂ ಮಾಡಲಾರದು, ನೀನೇ ಸರ್ವ ಸ್ವತಂತ್ರ — ದತ್ತ ಸ್ವಾತಂತ್ರ್ಯದ ಪ್ರತಿಬಿಂಬರು ನಿನ್ನಧೀನ ಕರ್ತರು. 'ತೇನ ವಿನಾ ತೃಣಮಪಿ ನ ಚಲತಿ.'

ಭಕ್ತವತ್ಸಲತೆಗೆ — ಮಕ್ಕಳ ಜರೆವ ಜನನಿಯಂತೆ ನೀನೇ ನಾಗೀಡು' ಎಂದು ಶರಣು ಹೊಕ್ಕು ಸರ್ವಾರ್ಪಣ ಮಾಡಿಸಿದ್ದಾರೆ, ಕೃತಿಯ ಕೊಕಟ್ಟು ಪೂರೈಸಿದ್ದಾರೆ.

ವಾದಿರಾಜರು ಬ್ರಹ್ಮಸೂತ್ರಗಳನ್ನಾಧರಿಸಿ ಸಂಸ್ಕೃತದಲ್ಲಿ ರಚಿಸಿದ 'ಯುಕ್ತಿಮಲ್ಲಿಕೆ'ಯಂತೆ, 'ಗುಂಡಕ್ರಿಯೆ'ಯೂ ಬ್ರಹ್ಮಸೂತ್ರೋಕ್ತ ವಿಮತ ಖಂಡಿಸಿ, ತತ್ತ್ವವಾದ ಮಂಡಿಸುವುದರಿಂದ ಸಂಸ್ಕೃತ ಕೃತಿಗೆ ಕಿರು ಕನ್ನಡಿ ಹಿಡಿದಿದೆ ಎನ್ನಬಹುದು. ಆದರೆ ಅದು ಮಾರ್ಗ, ಇದು ದೇಸಿ. ಅಂತೆಯೇ ಜನಸಾಮಾನ್ಯರನ್ನು ಕುರಿತ ಇಲ್ಲಿ, ಪ್ರಮೇಯಗಳು ತಿಳಿಯಾಗಿ ಅಡಕವಾಗಿ ನಿರೂಪಿತ, ಲೋಕಾನುಭವದ ಯುಕ್ತಿ ದೃಷ್ಟಾಂತಗಳಿಂದ ನಿದರ್ಶಿತ, 'ಎಲ್ಲೀದ ಎಂಬೋದು ಸಲ್ಲಿಕೆ ಯಾಕೆ' ಎಂಬಂಥ ದೇಸೀಯ ಪ್ರಯೋಗ ಯುಕ್ತ. ಛಂದಸ್ಸಿನ ದೃಷ್ಟಿಯಿಂದ ಅಂಶಲಯದ ದಳಪದಿಗಳ ಪ್ರಯೋಗವೂ ಗಮನಾರ್ಹ ನಾವೀನ್ಯವೆನಿಸಿದೆ, ಈ ಶಾಸ್ತ್ರ ಕಾವ್ಯದಲ್ಲಿ.

(7) <u>ವೈಕುಂಠ ವರ್ಣನೆ</u>: ವಾದಿರಾಜರು ಸಾಮಾನ್ಯರಿಗಾಗಿ ತತ್ತ್ವವಾದ ತಿಳಿಸಿದ ಶಾಸ್ತ್ರಕಾವ್ಯಗಳು ಹರಿಸರ್ವೋತ್ತಮ ಜ್ಞಾನ, ಹರಿಭಕ್ತಿಯೊದಗಿಸಿ ಅವನ ಪ್ರಸಾದದಿಂದ ಮುಕ್ತಿಗೇರಿಸತಕ್ಕವು. ಈ ಮುಕ್ತಿಗೂ ಹರಿಗೂ ಕೂಡಿಯೇ ವೈಕುಂಠ ಎಂದು ಹೆಸರು. ಆದ್ದರಿಂದ 'ವೈಕುಂಠ ವರ್ಣನೆ' ಅವನ ಮಹಿಮೆ ಹಾಗೂ ವೈಕುಂಠದ ವರ್ಣನೆ ಎರಡನ್ನೂ ಒಳಗೊಂಡಿದೆ. ಹರಿಯೇ ಪರಮ ತತ್ತ್ವವಾದ ಕಾರಣ, ಹಾಗೂ ಅವನ ಮಹಿಮೆಯು ಸೊಗಸು ಇಲ್ಲಿ ಸೋನೆ (ಮಳೆ)ಯಂತಿಳಿದ ಕಾರಣ ಪ್ರಸ್ತುತ ಕೃತಿಗೆ 'ತತ್ತ್ವಸಾರ ಸೊಬಗಿನ ಸೋನೆ' ಎಂಬುವು ಅನ್ವರ್ಥಕ ನಾಮಾಂತರ. ಸೃಷ್ಟಿ ಸ್ಥಿತಿ ಲಯ ನಿಯಮನ ಜ್ಞಾನ, ಅಜ್ಞಾನ, ಬಂಧ ಮೋಕ್ಷಗಳ ಅಷ್ಟಕರ್ತೃತ್ವಕ್ಕೆ ವಾಸುದೇವ– ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ 4 ರೂಪಗಳಿದ್ದು, ಅವು ಕ್ರಮಶಃ ಮೋಕ್ಷ ಲಯ ಸೃಷ್ಟಿ ಸ್ಥಿತಿಕಾರಕವಾಗಿ, ಅವೇ ಹೆಸರಿನ 4 ಸಂಧಿಗಳಿಂದ ಮೋಕ್ಷ ಶಾಸ್ತ್ರವನ್ನೆಲ್ಲ ಸಾಂಗತ್ಯ ರೂಪದ ಈ ಕೃತಿ ಸಂಗ್ರಹಿಸಿದೆ. ಸಂಗೀತಕ್ಕೆ ಹಾಕಿ ಹಾಡಿಕೊಳ್ಳಲು ಕೆಲವು ಶ್ಲೋಕ ಹಾಗೂ ನುಡಿಗಳ ಪದ[119] ಎಂಬ ಭಾಗ ಮಾಡಿ ರಾಗ ತಾಳ ಯೋಜಿಸಿದ ರೀತಿ, ನೂತನವಾಗಿದೆ ಇಲ್ಲಿ.

---

119. ಶ್ರೀಪಾದರಾಯರು ಪುರಂದರದಾಸರ ವೃತ್ತನಾಮಗಳಲ್ಲೂ ಈ ಹೆಸರಿದೆ. (ಕ.ಹ.ಸಾ., 231; ಪ್ರಸಾದಯೋಗ 193). ಅದರೀಚೆಗೆ ಬೇರೆ.

ಸಾಮಾನ್ಯತಃ ಪ್ರತಿ ಪದವೂ ಸಂಸ್ಕೃತ ಉದ್ಧರಣಗಳಿಂದಾರಂಭ. ಕೃತಿಯ ಆರಂಭದ ಭಾಮಿನಿ ಷಟ್ಪದಿ ಹಾಗೂ ಮುಕ್ತಾಯದ ಫಲಶ್ರುತಿಯ 19 ಚೌಪದಿ ಹಿಡಿದು ಒಟ್ಟು 388 ನುಡಿಗಳಿವೆ. ಆದರೆ ಬೇರೆ ಬೇರೆ ಗ್ರಂಥ ಈ ಸಂಖ್ಯೆಯನ್ನಿಂತು ಕಾಣಿಸಿವೆ —

| ಸಂಧಿ | ಪದ | ನುಡಿಗಳ ಸಂಖ್ಯೆ | | | |
|---|---|---|---|---|---|
| | | ಉಡುಪಿಯ ಪ್ರತಿ ಭೀಮರಾಯರ ವ್ಯಾಖ್ಯಾನ | ಬೆಂಗಳೂರ ಪ್ರತಿ ಪಂಚ ಮುಖ ಕೃತಿ | ಫಲಶ್ರುತಿ | ವಸ್ತುತಃ |
| ಆದಿಪದ್ಯ | | — | — | — | 1 |
| 1. ಮೋಕ್ಷ | 27 | 140 | 140 | 140 | 140 |
| 2. ಲಯ | 12 | 55 | 49 | 50 | 55 |
| 3. ಸೃಷ್ಟಿ | 4 | 81 | 83 | 82 | 81 |
| 4. ಸ್ಥಿತಿ | 10 | 92 | 93 | 92 | 92 |
| ಫಲ | 1 | 13 | 19 | 19 | 19 |
| | 54 | 381 | 384 | 383 | 388 |

ನುಡಿಗಳ ಮೊತ್ತವನ್ನೆಣಿಸುವಲ್ಲಿ ಎಲ್ಲರೂ ಆದಿ ಪದ್ಯ ಬಿಟ್ಟಿದ್ದಾರೆ. ಬೆಂಗಳೂರ ಪ್ರತಿ 2ನೆಯ ಸಂಧಿಯ 27, 36— 40 ಈ ನುಡಿಗಳನ್ನುಳಿದ ಕಾರಣ 49 ನುಡಿಗಳ ತಪ್ಪು ಲೆಕ್ಕ ಹೊರಟಿದೆ; ಫಲಶ್ರುತಿಯಲ್ಲಿ 'ಪದಗಳೈವತ್ತೆರಡು' ಎಂದಿರಬೇಕಾದ್ದು, ಪ್ರತಿಕಾರನ ತಪ್ಪಿನಿಂದ 'ಐವತ್ತು' ಆಗಿದೆ. 3ನೆಯ ಸಂಧಿಯಲ್ಲಿ ಬೆಂಗಳೂರ ಪ್ರತಿ ಮೊದಲ ಪಲ್ಲವಿಗೂ ನುಡಿ ಸಂಖ್ಯೆ ಹಾಕಿ, ಸಂಧ್ಯಂತ ಏಕಪ್ರಕಾರದ ನುಡಿಗಳ ನಡುವೆ ಹೆಚ್ಚಿನ ನುಡಿಯೊಂದನ್ನು ಕಾಣಿಸಿದ್ದರಿಂದ 83 ನುಡಿ ಎಂದಿದೆ; ಫಲಶ್ರುತಿಯಲ್ಲಿ 'ಎಂಭತ್ತೊಂದು' ಎಂದಿರಬೇಕಾದ್ದು ತಪ್ಪಿ 'ಎಂಭತ್ತೆರಡು' ಆಗಿದೆ ಪ್ರತಿಕಾರನಿಂದ. 4ನೆಯ ಸಂಧಿಯಲ್ಲೂ ಬೆಂಗಳೂರ ಪ್ರತಿ ಪಲ್ಲವಿಗೂ ಅಂಕಿ ಹಾಕಿ 93 ನುಡಿ ಎಂದಿದೆ. (ಇದರ 42ನೆಯ ನುಡಿಯನ್ನು ಬಿಟ್ಟು ಉಡುಪಿ ಪ್ರತಿ 7ನೆಯ ಪದಾದಿಗೆ 30— 31ರ ನಡುವಿನ ಪ್ರಾಸರಹಿತ ಸಾಲುಗಳನ್ನೇ ನುಡಿ ಎಂದಿದೆ). ನಿಜವಾಗಿರುವುದು 92. ಬೆಂಗಳೂರ ಪ್ರತಿಯ ಫಲಶ್ರುತಿಯಲ್ಲಿ 'ಇಂತಪ್ಪ ಹರಿಲೀಲೆ,ಇಳೆಗೆ ಇಟ್ಟ ಚೆಂಡು, ಕಣ್ಣು ಕಾಣದ' ಎಂಬ 3 ನುಡಿ, ಕೊನೆಗೆ ಪುನರಾವರ್ತನಗೊಳಿಸಿದ ಪಲ್ಲವಿ ಮತ್ತು ನುಡಿಗಳನ್ನೆಣಿಸಿದ 2 ನುಡಿ ಸೇರಿ ಒಟ್ಟು 19 ನುಡಿಯುವೆ (ಉಡುಪಿ ಪ್ರತಿಗಿಂತ 6 ಹೆಚ್ಚಾಗಿ). ಕಾರಣ ಫಲಶ್ರುತಿಯ

ಅವಾಂತರ ಸಂಖ್ಯೆ ಹೆಚ್ಚು ಕಡಿಮೆಯಾದರೂ 388ರ ಒಟ್ಟು ಸಂಖ್ಯೆ ಸರಿಯಿದೆ. (ಪಂಚಮುಖಿಯವರು ಬೆಂಗಳೂರ ಪ್ರತಿಯ ತಪ್ಪು ಲೆಕ್ಕ ಆಧರಿಸಿ, ತಮ್ಮ ಮೊತ್ತವನ್ನೂ ತಪ್ಪಾಗಿಸಿ, ಲೆಕ್ಕ ತಪ್ಪಿಸಿದ್ದಾರೆ, 'ಹರಿದಾಸ ಸಾಹಿತ್ಯ', ಪು.164ರಲ್ಲಿ. ಇವರನ್ನೇ ಅನುಸರಿಸಿ ತಪ್ಪಿದ್ದಾರೆ ಎಚ್.ಕೆ.ವೇದವ್ಯಾಸಾಚಾರ್ಯರು, 'ಕರ್ನಾಟಕದ ಹರಿದಾಸರು' ಪು.633ರಲ್ಲಿ).

1) ಮೋಕ್ಷ ಸಂಧಿ: ಈ ಸಾಂಗತ್ಯ ಗ್ರಂಥ ಭಾಮಿನಿ ಷಟ್ಪದಿಯಿಂದಾರಂಭವಾಗುವುದು ವೈಶಿಷ್ಟ್ಯಪೂರ್ಣ ಪ್ರಯೋಗ. ಇಲ್ಲಿ ಕೃತಿ ರಚನೆಯ ಸಂಕಲ್ಪ ಉಕ್ತ —

ತತ್ವಸಾರದ ಸೊಬಗ ಧರೆಯೊಳು
ವಿಸ್ತರಿಸಬೇಕೆಂದು ಮುನಿಕುಲ
ರತ್ನ ಶ್ರೀಗುರು ವಾದಿರಾಜನು ಶ್ರುತಿ ಪುರಾಣಗಳ
ಮೊತ್ತವನು ನೆರೆ ಮಥಿಸಿ ಮೋಕ್ಷ
ಮುಕ್ತಿ ಸೃಷ್ಟಿ ಸ್ಥಿತಿ ಲಯಂಗಳ
ನರ್ತಿಯಲಿ ಬಣ್ಣಿಸಿದ ಕಥೆಯನು ಕೇಳಿ ಸಜ್ಜನರು (ಭಾ.ಷ.)

(ಹರಿ) 'ತತ್ವಸಾರ' ಕೃತಿಯ ನಾಮಾಂತರ ಮಾತ್ರವಲ್ಲ, ತತ್ವವಾದದ ಸಾರವೂ ಅಹುದು. ವಾದಿರಾಜರು ಸರ್ವಶಾಸ್ತ್ರ ಮಥಿಸಿ ಹೇಳಿದ ವೈಕುಂಠನ(ದ) ವಿಷಯ ಇಲ್ಲಿ ವರ್ಣಿತವಾಗಿದೆ.

ಸಾಂಗತ್ಯ[120] ರೂಪದ ಪಲ್ಲವಿಯಿಂದ ಕೃತಿಯ ಮಹಿಮೆ ನಿರೂಪಿತ —

(ರಾಗ ನಾಟ, ರೂಪಕ ತಾಳ)

ಇದು ಪುಣ್ಯ ಕಥೆ, ಲೋಕಕ್ಕಿದು ಮುಕುತಿಯ ಪಥ,
ಇದ ಕೇಳುವವನೆ ಕೃತಾರ್ಥ,
ಇದು ಸರ್ವ ಸಾಧನ, ವಿಧುಗಳಿಗೆ ಸಮ್ಮತ,
ಮುದವ ನೀವುದು ಕೇಳ್ವ ಜನಕೆ (1)
ನಾಟಿ[121] ಮೊದಲಾದ ರಾಗಂಗಳ ತಾಳಮೇಳದಿ ಶ್ರೀಲೋಲ ಚರಿತೆಯ ತತ್ವರಹಸ್ಯ
ವು ಕೇಳ್ವರಿಗಲಂಕಾರ, ತತ್ವವಾದದ ಸಾರ ಕನ್ನಡಿಸಿದ ಕವಿಯ ಬಿನ್ನಪವಿದು (2,3).

---

120. ಉಡುಪಿ— ಬೆಂಗಳೂರ ಪ್ರತಿಗಳ ಪಾಠಾಂತರಗಳಲ್ಲಿ ಆದಷ್ಟು ಶುದ್ಧವಾದುವನ್ನಿಲ್ಲಿರಿಸಿಕೊಂಡಿದೆ. ಇಂಥ ಶುದ್ಧ ಪ್ರಯೋಗದ ಆವಶ್ಯಕತೆಯನ್ನು ಕನ್ನಡ ಅಧ್ಯಯನ ಸಂಸ್ಥೆಯ 3ನೆಯ ಆಕರ ಸಮರ್ಥಿಸಬಹುದು.

121. ಆದಿ ಭಾಗದ ರಾಗವೇ ನುಡಿಯುಲ್ಲೇಖವಾಗಿ ವಾದಿರಾಜರೇ ಹಾಕಿದ್ದೆಂದು ಸ್ಪಷ್ಟ. ಉಡುಪಿ ಪ್ರತಿಯ 3— 4ನೆಯ ಸಂಧಿಗಳಲ್ಲಿ ಎಲ್ಲ ಪದಗಳ ರಾಗ ಹಾಕಿಲ್ಲ, ಬೆಂಗಳೂರ ಪ್ರತಿಯಲ್ಲಿ 3— 4ನೆಯ ಸಂಧಿಗೆ ಒಂದೊಂದು ಸೂಚಿತ.

(ಪದ 1) ಸಂಸ್ಕೃತ ಪ್ರಾರ್ಥನಾ ಶ್ಲೋಕಗಳನ್ನೇ ಕನ್ನಡಿಸಿದ್ದು ಹೀಗೆ —

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ
ಪ್ರಸನ್ನ ವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ ||
ನಿಷ್ಕಳಂಕ ಚಂದ್ರವದನ, ಶುಕ್ಲವಸನ
ಲಕ್ಷ ಶಶಿವರ್ಣ ಪ್ರಸನ್ನ,
ನಾಲ್ಕು ತೋಳಿನ ವಿಷ್ಣು, ಸಮಸ್ತ ವಿಘ್ನಗಳ
ಥಕ್ಕನೆ ಒರಸಿ ರಕ್ಷಿಸಲಿ (4)

(ಪದ 2) 'ನಾರಾಯಣಂ ನಮಸ್ಕೃತ್ಯ' ಎಂಬ ಭಾರತ ಶ್ಲೋಕಾನುವಾದ — ನಾರಾಯಣ ವ್ಯಾಸ, ನರ ಶೇಷ, ನರೋತ್ತಮ ವಾಯು, ಲಕುಮಿ, ಸರಸ್ವತಿಯರ ವಂದನ. ಜ್ಞಾನರೂಪಿ ವ್ಯಾಸ, ಹಯವದನನಮನ (5—7).

(ಪದ 3) 'ಲಕ್ಷ್ಮೀ ನಾರಾಯಣಂ ವಂದೇ' ಎಂಬ ಹರಿಗುರು ನಮನದ ಶ್ಲೋಕ ಕನ್ನಡಿಸಿ, ಹರಿಗೆ ಮಾಲೆಯಿಕ್ಕಿದ ಲಕುಮಿ[122] ಮಧ್ವರಿಗೆ ಶರಣೆಂದಿದ್ದಾರೆ (8).

(ಪದ 4) ಮಧ್ವರು ವಾಯುವಿನವತಾರವೆನ್ನಲು ಬಳಿತ್ಥಾಸೂಕ್ತದ ಸಾಲುಗಳನ್ನು ದ್ಧರಿಸಿ, ದಶಪ್ರಮತಿಯನ್ನು ಹತ್ತಾರು ಸ್ತ್ರೀಯರು (ಜನಯಂತಯೋಷಾ:) ಎಂಬ ಬಹುವಚನಕ್ಕೆ ಯುಕ್ತಿಯುಕ್ತ ಕಾರಣ ಕೊಡುತ್ತಾರೆ —

ಸಿರಿ ಭೂಮಿ ದುರ್ಗೆಯರು ಜ್ಞಾನಾಮೃತದ ಕರೆವರೆ
ಗುರು ಪೂರ್ಣಪ್ರಜ್ಞರ ಹುಟ್ಟಿಸಿದರು ಗಡ
ನರಲೋಕದ ನಾರಿಗೆ ಇವರ ಹೆರುವ ಭಾಗ್ಯ
ದೊರಕದು ಎಂದು ಶ್ರುತಿ ಯೋಷಾ ಎಂದಿತು[123] (9)

---

122. 'ಎಕ್ಕ ದೇವರ್ಕಳ ಲೆಕ್ಕಿಸದೆ ಲಕುಮಿ ಮನ! ಉಕ್ಕಿ ಆತಗೆ ಮಾಲೆಯಿಕ್ಕಿದಳು' ಎಂಬ ಸಾಲು 'ಲಕ್ಷ್ಮೀಶೋಭಾನೆ'ಗೆ ಸೂಚಕ.

123. ಶ್ರೀ ಭೂ ದುರ್ಗಾರೂಪಿ ವೇದಾಭಿಮಾನಿ ಲಕ್ಷ್ಮಿ, ವೇದಗಳ ಸರಿಯಾದರ್ಥ ಒರೆವ ಮಧ್ವರನ್ನು ವೇದವತಿಯರಲ್ಲಿದ್ದು ಹುಟ್ಟಿಸಿದಳು (ಭಾವಪ್ರಕಾಶಿಕಾ); ಶ್ರೀಭೂದುರ್ಗಾದೇವೇರು ಹಡೆದಿದ್ದಾರೆ, ಗುರುಗಳ ತಾಯಿ ಎಂಬ ಕಾರಣ(ಕ್ಕೂ) ಬಹುವಚನ (ಕ.ತಾ.ನಿ.1,36).

'ದಶಪ್ರಮತಿ' ಹೆಸರು ಮಧ್ವರನ್ನುಳಿದು ಯಾರಿಗೂ ಇಲ್ಲ. ಐತರೇಯ ಉಪನಿಷತ್ತು ದಶಕ್ಕೆ ಪೂರ್ಣಾರ್ಥ[124] ಹೇಳಿತಾಗಿ ಪೂರ್ಣಪ್ರಜ್ಞರವರು. ಬೋಧ– ಮುಕುತಿ ಈವ ವಾಯುವಿನ ಮೂರನೆಯ ರೂಪವಿದು, ತುದಿಯ ರೂಪವಿದೆಂದು ಶ್ರುತಿ ಹೇಳಿತು. ಈ ರೂಪವೆ ಹರಿ ಸ್ವಾಮಿ ಎಂದು ಮಥಿಸುವುದು;[125] ಇವನ ಹೊರತು ದೇವತೆಗಳು ಬುದ್ಧಿವಂತರಾದರೆಂದಿದೆ ಶ್ರುತಿ; 'ವಿದ್ವಾನ್ ಮಧ್ವ ಉಜ್ಜಭಾರ[126] ಎಂದು ತುತಿಸಿಕೊಂಡವ ಎಂಥ ಗುರುವರ![127] (10– 16).

(ಪದ 5) ಮಧ್ವರಂತೆ ವಾದಿರಾಜರೂ ಮಾಯಾಮತ ಖಂಡಿಸಿದ್ದಾರೆ — ಎಲ್ಲ ಇಲ್ಲವೆಂಬವನ ನಾಲಗೆ ಇಲ್ಲವಾಯಿತಲ್ಲ?[128] ಇನ್ನೆಂತು ನುಡಿವ? ತ್ರಿಕಾಲವೂ ಜಗನ್ಮಿಥ್ಯಾ ಎಂಬವಗೆ ಈಗ ಉಂಟು ಎನಲಾಗದು;[129] ಎಲ್ಲ ಕಾಲದಲ್ಲಿಲ್ಲವೆನೆ ಮೊಲನ ಕೊಂಬಿನಂತೆ ಜಗವಿಲ್ಲದೆ ಹೋಕು. 'ದ್ವಾಸುಪರ್ಣಾ' ಎಂಬುದು ಭೇದ ಶ್ರುತಿ; ಜೀವಗೆ ಈಶತ್ವ ಇಲ್ಲದಿರಲು ಶ್ರುತಿ ಜೀವೇಶರ ಐಕ್ಯ ಹೇಳ್ವುದೇ? ಎಂತಕ್ಕು ಜೀವೇಶರ ಅನ್ಯೋನ್ಯಾಶ್ರಯ?[130] ಭೃಗು ವಕ್ಷವನೊದೆಯಲು ಅವನ ಕುಂದ ನೋಡದೆ ಇಂದಿರೇಶ ತನ್ನ ಸರ್ವೇಶ್ವರತ್ವ ರಕ್ಷಿಸಿದ[131] (17– 23).

---

124. ದಶೇತಿ ವೈ ಸರ್ವಂ = ದಶೇತಿ ಸರ್ವಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ I ಪ್ರಜ್ಞಾಮತಿರುದ್ದಿಷ್ಟಾ ಪೂರ್ಣಪ್ರಜ್ಞಃ ತತಃ ಸ್ಮೃತಃ (ಭಾಗ್ಯ 2,3,4).

125. ತೃತೀಯೋಸುವರ್ಣಥಾಯತಿ, (ಅದೇ).

126. 'ಜ್ಞಾನಿ ಮಧ್ವರು ವೇದಾದಿ ಶಾಸ್ತ್ರಗಳನ್ನುದ್ಧರಿಸುವರು' ಎಂಬಂಥ 7 ಸೂಕ್ತಗಳಿವೆ (ಯು.ಮಲ್ಲಿಕಾ, 5).

127. 10ರ ನಂತರದ ಕೆಲ ದ್ವಿಪದಿಗಳ ಅಂತ್ಯಕ್ಕೆ ಬರುವ ಪ್ರಾಸರಹಿತ ಸಾಲು ಪ್ರಕ್ಷೇಪವಾಗಿರಬಹುದು.

128. ತನ್ನ ನಾಲಗೆ ಕತ್ತರಿಸುವವ ಇನ್ನೇನು ನುಡಿವನೋ (ಗುಂಡಕ್ರಿಯೆ 14).

129. ಸ್ವಪ್ನಪದ, 41.

130. ಐಕ್ಯವಾದದಲ್ಲಿ ದೇಹಸ್ಥ ಜೀವೇಶರೂ ಪರಸ್ಪರ ಆಶ್ರಯಿಸಬೇಕಾಗುವುದು; ನೋ. ಸ್ವಪ್ನಪದ 17.

131. ಗುಂಡಕ್ರಿಯೆ, 24.

(ಪದ 6) ಕಾಲಿಲ್ಲ — ಕರವಿಲ್ಲವೆನೆ ನೋವ ಮಾನವನೆ, ಕಾಮನಿರ್ಜಿತ ಶ್ರೀಲೋಲನ ನಿರಾಕಾರನೆನುವರೆ? ಗುಣವಿಲ್ಲವೆಂಬ ಮಾತು ನಿನಗೆ ಹೀನವಾದರೆ ಅನಂತಗುಣನಿಗಿದನೆನ್ನಬಹುದೆ?[132] ಮಾಯಾವಿ ನೀನು, ಸನಕಾದಿ ಮಾನ್ಯನ ಮಾಯಾವಿ ಎಂಬರೆ? ಈ ಪರಮತ ಕಂತೆಯ ಹರಿದು ಅಂತವಿಲ್ಲದ ಪದವನೈದುವೆ. ಸತ್ಯಲೋಕದೊಡೆಯನಿಗೆ ಪೊಡಮಡುವೆ, ಮುಕ್ಕಣ್ಣ— ಸುರರಿಗೆರಗುವೆ, ನಾರಾಯಣನ ಕಥೆಯ ಬಣ್ಣಿಪೆ, ಯುಕುತಿ ಕೋವಿದರ ಕುಣಿಸುವೆ,[133] ಮುಕುತಿ ಸುಖವನುಣಿಸುವೆ (24— 29).

(ಪದ 7) ವೈಕುಂಠನ ವರ್ಣನೆಯ ಆದ್ಯಂತ ಪ್ರಾಸ ವೈಭವವಿದು —

ಇಂದ್ರನ ರಾಜ್ಯವ ತಂದನ,[134] ಶುಭಗುಣ
ಸಾಂದ್ರನ, ಸುರಸಭಾಚಂದ್ರನ,
ನಂದನ ಕಂದನ ವಂದ್ಯನ, ನಿತ್ಯಾ
ನಂದನ, ತುತಿಪೆ ಮುಕುಂದನ (30)

ಶೌರಿಯ ನೆನೆವೆನುದಾರಿಯ, ಕುಜನರ
ವೈರಿಯ, ಮಂದರೋದ್ಧಾರಿಯ,
ಹರಿಯ, ದುರಿತ ನಿವಾರಿಯ, ಸುಜನೋಪ
ಕಾರಿಯ, ಮುಕುತಿಗೆ ದಾರಿಯ[135] (31)

ಇಷ್ಟನ, ದುರಿತಾರಿಘಟ್ಟನ, ಜಗಕತಿ
ದಿಟ್ಟನ, ಸತತ ಸಂತುಷ್ಟನ,
ಶಿಷ್ಟನ, ಶುಭಗುಣ ಪುಷ್ಟನ, ತುತಿಪೆನು
ತ್ರಿವಿಷ್ಟನ, ಶ್ರುತಿಗಿಂಬುಕೊಟ್ಟನ (32)

ನೀಲನ, ನಿಜಜನಪಾಲನ, ನಿರ್ಮಲ
ಶೀಲನ, ಸುಚರಿತ್ರಜಾಲನ,
ಬಾಲನ, ಸಂಗೀತ ಲೋಲನ, ತುತಿಪೆನು
ಕಾಲನವರಿಗೆ ಅನಲನ (33)

---

132. ಗುಂಡಕ್ರಿಯೆ, 22.

133. "ಯುಕ್ತಿ ಸಿದ್ಧಾಂತಕ್ಕೆ ಮಾರುಹೋಗಿ ರಚಿಸಿದ 'ಯುಕ್ತಿ ಮಲ್ಲಿಕೆ' ತರ್ಕರಸಿಕರಿಗೆ ಮುದನೀಯಲಿ" ಎಂದಂತೆ.

134. ಬಲಿಯ ನಿಗ್ರಹಿಸಿದುದು.

135. ಏಷ ಪಂಥಾ: (ಐತರೇಯ ಉಪನಿಷತ್) = ನಿತ್ಯಂ ಸ್ವಪ್ರಾಪ್ತಿ ಹೇತುತ್ವಾತ್ (ಮಧ್ವ ಭಾಷ್ಯ) = ತನ್ನ ಪ್ರಾಪ್ತಿಗೆ ತಾನೇ ದಾರಿಯೂ ಆಗಿರುವ.

ರಂಗನ ಕರುಣಾಂತರಂಗನ, ಖಳಕುಲ
ಭಂಗನ, ಮುನಿಜನ ಸಂಗನ,
ಅಂಗನಾ ಜನಕೆ ಆಲಿಂಗನವೀವ[136] ಶು
ಭಾಂಗನ, ತುತಿಪೆನುತ್ತುಂಗನ (34)

(ಪದ 8) ಹರಿಪರವಾದ ಭಾಗವತ 3–18ರ 20,21,22ನೆಯ ಶ್ಲೋಕಾನುವಾದ — ಹರಿಕಥೆ ಕೇಳದವ ಬಹುಕಾಲ ಬಾಳಿ ಫಲವೇನು, ಮರ ಸಾಸಿರ ಕಾಲವಿರದೆ? ಕಾರುಕನ ತಿದಿ ಶ್ವಾಸ ಬಿಡದೆ, ನಾಯಿ ನರಿಗಳೂ ಪೂರೈಸಿಕೊಳ್ಳವೆ ಉದರ? ಹರಿಕಥೆ ಕೇಳದವನ ಕರ್ಣ ಮೂಷಿಕ ಬಿಲ, ಕ್ಷೇತ್ರಕ್ಕೆ ಹೋಗದ ಕಾಲು ಪ್ರತಿಮೆಯ ಪಾದ; ಹರಿಯ ನೋಡದ ಕಣ್ಣು ಹೀಲಿಯ ಕಣ್ಣು, ಪಾಡದ ಜಿಹ್ವೆ ಮಂಡೂಕ ಜಿಹ್ವೆ, 'ಹರಿಗೆರಗದ ನರನೆ ವಾನರನು'[137] (35–38).

(ಪದ 9) ಭಾಗವತದ ಇನ್ನೆರಡು ಶ್ಲೋಕಗಳನ್ನು ಕನ್ನಡಿಸಿದ ನುಡಿ — ಏಳು ದಿನ ಹರಿಕಥೆ ಕೇಳಿದ ಪರೀಕ್ಷಿತ, ಎರಡು ಘಳಿಗೆ ನೆನೆದ ದಿಲೀಪ[138] ಹರಿಪುರಕ್ಕೈದಿದರು(39). ಅದರಿಂದ ನಾರಾಯಣನ ಕೊಂಡಾಡುವ ಬುಧರು ವೈಕುಂಠಕ್ಕೈದಿ ಸುಖಿಸುವರು (40).

(ಪದ 10) ಭೃಗು ವೈಕುಂಠಕ್ಕೈದಿದ ಶ್ಲೋಕದ್ವಯ ಉದ್ಧರಿಸಿ, ವೈಕುಂಠ ವರ್ಣಿಸತೊಡಗಿದ್ದು — ವೈಕುಂಠ ಸೌಖ್ಯ ಬದುಕುವುದೇ ಮೋಕ್ಷ. ಕುಂಠನವೆಂಬ ನಾಶವಿಲ್ಲದವನೆ ವಿಕುಂಠ, ಅವನ ಮನೆ ವೈಕುಂಠಕೆ ನಾಶ ಉಂಟೆ? ಅದು ಹೋದ ಮೇಲವನು (ನಮ್ಮಂತೆ) ಕಾನನದ ಪಣ್ ಫಲವ ಮೆಲುವನೆ? ನಶ್ವರವಲ್ಲದ ಈ ಪದವೆ ಮುಕುತಿ (41–44).

---

136. ಲಕ್ಷ್ಮೀಶೋಭಾನೆ 48.

137. ಹರಿಯ ನೆನೆಯದ ನಾಲಗೆ ಏಕೆ ನರಹರಿಯ ಕೊಂಡಾಡದ ಈನರಜನ್ಮವೇಕೆ (ಪುರಂದರದಾಸರು).

138. ರಘುವಿನ ತಂದೆ, ಭಾಗವತೋಕ್ತ ಖಟ್ವಾಂಗ; ದೇವತೆಗಳಿಗೆ ಹೋರಾಡಿ ವರ ಪಡೆದಾಗ ಅಲ್ಪಾಯುಷ್ಯವೆಂದರಿತು ಹರಿಧ್ಯಾನದಿಂದ ಮುಕ್ತನಾದ.

(ಪದ 11) ಶಂಕರರು 'ಪರಮಾಂ ಗತಿ' ಎಂದ ಪದವೆ ಮುಕ್ತಿ. ಧನ್ಯರೀ ಲೋಕ ಪೊಕ್ಕು ಮೇಲೆ ಪುನರಾವರ್ತಿಯಿಲ್ಲ, ಇನ್ನೊಂದು ಮುಕ್ತಿಯುಂಟೆಂಬ ಖಳರಿಗೆ ಮಾನ (ಪ್ರಮಾಣ)ವಿಲ್ಲ.[139] 'ನ ಚ ಪುನರಾವರ್ತತೇ' ಎಂದು ವೇದಾಂತ ಮನ್ನಿಸಿದ ಮುಕ್ತಿ ವೈಕುಂಠ ಒಂದೇ. ನಿರ್ಗುಣ ಬ್ರಹ್ಮೋಪಾಸನೆ ತಮಸ್ಸಾಧಕ, ಮುಕ್ತಿಪ್ರದ ವಲ್ಲ; ಅಂತಹರಿಗೆ ಮುಕ್ತಿಯೆಂಬುದು ಭ್ರಾಂತಿ, ಗಂಟಲ ಗಾಣ! (45– 49).

(ಪದ 12) ಪಂಚರಾತ್ರಾಗಮದ ಜಿತಂತೇ ಸ್ತೋತ್ರದ 4 ಶ್ಲೋಕ ಉದ್ಧರಿಸಿ, ಬ್ರಹ್ಮ ದೃಷ್ಟ ವೈಕುಂಠ ವರ್ಣಿಸಿದ್ದು — ಶ್ರೀಕಾಂತ ಅಲ್ಲಿ ಮುಕ್ತರ ಸುಖವಿತ್ತು ಪೊರೆವ. ಅಲ್ಲಿ ಪ್ರಕೃಷ್ಟ ಜೀವರಾಶಿಗಳಿಪ್ಪವು; ಅದು ಪ್ರಾಕೃತವಲ್ಲ, ನಿತ್ಯ ಸನಾತನ ಪದವದು ದಿವ್ಯ, ತ್ರಿಗುಣ ಹೊಂದಲಾ ಲೋಕಕ್ಕೆ ಕುಂದು ಕೊರತೆಯಿಲ್ಲ ಬ್ರಹ್ಮಾದಿಗಳು ಹರಿಯ ಪರತ್ವಕೆ ಕೈ ಮುಗಿಯುವರು. ನಿತ್ಯಮುಕ್ತರ ನೆಲೆಯು ವಾಪಿ ಕೂಪ ತಟಾಕ ಮನೆ ಗೋಪುರಗಳಾಗಿ ರಮೆ ನಲ್ಲನ ಚಿತ್ತವನೊಲಿಸಬೇಕೆಂಬಳು.[140] ಅರ್ಕಕೋಟಿಗಳಂತೆ ವೈಕುಂಠ ಬೆಳಗುವುದು, ಲಕ್ಷ್ಮಿಗಲ್ಲದೆ ಇಂಥ ಕಾಂತಿ ಮಿಕ್ಕವರಿಗೆ ಬರ್ಕೆ?[141] ಲೋಕ ಬ್ರಹ್ಮನ ಲೋಕಕೆ ಮೇಲಿಹುದು, ಸಿದ್ಧಸಾಧ್ಯರಲ್ಲಿ ಬೇಕಾದ ಸುಖವನುಣುತಿಹರು![142] ಲಕ್ಷಯೋಜನ ಮೇಲೆ (ಅಂತರಿಕ್ಷದ) ಅನಂತಾಸನ, ಲಕ್ಷದೈವತ್ತು ಯೋಜನ ಶ್ವೇತದ್ವೀಪ, 16 ಕೋಟಿ 25 ಲಕ್ಷ ಯೋಜನ (ದೂರ) ವೈಕುಂಠ (50– 57).

---

139. ಇಲ್ಲಿಯೇ ಬ್ರಹ್ಮ ಸಾಕ್ಷಾತ್ಕಾರವಾಗಲು, ಕರ್ಮನಶಿಸುತ್ತ, ಪ್ರಾಕೃತ ಗುಣ (ದೇಹ ತ್ಯಜಿಸಿ, ಬ್ರಹ್ಮೈಕ್ಯ ಹೊಂದುವ ಜೀವನ್ಮುಕ್ತನದು ಸಗುಣ ಮುಕ್ತಿ, ಮೇಲಿನದು ನಿರ್ಗುಣ ಮುಕ್ತಿ ಎನ್ನಬಾರದು. ಜೀವನ್ಮುಕ್ತ ಮುಕ್ತನಲ್ಲ. ನದಿ– ನಕ್ಷತ್ರ ಅದೃಶ್ಯವಾದಾಗಲೂ ಬೇರೆ ಅಸ್ತಿತ್ವದುಂಟು — ಏಕವಲ್ಲ. ಬ್ರಹ್ಮವಶರಾಗಿ ಆನಂದ ಹೊಂದುವುದೇ ಮುಕ್ತಿ. 'ನ ಚಾತ್ಯ ಮುಕ್ತಿರಸ್ತೀತಿ ಕಿಂಚನಾತ್ಮನಂ' (ಭಾಗ.ನಿ.)

140. ಬಾಲಲೀಲೆ, ಉ.437; ಛತ್ರ ಚಾಮರ ವ್ಯಜನ ಪರ್ಯಂಕ ಪಾತ್ರ ರೂಪದಲ್ಲಿ ಚಿತ್ರ ಚರಿತನಾದ ಹರಿಯ ನಿತ್ಯ ಸೇವೆ ಮಾಡುತಿಹಳು (ಪುರಂದರದಾಸರು). ವಾಪಿ = ಇಳಿದು ತುಂಬುವ ಬಾವಿ, ಕೂಪ = ಸೇದುವ ಬಾವಿ.

141. ನ ತದ ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾದಕಃ (ಗೀತೆ,15).

142. ಸಂಕಲ್ಪದಿಂದಲೇ ಅವರ ಇಷ್ಟ ಸಿದ್ಧಿಸುತ್ತುವೆ (ಸುಮಧ್ವವಿಜಯ, 11).

(ಪದ 13) ಭಾಗವತ ಕೇಳಿ ಮುಕ್ತನಾದ ಪರೀಕ್ಷಿತ ಮಹಾಭಕ್ತನೆಂಬ ಶುಕರ ಉಕ್ತಿಗೆ ವಿವರಣೆ — ವೈಕುಂಠ ಜ್ಞಾನಸಾಧ್ಯ[143]ವೆಂದಿದೆ ಭಾಗವತ. ಇದೆ ಅಪವರ್ಗ, ಮೋಕ್ಷ. ಮೋಕ್ಷಿಗಳು ವ್ಯಾಸ ವಚನ ಮನ್ನಿಸದಿರೆ ಜ್ಞಾನಿಗಳು ಯಾರೆ? ಪರೀಕ್ಷಿತ ಹರಿಪದ ಹೊಂದಿದುದ ಭಾಗವತ ಪೇಳಿತಾಗಿ ಅನ್ಯರ ಮತ ರಾಜಿಪುದೆಂತು? ಹರಿಪಾದಮೂಲ ಹರಿಲೋಕ ಲಕ್ಷ್ಯವಾಗಿ, ನಿರಾಕಾರ ಬ್ರಹ್ಮೈಕ್ಯದ ಮತ ನಿರಾಕೃತ. ಅಲ್ಲಿ ಹರಿಪಾದಸೇವೆಯೇ[144] ಕೈವಲ್ಯ, ಐಕ್ಯ ಸಲ್ಲ. ಖಗೇಂದ್ರ ನಾವುದೆ ತರತಮ ಭೇದವನರುಹಿತು,ಪಾದ ಶಬ್ದ ಭಗವಂತನು ಸಾಕಾರನೆಂದು ಪೇಳಿತು! (58—64).

(ಪದ 14) 'ನ ವರ್ತತೇ ಯತ್ರ ಮಾಯಾ ··· ಹರೇರನುವ್ರತಾ ಯತ್ರ' ಇತ್ಯಾದಿ ಭಾಗವತ(2)ದ ನುಡಿಯನಾಧರಿಸಿ ಅದ್ವೈತಿಗೊಂದುದು — ಮುಕ್ತಿಯೊಳಿಹ ಭೇದ ಸಿದ್ಧ, ಹರಿಸೇವಕರಾಗಿ ಸುರರು ಸ್ವಾವರರಿಂದ ಸೇವ್ಯರೆಂಬ ಭಾಗವತೋಕ್ತಿಯುಂಟು. 'ಹರೇರನುವ್ರತಾ' ಎಂಬಲ್ಲಿನ ಹರಿಭೇದ ಪರಮಾರ್ಥ ಸತ್ಯ.[145] ಅಲ್ಲಿ ಮಾಯೆ ಇಲ್ಲವೆಂಬುದರಿಂದ ಲೇಶಮಾಯೆಯೂ ಕೂಡದು. ಮುಖ್ಯ ಘಟವಿರಲು ಘಟವಿಲ್ಲೆನ್ನುವರೇ? ಶಕ್ಯಾರ್ಥ[146]ವನ್ನಲ್ಲದೆ ಬೇಕಾದರ್ಥ ಪೇಳ್ವುದೆ ಶಬ್ದ? ತುಹಿನ ಪದ ವಹ್ನಿತ್ರಯವು[147] ಉಚ್ಚರಿಸಲು ವಹ್ನಿಯ ಅರ್ಥ ಕೊಡುವುದೆ?

---

143. 'ಜ್ಞಾನಸ್ಯ ಭಕ್ತಿ ಭಾಗತ್ವಾತ್ ಭಕ್ತಿ: ಜ್ಞಾನಮಿತೀರ್ಯತೇ' — ಜ್ಞಾನಪೂರ್ವಕ ಭಕ್ತಿಯೇ ಇಲ್ಲಿ ಉದ್ದಿಷ್ಟ.

144. ಮುಕ್ತರ ಉಪಾಸನೆ— ಭಕ್ತಿ ಆನಂದ ಸಾಧನವಲ್ಲ ಸುಖರೂಪದ ಸಿದ್ಧಿ (ನ್ಯಾಯ ವಿವರಣ).

145. ಅದ್ವೈತದಂತೆ ಹಗ್ಗ ಹಾವಾಗಿ ತೋರುವುದು ಪ್ರಾತಿಭಾಸಿಕ ಸತ್ಯ, ಬ್ರಹ್ಮೈಕ್ಯದನಕ ತೋರುವುದು ವ್ಯಾವಹಾರಿಕ ಸತ್ಯ. ಆದರೆ ವಸ್ತುತ: ಮುಕ್ತರು ಕಾಣುವ ವೈಕುಂಠ ಪರಮಾರ್ಥ ಸತ್ಯ, ಮಾಯಾರಾಹಿತ್ಯ— ಭೇದಗಳು ನಿತ್ಯಸತ್ಯ.

146. ಶಬ್ದಶಕ್ತಿಗಳ ಪ್ರಕಾರ ಒದಗುವ ಅರ್ಥ.

147. ವಹ್ನಿ ವಹ್ನಿ ವಹ್ನಿ ಎಂದು 3 ಸಲ ಹೇಳಿದರೂ ತುಹಿನ ಪದಕ್ಕೆ ವಹ್ನಿಯ ಅರ್ಥ ಬಾರದು.

(ಪದ 15) ಆ ಲೋಕದ ದಿವ್ಯ ಸ್ತ್ರೀ ಪುರುಷರ ನಗರ ಅಯೋಧ್ಯೆ[148] ಎಂಬ ಶ್ಲೋಕ ಅವತರಿಸಿ ವರ್ಣಿಸಿದ್ದು — ರನ್ನ ಕೆತ್ತಿಸಿದ ಚಿನ್ನದ 2 ಕೋಟೆ, ತನ್ಮಧ್ಯೆ ಅಯೋಧ್ಯಾ ನಗರಿಗೆ ಸುವರ್ಣ ಗೋಪುರ, ಸಿರಿದೇವಿ ಮನೆಯ ರೂಪದಲಿ ಮಿಂಚುವಳು, ದಿವ್ಯ ಪ್ರಕೃತಿ[149] ವಿರಚಿತ ಗೃಹಗಳೊಪ್ಪಿಹವು.

(ಪದ 16) ಸೂರ್ಯಾದಿಗಳು ಬೆಳಗದ, ತಿರುಗಿ ಸಂಸಾರಕೀಸದ ಪರಂಧಾಮ ಎಂಬ ಗೀತಾ ವಾಕ್ಯ (15) ವಿವರಿಸಿದ್ದು — ರತ್ನದ ಉಪ್ಪರಿಗೆ, ದ್ವಾರಪ್ರಾಕಾರಗಳ ಕಾಂತಿಗೆ ಓಡುವುದಂಧಕಾರ; ವೈಕುಂಠ ಅರ್ಕ ಕೋಟಿಗಳಂತೆ ಬೆಳಗುವುದನ್ನರಿಲ್ಲವೇ ಪಾಂಚರಾತ್ರ?[150] ನಾಲ್ಕು ದಿಕ್ಕಿಗೂ ಬಾಗಿಲ ಸಾಲು, ಲೋಕಪಾಲರ ಮನೆಯೊಳಗಿಂದಲ್ಲಿಗೆ ಬಾಹ ಶ್ರೀಕಾಂತ; ವಾಯು ಜೀವನ್ಮುಕ್ತರನ್ನು ಬ್ರಹ್ಮನೆಡೆಗೊಯ್ವ[151]ನಾಗಿ, ಲಿಂಗದೇಹದಿಂದವರು ಜಯ ಜಯವೆನುತಿಹರಲ್ಲಿ. ವಾಯು ಅಪ್ರತೀಕಾಲಂಬನ[152]ರನ್ನು ಏಳು ಪ್ರಾಕಾರಗಳಲ್ಲೀ ಮುಕ್ತಿಪರ್ಯಂತ ಭೋಗ ಉಂಡು ಇಪ್ಪಂತೆಸಗುವ. ಗಡಿಯಂತೆ ಅಲ್ಲಿ ಬೆರಸಿಹರು ಮುಕ್ತಾಮುಕ್ತರು; ಮುಕ್ತರು ಚಿತ್ರಚಾವಡಿಯಲ್ಲಿದ್ದು[153] ಹರಿಗೆ ಅಮುಕ್ತರನ್ನೂ ಉದ್ಧರಿಸೆಂದು ಬಿನ್ನೈಸುವರು. ಮುಕ್ತರ ಮನೆಯಾದ ಹರಿಯ ಅಂತಃಪುರದ ಸುತ್ತಣ ವಿರಜಾ ನದಿಯೊಳಗೆ ಮುಳುಗಿ, ಮುಕ್ತವಾಹುದು ಲಿಂಗದೇಹ (71—77).

---

148. ಹರ್ಯಾಜ್ಞೆಯಿಲ್ಲದೆ ಯಾರೂ ಪ್ರವೇಶಿಸದ, ಯೋಧರು ಹೋರಾಡಿ ಗೆಲ್ಲದ ಎಡೆ; ಇದಕ್ಕೆ ಸದೃಶವಾದ್ದರಿಂದ ರಾಮನಗರವೂ ಅಯೋಧ್ಯೆ ಎನಿಸಿತು.

149. ಸೃಷ್ಟಿಗೆ ಬಳಸಿ ಉಳಿದ ಶುದ್ಧ ಸತ್ವಗುಣಾತ್ಮಕ ಪ್ರಕೃತಿ.

150. ಪದ 12ರ ಅಡಿಗೆ (55ನೆಯ ನುಡಿಯಲ್ಲಿ).

151. ಸ ಏನಾನ್ ಬ್ರಹ್ಮ ಗಮಯತಿ (ಛಾಂದೋಗ್ಯ).

152. ಸಾಮಾನ್ಯ ಜ್ಞಾನವಿದ್ದು ದೇಹದಲ್ಲೀ ಹರಿಪ್ರತೀಕ ಕಾಂಬವರು ಪ್ರತೀಕಾಲಂಬನರು, ವಿಶೇಷ ಜ್ಞಾನವಿದ್ದು ವಾಯೋಪಾಸಕರಾದವರು ಅಪ್ರತೀಕಾಲಂಬನರು.

153. 'ಚಿತ್ರದ ಚಾವಡಿ ರಜವ ಬಳಿಕ' — ಕನಕದಾಸರ ಪದ. ('ಬಂಟನಾಗಿ ಬಾಗಿಲ ಕಾಯ್ವ' ಎಂಬುದಕ್ಕೆ ವೈಕುಂಠದಾಸರ ಬಾಗಿಲಿಂದಿದ್ದಾರೆ. ಬೇಲೂರು ಕೇಶವದಾಸ ಹಾಗೂ ಶೇಷಾಚಾರ್ಯ ಕಟ್ಟ).

(ಪದ 17) ಮತ್ತೆ 3 ಶ್ಲೋಕದಿತ್ತು ವಿವರಿಸಿದ್ದು — ಹೊರಗಿನ 7ನೆಯ ಬಾಗಿಲನಕ ಬಂಧಕ ಮಾಯಾ ಪ್ರಕೃತಿ; ಒಳಗಣ ಹರಿಯ ಅಂತಃಪುರದ ಸುತ್ತ ವಿರಜಾ ನದಿ. ಏಳನೇ ಬಾಗಿಲೊಳಿದ್ದ ಜಯವಿಜಯರು ಶಾಪದಿಂದ ಭೂಲೋಕದಲಿ ಪುಟ್ಟಿದರಾಗಿ, ಕಾಲನ ಭಯವೀವ ಪ್ರಕೃತಿ ಆ ಪರಿಯಂತ ಕಾಲೂರಿ ಕಟ್ಟುವಳು. ಅದರೊಳಗೆ ಮುಕ್ತರಿಗಲ್ಲದೆ ಸಂಚಾರ ಸಲ್ಲ;[154] ಕಾರಣ ನಾರಾಯಣನೆ ಅಲ್ಲಿಗೆ ಬಂದು ಸನಕಾದಿಗಳಿಗೆ ಮುದವಿತ್ತ. ಹರಿಯ ಅಂತಃಪುರ 'ಪರಮ ವ್ಯೋಮ', ಹೊರಗಿನ ಪ್ರಕೃತಿ 'ಪ್ರಧಾನ', ಇವುಗಳಂತರದಿ ವಿರಜೆ ಎಂದಿವೆ ಪುರಾಣ.[155] ಹರಿಯಂಗದ ಬೆವರು[156] ನೀರಾಗಿ ಸಿರಿದೇವಿಯೇ ಪರಿವಳು, ರಜರಹಿತವಾಗಿ (ತ್ರಿಗುಣಗಳೂ[157] ಇರದೆ) ವಿರಜೆ ಎನಿಪಳು. ಅವಳ ಹರಿಯಂಗಸಂಗವೇ ಮುಕ್ತಿಯೋಗ್ಯರ ಲಿಂಗದೇಹ ಕೆಡಿಸುವ ಶಕ್ತಿಗೆ ಕಾರಣ (78—83).

(ಪದ 18) ನಾನಾ ಜೀವರು ಸುಖಿಸುವ ಶ್ಲೋಕ ವಿವರಿಸಿದ್ದು — ಅಂತಃಪುರದಲ್ಲಿ ಸುರ ಮಾನವ ತರುಪಕ್ಷ್ಯಾದಿ ನಾನಾ ಜಾತಿಯ ಮುಕ್ತರಿದ್ದು ಸ್ವಸ್ವರೂಪದಿಂದ ಸುಖಿಸುವರು. ಇಲ್ಲಿ ಆಕಾರದಿಂದ ಕೆಳ ವರ್ಗದವರ ನಿರಾಕರಿಸುವಂತಿಲ್ಲ. ಬಲ್ಲವರು ಹರಿಯ ಮತ್ಸ್ಯಾದಿ ರೂಪ ಮನ್ನಿಸರೆ, ಬೆಲ್ಲದಚ್ಚಿನ ಕಾಸಾರ ಸಲ್ಲದೆ ಬುಧರಿಗೆ, 'ಕಲ್ಲೆಂದು ಬಿಡುವರೆ ಮಾಣಿಕ್ಯ ರತ್ನವ'? ಗರುಡಾದಿಗಳ ವಾಹನವಾಗಿ ಸುರರು ಮನ್ನಿಸಿ ಕೊಳರೆ, ಶ್ಯಾಮ ಶಬಳ (ಮಿಶ್ರ ವರ್ಣ ಸ್ತೋತ್ರವು)ರನು ಮುಕ್ತರಿಲ್ಲಿ ಪೂಜಿಸರೆ? ಉತ್ತಮತೆ ತಪ್ಪದೆ ಚಿತ್ತಿನ[158] ಮೂರ್ತಿಯಾಗಿರ್ದ ವಿಚಿತ್ರ ಜಾತಿಗಳವು (84—88).

---

154. ವಾಯುವಿಗೆ ಮಾತ್ರ ಯಥೇಷ್ಟ ಪ್ರವೇಶದ ವರವಿತ್ತ ರಾಮ (ಭಾ.ತಾ.ನಿ. 9,66; ಕನ್ನಡ ನಿರ್ಣಯ, 1,156).

155. ಈ ಪದದ ಆದಿಯಂತೆ.

156. ಜ್ಞಾನಾನಂದಾತ್ಮಕ ಅಪ್ರಾಕೃತ ಲಕ್ಷ್ಮಿಯ ರೂಪ.

157. ಸತ್ವ ತಮೋಗುಣ ಮಿಶ್ರಣವೇ ರಜೋಗುಣವಾದ್ದರಿಂದ.

158. ಜ್ಞಾನಸ್ವರೂಪಿಗಳು ಪ್ರಾಕೃತ ದೇಹವಿಲ್ಲದ ದೇವಲಾನಂದಾತ್ಮಕರು.

(ಪದ 19) 'ಸರ್ವೇ ನಂದಂತಿ' ಇತ್ಯಾದಿ ಶ್ರುತಿ ವಾಕ್ಯಗಳನ್ನನುವಾದಿಸಿದುದು — 'ಅತ್ರ ಬ್ರಹ್ಮಾ ಪವಮಾನ ಛಂದಸ್ಯಾಂ ವಾಚಂ ವದನ್' ಎಂಬುದೆ ಮುಕ್ತರ ಪವಮಾನ ಸೂಕ್ತಪಠನ ವರ್ಣಿಸಿದೆ. ಪಾಪ ತೊಳೆದ ಪದುಮನಾಭ ಕುದುರೆಂತುಂತೆ ಕಾಣದು ಮುಕ್ತರ ಕಣ್ಸೆಳೆದು ಸುಖವೀತ. ಪಾಡುವ ಮುಕ್ತರ ಉಲ್ಲಾಸ ತಿಳಿವ ಹರಿ ಎಂಬ ಸಥೆಂಯಿಂದವರು ಸುಖಿಸುವರು. ಮುಕ್ತ ಬ್ರಹ್ಮರಲಿ ಒಬ್ಬ ಋಗ್ವೇದ ಘೋಷಿಸುವ, ಒಬ್ಬ ಗಾಯತ್ರ[159] ಸಾಮ ಹಾಡುವ, ಮತ್ತೊಬ್ಬ ಪುರಾಣ ಓದುವ, ಇನ್ನೊಬ್ಬ ಹರಿಮೂರ್ತಿ ನೆನೆದು ಸುಖಿಸುವ,[160] ಮಗುದೊಬ್ಬ ನೋಡುವರಸ ಹೋಲಿಸುವ. ಇಂತು ಹರಿಮಂದಿರದಲ್ಲಿಹ ಅನಂತ ಬ್ರಹ್ಮಾದ್ಯರನು (ಪದಾದಿಂದು) ವೇದ ವರ್ಣಿಸಿದೆ (89— 96).

(ಪದ 20) ಅಕ್ಷಣ್ವಂತ: ಕರ್ಣವಂತ: ಸಖಾಯೋ ಮನೋಜವೇಷ್ವಸಮಾಬಭೂವು: । ಆದಘ್ನಾಸ ಉಪಕಕ್ಷಾಸ ತ್ವೇ ಹ್ರದಾ ಇವ ಸ್ನಾತ್ವಾ ಉತ್ವೇ ದದೃಶ್ರೇ ॥ (ಕಣ್ಣು ಕಿವಿ ಸಖ್ಯ ಉಳ್ಳ ಮುಕ್ತರು ಮನೋವೇಗದಲ್ಲಿ ಅಸಮರಾದರು, ಶ್ವೇತದ್ವೀಪದ (ಪರಿಸರ)ದಲ್ಲಿ ಧ್ಯಾನಸ್ಥರಾಗಿ ಕೆಲ ಕೆಲರು ಹರಿಯ ಕಂಡರು) ಎಂಬ ಶ್ರುತಿ ಮುಕ್ತರ ಆನಂದ ತಾರತಮ್ಯ ಪೇಳಿತು. ಅದರಿಂದ (ಮೇಲಣ ಪದದ ಶ್ರುತಿ) ಬ್ರಹ್ಮರನು ಮೊದಲು ನೆನೆದು, ಉಳಿದವರ ಬೇರೆ ಬಣ್ಣಿಸಿತು (97— 98).

(ಪದ 21) (ಮಧ್ವ ವಿಜಯ 11ರಂತೆ ವರ್ಣಿಸಿದುದು) — ಹರಿಯೋಲಗಕ್ಕೆತಪ್ಪ ವಿರಿಂಚರಿಗೆ ಲೆಕ್ಕವಿಲ್ಲ, ಸುರರ ತಿಂಥಿಣಿಯನೇನೆಂಬೆ. ಅಗಸ್ತ್ಯನ ಪೊಟ್ಟೆ ಅಂಬುಧಿಗಿಂಬು ಕೊಟ್ಟಿರಲು, ಸರ್ವೇಶನ ಠಾವಡಿ ಬಂದಷ್ಟು ಮುಕ್ತರಿಗಿಂಬು ಕೊಡದೆ? ಒಂದೊಂದು ಕಲ್ಪದಲಿ ಮುಕ್ತರಾದವರು ಚೆಂದಚೆಂದದಲಿಹರು, ಇಂದಿರೆಯೋಲಗದಿ ವಾಣಿ ಮೊದಲಾದಿಂದು— ಮುಖಂತರೊಪ್ಪಿಹರು; ಅವರ ಲಾವಣ್ಯ ತಾರುಣ್ಯ ಅಂಬರ ಆಭರಣಂಗಳನಾವ ಬಣ್ಣಿಸುವ (99–102).

---

159. 'ಮನೋ ಹಿಂಕಾರೋ' ಎಂಬ ಈ ಛಾಂದೋಗ್ಯಸಾಮ ಇಂದ್ರಿಯಸ್ಥ ವಿಷ್ಣುವಿನ ಸ್ತುತಿ.

160. ಇವು ಆನಂದ ಸ್ವರೂಪ ಮುಕ್ತರ ಕರ್ಮ, ವಿಧಿಬದ್ಧರ ಅನ್ಯಸುಖಾರ್ಥ ಸಾಧನಗಳಲ್ಲ.

(ಪದ 22) ಗೀತೆ ಭಾಗವತ ಶ್ಲೋಕದ್ವಯಾಧಾರದಿಂದ ಸಾಧರ್ಮ್ಯ[161]ಸಾರೂಪ್ಯ ಮುಕ್ತರನ್ನು ಬಣ್ಣಿಸಿದ್ದು —

ಇಟ್ಟ ಮುಕುಟಂಗಳ, ತೊಟ್ಟಂಗಿ ತೋಳ್ಗಳ
ದಿಟ್ಟ ಸರ ಹಾರ ಪದಕಗಳ,
ಉಟ್ಟ ಪೊಂಬಟ್ಟೆಗಳ, ಕಂಕಣಾಂಗದಗಳ,
ಮೆಟ್ಟಿರ್ದ ಪೊನ್ನ ಪಾವುಗೆಯು (103 )

ಪೊಳೆವ ಕುಂಡಲಗಳ, ಉಲಿವ ಕಿಂಕಿಣಿಗಳ,
ನಳನಳಿಸುವ ನೇವಳಗಳ,[162]
ನಲಿವ ಅಂದುಗೆಗಳ, ಮುಕ್ತರ ದಿವ್ಯಾಂಗ
ಚೆಲುವನದಾವ ಬಣ್ಣಿಸುವ (104)

ನಾಲ್ಕು ಕೈಗಳ ಮುಕ್ತರು ಹರಿಯೊಡನಿರುತ್ತ, ಶ್ರೀವತ್ಸ–ಕೌಸ್ತುಭ ವಿರಹಿತರು ವಂದನ ಗರುಡವಾಹನ, ಶೇಷಶಯನ ಎಂಬ ಕುರುಹುಗಳಿಂದಲ್ಲದೆ ಸಾರೂಪ್ಯದ ಹರಿಯನರಿಯ ಬಾರದು (105– 106).

(ಪದ 23) ನಾಲ್ಕು ಬಗೆಯ ಮುಕ್ತಿ ವರ್ಣನೆ — ಲಿಂಗದೇಹ[163]ವಳಿದು ತತ್ತ್ವ ದ್ಯೋಗ್ಯತೆಯಿಂದೊಪ್ಪುವುದು ಸಾರೂಪ್ಯ ಸಾಮೀಪ್ಯ ಸಾಲೋಕ್ಯ ಸಾಯುಜ್ಯ ಎಂಬ ನಾಲ್ಕು ಬಗೆಯ[164] ಮುಕ್ತಿ. ಹರಿಯಂಗ ಮುಟ್ಟಿಕೊಂಡಿಪ್ಪುದು ಸಾಯುಜ್ಯ; 'ಯುಜಿರ ಯೋಗೇ' (ಸಂಬಂಧೇ) ಎಂಬ ವ್ಯಾಕರಣ ಐಕ್ಯ ಪೇಳದು; ಹರಿಯಂಗ ವಾಶ್ರಯಿಸಿಪ್ಪ ದೇವತೆಗಳು ಈಗ ಹರಿಮೂರ್ತಿಯೊಳಿಹರಾಗಿ ಸಾಯುಜ್ಯಾರ್ಹರು. ಸಾಲೋಕ್ಯ ಹರಿಲೋಕದೊಳಗೆ ಇಪ್ಪುದು, ಸಾಮೀಪ್ಯ ಹತ್ತಿರದ ಪಾಲಸಾಗರದಲ್ಲಿ ಸುಖಿಸುವವರದು. ಶ್ರೀವತ್ಸ ಕೌಸ್ತುಭ ಉಳಿದು ನಾಲ್ಕು ಕೈಗಳಲ್ಲಿ ಶಂಖ ಚಕ್ರಾದಿಗಳ

---

161. ಜನ್ಮಮರಣಾದ್ಯುಪಲಕ್ಷಿತ ದುಃಖ ರಾಹಿತ್ಯಕ್ಕೆ ಸೀಮಿತ; ಹರಿಯ ಜ್ಞಾನಾನಂದಾದಿಗಳೊಡನೆ ಸಾಧರ್ಮ್ಯವಿಲ್ಲ.

162. ತೂಗುಬಿಟ್ಟ ಲೋಲಾಕು (ನ್ಯಾವಳ, ನೇವಣ = ಕಂಠಸರ).

163. 5 ಕರ್ಮೇಂದ್ರಿಯ, 5 ಜ್ಞಾನೇಂದ್ರಿಯ, 5 ತನ್ಮಾತ್ರ (ಶಬ್ದಾದಿ ವಿಷಯ), ಮನ = 16 ತತ್ತ್ವಯುಕ್ತ ಸೂಕ್ಷ್ಮದೇಹ.

164. ಬ್ರಹ್ಮನು ಹರಿಯ ಸರ್ವಾಂಗದಲ್ಲಿರುವುದನ್ನು ಸಾಯುಜ್ಯದಿಂದ ಪ್ರತ್ಯೇಕಿಸಿ ಸಾರಿಷ್ಟಿ ಎಂಬ 5ನೆಯ ಬಗೆ ಹೇಳಿದ್ದಾರೆ ಕೆಲರು (ಗುರುಪುರಂದರವಿಠಲ, ಮುಕ್ತರ ತಾರತಮ್ಯ ಸುಳಾದಿ, ಮೋಕ್ಷಮಾರ್ಗ ಪ್ರದೀಪಿಕಾ 3). ಮಧ್ವವಿಜಯ 11ರಲ್ಲಿ 4 ಮಾತ್ರ ಉಕ್ತ. ರುಕ್ಮಿಣೀಶ ವಿಜಯ 8– 46ರಲ್ಲಿ ಪ್ರಕಟವಾದ ಹರಿಯಂಗದಲ್ಲಿ ಗೋಪಿಯರು ಬೆರೆತರೆಂಬಾಗ ಸಾರ್ಷ್ಟಿ ಉಕ್ತವಾದರೂ ಸಾಯುಜ್ಯ ಸಾಧರ್ಮ್ಯ ಸಾರೂಪ್ಯಗಳೊಡನೆ 4 ಹೇಳಿದೆ, ಸಾಲೋಕ್ಯ ಸಾಮೀಪ್ಯ ಬಿಟ್ಟಿದೆ.

ಹಿಡಿದವರಿಗೆ ಸಾರೂಪ್ಯ. ಈ ಸಾರೂಪ್ಯ ಲಕ್ಷ ನಾಲ್ಕು ಬಗೆಯವರಿಗೂ ಸರಿ. ಐಕ್ಯ ಮೂರು ಮುಕ್ತಿಯಿಂದ ಹೊರಗಿಪ್ಪರು ಸಾರೂಪ್ಯರು. ಈ ನಾಲ್ಕು ಬಗೆಯವರಿಗೂ ಬೇರೆ ಬೇರೆ ಇರವು. (ಇದಕೆ ದೃಷ್ಟಾಂತ–) ಮೂರು ಶಾಕ ಮಾಡಿ ಲವಣ ಸೇರಿಸಿದರೂ ಶಾಕ ಬೇರೆ ಬೇರೆ, ಬೇರೆ ಬಡಿಸಿದ ಲವಣ ಲವಣವೆನಿಪುದು; ಇದೇ ರೀತಿ ಸಾರೂಪ್ಯ ಐಕ್ಯ ಮೂರರಲ್ಲೂ ಪ್ರತ್ಯೇಕವಾಗಿಯೂ ಇರುವುದು. ಸತ್ಯಾದಿ ಲೋಕಸ್ಥ ಸಾರೂಪ್ಯರಿಗೂ ಕೋಟಲೆ ತುಡುಕವು (107– 115).

(ಪದ 24) ಮುಕ್ತರ ದಿವ್ಯ ಭೋಗ – ದಿವ್ಯ ನರ ನಾರಿಯರಲ್ಲಿ ದಿವ್ಯ ಭೋಗಂಗಳನುಂಬರು, ಗೀತೆಗಳ ಪಾಡುವರು, ಪರಿಮಳ ಪೂಸುವರು, ಅಪ್ರಾಕೃತ ಜ್ಯೋತಿರ್ದೇಹಗಳ ಧರಿಸಿ[165] ಸುಖಿಸುವರು. ಅವರಿಗೆ ತಕ್ಕ ಫಲಪ್ರದ ವೃಕ್ಷಗಳಿಹವು, ನಿತ್ಯ ಸುಖಸ್ವರೂಪರ್ಗೆ ಫಲವಿತ್ತೂ ಫಲಭರಿತವಾಗಿಹವು;[166] ಇದು ವಿಚಿತ್ರವಲ್ಲ – ತುಂಬಿಸಿ ವಿಪ್ರರ್ಗೆ ಉಣಿಸಿದ ವಾತಾಪಿ ಅಣ್ಣನ ಕರೆಗೆ ಪೋದಲನಂತೆ ಬಾಹ (116– 120).

(ಪದ 25) ಶ್ಲೋಕವೊಂದನುದ್ಧರಿಸಿ ಧರ್ಮ ಕಾಮೋಪಭೋಗ ವಿವರಿಸಿದ್ದು – ವಿಮಾನವೇರಿ ಮೆರೆವ, ಕಂದರ್ಪ ಕೇಳಿಯುಳ್ಳಹ,[167] ಧರ್ಮಮಾರ್ಗ ತಪ್ಪದ, ಅಧರ್ಮ ತೊಲಗಿಪ್ಪ ಸ್ವಭಾವ ಅವರದು. ಚಿತ್ರದ ಗೊಂಬೆಗಳಂತೆ ಅನ್ಯ ಸ್ತ್ರೀಯರಲಿ ಚಿತ್ತವೆರಗದು, ಸ್ವಸ್ತ್ರೀಯರಲ್ಲಿ ಅರ್ತಿಯು ಮಾಡುವರೈಸೆ. ತಾಯು ಸೊಬಗಿಗೆ ಮಕ್ಕಳು ನ್ಯಾಯ ಪಥ ಬಿಡುವರೆ, ಬಿಂದುವ ಮಗಳ ಕಂಡು ಪಿತ ಕಾಮಜ ಶರಕೊಳಗಾಗುವನೆ, ತಂಗಿಗೆ ಒಡಹುಟ್ಟಿದರ ಮನ ಮಳುಕುವುದೆ? ಕಲಿಗೊಳಗಾದವರಿಗೇ ಮಾರ್ಗವಿರೆ, ಮುಕ್ತರಿಗೆ ದ್ರೋಹ ಬಹುದೇ? (121– 124).

---

165. ಶುದ್ಧ ಸತ್ವದ ದೇಹಧರಿಸಿ ಭೋಗಿಸಿ ತ್ಯಜಿಸುವರು.

166. ಋತು ಭೇದವಿಲ್ಲದೆ ಫಲಭರಿತವಾದ ವೃಕ್ಷ ವರ್ಣನೆ ಭಾಗವತ ಮಧ್ವವಿಜಯ ಗಳಲ್ಲೂ ಉಂಟು.

167. ವಿರಹ ಶ್ರಮರಹಿತ ದಿವ್ಯ ರತಿ ಜ್ಞಾನಾನಂದ ಸ್ವರೂಪ ದೇಹಗಳಲ್ಲಿ ಸಾರಭ ಯುತ (ಮಧ್ವ ವಿಜಯ); ಇಚ್ಛೈಕ್ಯದಿಂದ ತೃಪ್ತಿ– ಸ್ಖಲನಾದಿಗಳಿಲ್ಲ (ವಿಷ್ಣು ರಹಸ್ಯ).

(ಪದ 26) 'ಆನಂದಾನ್ಮಂದ ಮಂದಾ ದದತಿ ಹಿ ಮರುತ:' ಎಂಬ ತ್ರಿವಿಕ್ರಮ ಪಂಡಿತಾಚಾರ್ಯರ ವಾಯು ಸ್ತುತಿ ಶ್ಲೋಕವಿತ್ತು ಮುಕ್ತರ ಆನಂದ ವರ್ಣಿಸಿದ್ದು —

ಕುಂದ ಮಂದಾರ ಮಲ್ಲಿಗೆ ನಂದ್ಯಾವರ್ತರ
ವಿಂದಗಳೆಸೆವ ಸೌರಭವ
ಗಂಧವಾಹನನಲ್ಲಿ ಬೀಸುವ, ಮುಕ್ತರಾ
ನಂದಕ್ಕೆ ನಿತ್ಯ ಸುಖವೀವ (125)

ಮಂದಮಾರುತ ಬಂದು ಚಂದನ ಪೂಸಿದವರ ಶೈತ್ಯ ಸೂಚಿಸುವ.[168] ಮತ್ತ ನರ್ತನದಂತೆ, ಭೃತ್ಯನ ಕೈಲಾಗಿನಂತೆ[169] ಮುಕ್ತರ ಲೀಲೆ; ಚಿತ್ರಚರಿತ ಹರಿಯ ಲೀಲೆ. ಆ ನಿತ್ಯ ತೃಪ್ತನಂತೆ ಅವರೂ ಆಪ್ತಕಾಮರು. ಅವರ ಆಟ ಪಾಠಗಳು ದಿಟ. ಒದಗಿದ ವಿಷಯರಾಶಿ ಸೇವಿಸಿ ಆನಂದಿಸುವರು[170] (126— 129).

(ಪದ 27) ಆಹಾರಾದ್ಯುಪಭೋಗ ವರ್ಣನೆ — ಅಲ್ಲಿಪ್ಪ ಅರ ಮತ್ತು ಣ್ಯ ಎಂಬೆರಡು ಸುಧಾಸಾಗರ[171] ರಸವನಾಸ್ವಾದಿಸುವರು ಮುಕ್ತರು. ಒಮ್ಮೊಮ್ಮೆ ಅಮೃತ ಕರೆವ ಅಶ್ವತ್ಥ ಮೊಂದಕ್ಕೆ ತಂದು ಆಸ್ವಾದಿಸುವರು. ಶುದ್ಧ ಸತ್ವದ ಸ್ವಾದು ಅನ್ನದ, ಪಾಯಸಾದಿ ಭಕ್ಷ್ಯ ಭೋಜ್ಯಗಳ ಪ್ರವಾಹಗಳನೊಪ್ಪುಗೊಂಬರು. ಮಾನಿಕರೂಪ ತಟಾಕ ಫಲವೆರಸಿದ ತರುಗಳ ತೋಪುಗಳಲ್ಲೂ ರಮಿಸುವರು. ಚತುರ್ವಿಧಾನ್ನಂಗಳ[172] ಸೇವಿಪರು; ಭೃತ್ಯರು ಸುತ್ತಿಗೆವಿಡಿದು ಚಾಮರ ಬೀಸುವರು, ಮುಕ್ಕಳಿತ್ತಿಕೊಂಬ ತಾಂಬು ಉಕ್ಕುವಂತೆ ಸೇವಿಪರು; ಭಕ್ತಿಭರಿತ ಚಿತ್ತ ಉಬ್ಬಿ ಕೊಬ್ಬಿದರೆ ಸಾಖ್ಯಬದ್ಧ ತುಳುಕುವುದೈಸೆ! (130— 136).

---

168. ಮಂದಾನಿಲಾದಿಗಳು ಆನಂದಾಭಿವ್ಯಕ್ತಿಗೆ ನಿಮಿತ್ತ ಮಾತ್ರ.

169. ಹಸ್ತಲಾಘವದಂತೆ ಆನಂದಾಭಿವ್ಯಕ್ತಿ ಮಾತ್ರ; ಭೋಗದಿಂದಾನಂದವಲ್ಲ; ಆನಂದದಿಂದ ಭೋಗ.

170. ವಿಷಯ ಸುಖಗಳೇ ಸ್ವರೂಪಾನಂದರನ್ನು ಸೇವಿಸಿ ಸುಖಿಸುತ್ತವೆ; ಅವಿರದಿದ್ದರೂ ಅವರಾನಂದ ಊನವಲ್ಲ.

171. ಅರಶ್ಚ ಹ ವೈ ಣ್ಯಶ್ಚ ಅರ್ಣವೌ ಬ್ರಹ್ಮಲೋಕೇ (ಛಾಂದೋಗ್ಯ); ಅರಶ್ಚ ಣ್ಯಶ್ಚ ಸುಧಾಸಮುದ್ರೌ । ತತ್ರೈವ ಸರ್ವಾಭಿಮತಪ್ರದೌ ದ್ವೌ (ಮಧ್ವ ಭಾಷ್ಯ).

172. ಅಗಿವ ಭಕ್ಷ್ಯ, ಹಾಗೇ ಉಂಬ ಭೋಜ್ಯ, ನೆಕ್ಕುವ ಲೇಹ್ಯ, ಕುಡಿವ ಪೇಯ.

ಪಾಲುಂಬ ಸವಿಗಿಂದ ಸಕ್ಕರೆಗೂಡಿದ
ಪಾಲು ಕುಡಿವ ಸುಖ ಮೇಲು,
ಲೋಲಾಕ್ಷಿಯರ ನೋಳ್ಪ ಸುಖಕಿಂದವರಂಗದ
ಆಲಿಂಗನದ ಸುಖ ಮೇಲು (137)

ಇಂತು ಮುಕ್ತ ಮಹಂತರ ಸುಖ ಮೇಲು, ಸೇವಿಪ ಭೃತ್ಯರಸಂತೋಷ ತಾರತಮ್ಯದ ರಿಪ್ಪುದು (138).

ಸಂಧಿಯ ಮುಕ್ತಾಯದ ನುಡಿಗಳು —

ವೈಕುಂಠವೆಂದೆಂಬ ತನ್ನ ಪುರದ ಕಥೆಯ ಪ
ರಾಕವ ಬಿಟ್ಟು ಕೇಳುವರ
ಶ್ರೀಕಾಂತ ಕಾವನೆಂಬಲ್ಲಿ ಮೊದಲ ಸಂಧಿ
ಈ ಕಾವ್ಯದೊಳಗೆ ಮುಗಿಯಿತು (139)

ಶ್ರೀಧರ ಹಯವದನರಾಯನ ದಯದಿಂದ
ವಾದಿರಾಜೇಂದ್ರ ರಚಿಸಿದ
ಈ ದಿವ್ಯ ಕಾವ್ಯದಿ ಮುಕ್ತಿಯೊರೆವ ರಮ್ಯ
ವಾದ ಮೊದಲ ಸಂಧಿ ಪೊಸ ಬಗೆ[174] (140)

ಇವು ಸೂಕ್ತ ವ್ಯತ್ಯಾಸದೊಡನೆ ಮುಂದಿನ ಸಂಧಿಗಳಲ್ಲೂ ಪುನರಾವರ್ತಿತ. ಹೀಗೆ ಈ ಸಂಧಿಯಲ್ಲಿ 27 ಪದಗಳ ಆದಿಗೆ 3 ಶ್ರುತಿ, 27 ಶ್ಲೋಕಗಳನ್ನುದ್ಧರಿಸಿ ವಿವರಿಸಿದ್ದನ್ನು 140 ನುಡಿಗಳಷ್ಟಾಗಿರುವುದರಿಂದ, ವಾದಿರಾಜರು ಕೇವಲ ಕನ್ನಡಿಸಿದ್ದಾರೆನ್ನುವುದಕ್ಕಿಂತ, ಸಾಧಾರ ವರ್ಣಿಸಿದ್ದಾರೆನ್ನುವುದೆ ಸೂಕ್ತ. ಅದೇ ಅವರ ಸ್ವಂತಿಕೆ.

2. ಲಯ ಸಂಧಿ

(ಪದ 1) ಭಾಗವತ ಶ್ಲೋಕದಿಂದ ಹರಿ ಲಯೋದ್ಯುಕ್ತನಾದ ವಿವರಣೆ — ಜೀವರನ್ನು ದೇಹ ರೂಪದಿಂದ ಕಟ್ಟಿದ ಪ್ರಕೃತಿ ಮಾಯೆ ಎನಿಸಿ ಮೋಹಿಸುವುದು; ದೇವರೇ ನಿಜಶಕ್ತಿಯಿಂದ

---

173. ಮೋಕ್ಷವನ್ನಿತ್ತು ಕನ್ನಡದಲ್ಲಿ ಬಣ್ಣಿಸಿರದ ಕಾರಣ ಪೊಸ ಬಗೆಯೇ ಸೈ. ಪ್ರತಿ ಸಂಧಿಯಂತ್ಯಕ್ಕೂ ಬರುವ ಈ ಮಾತು ಉಳಿದ ಸಂಧಿಗೂ ಇಡಿಯ ಕೃತಿಗೂ ಅನ್ವಯವಾಗುವಂಥದು.

ಸೂತ್ರಧಾರನಾಗಿ ಎಲ್ಲ ನಡೆಸುವ.[174] ಅವನೇ ಅವತರಿಸಿ ಭೂಭಾರ ಇಳುಹಿದ (1–3).

ಭಕ್ತಜನರ ಪೊರೆದ, ದೈತ್ಯರ ಮುರಿದ ಸ
ರ್ವತ್ರ ಶ್ರುತಿಪಥವನೊರೆದ,
ಹಸ್ತೀಂದ್ರವರದ, ದುರಿತರಾಶಿಯ ತರಿದ,
ಕೀರ್ತಿಯಲಿ ಮೆರೆದಿಪ್ಪವ ಕರೆದ (4)

ಹಳೆಯಂಗಿ ಕಳೆದು ಪೊಳೆವಂಗಿ ತೊಡುವಂತೆ ಲಯದ ರೀತಿಯ ಜಗದೀಶ, ಜೀವರ್ಗೆ ಬಗೆಬಗೆಯ ಗತಿ ಕೊಡಲು ಬ್ರಹ್ಮನ 100 ವರ್ಷಗಳಾಗಲು ಲಯಕೆ ಮನವಿತ್ತ[175] (5–6).

(ಪದ 2) ಇನ್ನೊಂದು ಭಾಗವತ ಶ್ಲೋಕದಿಂದ ಲಯದ ವಿವರಣೆ — ಶ್ರೀನಾಥ 14 ಲೋಕ ಸುಡಿಸಿ, ಪಂಚಭೂತ ಸಂಹರಿಸಿ, ತ್ರಿಗುಣಗಳ ಮೂಲ ಪ್ರಕೃತಿಗೆ ಸೇರಿಸಿ, ಜೀವರನುದರದೊಳಿಟ್ಟು ಸಿರಿಗೆ ಆಲಿಂಗನವಿತ್ತ. ಮಹತ್ತತ್ವದ ದೇಹದಿಂದ[176] ಜೀವರ ಹೊತ್ತಿಹ ಬ್ರಹ್ಮ ವಿರಜೆಯ ಸ್ನಾನಕಿಳಿದ, ತತ್ತ್ವಾಧಿಪರೊಡನೆ ಹರಿಗೆ ತುತ್ತಾದ. ಹಿಂದೆ ಬ್ರಹ್ಮನ ಸೃಜಿಸಿ, ಆಗಲೆ ತಿಂದರೆ ತುತ್ತು ಕುಂದುವುದೆಂದುದಾಸೀನಗೈದ ಹರಿ, ಇಂದು ಭುಂಜಿಸಿ ತೇಗುತಿರ್ದ.[177] ಸಪ್ತದ್ವೀಪಗಳ[178] ಭುಕ್ತರಾಶಿಗೆ ಗಣನೆಯಿಲ್ಲ, ಧಾನ್ಯಗಳ ಮೊತ್ತ ಪರ್ವತದಂತಿತ್ತು. ನಾನಾ ಫಲ ಪಕ್ವಾನ್ನ ಶಾಕ ಕಂದ ಮೂಲಗಳು ಅವನ ಆನಂದಕ್ಕೊದಗಿದುವು (7–13).

(ಪದ 3) ಕಾಠಕ ವಾಕ್ಯದಿಂದ ಹರಿಯ ದಿವ್ಯಾದ್ಭುತ ಊಟದ ಭೂಮ ವರ್ಣನೆ —

---

174. ಬಂಧಕೋ ಭವಪಾಶೇನ ಮೋಚಕಶ್ಚ ಸ ಏವಹಿ (ಶ್ರುತಿ). ಅನ್ಯಥಾರೂಪ ತೊರೆದು ಸ್ವರೂಪ ಹೊಂದುವುದೇ ಮುಕ್ತಿ (ಭಾಗವತ). ಆ ಸಾಧನೆಗೆ ಈ ಸೃಷ್ಟಿ ಲಯ.

175. 1000 ಚತುರ್ಯುಗಗಳ ಬ್ರಹ್ಮನ ಹಗಲಿನಲ್ಲಿ 14 ಮನ್ವಂತರ ಪ್ರಳಯ ಭೂಮಿಗೆ, ಹಗಲು ಮುಗಿದಾಗ ದೈನಂದಿನ ಪ್ರಳಯ ಭೂಮ್ಯಂತರಿಕ್ಷಸ್ವರ್ಗಗಳಿಗೆ; ಇಂಥ 1000 ವರ್ಷಗಳಾದಾಗ ಪ್ರಾಕೃತಿಕ ಮಹಾಪ್ರಳಯ — ಲಿಂಗದೇಹ ಭಂಗವಾಗುವುದರಿಂದ ಅದೇ ಆತ್ಯಂತಿಕ ಪ್ರಳಯ.

176. ಪಂಚಭೂತ, ಪಂಚತನ್ಮಾತ್ರ, ಪಂಚ ಕರ್ಮೇಂದ್ರಿಯ, ಪಂಚ ಜ್ಞಾನೇಂದ್ರಿಯ, ಮನ, ಅಹಂಕಾರ, ಮಹತ, ಅವ್ಯಕ್ತ, ಪರತತ್ವ ಸೇರಿ 25ರ ಪ್ರಪಂಚವಾಗಿರೆ. ಅವೆಲ್ಲ ತಮ್ಮ ಕಾರಣ ತತ್ವದಲ್ಲಿ ಸೇರುತ್ತ, ಮಹತ ತತ್ವವಾದ ಬ್ರಹ್ಮದೇಹ, ಅವ್ಯಕ್ತ ತತ್ವವಾದ ಶ್ರೀ ದೇಹ ದ್ವಾರಾ ಹರಿಯ ಹೊಟ್ಟೆ ಹೊಗುತ್ತವೆ.

177. ಬೃಹದಾರಣ್ಯಕದ ಅಶ್ವಮೇಧ ಬ್ರಾಹ್ಮಣಸ್ಥ 'ಸ ಐಕ್ಷತ' ಇತ್ಯಾದಿ ಭಾಗದನುವಾದ. ಜೀವರ ಗತಿ ಸಾಧಿಸಿ ಲಯಗೊಳಿಸುವ ಸತ್ಯ ಸಂಕಲ್ಪವಿದು.

178. ಜಂಬೂ, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪುಷ್ಕರ;

ಮೃತ್ಯುವೆ ತುಪ್ಪ, ಒಡಲುಗಳೆ ತುತ್ತಾದುವು. ಮಧುಕೈಟಭಾದಿಗಳ ಮೆಯ್ಯ ಮೇದ ಸ್ವಾದು ಮಾಂಸವಾಯಿತು. ಏಳು ಕೋಟಿ ಯೋಜನ ಬೆಳೆದವಗೆ[179] ಇಳೆಯು ಅಮಿಷವಾಯಿತು; ದೇವ ದಾನವ ಗಂಧರ್ವ ವಿಪ್ರ ಕ್ಷತ್ರಿಯಾದಿ ಜೀವರ ಲಿಂಗಭಂಗವಾಗಿ ಪಾವನವಾದ ದಿವ್ಯ ದೇಹಗಳೆ ಭವ್ಯಾಮಿಷವೆನಿಸಿತು (14–17).

(ಪದ 4) ಸಪ್ತಸಾಗರದ ಜಲಚರಗಳಿಗೆ ಲೆಕ್ಕವಿಲ್ಲ. ವನದ ಪ್ರಾಣಿಗಳ ಸಂಖ್ಯೆ ಅಗಣಿತ. ತನ್ನ ಭೋಜನ ದ್ರವ್ಯಗಳನ್ನು ಶ್ರೀದೇವಿ ಸ್ವಯಂಪಾಕಿಯಾಗಿ ಎದೆಯ ಪ್ರೇಮಜ್ವಾಲೆಯಲ್ಲಿ ಹೈಮಾಂಡ ಭಾಂಡದೊಳಿಟ್ಟು ಪಾಕ ಮಾಡೆ, ಆದಿ ಪುರುಷ ಭುವನ ವ್ಯಾಪ್ತ ದೇಹದ ಬಾಯ್ತೆರೆದು ಭುಂಜಿಸಿದ, ಪವನ ಅಯ್ಯನುಂಬ ಸಂಭ್ರಮಕೆ ಮೈ ಬೆವರದಂತೆ ಅಡಿಗಡಿಗೆ ಬೀಸೆ! ಅರ್ಣವ ಜಲವನಾಚಮನ ಮಾಡಿ, ಇವು ಜೀರ್ಣಮಪ್ಪಂತೆ ಸ್ವರ್ಣದಜಾಂಡವನೆ ಭಸ್ಮ ಮಾಡಿ ಸೇವಿಸಿದ! ಕುದಿವ ಬ್ರಹ್ಮಾಂಡಾವರಣದ ಬಾಹ್ಯೋದಕ ಕಷಾಯ ಕೊಂಡು ತೇಗುತ, ಪದುಮೆಯೊಡನೆ ಪವಡಿಸಲೆಳಸಿದ![180] (18–23).

(ಪದ 5) ಒಂದೊಂದು ನಿಮಿಷದಿ ಅಂಡದಲುಂಡು ತೇಗಿ ಎಂದೆಂದು[181] ನಂದಿಪ ಮುಕುಂದನೆತ್ತ, ಒಂದಿಷ್ಟಧಿಕವಾದರೆ ನೊಂದು ತಲೆ ಸುತ್ತಿ ದಂದುಗ ಬಡುವ ಜೀವರೆತ್ತ? ಒಂದೊಂದು ಗುಣಕೆ ಲೆಕ್ಕವಿಲ್ಲೆಂಬ ಮಹಿಮೆ ಚಂದವಾಯಿತು ಇಂದಿರೆಯರಸನಲ್ಲಿ. ತ್ರಿಕಾಲದಿ ಸೃಷ್ಟಿಪ ಒಂದೇ ಗುಣ ಅನಂತವಲ್ಲವೇ? ರಕ್ಷಕತ್ವ – ಶಿಕ್ಷಕತ್ವ – ಮೋಕ್ಷದಾತೃತ್ವಾದಿ ಗುಣಗಳು ಅನಂತ (24–26).

---

179. ವಟಪತ್ರಶಾಯಿ 7 ಕೋಟಿ ಯೋಜನಮಿತ ಬಾಲಕ.

180. ಸುಖ ಪಡೆಯಲಿಲ್ಲ, ಕೊಡಲು. 19–23 ನುಡಿಗಳು 'ಭೂಗೋಳ ವಿವರಣ'ದ 355–358ರ ಶ್ಲೋಕ ಕನ್ನಡಿಸಿದಂತಿದೆ.

181. ಒಮ್ಮೆ ಉಂಡು ಮಲಗಿದವ ಸದಾತೃಪ್ತನಾದ ಅನಂತ ಗುಣ.

(ಪದ 6) ಸ್ವರಮಣನು ರಮೆಯ ರಮಿಸಿ ನುಡಿಸಿದ್ದು —

ಏನೇ ಹರಿಣಾಕ್ಷಿ, ಮೋಹನೆ, ಗಜಗಮನೆ,
ಧ್ಯಾನಮಾತ್ರಕೆ ನಿನಗೊಂದ,
ಶ್ರೀನಾಥ ಸತಿಯ ಮೊಗ ನೋಡಿ ನಸುನಕ್ಕು,
ನಾನಾ ಪರಿಯಲ್ಲಿ ನುಡಿಸಿದ (27)[182]

(ಪದ 7) ಹರಿಯ ಏಕಾಂತಕೇಲಿಯೂ ಕಾವ್ಯಮಯ, ಶಾಸ್ತ್ರಯುಕ್ತ —

ಒಪ್ಪುವಂಗಗಳೊಳು ತೋರ್ಪ ಸುರರ ಹಿಂಡು
ತಪಿಸಿ ರಮೆ ಎಂತಪ್ಪುವಳು?
ಕಪ್ಪುರದ ಕರಡಿಗೆಯಂತಿಪ್ಪ ಬಾಯೊಳು ತ
ನ್ನಪ್ಪ[183]ನಿರಲೆಂತು ಚುಂಬಿಪಳು? (28)

ಅದರಿಂದ ತನ್ನ ಮೈಯೊಳಗಿಪ್ಪ ದೇವರ
ಉದರದಿ ಕೃಷ್ಣ ಬಚ್ಚಿಡಲು,
ಉದಧಿಕನ್ನಿಕೆ ತನ್ನ ರತಿಗೆ ಮನವಾದ ನೇ
ಹದ ಬಗೆಗೆ ಉಬ್ಬಿದಳು (29)

ಬ್ರಹ್ಮ ಮುಕ್ತಿಯೋಗ್ಯರೊಡನೆ ಲಿಂಗದೇಹ ಮುಕ್ತನಾಗಿ ಹರಿಯುದರ ಹೊಕ್ಕ; ಶ್ವೇತದ್ವೀಪಾದಿಗಳ ಮಿಂಚುವ ದೇಹದ[184] ಪೂರ್ವಮುಕ್ತರೂ ಅಲ್ಲಿ ಹೊಕ್ಕರು. ಸತಿಯರೊಡ[185]ನಾಡುವ ಉಲ್ಲಾಸ ಕಾಣದಂತೆ ಹರಿ ಎಲ್ಲರ ನಿದ್ರೆಗೊಳಿಸಿದ[186] (30–32).

---

182. ಈ ನುಡಿ ಉಡುಪಿ ಪ್ರತಿಯಲ್ಲಿದೆ, ಬೆಂಗಳೂರ ಪ್ರತಿಯಲ್ಲಿಲ್ಲ.

183. ತಂದೆಯಾದ ವರುಣ.

184. ಕೆಲ ಮುಕ್ತರು ಪದ್ಮರಾಗದಂತೆ ಅರುಣ, ಕೆಲರು ಮುತ್ತಿನಂತೆ ಶುಭ್ರ, ಕೆಲರು ಇಂದ್ರನೀಲವರ್ಣ (ಮಧ್ವವಿಜಯ, 11).

185. ಲಕ್ಷ್ಮಿ ವಿವಿಧ ರೂಪಳಾಗಿ ಕ್ರೀಡಿಸುವುದರಿಂದ ಬಹುವಚನ.

186. ಪ್ರಣಯಕ್ಕೆ ಏಕಾಂತ ಅವಶ್ಯವೆಂಬ ನೀತಿ ಧ್ವನಿತ; ಅಮುಕ್ತರಿಗೆ ನಿದ್ರೆ, ಮುಕ್ತರಿಗೆ ಧ್ಯಾನ.

ಇಂತು ಮುಕ್ತಾಮುಕ್ತ ಜೀವರ ತಿಂಥಿಣಿಯು
ನಾಂತ ಶ್ರೀಕಾಂತ ಪವಡಿಸಿ
ಕಾಂತೆಯರೊಡನೆ ಸಂತೋಷಪಡಲಿಹ ಕಥೆ
ಸಂತತ ನಮ್ಮ ಸಲಹಲಿ (33)

(ಪದ 8) ಲಕ್ಷ್ಮಿಯೇ ಹರಿಲೋಕರೂಪಿಯಾಗಿ ಅವು ಅಚೇತನವಾದರೂ ನಿತ್ಯವೆಂಬ ಶ್ಲೋಕಕ್ಕೆ ಶ್ರೀದೇವಿ ತ್ರಿಧಾಮ ನಾಯಕಿಯಾಗಿ ಆದ್ಯಂತವಿಲ್ಲದ ಬೋಧಸುಖರೂಪ[187]ಳಾಗಿಹಳು; ಅದರಿಂದ ಹರಿಲೋಕಗಳಿಗೆ ಲಯದ ಕೇಡಿಲ್ಲ. ಮೊದಲ ಉದಕ ಪೋದ ಕಾರಣ[188] ಲಕುಮಿ ಉದಧಿಯಾದಳಚ್ಯುತಗೆ (34– 35).

(ಪದ 9)[189], ಪ್ರಳಯದಲ್ಲಿ ಲಕ್ಷ್ಮಿಯೇ ಸಲಿಲ ಭೂಷಾ ಆಯುಧವಾಗಿರುವ 3 ಶ್ಲೋಕ ಒಂದೇ ನುಡಿಯಿಂದ ಕನ್ನಡಿಸಿದ್ದು – 23 ತತ್ವ ಲಯವಾದ ದೇಶ ಕಾಲದಲ್ಲಿ ಭರ್ತೃಗೆ ರಮೆಯೇ ಭೂಷಾಯುಧಲಿಂಗ ವಸ್ತ್ರಮಾತೆಗಳಾಗಿಹಳು (36). ಮಿಕ್ಕ ಶ್ರೀಸೇವೆ –

ಅಂಬುಧಿಯಾದಳ್ ಆಗ ಮಹಾಲಕುಮಿ,
ಅಂಬರಾಭರಣವಾಗಿಹಳು,
ಪೊಂಬಣ್ಣದಾಲದೆಲೆಯು ತಾನಾದಳೇ
ನಂಬೆನವಳ ಸಾಹಸವನು (37)

ಮಂದಾರ ಕುಸುಮದ ಮಾಲೆ ತಾನಾದಳು,
ಗಂಧ ಪರಿಮಳವಾಗಿಹಳು,
ಮಂದ ಮಾರುತನಂತೆ ಸುತ್ತಲೂ ಸುಳಿವಳು
ಇಂದಿರೆಯಿರವನೇನೆಂಬೆ (38)

---

187. ಜ್ಞಾನಾನಂದರೂಪಿಣಿ.

188. ಮುಖಾಗ್ನಿಗೆ ನೀರು ಆರಿದ್ದರಿಂದ.

189. ಈ ಪದದ ಆದಿಶ್ಲೋಕ, 5 ನುಡಿ, ಮುಂದಿನ ಪದದ ಆದಿಶ್ಲೋಕ ಬಿಟ್ಟು ಹೋಗಿವೆ ಬೆಂಗಳೂರ ಪ್ರತಿಯಲ್ಲಿ.

190. ಪ್ರೇಮವೇಗ ಸೂಚಕ, ಅಪ್ರಾಕೃತ ದೇಹಕ್ಕೆ ಗಾಯ

ಮುಖವೆಂಬ ಚಂದ್ರಮನ ಸೊಬಗ ಬೀರುವಳಾಗ,
ಸುಖವದನದಿ ಶುಕೋಕ್ತಿಗಳ
ಪಿಕನಂತೆ ಹಾಡುವಳು, ಪ್ರಾಣನಾಯಕನಿಗೆ
ಸಕಲ ಸಂಭ್ರಮ ತೋರುವಳು (39)

ತುಂಬಿ ಸುಳಿವಂತೆ ಕಂಗಳ ನೋಟದಿಂ
ದಂಬುಜಾಕ್ಷನಿಗರ್ಪಿಯುತ್ತ,
ಬಿಂಬಾಧರದೊಳಿಪ್ಪ ಸುಧೆಯ ರಸ ಅವನಿಗೆ
ಚುಂಬಿಸಿ ನೀಡಿದಳಾ ಬಾಲೆ (40)

(ಪದ 10) ವಟಪತ್ರಶಾಯಿಯ ಚಿತ್ರದ ಶ್ಲೋಕ ಅನುವಾದಿಸಿ ಹೇಳಿದ್ದು — ಶ್ರೀ ಭೂದುರ್ಗೆಯರ ಲಾಲಿಸುತ ಲಯೋದಕದ ಆಲದೆಲೆಯ ಮೇಲೆ ಉಯ್ಯಾಲೆಯಾಡಿದ ಹರಿ. ತ್ರಿರೂಪಧಾರಿ ಲಕ್ಷ್ಮಿ ಇಮ್ಮೈಗಳಿಂದ ಪತಿಯಪ್ಪಲು ಸುಖ ಅರ್ಪಿಯ ನೆನೆಂಬೆ! (41— 42)

ಅವಳಪ್ಪಿಕೊಂಬಾಗ ಹರಿಯ ವಕ್ಷದ ಗಂಧ
ಇವಳುರದಲ್ಲಿ ತೋರುತಿಹುದು,
ಇವಳ ಚುಂಬಿಸುವಾಗ ಪತಿಯ ದಂತದ ಗಾಯ[190]
ಅವಳಧರದಲೊಪ್ಪುತಿಹುದು (43)

ಹರಿಯುದರದಲ್ಲಿ ಅವ್ಯಕ್ತ— ಸೃಜ್ಯ ಜೀವರು ನಿದ್ರಿಸುವಾಗ ಮುಖ್ಯಪ್ರಾಣ ಸ್ವಚ್ಛಧ್ಯಾನ ಚಿತ್ತದ ಮುಕ್ತರೊಡನೆ ಎಚ್ಚತ್ತಿಹನು[191] (ಪ್ರಳಯೇಪಿ ಅವಿಲುಪ್ತ ಬಾಹ್ಯಜ್ಞ ವಾಯುರ್ವಾವ ನಿತ್ಯ: — ಶ್ರುತಿ). ಇವನೇ ನಿದ್ರಿತ ದೇಹಿಗಳ ಶ್ವಾಸ ನಡೆಸುವ[192] (44— 46).

(ಪದ 11) ಲಯದ 8ನೆಯ ಕಾಲಭಾಗದಲ್ಲಿ ಲಕ್ಷ್ಮೀ ಪ್ರಾರ್ಥನೆಯಿಂದ ಸೃಷ್ಟಿ ಎಂಬ ಶ್ಲೋಕಾನುವಾದ — ಬ್ರಹ್ಮನ 100 ವರ್ಷ ಲಯ ಕಾಲದ ಎಂಭತ್ತೇಳ್ವರೆ ಅಬ್ದ ಆದ ಮೇಲೆ ನಮ್ಮ ದುರ್ಗಮ್ಮಗೆಚ್ಚರಿಗೆ (47).

---

190. ಪ್ರೇಮವೇಗ ಸೂಚಕ, ಅಪ್ರಾಕೃತ ದೇಹಕ್ಕೆ ಗಾಯವಿಲ್ಲ.

191. ಹರಿಯ ಕ್ರೀಡಾ ವ್ಯಾಪಾರ ಮಾತ್ರ ಅರಿಯದು.

192. ಸ್ವರೂಪ ದೇಹವನಾವರಿಸಿದ ಲಿಂಗದೇಹವುಳ್ಳ ಅವ್ಯಕ್ತ— ಸೃಜ್ಯರ ಶ್ವಾಸನಿಯಾಮಕ (ಮುಕ್ತರೊಳಲ್ಲ).

(ಪದ 12) ವೇದಾಭಿಮಾನಿ ಲಕ್ಷ್ಮಿಯು ವೇದಸ್ತುತಿಗೆ ಹರಿ ಏಳುವನೆಂಬ ಭಾಗವತದ 3 ಶ್ರುತಿಗೀತೆಯ ಶ್ಲೋಕಾನುವಾದ — ನಾಶವಿಲ್ಲದ ಪ್ರಕೃತಿ ನಾನು ನಿನ್ನಿಂದಲೆ ಕಾಣಲಾಗಿ ಅದಕೆ ಇನ್ನೊಬ್ಬರಿದಿರೇ? ಜೀವರ ಕಣ್ಗೆ ನಿನ್ನ ಮುಚ್ಚುವ ಪರಮಾಚ್ಛಾದಿಕಾ[193] ಮಾಯಾ ಪ್ರಕೃತಿಯನ್ನು ಕೊಲ್ಲದೆ ತೋರಿಸು. (ಜೀವರ ಸ್ವರೂಪಾಚ್ಛಾದಿಕಾ ಮಾಯಾ ಪ್ರಕೃತಿಗೆ ಅವರ ಸ್ವಭಾವ ಸಾಕೆಂದು ಲಕ್ಷ್ಮಿ ಜಗದ್ರೂಪ ಪ್ರಕೃತಿ ಮಾತ್ರವಾಗಿಹಳು). ನಿನ್ನಿಚ್ಛೆ ಅರಿಯದೆಚ್ಚರಿಸುತ್ತಿರುವೆ, ನಿನ್ನ ಮುಚ್ಚುವ ಮಾಯೆಯ ತೋರಿಸು, ಜೀವರ ಮುಚ್ಚಿದ ಮಾಯೆಯ ಕೊಲ್ಲು. ಜೀವರ ಕಂಗಳೆರಡು ಮಾಯೆ ಇದ್ದರೂ, ನೀನು ಮಾಯಾದೂರೆ,[194] ಶ್ರೀವಲ್ಲಭ ಅಪೂರ್ವ ಶಕ್ತಿಪ್ರೇರಕ — ಎಂದು ಭಾವೆ ಕೊಂಡಾಡಿದಳು. ಪಾದ ಒತ್ತುತ ವೇದಂಗಳ ಪಾಡುತಿರಲು, ಕೇಳಿ ಹಯವದನ ಯೋಗನಿದ್ರೆಯಿಂದ ಕಣ್ತೆರೆದ (48—53).

ಇಂತು ಶ್ರೀಕಾಂತನೆಚ್ಚತ್ತನೆಂಬಲ್ಲಿ ಮುಗಿದ 2ನೆಯ ಲಯಸಂಧಿಯೂ ಹೊಸ ಬಗೆಯದು (54—55). ಕಿರಿದಾದರೂ 1 ಶ್ರುತಿ, 11 ಶ್ಲೋಕಗಳ ಆಧಾರದಿಂದ 55 ನುಡಿಗಳಷ್ಟಾಗಿದೆ. ಪ್ರಳಯಕಾಲ ವರ್ಣನದಲ್ಲೂ ರಮಾರಮಣನ ಭೂಮದೂಟ, ಪ್ರಣಯ ಲೀಲೆಗಳನ್ನು ಕಾವ್ಯಮಯವಾಗಿಸಿದ ವಾದಿರಾಜರ ಕಲ್ಪನಾ ಸಾಮರ್ಥ್ಯ, ತನ್ಮೂಲಕ ಶಾಸ್ತ್ರದ ತತ್ವಗಳನ್ನು ಜನಸಾಮಾನ್ಯರಿಗೆ ಮುಟ್ಟಿಸುವ ನಿರೂಪಣಾ ಕೌಶಲ ಮೆಚ್ಚುವಂಥವು.

3) <u>ಸೃಷ್ಟಿ ಸಂಧಿ</u>

(ಪದ 1) 'ಆಸೀದೇಕೋ' ಶ್ಲೋಕಾನುವಾದ — ನಾರಾಯಣನೊಬ್ಬನೆ ಲಯದಲ್ಲಿಪ್ಪ, ಬ್ರಹ್ಮರುದ್ರಾದಿಗಳೂ ಋಷಿಗಳೂ ಇರಲಿಲ್ಲ. 'ಏಕೋ ನಾರಾಯಣ ಆಸೀದ್'. ಈ ಶ್ರುತಿಯೂ ಇದೇ ಅರ್ಥ ನಿರ್ಣಯಿಸಿದೆ[195] (1—2).

---

193. ಹರಿಯನ್ನು ಮರೆಯಿಸುವ ಮಾಯಾಪ್ರಕೃತಿ ದೂರಗೊಳಿಸಿ, ಜೀವ ಸ್ವರೂಪ ಮರೆಯಿಸಿದ ಮಾಯೆ ನಾಶಗೊಳಿಸಿದಾಗ ಮುಕ್ತಿ.

194. ಯಾವ ಬಗೆಯ ಮಾಯೆಯೂ ಹರಿಗೆ ಬಂಧಕವಲ್ಲ.

195. ವಾಸುದೇವೋ ಇದಮಗ್ರ ಆಸೀತ್, ನೈವ ಕಿಂಚ ನಾಗ್ರಮಾಸೀತ್ (ಬೃಹದಾರಣ್ಯಕ). ಹರಿಯೊಡನೆ ಪ್ರತಿಬಿಂಬವಾಗಿದ್ದಳು ಶ್ರೀ, ಆ ನಿತ್ಯ ವಸ್ತುಗಳಿಗೆ ನಾಶವಿಲ್ಲ ಸ್ವರೂಪತಃ; ವಿಕೃತಿ ಅವ್ಯಕ್ತವಾಗಿದ್ದುವು. (ನೋ. ಲಕ್ಷ್ಮೀ ಶೋಭಾನೆ 31).

(ಪದ 2) ಯೋಗನಿದ್ರೆಯಲ್ಲೂ ಶ್ರೀಸಹಿತ ಹರಿ ಎನ್ನುವ ಶ್ಲೋಕಾನುವಾದ — ಲಯದಿ ಲಕ್ಷ್ಮಿಯೊಡನೆ ಆಲದೆಲೆಯಲಿ ಸುಖವಾಗಿ ಮಲಗಿಹ, ಪ್ರಕೃತಿ ಪುರುಷರ್ಗೆ ಅಳಿವಿಲ್ಲ. 'ಸಮನಾ[196] ಚ' ಎಂಬ ಬ್ರಹ್ಮಸೂತ್ರ ಅವರಿಗೆ ಸಮದೇಶ ಕಾಲಗಳಲ್ಲಿರವು ಹೇಳಿತು. ಲಯದಿ ಸುಪ್ತನಿಪ್ಪ ದೇವಗೆ ಮೃತ್ಯುವಿಲ್ಲ, ಜನ್ಮ ಸಲ್ಲ, ಪ್ರಾಗಭಾವ[197]ವಿಲ್ಲ. ಇಂಥ ದೇಹ ಮೃಣ್ಮಯವೇ? ದೇವಾಗ್ರಣಿ ಬೊಮ್ಮನೇ ಹರಿಯ ಹಮ್ಮಗ.[198] ದನುಜರುಬ್ಬೆಗೆ ಹರಿಯನಾಶ್ರಯಿಸಿದವರನು ಹರಿಗೆಣೆ ಎಂಬವರು ಅವಿವೇಕಿಗಳು. 'ವೈರಿಂಚ ಲಯೇ ಮುಚ್ಯತೇ ಸರ್ವ' ಎಂದು ಶ್ರುತಿಯಿರಲು ಇದೇ ಮಹಾಪ್ರಳಯ,[199] ಬೇರೆ ಲಯವಿಲ್ಲ. ಹರಿಯ ಗುಣಗಳಿಗೆ ಲಯವಿಲ್ಲ, ಅತ ನಿರ್ಗುಣ—ನಿರಾಕಾರನಲ್ಲ.[200] ಬ್ರಹ್ಮ ಒಂದೇ ಎಂದರೆ ಐಕ್ಯವೆಂತಪ್ಪುದು? 'ಏಕಕ್ಕೇ ಐಕ್ಯವಲ್ಲ, ಎರಡಿರಬೇಕು ಐಕ್ಯಕೂ, (ವ್ಯಾಕರಣದಂತೆ).[201] ಧಾರಕತ್ವದಿಂದ ಧರ್ಮ ಎನಿಪ ಬ್ರಹ್ಮ, ಆವ ಧರಿಸಿ ಭರಿಸುವ ಜೀವರೊಡನೈಕ್ಯ ಯುಕ್ತಿ ವಿರೋಧ.[202] 'ಏಕಮೇವಾದ್ವಿತೀಯಂ' ಶ್ರುತಿಯೇ ಐಕ್ಯ ಖಂಡಿಸಿದೆ.[203] ಐಕ್ಯ ಶ್ರುತಿ ಎಂಬ ಭುಜಗಿ[204] ತನಗೆ ನಿಲುಕುವ ಇಷ್ಟಾರ್ಥ ಮೂಷಕ ಬಿಟ್ಟು ಇತರೆಡೆ ಪೋಗದು, ಆ ಅರ್ಥಮೂಷಕದಿಂದ ಉದರ ಪೂರೈಸದೆ ಇತರತ್ರ ತಿರುಗದು; ಲೋಕ ಬಿಲ್ಲಿಂದಾಗ ತದಂತರ್ಗತನ ವಾಕು ತಾನೇ ಪೋಗದಿಹುದೆ? ತಾ ಕೆಡುವರ್ಥವ ತಾನಕಟ

---

196. ಲಕ್ಷ್ಮಿ ಸಂಸಾರದ ಉಪಕ್ರಮವಿಲ್ಲದವಳು, ಹರಿಯನುಪಾಸಿಸದಿದ್ದರೂ ನಿತ್ಯ ಮುಕ್ತಳು. ದೇಶ ಕಾಲದಿಂದ ಸಮಳಾದರೂ ಹರಿಗೆ ಅನಂತ ಗುಣನ್ಯೂನಳಾಗಿ ಅಸಮಾ.

197. ಹುಟ್ಟುವ ಮುನ್ನ ಇಲ್ಲದಿರುವುದು. (ನಾಶದ ನಂತರ ಇಲ್ಲವಾಗುವುದು ಪ್ರಧ್ವಂಸಾಭಾವ, ಸದಾ ಇಲ್ಲದಿರುವುದು ಅತ್ಯಂತಾಭಾವ— ಮೊಲದ ಕೊಂಬು).

198. ದೇವತೆಗಳಲ್ಲಿ ಮೊದಲು ಹುಟ್ಟಿದವ. (ಲಕ್ಷ್ಮೀಶೋಭಾನೆ 26, ಸ್ವಪ್ನಪದ 21ರಲ್ಲೂ ಇದೇ ಪ್ರಯೋಗ).

199. ಎಲ್ಲ ನಿಶ್ಚೇಷ್ಟವಾಗುವಲ್ಲಿ ಮನುಷ್ಯರು ಮುಕ್ತಿಗಣಿಯಾಗಬೇಕು; ದೇವತೆಗಳಿಗೆ ಕಲ್ಪಾಂತರ ಸಾಧನೆ.

200. ಸೃಷ್ಟ್ಯಾದಿ ಸ್ವತಂತ್ರ ನಿತ್ಯಗುಣ, ಶ್ರೀಭುಜಗಳಲ್ಲಿ ರಮಿಸುವಾತ ನಿರ್ಗುಣ ನಿರಾಕಾರನೇ?

201. ತತ್ವವಾದದ ಭೇದವೇ ಒಪ್ಪುವುದು — ಮುಕ್ತರೂ ಬ್ರಹ್ಮನಲ್ಲಿ ಸ್ವರೂಪೈಕ್ಯ ಹೊಂದದೆ ಅಮುಕ್ತರಿಗೆ ಅದೃಶ್ಯರೆನಿಸುವರು ನಕ್ಷತ್ರಗಳಂತೆ (ನಾರಾಯಣ ಶ್ರುತಿ).

202. ಧಾರಕನೆನ್ನಲು ಭೇದ ಆಗತ್ಯ, ಧಾರಕ ಧಾರ್ಯ ಅಭೇದ ಯುಕ್ತಿ ವಿರೋಧ.

203. ಛಾಂದೋಗ್ಯ 8,2. ಉದ್ದಾಲಕ ಶ್ವೇತಕೇತುವಿಗೆಂದ — ಲಯದಲ್ಲಿ ಸತ ಒಂದೇ ಅದ್ವಿತೀಯವಾಗಿತ್ತು. (ಅಸತ ಇದ್ದು ಸತ ಹುಟ್ಟಿತೆಂದರೆ ವಿರೋಧ). ಆ ಬ್ರಹ್ಮವೇ ನಾನು ಬ್ರಹ್ಮ ಎಂದಿತು (ಆತ್ಮಾನ ಮೇವಹಂಬ್ರಹ್ಮಾಸ್ಮೀತಿ ಅವೇತ್).

204. ಶ್ರುತಿ ವಾಕ್ಯ ಬೇರ್ಪಡಿಸಿ ದುರ್ಬಲ ಅಭೇದಾರ್ಥ ಹೇಳುವುದರಿಂದ ಸ್ತ್ರೀಲಿಂಗ ಪ್ರಯೋಗಿಸಿದ್ದಾರೆ, ರೂಪಕ ಮಾಡಿ.

ಕೇಳ್ವರೇ? ಶ್ರುತಿಗಳ ಕಾಕು ಮಾಡದಿರು.[205] ಶ್ರುತಿಯ ಅರ್ಥ ಕೆಡಿಸುವ ಪಾತಕವನ್ನು ಹೇತುವಾದ[206] ಎಂಬರು. ಬ್ರಹ್ಮನೂ ಚೇತನ ಮಾತ್ರ[207] ಎಂಬ ಅಜ್ಞಾನ ಸಲ್ಲ, ಅವನ ಸೃಷ್ಟ್ಯಾದಿ ಕರ್ತೃತ್ವ ಸುಳ್ಳಲ್ಲ. ಜೀವನು ಅನಾದಿ ಮಾಯಾನುವೃತನಾದರೆ ಪರಬ್ರಹ್ಮ ನಿದ್ರೆಯಿಲ್ಲದವನೆಂದಿದೆ ಶ್ರುತಿ.[208] ನಿತ್ಯ ಅಮೃತ, ಸಂಸೃತಿರಹಿತ, ನಿತ್ಯಮುಕ್ತ ಶ್ರೀಪತಿ; ಮಧ್ಯಮುಕ್ತ[209] ಜೀವರಿಗೂ ನಿತ್ಯಮುಕ್ತ[210] ಹರಿಗೂ ವಿರುದ್ಧ ಧರ್ಮವಾಗಿ ಅಲ್ಲಿಯೂ ಐಕ್ಯ ಸಲ್ಲ; ಕಿವಿಯಿಲ್ಲದ ಹನ್ನಗ — ಕಿವಿ ಹೋದ ಮಾನವರಿಗೆ ಮಹದಂತರವಿಲ್ಲವೆ? ಸಾಯುಜ್ಯ[211]ದಲ್ಲೂ ಜೀವರು ಹರಿಯಂಗ ಸಂಬಂಧ ಪಡೆದು (ಜೊತೆಗೆ) ಇರುವರಾಗಿ ಐಕ್ಯವಿಲ್ಲ. ಸರ್ವೇಶನೆತ್ತ, ಆ ಹರಿಯ ಅನುಚರರೆತ್ತ? (3—21).

(ಪದ 3) ಜೀವರಿಗೆ ಸುಖ ದುಃಖ ಮಧ್ಯ[212]ಗತಿ ಕೊಡಲು ಸೃಷ್ಟಿ ಎಂದು ಹರಿ ಸಂಕಲ್ಪ ಹೇಳಿದ ಭಾರತ ತಾತ್ಪರ್ಯ ನಿರ್ಣಯದ ನುಡಿಗಳ ನೆರವಿನಿಂದ ಸೃಷ್ಟಿಯ ಉಪಕ್ರಮ ವಿವರಿಸಿದ್ದು — ಮತ್ತೊಂದು ಜೀವರಾಶಿಗೆ ಗತಿ ಈವೆನೆಂದು ಪುನಃ ಸೃಷ್ಟಿಸಿದ. ತನಗಿದು ಲೀಲೆ, ಶ್ರೀಗೆ ಮಹೇಶ್ವರ್ಯದಾಸ್ಪದ,[213] ಜೀವರಿಗೆ ತ್ರಿವಿಧ ಫಲದೀವುದು. ತ್ರಿಗುಣ

---

205. ಉಡುಪಿ ಪ್ರತಿಯಲ್ಲಿ ಈ 13ನೆಯ ನುಡಿಗೆ ನಡುವಿನ ಸಾಲುಗಳಿಲ್ಲ. ಜಗನ್ಮಿಥ್ಯ ಎಂಬವರೂ ಅವರ ನುಡಿಯೂ ಮಿಥ್ಯವಾಗಿ ಜಗತ್ಸತ್ಯತ್ವ ಸಿದ್ಧಿಸುವ ಯುಕ್ತಿ ಚಾತುರ್ಯವಿಲ್ಲದೆ.

206. ಸತ್ಯಶ್ರುತಿಗಳಿದ್ದರೂ ಅನುಮಾನದ ದಾರಿ ಹಿಡಿದ ವೈಶೇಷಿಕ ನೈಯಾಯಿಕರಂತೆ ಆಗಮ ಒಪ್ಪಿ ಬ್ರಹ್ಮವಾಚಕವಲ್ಲೆಂಬ ಅದ್ವೈತಿಗಳೂ ಹೇತುವಾದಿಗಳು.

207. 'ಏಕೋದೇವ: ... ಸಾಕ್ಷೀಚೇತಾ' ಎಂಬುದಕ್ಕೆ ಜೀವ ಬ್ರಹ್ಮೈಕ್ಯ ಹೇಳುವವರು ಚೇತನ ಮಾತ್ರ ಎನ್ನಬಾರದು, ಅವರಲ್ಲಿ ತೀರ ವಿರುದ್ಧ ಗುಣಗಳಿರುವುದರಿಂದ.

208. ಅನಾದ್ಯ ವಿದ್ಯೆಯಿಂದ ಸಂಸಾರ ಸೇರಿದ ಜೀವ ಎಚ್ಚತ್ತಾಗ ಜನ್ಮನಿದ್ರೆ ಸ್ವಪ್ನಗಳಿರದ ಅಪ್ರತಿಮನನ್ನರಿವ (ಮಾಂಡೂಕ್ಯ).

209. ಮುಕ್ತಾಮುಕ್ತ ದೆಸೆಗಳ ಮಧ್ಯ ಅನಿತ್ಯ ದೇಹ ಧರಿಸಿ ಹರಿಕೃಪೆಯಿಂದ ಮುಕ್ತರಾದರೂ ಹರಿವಶರಾಗಿ ಬದ್ಧರೇ.

210. ಕಣ್ಣಿಲ್ಲದೆ ನೋಡುವ, ಕೈಕಾಲುಗಳಿಂದಲೂ ನೋಡುವ, ಎಲ್ಲ ಇಂದ್ರಿಯಗಳಿಂದ ಎಲ್ಲ ವ್ಯಾಪಾರಗೈವ, ಎಲ್ಲ ನೋಡುವ ಕೇಳುವ ವ್ಯಾಪ್ತನವ ('ಸರ್ವತ: ಪಾಣಿಪಾದಂ' ಇತ್ಯಾದಿ ಗೀತೋಕ್ತಿ).

211. 1,108.

212. ಸುಖ ದುಃಖದ ಸಂಸಾರಿಗಳು ಸ್ವರ್ಗ ಮರ್ತ್ಯಗಳಲ್ಲೇ ಸುತ್ತುವರೆಯುತ್ತಾರೆ ಕೆಲವರು. ಮಧ್ವರಂತೆ ವಾದಿರಾಜರೂ ವಿಶ್ವಸ್ವರೂಪರಿಗೆ ದುಃಖ ಮಿಶ್ರ ಸುಖದ ಸಾಂತಾನಿಕ ಲೋಕ ಹೇಳಿದ್ದಾರೆ (ಭಾ.ತಾ.ನಿ.29—107, ಕನ್ನಡ ನಿರ್ಣಯ 1—161; ನೋ.4ನೆಯ ಸಂಧಿ, 9ನೆಯ ಪದ).

213. ಸೃಷ್ಟಿಸೇವೆಯ ಸಂತಸ, ಪ್ರಕೃತಿ[illegible]ರೂಪದ ಶಕ್ತಿಯ ಪ್ರಕಾಶ (ಮೂಲ ಲೋಕದ ಭೂಮಿಕೃತ =

ಪ್ರಕೃತಿಯು ಅಧಮಾನಿತ್ಯ ಶ್ರೀಗಿತ್ತು ತ್ರಿವರ್ಣದ ಕಣ ಬೇರ್ಪಡಿಸಿದ. ಶುಕ್ಲಾಣು ಸತ್ವ, ರಕ್ತಾಣು ರಜ,[214] ನೀಲಾಣು ತಮ; ಶ್ರೀ ಭೂದುರ್ಗಾ ರೂಪದ ಶಕ್ತಿ ಇವಳು. ಈ ಪರಮಾಣುಗಳ ರೂಪಗುಣದ ವ್ಯಾಪಾರಗಳನ್ನೇ ಆಯಾ ಗುಣವೆಂಬರು (ಯಾವ ದ್ರವ್ಯ ಭಾವ[215] ಗುಣಯೋಗಿ ಗುಣಗಳೆಂಬರು). ಹರಿ ಅವ್ಯಕ್ತಾದಿ ಸೂಕ್ಷ್ಮ ತತ್ವಗಳಿಗೆ ಸ್ಥೌಲ್ಯ ಬಪ್ಪಂತೆ ತ್ರಿವಿಧಾಣು ಸೇರಿಸಿ ಸೃಷ್ಟಿಸುವ; ಮಹದಾದಿ ಸೂಕ್ಷ್ಮಾಣು ತೆಗೆದು ತತ್ವಗಳ ಸಾಲ ರಚಿಸುವ: ಮಹತ್ತತ್ವದ ಸೃಷ್ಟಿಗೆ ಬೇಕಾದ ತ್ರಿಗುಣಾಂಶಗಳನಿಟ್ಟು, ಅಹಂಕಾರ ತತ್ವ ಪುಟ್ಟಿಸಲು ಕೆಲ ಭಾಗ ಬೇರೆ ಇಡುವ; ಹೀಗೆ ಕಾರಣ ತತ್ವ ಬೇರೆ ಇಡುತ್ತ ತ್ರಿಗುಣಾಂಶ ಸೇರಿಸಿ ಉತ್ತರೋತ್ತರ ತತ್ವ ಸೃಜಿಸುವ. ಮಹತ್ತತ್ವ ಮಹಿಮೆಯನೀವುದು, ಅಹಂ ತತ್ವದಿಂದಹಂಕಾರ ಬಾಹೋದು, ಬುದ್ಧಿ ತತ್ವ ನಿಶ್ಚಯಿಸಿ ಕೊಡುವುದು, ಹಂಬಲಕೆಯ ಮನಸ್ತತ್ವ. ಇದಕೆ ಕರ್ಮೇಂದ್ರಿಯ ಜ್ಞಾನೇಂದ್ರಿಯ ತನ್ಮಾತ್ರ ಭೂತಗಳೈದೈದು ಸೇರಿ 24 ತತ್ವ ಮೊದಲಿಂದ ಅವ್ಯಕ್ತದಲ್ಲಿದ್ದುವು.[216]

ಇಂದ್ರಿಯಾಕರ್ಷಣ: ಇಂದ್ರಿಯಗಳ ವಿಷಯಾಸಕ್ತಿದೋರಿ ಮನವೆಳೆಯಲು ಅವನುಂಡು ಅಹಂಕರಿಪಗೆ ಮಹತ್ವವೆ? ಸತ್ಕರ್ಮ ಮರೆದು, ಸಂಪತ್ತಿಗುನ್ಮತ್ತನಾಗಿ, ಉತ್ತಮರೊಳು ಮತ್ಸರಿಸುವವ ಭವ ಸುಖವ, ದುಃಖ ಉಂಬ (34–35).

ಅಂಗನೆಯರಾನೆಗೆ ಚರಣ ನಡೆಸುವುದು,
ಕಂಗಳವರಂಗ ತೋರುವುದು,
ಭಂಗಾರ ಕೊಡಿಸ್ಯವರ ಎಂಜಲುಣಿಸುವುದು, ಕ
ರ್ಣಂಗಳು ಸುಡಿಗೆ ಮರುಳಹವು (36)

---

214. ಸತ್ವ ತಮೋ ಮಿಶ್ರಣಾಂಶ.

215. ಮಡಕೆ ಇರುವನಕ ಜಲಧಾರಣಾದಿ ಗುಣಯುಕ್ತವಾಗಿ ಯಾವ ದ್ರವ್ಯಭಾವಧರ್ಮ, ಮಾಡಿನ ಹುಡಿ ಮಧ್ಯಕಾಲ ಮಾತ್ರವಾಗಿ ಆಯಾವದ್ರವ್ಯ ಭಾವಧರ್ಮ; ಇವು ಧರ್ಮಿಗಳಲ್ಲದಾಗ ಧರ್ಮಿ ಧರ್ಮ, ಗುಣ–ಗುಣ ಎಂಬರು.

216. ಈ ನಿತ್ಯ ತತ್ವಗಳಿಗೆ ಸ್ವರೂಪತಃ ನಾಶವಿಲ್ಲೆಂದು ವಿಜ್ಞಾನವೂ ಒಪ್ಪಿದೆ.

ದುಷ್ಟಾನ್ನ ಉಂಡು ಹೊಟ್ಟೆ ಹೊರೆಯಿಸುವವು,
ಭ್ರಷ್ಟರೊಡನಾಡಿಸುವವು,
ಕೊಟ್ಟರೆ ಕೊಂಡಾಡಿ ಕೊಡದಿರೆ ಬೈಸುವವು,
ಕಷ್ಟಗತಿಗೆ ಕಡೆಗೆಳಸುವವು (37)

ಇವು ತತ್ತ್ವಾಭಿಮಾನಿ ದೇವತೆಗಳನ್ನು ಮಾತ್ರ ಕೆಡಿಸವು — 'ಅರಸಿನ ಮನೆಯ ಸಂಕೋಲೆ ಆತನ ಕಾಲ ಕಟ್ಟುವದೆ?' ದೇವತೆಗಳು ಈ ತತ್ತ್ವಗಳಿಂದಲಿ ಜೀವರಿಗೆ ನೋವನೀವುತ ತಾವಿದಕೊಳ್ಳಗಾಗದಿಹರು ಹರಿ ಕೃಪೆಯಿಂದ (38— 39).

ಇಂದ್ರಿಯ ನಿಗ್ರಹ: ಇಂತು ಭ್ರಾಂತಿಯೀವ ತತ್ತ್ವಗಳ ಸತ್ಸಂಗದಿಂದ ಸನ್ಮಾರ್ಗಕೆಳಗಿಸಿ ಕಂತುಪಿತನ ತೋರುವವು (40).

ಹರಿಯಾತ್ರೆ ನಡೆಸುವವು, ಹರಿನಾಮ ನುಡಿಸುವವು, ಹರಿಪೂಜೆಯನೆ ಮಾಡಿಸುವವು,
ಹರಿಮೂರ್ತಿ ನೋಡಿಸಿ, ಹರಿಕೀರ್ತಿ ಪಾಡಿಸಿ
ನರರಹಂಕೃತಿ ಕೆಡಿಸುವವು (41)

ಉಕ್ಕು ತಗ್ಗಿಸುವವು, ಸೊಕ್ಕು ನಿಲ್ಲಿಸುವವು,
ಸತ್ಕರ್ಮಕಿಕ್ಕೆ ಸಲಹುವವು,
ದುಃಖದೀವ ಪಂಚಭೂತಾತ್ಮಕ ದೇಹ
ದಕ್ಕರ ಬಿಡಿಸಿ ರಕ್ಷಿಪುವು (42)

ಈಸು ಪುಣ್ಯ ಮಾಡಿ ದಿನ ದಿನ ಧ್ಯಾನಿಸೆ ಶ್ರೀಶ ಸಂತೋಷಿಸಿ ಸ್ವಮೂರ್ತಿದೋರುವ. ಸ್ವರೂಪ ಸುಖಾನುಭವಕ್ಕೆ ಅಂತರಾಯ ಮಾಳ್ಪವೆಂದು ಇವನ್ನು ಸಂಹರಿಸುವಂತೆ ಸಂತರು ಬೇಡುವರು (43— 44).

ತತ್ತ್ವಭೇದ: ಕಣ್ಣು ಕಾಣುವುದೆಂಬಂತೆ ಭಿನ್ನ ತತ್ತ್ವಗಳಿಗೆ ಭಿನ್ನ ಕಾರ್ಯಶಕ್ತಿ ಇದ್ದು, ಅವು ಅನ್ಯೋನ್ಯ ಕಾರ್ಯ ಮಾಡಲಾರವು. ಇಂಬು ಕೊಡಲು ಅಂಬರ, ಉಂಬುವದಕೆ ಬಾಯಿ, ಅಡುಗೆಗೆ ಕಿಚ್ಚು, ತೃಷೆಗಳೆಯಲು ಅಂಬು, ಉಣಲು ಅನ್ನ ಬೇಕು. ಆದರಿಂದ 24 ತತ್ತ್ವಗಳೂ ಅಗತ್ಯವೆಂದು ಅಧಿಕ ನ್ಯೂನವೆನ್ನದೆ ಸೃಜಿಸುವ ಹರಿ. ಇವು ಮೂಲ ಪ್ರಕೃತಿಯಲ್ಲಿ ಅನಂತವಾಗಿದ್ದು ಧಾನ್ಯರಾಶಿಯಂತೆ ಬೆರೆಸಿ ಸೃಜಿಸುವ (45— 49).

ತತ್ತ್ವಸೃಷ್ಟಿ: ಮಹತ್ತತ್ತ್ವದಿಂದ ಪೃಥ್ವಿ ತತ್ತ್ವ ಪರಿಂಯಂತ ಅವನೊದಗಿಸಿ ಕೊಡುವ ಹರಿ. ಮಹತ್ತತ್ತ್ವ ಶುಕ್ಲ, ಅಹಂಕಾರ ತತ್ತ್ವ ತ್ರಿವರ್ಣಕ. ಶುಕ್ಲಾಣುಗಳಿಂದ ಬುದ್ಧಿ ಮನ, ಲೋಹಿತಾಣುಗಳಿಂದ ದಶೇಂದ್ರಿಯ, ತಮೋಣುಗಳಿಂದ ಪಂಚ ತನ್ಮಾತ್ರ (ದೇಹದ 16 ಕಳೆ) ಪಂಚಭೂತ, ಉದಕದಲ್ಲಿ ಕದಡದಂತೆ ಭೂತತತ್ತ್ವ ಮೂಡಲುದಿಸಿದುವು— 24 ತತ್ತ್ವ. ಅವುಗಳನ್ನೆಂಯೂ ಸ್ಥಾನದಲಿಟ್ಟು ಅಭಿಮಾನಿ ದೇವತೆಗಳ ನಿರ್ಮಿಸಿದ; ಶುದ್ಧ ಸತ್ತ್ವದಿಂದವರ ದೇಹ ಮಾಳ್ಪ, ಅವರಿಗೆ ಯೋಗ್ಯ ಸುಗುಣಂಗಳ ಕೊಟ್ಟ (50–56).

ಬ್ರಹ್ಮಾಂಡ ಸೃಷ್ಟಿ: ತತ್ತ್ವಾಂಶಗಳನ್ನು ರೀತಿ ಮಾಡಿ[217] ತನ್ನುದರಿಂದೊಡನೆ ಬಿನ್ನದಜಾಂಡ ನಿರ್ಮಿಸಿದ; ಭೂರೇಣುಗಳ ತನ್ನುದರದಿ ಸೇರಿಸಿ, ರಮೆಯು ಗರ್ಭದಿಂ ತೆಗೆದು ಬ್ರಹ್ಮಾಂಡ ಸೃಜಿಸಿದ. 100 ಕೋಟಿ ಯೋಜನ ಸೂರ್ಯನಂತೆ ಶೋಭಿಸುವ ಬ್ರಹ್ಮಾಂಡ ಹೊಕ್ಕು ಮತ್ತೆ ನೀರಲ್ಲಿ ಮಲಗಿದ. 24 ತತ್ತ್ವ ಬೆರೆತ ಬ್ರಹ್ಮಾಂಡಕ್ಕೆ ಭೂಮ್ಯಾದಿದಶಾವರಣ,[218] ಭೂಮ್ಯಾವರಣಕ್ಕೆ ಅಬ್ಬಾದ್ಯಾವರಣ ಹತ್ತು ಹತ್ತು ಪಟ್ಟಾಗಿಹವು; ಮೇಲಿನಾವರಣ ಕೆಳ ತತ್ತ್ವಗಳಿಂದ ಕೂಡಿ ಅಧಿಕ ವ್ಯಾಪ್ತವಾಗಿಹವು. ನೀರ ಮೇಲೆ ಈರೇಳಾಗಿರುವ ಲೋಕಂಗಳು. ಇಂತೆಲ್ಲವನು ರೋಮಕೂಪ ತುಂಬುವಂತಾಂತು ಕೊಂಡಿಪ್ಪ ವ್ಯಾಪ್ತನಿಗಾರೆದುರು? ಉದಕದಿ ಸಾಸಿರ[219] (ದೇವ) ವರ್ಷ ಪವಡಿಸಿದಾತ ನಾಭಿಯಿಂದ 25 ಕೋಟಿ ಯೋಜನದ ಕಮಲ ನಿರ್ಮಿಸಿ, ಅದರಲ್ಲಿ ಬ್ರಹ್ಮನನ್ನು, ಅದರ ದಳದಲ್ಲಿ 14 ಲೋಕಗಳನ್ನು ಮಾಡಿದ. ಮೊದಲು ಬ್ರಹ್ಮನಿಗೆ ಮುಕ್ತಿಯಿತ್ತು, ಮುಖ್ಯಪ್ರಾಣನಿಗೆ ಬ್ರಹ್ಮಪಟ್ಟವಿತ್ತು 14 ಲೋಕವನಾಳೆಂದ (57–69).

---

217. 'ತತ್ತ್ವಾಂಶಗಳನ್ನೇ ವೀರ್ಯರೂಪದಿಂದ ಶ್ರೀಗರ್ಭದಲ್ಲಿರಿಸಿ ಬಂಗಾರದ ಬ್ರಹ್ಮಾಂಡ ನಿರ್ಮಿಸಿದ, ಸ್ವರೇತಸ್ಸಿನಿಂದಲ್ಲ' (ಸರಸ ಭಾರತೀ ವಿಲಾಸ).

218. ಭೂ ಜಲ ಅಗ್ನಿ ವಾಯು ಆಕಾಶ ಅಹಂಕಾರ ಮಹತ ಸತ್ತ್ವ ರಜ ತಮ.

219. ನೂರರ (ಬಹಳ) ಎಂಬರ್ಥ (ಸಾವಿರ ವರ್ಷ ಮಲಗಿದ ಪರಮಾತ್ಮ — ವಿಜಯದಾಸರು).

(ಪದ 4) ಮುಖ್ಯಪ್ರಾಣನು ಶ್ವಾಸ ವಿರಾಮ ಉಚ್ಛ್ವಾಸ ನಿಶ್ವಾಸಗಳಲ್ಲಿ 'ಹಂಸ: ಸೋಽಹಂ ಸ್ವಾಹಾ'[220] ಮಂತ್ರತ್ರಯವನ್ನು ನಿತ್ಯ 21,600 ಸಲ ಜಪಿಸುವ ಶ್ಲೋಕ ಅನುವಾದಿಸಿ, ಸಹಭೋಗಾನುಗ್ರಹೀತನಾದನ್ನು ಅರುಹುತ್ತಾರೆ — ಜೀವರಲ್ಲಿ ಮಾರುತನು 21,600 ಮಂತ್ರಿಕ ಶ್ವಾಸ ಜಪಿಸಿ ಮೆಚ್ಚಿಸುವ ಇಂಥ ಭಕ್ತನಿಗೆ ಬ್ರಹ್ಮ ಪಟ್ಟ ಕಟ್ಟುವುದಚ್ಚರಿಯೆ? ಎಂತೆಂತು ಸೇವಿಪರಂತಂತು ದಯವಂತ ರಕ್ಷಿಸನೆ? ಷಣ್ಮಾಸ ಜಪಿಸಿದ ಧ್ರುವಗೆ ಧ್ರುವಪದವಿತ್ತವನು, 100 (ದೇವ) ವರ್ಷ ಜಪಿಸಿದ ಮಾರುತಗೆ ಋಣ ತಿದ್ದುವಂತೆ ಬ್ರಹ್ಮಪದವಿತ್ತು, ತನ್ನಾರೋಗಣೆಯುರ್ಧ ಜೀವ (ಜೀವರ ಸತ್ಕರ್ಮ ಫಲ ಸೌಖ್ಯವನ್ನು ಅಜಪದವರೊಡನೆ ಉಂಬ)[221] ಪ್ರಾಣನ ಸೇವೆಗೆ ಸದೃಶಫಲ ಈ ಸಹಭೋಗ. ನಂಬಿದ ಸಾರಿಗ ಉಂಬಾಗ ಬಂದು ಬೇಡಲು, ಕೂಡಿ ಉಂಡು ನಂದಿಸುವಂತೆ[222] ಬೊಮ್ಮನಿಗಿತ್ತು ಹರಿ ಉಂಬ ಸಂಭ್ರಮ! ಸಮೀರನ ಜಪಕೆ ಸಮಾನ ಫಲ ಒಂದು ಕಲ್ಪದಲುಣಿಸಿ ತಾನುಂಬ! ಅಂದು ಸೀತೆಯುಂಗುರ ತಂದ ಹನುಮಗಿತ್ತ ವರವನಿಂದು ಸಾರ್ಥಕ ಮಾಡಿದ; ಬ್ರಹ್ಮಾಂಡದಿ ಜೀವರ ತುಂಬಿಸಿ, ಮುಕ್ತರನು ತ್ರಿಧಾಮದುಬ್ಬ, ಶ್ರುತಿಪಥ ವಿಸ್ತರಿಸಿದ.

ಈ ಜಗವ ಬಂದದಿ ನಿರ್ಮಿಸಿದ, ಸೃಷ್ಟಿ ಮೊರೆವ ಸಂಧಿಯಾ ಹೊಸ ಬಗೆಯದು.[223] 4 ಶ್ಲೋಕಗಳಿಂದ 81 ನುಡಿಗೇರಿಸಿ ಸೃಷ್ಟಿ ಪ್ರಕರಣದಂಥ ಗಹನ ವಿಷಯವನ್ನು ಸಾಮಾನ್ಯರಿಗೆಟಕುವಂತೊರೆದ ವೈಶಿಷ್ಟ್ಯ ವಾದಿರಾಜರದು.

---

220. ಬಿಂಬಾರ್ಪಣ (ಅಹಮಾದಿ ಶಬ್ದ ಅಂತರ್ಯಾಮಿ ಸೂಚಕ).

221. 'ನನ್ನ ಅನುಭೋಗಗಳೆಲ್ಲ ಉತ್ಪತ್ತಿ ನಾಶರಹಿತವಾಗಿದ್ದು, ಬ್ರಹ್ಮಲೋಕದಲ್ಲಿ ಬ್ರಹ್ಮಗೂ ಇರುವುದರಿಂದ ಸಹಭೋಗವೆನಿಸಿದೆ. ಇಂಥ ಸಹಭೋಜನ ಹನುಮಂತನಿಗೂ ಕೊಟ್ಟಿದ್ದೇನೆ' (ರಾಮವಾಕ್ಯ, ಭಾ.ತಾ.ನಿ.8).

222. ಲೌಕಿಕ ದೃಷ್ಟಾಂತ.

223. ಈ ಸಂಧ್ಯಂತ 'ಏಕಪ್ರಕಾರದ ನುಡಿಗಳ ನಡುವೆ ಬೆಂಗಳೂರ ಪ್ರತಿಯಲ್ಲಿರುವ 'ದೈತ್ಯರಿಂದ ಬಾಧೆ ಬಂದ ಬಂದಾಗ ಹರಿ1 ಹತ್ತವತಾರಗಳ ಮಾಡಿ1 ಭೃತ್ಯರ ಪೊರೆದ ತನ್ನರ್ಧಿಯ ಪೂಜೆಯು1 ಹತ್ತಿರೆ ಇದ್ದು ಕೈಗೊಂಬ' ಎಂಬುದು ಹೆಚ್ಚಿನ ನುಡಿಯಾಗಿದ್ದು, ಇದು 458—59ರ ದಶಾವತಾರ ವರ್ಣನದ ಮೊದಲು ಹೊಂದುವಂತಿದೆ.

4) <u>ಸ್ಥಿತಿ ಸಂಧಿ</u>

(ಪದ 1) ಸೃಷ್ಟಿ ಸ್ಥಿತಿ ಲಯಕಾರಕನ ನಮಿಸಿದ ಭಾರತ ತಾತ್ಪರ್ಯ ನಿರ್ಣಯದ ಆದಿ ಶ್ಲೋಕ ಅವತರಿಸಿ, 'ಪ್ರಸನ್ನವಕ್ತ್ರಂ ನಳಿನಾಯತೇಕ್ಷಣಂ, ವಿಭೂಷಿತಂ ಮೇಖಲ ಯಾಂಗುಲೀಯಕೈಃ' ಎಂಬೆರಡು ಭಾಗವತ ಶ್ಲೋಕಗಳಂತೆ ಬಣ್ಣಿಸಿ ಸುಸ್ಥಿತಿಗೆ ಕೋರಿದುದು —

ನೀಲ ನಿರ್ಮಲಗಾತ್ರ, ನಿರುಪಮ ಸುಚರಿತ್ರ
ಮೂಲ ಕಾರಣ, ಮುಕ್ತರೊಡೆಯ,
ಪಾಲಸಾಗರಶಯನ, ಪಂಕಜನಾಭ, ನೀ
ಪಾಲಿಸೊ ಪರಮ ಪಾವನನೆ (1)

ಹಾರ ಕೌಸ್ತುಭಧರ, ಹಾಲಿನ ಮೇಲೊರಗಿಪ್ಪ,
ನಾರಾಯಣ ನಳಿನಾಕ್ಷ,
ಚಾರುಕುಂಡಲ, ಚೆಲ್ವ ಚಂದ್ರವದನ, ನಮ್ಮ
ಮಾರಜನಕ ಮನ್ನಿಸುವ (2)

ಪೊನ್ನ ಪೆಂಡೆಯ ಕಾಂಚಿ, ಪೊಳೆವ ಪೀತಾಂಬರ,
ರನ್ನದ ಮುಕುಟ ರಂಜಿಸಲು
ಅನರ್ಘ್ಯಾಭರಣದ, ಅರ್ತಿಯ ಹರಿ ನಮ
ಗುನ್ನತ ಸುಖವನುಣಿಸುವ (3)

ಕಂಜ ಶಂಖ ಚಕ್ರ ಕೌಮೋದಕಿ ಹಸ್ತ,
ಮಂಜುಳಮುರಾರಿ, ಮಾರಮಣ,
ಕುಂಜರಭಯಹಾರಿ ಕುಜನಸಂಹಾರಿ, ನಿ
ರಂಜನ ರಕ್ಷಿಸು ಜಗವ (4)

ಹರಿ ದುಷ್ಟರನೆಲ್ಲಳಿಸಿ, ಸುಜನರ ರಕ್ಷಿಸಿದ; ಬಲಿಯ ಮೆಟ್ಟಿ ಶಕ್ರಗೆ ಪಟ್ಟಕಟ್ಟಿ ಇಷ್ಟರ ಪೊರೆದ[224] (6)—

ಮಂಗಳಪದ್ಯದಂತೆ ಚಕ್ರಾಂಕನವೂ ಶುಭಕಾರಣವೆಂದುದು (34ರ ವರೆಗೆ) — ಮಂಗಳಾಚರಣೆಗೆ ವೇದೋಕ್ತ ಆಧಾರವಿಲ್ಲದಿದ್ದರೂ ಶಿಷ್ಟಾಚಾರದ ಬಲವಿದೆ. ಹಾಗೆಯೇ

---

224. ಅಸುರಾವೇಶದಿಂದ ಇಂದ್ರದ್ವೇಷಿಯಾದವನ ನಿಗ್ರಹ, ನಂತರ ಭಕ್ತಾನುಗ್ರಹ; ಶಿಕ್ಷೆ ರಕ್ಷೆಗಳೂ ಅವನ ಕರುಣೆ.

ನಿಂಬಾರ್ಕ ವಿಷ್ಣುಸ್ವಾಮಿಯರೂ ಕೆಲವು ಅದ್ವೈತಿಗಳೂ ದ್ವೈತಿಗಳೂ ರಾಮಾನುಜೀಯರೂ ಚಕ್ರ ಧರಿಸುವರು; ಅದ್ವೈತ ಸನ್ಯಾಸಿಗಳೂ ಕರ್ಮಾನುಷ್ಠಾನದಲ್ಲಿ ಊರ್ಧ್ವಪುಂಡ್ರ ಚಕ್ರ ಧರಿಸುವರು, ತಪ್ತ ಚಕ್ರವು ಪವಿತ್ರ ಮುದ್ರಿಕೆ, ಊರ್ಧ್ವಪುಂಡ್ರ ದೀಪಜ್ವಾಲೆ ಎಂದು ಮನ್ನಿಸುವರು. ಈ ಶಿಷ್ಟಾಚಾರಕ್ಕೆ ಶ್ರುತಿಯನುಮೋದನೆಯುಂಟು, ಬ್ರಹ್ಮಾದಿಗಳೂ ಚಕ್ರ ಧರಿಸಿದರು[225] (6—10).

(ಪದ 2) 'ಪವಿತ್ರಂ ತೇ ವಿತತಂ' ಎಂಬ ಋಗ್ವೇದ ವಾಕ್ಯ 'ಚಕ್ರಾಂಕಿತರನ್ನು ಧರಿಸುವ — ಅತಪ್ತ ದೇಹಿಗಳನ್ನಲ್ಲ' ಎಂದಿರುವುದರ ವಿವರಣೆ — ಹರಿಯಂತೆ ಸುದರ್ಶನವೂ ಜಗದೊಳು ಪೂರ್ಣ. ಪವಿಯ(ವಜ್ರಪಂಜರದ)ಂತೆ ತ್ರಾಯತಿ ಎಂಬ ಕಾರಣದಿಂದ ಪವಿತ್ರ ಎಂಬರದನ್ನು. ಈ ಚಕ್ರದಿಂದ ತಪ್ತನಿಗೆ ಪರಸುಖವಿಲ್ಲ, ಚಕ್ರದಿಂದಲೆ ಪರಿಹಾರವೆಂದು ಶಿವ ಅರ್ಥೈಸಿದ.[226] ತಪ್ತ ಚಕ್ರಾಂಕನ ಭುಜ ಯುಗದಲ್ಲಿ (ಗೋಪೀಚಂದನದಿಂದ ವಹಿಸುವವರಿಗೂ ಹರಿ ಒಲಿವ); ಉದರ ವ್ಯಾಧಿ ಬಿಡಿಸಲು ಹೊಟ್ಟೆಯ ಮೇಲೆ ತಪ್ತಚಕ್ರ ಧರಿಸುವರು. ತಪ್ತ ಚಕ್ರಧಾರಣ ಪ್ರಸ್ತಾಪದಲಿ ಈ ಶ್ರುತಿಯ ಅರ್ಥ ಹೇಳಿದ ಶಿವ ಮತ್ತೊಂದರ್ಥವ ಮೆಚ್ಚ (11—16).

(ಪದ 3) ಇನ್ನೊಂದು ಶ್ಲೋಕದಿಂದ ಚಕ್ರಾಂಕನ ಮಹಿಮೆ ವಿವರಿಸಿದ್ದು — ಸೋಮರಸ ಶೋಧಿಸುವ ವಸ್ತ್ರಕ್ಕೆ ಆ ಚಕ್ರಸನ್ನಿಧಿಗೈಸಲು 'ಪವಿತ್ರಂ ತೇ' ಶ್ರುತಿಯಿಂದ ಮಂತ್ರಿಸುವರು; ಪಾವನಗೈಸುವ ಶಕ್ತಿ ತೋರಿಸಲು ಚಕ್ರವನ್ನು ಪವಿತ್ರವೆಂದಿದೆ. ಪಾಪ ಶೋಧಿಸಲು ಸಹಸ್ರಾರು ಚಕ್ರ[227] ಬೇಕೆಂದು ಈ ಮಂತ್ರವ ಮನ್ನಿಸುವರು.

---

225. ಚಕ್ರಧಾರಣ ಅವೈದಿಕವಾದರೆ ಮಂಗಳಾಚರಣವೂ ಅವೈದಿಕ. ನಿಂಬಾದಿತ್ಯಾದಿಗಳೂ ಚಕ್ರ ಧರಿಸುವುದರಿಂದ ಶಿಷ್ಟಾಚಾರ ಉಭಯತ್ರ ಪ್ರಮಾಣ' (ಚಕ್ರಸ್ತುತಿ 1—6).

226. ನೋ. 22,34; ಪದ್ಮಪುರಾಣದ ಶಿವ ಪಾರ್ವತೀ ಸಂವಾದ.

227. 'ನೇಮೋ ತವಾಗ್ರೇ ಕಾಮಾದ್ಯಾ ನೇಮೋ ಜೀವಂತ್ಯಹೋ ದ್ವಿಷಃ' (ಸಹಸ್ರಾರ ಸು2ತ).

ಚಕ್ರ ಮಂತ್ರದಿಂದ ಮಂತ್ರಿಸಲು ಮಂಗಳ ದ್ರವ್ಯವಾಗುವುದು; ಅನ್ನವನ್ನು ವ್ಯಾಹೃತಿ (ಭೂರ್ಭುವಸ್ಸುಃ) ಮಂತ್ರದಿಂದ ಪ್ರೋಕ್ಷಿಸಿ, ಗಾಯತ್ರಿಯಿಂದ ಮಂತ್ರಿಸಲು ಯಮತೀರ್ಥವಪ್ಪುದು. ಪದ್ಮಪುರಾಣದ ಶಿವನರ್ಥವನ್ನು ಅರಿಯದ ಭಟ್ಟ ಭಾಸ್ಕರ ತಸ್ಕರ! ಶಿವನಾಜ್ಞೆಯು ಬಿಡಿಸಿದ ಮಧ್ವ ಮುನಿ ಗುರು ವೇದವ್ಯಾಸರ ಮತಗಳೆಲ್ಲ ಒಂದೆ (17—23).

(ಪದ 4) ಪವಿತ್ರದ 10 ಹೆಸರಿನ ಶ್ಲೋಕದಿಂದ ಶಿವಮತ ಸಮರ್ಥಿಸಿದ್ದು — ಪವಿತ್ರ ಚರಣ ನೇಮಿ ಪವಿ ಚಕ್ರ ಸುದರ್ಶನ ಸಹಸ್ರಾರ ಪ್ರಾಕೃತತ್ತ್ವ ಲೋಕಾಧಾರ ಮಹಾಜನ ಈ 10 ಪರ್ಯಾಯ ವಾಚಕವೆಂದ ಶಿವ ಗಿರಿಜೆಗೆ. ಪುರಹರನ ತತ್ವ ಬಿಟ್ಟು ನರ (ಭಾಸ್ಕರ)ನ ಮತ ನಂಬುವರೆ, 'ತಾಯಿ ಮಾರಿ ತೊತ್ತು ಕೊಂಬುವರೆ'? (24—25 ).

ಮುಕ್ಕಣ್ಣ ಹೇಳಿದರ್ಥ ಬಿಟ್ಟು ಜಗದಿ
ಇಕ್ಕಣ್ಣನಾದ ಪಾಮರನು
ಸೊಕ್ಕಿ ನುಡಿಯೆ ಮೃಷ ಘುಡುಘುಡಿಸಿ
ರಕ್ಕಸರ ಕೊಲುವಂತೆ ಕೊಲುವ (26)

(ಪದ 5) 'ಯತ್ತೇ ಪವಿತ್ರಮಗ್ನೇ ಅರ್ಚಿಷಿ ವಿತತಮಂತರಾ' (ನಿನ್ನ ಪವಿತ್ರ ಸೂರ್ಯನ ಒಳಗೆಲ್ಲ ತುಂಬಿದೆ) ಎಂಬಿದೆ ಶ್ರುತಿ; ಧರಿಸದ ನಿನ್ನೊಬ್ಬನ ಸುಡದೆ? ಆ ಪವಿತ್ರಕ್ಕೆ ತಪ್ಪು ಅಪ್ಪುವದೆ? 'ಶ್ವೇತೋರ್ಧ್ವ ಹಿರಣ್ಮಯಂ' ಎಂಬಂತೆ ಒಪ್ಪುವುದು (27—28).

(ಪದ 6) ಚಕ್ರ ಅಂಕಿತನೇ ದಾನಪಾತ್ರನೆಂಬ ಪದ್ಮಪುರಾಣ ಶ್ಲೋಕಾನುವಾದ — ಸ್ವಭುಜದಲ್ಲಿ ಚಕ್ರ ಧರಿಸಿದವಗೆ[228] ಗೋ ಭೂ ಹಿರಣ್ಯಾದಿ ದಿವ್ಯದಾನ[229]ಮಾಡಬೇಕೆಂದು

---

228. ಸಂಬಂಧಿ, ಪಶು, ಪದಾರ್ಥಗಳ ಮೇಲೂ ಚಕ್ರಾಂಕನ ಹೇಳಿದೆ ವಿಷ್ಣು ರಹಸ್ಯ; ಎಲ್ಲವೂ ಬಿಂಬರೂಪಿಯ-ಧೀನವೆಂಬುದೇ ಇದರ ರಹಸ್ಯ.

229. ಆವನಾದರೂ ಅತಿಥಿ ಬಂದರೆ ಅಶನವಿತ್ತು ಪುರಂದರವಿಠಲಗರ್ಪಿತವೆ"ಂಬುದು ಬರಿ ಭೂತಯಜ್ಞ, ದಿವ್ಯದಾನಕ್ಕೆ ಸತ್ಪಾತ್ರ ಬೇಕು.

ನಾಗಭೂಷಣ ನಿರ್ಣಯಿಸಿದ; ಒಂದು ಬಿಂದೂದಕ ತಂಡುಲವನೂ ಇಂದಿರೇಶನ ಭಕ್ತನಲ್ಲದವಗೆ ಕೊಡಬಾರದೆಂದ (29– 30).

(ಪದ 7) 'ತಪ್ತ ಚಕ್ರಂ ದ್ವಿಜೋ ಧಾರ್ಯ' ಈ ಮಾಧ್ಯಂದಿನ ಶ್ರುತಿಯುಕ್ತ ಚಕ್ರಾಂಕನದಗತ್ಯ ಹೇಳಿದ್ದು — ಇದು ಶಿಷ್ಟವಚನವಾಗಿ ತಪ್ತ ಚಕ್ರ ಧರಿಸದವ ವೇದಬಾಹ್ಯ, ಮುಮುಕ್ಷುಗಳಿಗಿದು ಬೇಕು (31).

(ಪದ 8) ಪದ್ಮ ಪುರಾಣದ ಶ್ಲೋಕ ಕನ್ನಡಿಸಿ ಚಕ್ರಾಂಕಿತರ ಮಹಿಮೆ ಹೇಳಿದ್ದು — ತಪ್ತ ಚಕ್ರ ಶಂಖ ಭುಜಗಳಲಿ ಧರಿಸಿ ಅಂತಕನ ಭಟಕನಂಜಿಸುವ ಭಕ್ತರೊಪ್ಪಿಹರು (32).

ಪೊಳೆವ ಪನ್ನೆರಡೂರ್ಧ್ವ ಪುಂಡ್ರಗಳಿಟ್ಟು ಶ್ರೀ
ತುಳಸಿ ಪದುಮಾಕ್ಷ ಸರವ
ಅಲಸದೆ ಧರಿಸಿದ ಪರಮ ವೈಷ್ಣವರು ಈ
ಇಳೆಯು ಪಾವನ ಮಾಡುತಿಹರು (33)

ಇಂತು ಶ್ರೀಕಂಠ ನಿರ್ಣಯಿಸಿ ಪೇಳಿದ ಗಾರಿಗೆ, 'ಯೋ ಕಂಠಲಗ್ನವೆಂ'ಬ ಪಾದ್ಮ ಶ್ಲೋಕದಲ್ಲಿ (34).

ಇನ್ನು ಕೃತಯುಗದಲ್ಲಿ ಹರಿ ಯೋಗ್ಯ ಸಾಧನಗೈಸಿ ಜೀವರಿಗೆ ಸದ್ಗತಿಯೀವನೆಂದುದು — 4 ವರ್ಣಾಶ್ರಮಿಯರನ್ನೂ ಯಮ ಧರ್ಮಮಾರ್ಗದಲ್ಲಿರಿಸಿದ. ಕಾಲಕಾಲದಿ ಮಳೆಯ ಕರೆಸಿದ, ಬೆಳೆಯ ಬೆಳೆಸಿದ, ಕಳವ ನಿಲಿಸಿದ, ಫಲವ ಮೊಲಿಸಿದ. ಆ ಯುಗದಿ ವಿಧವೆ ವಿಧುರರಿಲ್ಲ, ಮದುವೆ ಇಲ್ಲದವರಿಲ್ಲ, ವಿಧಿ ಮೀರುವರಿಲ್ಲ, ಅಧಮರಿಲ್ಲ; ಬಂಜೆಯರಿಲ್ಲ, ಪತಿಗಂಜದ ಸತಿಯರಿಲ್ಲ, ಸಂಜೆ ಮಲಗುವರಿಲ್ಲ, ಕಂಜನಾಭನ ಮರೆವರಿಲ್ಲ, ಅತಿಥಿ ಭುಂಜಿಸದೆ ಉಂಬುವರಿಲ್ಲ; ಅಂಧ ಪಂಗುಗಳಿಲ್ಲ, ಶತಾಯು ಕುಂದಿದವರಿಲ್ಲ, ನಿಂದ್ಯಮಾರ್ಗಿಗಳಿಲ್ಲ.[230]

---

230. ತ್ರೇತಾಯುಗದ ರಾಮರಾಜ್ಯದಲ್ಲೂ ಇಂಥದೇ ಆದರ್ಶ ಸುಸ್ಥಿತಿ ಇತ್ತು (ಕ.ಭಾ.ತಾ.ನಿ.3,116). ದ್ವಾಪರದಲ್ಲಿದು ವ್ಯತ್ಯಸ್ತವಾಗುತ್ತ ಕಲಿ ಕಾಲಿಡುವನು.

ಎಲ್ಲಿ ನೋಡಲು ತೀರ್ಥ ಕ್ಷೇತ್ರ, ಪೂಜೆ, ಯಜ್ಞ,[23ಆ] ವೇದ ಘೋಷ, ತಪಸಿಗಳು, ಧನಧಾನ್ಯ, ಕೃಷಿ ವರ್ಧಕರು, ದಾನ ಗಾನ ಧ್ಯಾನ ಸ್ನಾನ ಜ್ಞಾನ ವ್ಯಾಖ್ಯಾನ, ಭಕ್ತಿ ಭುಕ್ತಿ ವಾದಶಕ್ತಿ ಯುಕ್ತಿ ವಿರಕ್ತಿ ವಿಪ್ರವೃತ್ತಿ, ದೇವಸ್ಥಾನ ರಥೋತ್ಸವ, ಮುತ್ತು ರತ್ನಪಸಾರ, ದಿವ್ಯನಗರ, ಆಟ ಪಾಟ ವಸನ ಭೂಷಣಗಳ ನಾರೀಸ್ತೋಮ (35–46). ಅವರ ಮಂಗಳಮಯ ತುಂಬುಜೀವನವಿದು —

ಗಂಧ ಕಸ್ತೂರಿ ಕುಂಕುಮ ರಂಜಿಪರಸ
ದಿಂದ ಮಾಡಿದ ಓಕುಳಿಯು,
ಚೆಂದದಿಂದೊಬ್ಬರೊಬ್ಬರ ಮೇಲೆ ಚೆಲ್ಲಿ, ನವ
ಚಂದ್ರವದನೆಯರೊಪ್ಪಿದರು (47)

ಒಂದು ಗರ್ಭದ ಕೂಸು, ಒಂದು ಶಿಶು ಮಡಿಲೊಳು
ಒಂದು ಬೆನ್ನಲಿ ಕಟ್ಟಿಕೊಂಡು,
ಒಂದು ಮುಂದಾಡಿಸುವ, ಇಂದುಮುಖಿಯರ
ನಂದಣಿಯು ಮನೆಮನೆಯಲ್ಲಿ (48)

ಒಳಗೆ ಮೊಸರ ಕಡೆವ ಸಂಭ್ರಮ, ಹೊರಗೆ ಆ
ಕಳ ಕರೆವ ರಭಸ ತುಂಬಿಹುದು,
ಆಳುವ ಮಕ್ಕಳ ತೊಟ್ಟಿಲೊಳಗಿಟ್ಟು ಪಾಡುವ
ಲಲನೆಯರ ಗಂಭೀರ ನಾದ (49)

ಯತಿಗಳ ಪೂಜೆ, ವಿಪ್ರರ ಪೂಜೆ, ಮನಮನೆಯೊ
ಳತಿಥಿ ಅಭ್ಯಾಗತರ ಪೂಜೆ,
ಶ್ರುತಿವಿಹಿತ ನಿತ್ಯನೈಮಿತ್ತಿಕ ಕರ್ಮಗಳು
ವಿತತವಾದವು ಲೋಕದೊಳಗೆ (50)

ಗಂಡುಮಕ್ಕಳ ಮದುವೆ ಮುಂಜಿಗಳ ಸಂದಣಿ,
ತಂಡ ತಂಡದ ಕನ್ನಿಕೆಯರ
ಉಂಡುಟ್ಟುಕೊಂಬುದಕೆ ಉಳ್ಳಂಥ ಮನೆಗಳ
ಕಂಡು ಕೊಡುವಂಥ ಸಂಭ್ರಮಗಳು (51)

ನವಗ್ರಹ ಹೋಮ ನಾಂದಿ ಪೂಜೆಯು ಮಾಳ್ಪ,
ಭುವನ ದೇವರಿಗೆ ದಕ್ಷಿಣೆಯು

---

23ಆ. ಉಡುಪಿ ಪ್ರತಿಯಲ್ಲಿರದ ಈ ನುಡಿ ಬೆಂಗಳೂರ ಪ್ರತಿಯಲ್ಲಿ 42ನೆಯದು. (ಉಡುಪಿ ಪ್ರತಿ 7ನೆಯ ಪದಾದಿಯ 30–31ರ ನಡುವಿನ ಪ್ರಾಸರಹಿತ ಸಾಲುಗಳನ್ನೇ ನುಡಿ ಎಂದಿರುವುದರಿಂದ 4ನೆಯ ಸಂಧಿಯ ನುಡಿಸಂಖ್ಯೆ 92 ಎಂದಿದೆ).

ತವಕದಿಂದಲಿ ಕೊಡುತ, ಮಂಗಳಾರತಿಯನೆ
ತ್ವರಿಯಲಿ ಮುತ್ತೈದೆಯರು (52)

ಅಯುತಾಯುತವೆಂಬ ಜೋಯಿಸರೋದುವ
ಪ್ರಿಯದ ಮಂಗಳಾಷ್ಟಕ,
ಅಯುತಾಕ್ಷಿಯರ ಧವಳ ಶೋಭನಗಳ
ಗಾಯನ ತುಂಬಿತಂಬರವ (53)

ಮುತ್ತೈದೆಯರು ಬಂದು ಮುತ್ತುರತ್ನಗಳ
ಅರ್ಘ್ಯಯಲಿ ಭಕ್ತಿಕಟ್ಟವರು,
ತಷ್ಟಿಗರೆಲ್ಲರು ಉಡುಗರೆ ಉತ್ಸಹದೊಳು
ಸತ್ರಿಂದ ತಂದು ಕೊಡುವರು (54)

ಪರಿಪರಿ ಭಕ್ಷ್ಯರಸಾಯನಗಳ ಮಾಡಿ,
ಪರಿಪರಿ ಕಲಸೋಗರಗಳ
ವಿರಚಿಸಿ, ವಿಪ್ರರ ಕರಾಡಿ, ಭೂಮಿವನುಂಬು
ವರ ಸಂಭ್ರಮವನೇನೆಂಬೆ (55)

ಮಂಗಳದೇವಿಯರ ವಧುವರರಿಗೆ
ಮಂಗಳವೀಯಲೆಂದೆಂದು,
ತುಂಗಭಾಗ್ಯಂಗಳು ಸಂಗಡಿಸುತಿರಲೆಂದು
ಅಂಗನೆಯರು ಹರಸಿದರು[232] (56).

ಈ ಪರಿಯೋಳ್ ಚಕ್ರವರ್ತಿಗಳ ಹುಟ್ಟಿಸಿ ವಿಕ್ರಮವಿತ್ತು ಸತ್ಕಾರ್ಯಂಗಳ ನಡೆಸಿದ (57). ಜೊತೆಗೆ (ವಾದಿರಾಜರಿಗೆ ಪ್ರಿಯವಾದ) ದಶಾವತಾರವೆತ್ತಿದ:

ಮತ್ಸ್ಯ ಕೂರ್ಮನಾಗಿ, ಮತ್ತೆ ಮಹಿಯನೆತ್ತಿ,
ಕೀರ್ತಿಯ ಪಡೆದ, ಕಿಂಕರನ
ಮೃತ್ಯುವ ಬಿಡಿಸಿದ, ಮತ್ತೆ ಬಲಿಯ ಕಿತ್ತು
ಕ್ಷತ್ರಿಯರುಕ್ಕು ತಗ್ಗಿಸಿದ (58)

ಸೀತೆರಕ್ಷಿಯವಿತ್ತ ಸೇತುಬಂಧನರಾಮ,
ಮಾತುಳ ಕಂಸನ ಮಡುಹಿ,
ಖ್ಯಾತ ಬುದ್ಧನಾಗಿ ಕಾಪಥಗಳ ತೋರ್ದ,
ಭೀತ ಕಲಿಯ ಬೀಳುಕೊಟ್ಟ (59)

ಶಿವನ ವೈರಿಯ (ತ್ರಿಪುರನ) ಕೊಂದ, ಶ್ರೀಯನವನಿಗೆ ತಂದ, ಜವನ ಭಟರ ಜಡಿವ ಈ ಮಲ್ಲನ ಪೋಲುವರಿಲ್ಲ. ಇಂತು ಜಗಂಗಳ ಪೊರೆವ ದೈತೇಯಕೃತಾಂತ ಸಂತರ ಭಾರವಾಂತ (60—61).

---

232. ಇದು ಲಕ್ಷ್ಮೀಶೋಭಾನೆಯಂತ್ಯದ ಐದೆಯರ ಹರಕೆಯಂತಿದೆ.

ಗುಣಪೂರ್ಣ, ಸಜ್ಜನ ದಾತಾರ, ಭಕ್ತವತ್ಸಲ, ಭವನಾಶ, ಜ್ಞಾನಾನಂದರೂಪಿ; ದೋಷದೂರ ಹರಿ. ಆದರೂ 'ಉಂಟೋ ದುಡುವೋದು ಲಕ್ಷ್ಮಿಯ ಕೃಪೆ, ನೆಲದ ಇಂಬು ಕುಂಭಿನಿಯದು, ಹರಿ ಇವರಾಳ್ದನಲ್ಲ — ಆ ಡಂಭಕನೆಲ್ಲಿ ಎಂತು ಇಹನೆಂದು ಉಂಡ ಮನೆಗೆರಡು ಬಗೆವ ಭಂಡರ ಕಂಡು ಪಂಡಿತರು ಮನ್ನಿಸರು. ಕಾರಣ ಬಲ್ಲವರು ಕಂಡವರ ಮಾತು ಕೇಳದೆ ಪಾಂಡವಪ್ರಿಯನ ಮನ್ನಿಸುವುದು. ಇದು ಪಕ್ಷಪಾತದ ನುಡಿಯಲ್ಲವೆಂಬೋದ ಬುಧರು ವಿಚಾರಿಸುವುದು.[233] (60—65).

ರಾಮಾದ್ಯವತಾರಿ ಮಾನವದೋಷಯುತನೆಂದು ತೋರಿದರೂ ತ್ರಿವಿಧ ಜೀವಗತಿಪ್ರದ ಸೀತೆಗೆ ಚಿಂತಿಸಿ, ಭೀತಿಯ ತೋರಿಸಿ, (ರುಕ್ಮಿಣಿಯೊಡನೆ) ಭೂತನಾಥ ನಲ್ಗೈದಿ, ಮುನಿಗಳಿಗೆ ನಮಿಸಿ, ದೈತ್ಯರಿಗೆ ಮೋಹವಿತ್ತ; ಬಾಯೊಳು ಮೈಯೊಳು ವಿಶ್ವರೂಪದೋರಿ, ಕೈಯೊಳು ಬೆಟ್ಟವೆತ್ತಿ ಸುಪ್ರಿಯರಿಗೆ ಸುಜ್ಞಾನವಿತ್ತ; ಮಾತನಿ ಮೊಲೆಯೂಡಲು ಶಿಶುಪಾಲ ಕೊಂಬಂತೆ ನತುಕ್ಲಕೆ ಸಮ್ಯಕ್ಜ್ಞಾನ ಬಂತು, ಜಿಗಳಿಗಳಂತೆ ಮೊಲೆಯ ಪಿಡಿದ — ಖಳರು ಕುತ್ಸಿತಕ್ಕೆರಗಿದರು. ಹೀಗೆ ಮಿಶ್ರಚರಿತ್ರದಿಂದ ಮಿಶ್ರ ಜೀವರಿಗೆ ಸಮ್ಮಿಶ್ರ ಜ್ಞಾನವನೆ ಬೆರಸುವ. ಇದರಿಂದ ಅವರಿಗೆ ವಿಸ್ಮಯ, ಹರಿ ಮಾತನಾಡದೆ ಸ್ವಸ್ವಯೋಗ್ಯತೆಯ ಮತಿಯಿತ್ತ! (66—69).

(ಪದ 9) ಸೂತ್ರಭಾಷ್ಯದ 3 ಶ್ಲೋಕದಿಂದ ತ್ರಿವಿಧ ಜೀವರ ಗತಿ ವಿವರಿಸಿದ್ದು — ಉತ್ತಮರು ಸುಖರೂಪರು, ಮಧ್ಯಮರು ಸುಖ ದುಃಖ ಮಿಶ್ರರು, ಅಧಮರು ದುಃಖ ರೂಪರು. ಉತ್ತಮರಿಗೆ ನಿತ್ಯಸುಖ, ಅಧಮರಿಗೆ ನಿತ್ಯ ದುಃಖ, ಮಾನುಷರಿಗೆ ಸ್ವರೂಪ ಸುಖ ದುಃಖ ನಿತ್ಯಬದ್ಧ.[234] ಪ್ರಾಕೃತ ಲಿಂಗದೇಹ[235] ಸಂಗದಿಂದ ಸಂಸಾರದಲ್ಲಿ ಕಂಗೊಳಿಸದ ಈ ಸ್ವರೂಪ, ಲಿಂಗದೇಹಭಂಗವಪ್ಪುದು ತೋರುವುದು. ಇಲ್ಲಿಯು ಸುಖ

---

233. ಒಂದು ಸಿದ್ಧಾಂತಾಭಿಮಾನದಿಂದ ಇನ್ನೊಂದರ ದ್ವೇಷದಿಂದಲ್ಲ, ಯುಕ್ತಿ ಯುಕ್ತ ಸಿದ್ಧಾಂತಕ್ಕೆ ಮಾರುಹೋಗಿ ರಚಿಸಿದೆ (ಯು.ಮಲ್ಲಿಕೆ 1).

234. ಸ್ವರೂಪಾವಿರ್ಭಾವಾನಂತರವೂ ಸುಖದುಃಖ ಸಂಬಂಧ.

235. ಸ್ವರೂಪ ದೇಹಕ್ಕೆ ಹೊಂದಿಕೊಂಡಿರುವುದರಿಂದ ಲಿಂಗ (ಲಕ್ಷ) ದೇಹವೆನ್ನುವುದು.

ದುಃಖದ್ದು ಸಂಸಾರದಲ್ಲಿ ಎಲ್ಲರಿಗೂ ಸರಿ ಎಂದು ತೋರುವುದು; ಆದರೆ ಮೋಗುಂಬ ಸ್ವರೂಪ ಸುಖದುಃಖ ಮಿಶ್ರರಿಗೆ ಆಗಬೇಕು.[236] ಬರಿ ಸುಖದುಃಖದ್ದು ಸಂಸಾರ, ಪ್ರಕೃತಿ ಹೋದ ಮೇಲೆ ಚಿದ್ರೂಪ ಸುಖದುಃಖ ವ್ಯಕ್ತವಾಗುವುದು. ದೇಹಿಗಳ ತ್ರಿವಿಧ ಸ್ವರೂಪ[237] ಹೊಂದಿಸುವುದೆಂಬುದುಂಟು; ಸ್ವಭಾವೇತರ ಸುಖದುಃಖ ಲಿಂಗದೇಹ ಕಾರಣ ದಿಂದಾದುವು; ಇದಕಾಗಿ ತ್ರಿವಿಧರಿಗೂ ಲಿಂಗಭಂಗ ಬೇಕು. ತ್ರಿವಿಧ ಸ್ವಭಾವಕ್ಕೆ ಕಲ್ಲು ಹಾಕಿದವ ಕೋಬಿದನೆ? ಮಧ್ಯಮರಿಗೆ ಅಲ್ಲಿ ಇಲ್ಲಿ ಮುಕ್ತಿಯಿಲ್ಲ ಎಂಬವರು ಬಲ್ಲರೇ ಇದರ ಭಾವ? ಹರಿಗೆ ಅವರ ಸೃಷ್ಟಿ ವೃಥಾ ಸಲ್ಲದು, ಅವರ ಸಾಧನ ಬರಿದೆ? ತ್ರಿವಿಧ ಸಾಧನ, ತ್ರಿವಿಧ ಫಲಗಳುಂಟು. ಭಕ್ತಿ—ದ್ವೇಷಗಳಿಗೆ ಫಲ ಹೇಳಿದ ಶ್ರುತಿ ಸಾರ್ಥಕ್ಯ ಮಧ್ಯಮರಲ್ಲಿ. ಅದರಿಂದ ತ್ರಿವಿಧರಿಗೂ ಲಿಂಗದೇಹ ಹೋಹದೆಂಬುವುದು. ತತ್ವಜ್ಞಾನ ಮಿಶ್ರಜ್ಞಾನ ಮಿಥ್ಯಾಜ್ಞಾನದಿಂದ ಲಿಂಗದೇಹ ತ್ರಿವಿಧರೊಳಿದ್ದು ತ್ರಿವಿಧ ಭೋಗವಹವು. ಕೆಲವರಿಗೆ ವಿರಜಾ ಸ್ನಾನದಿಂದ ಲಿಂಗದೇಹ ಭಂಗ, ಕೆಲವರಿಗೆ ಉರಗನ ಹೆಡೆಯಂತೆ ಸ್ವರೂಪ ಜ್ಞಾನ ಪಕ್ವವಾಗಲು ಭಂಗ. ಆದರೂ ಜ್ಞಾನಕ್ಕೆ ಹಿರಿಯತನವೆಂದು ಹರಿ ಉತ್ತಮ ಜ್ಞಾನಿಗಳ ನದಿಯಲ್ಲಿ ಮುಳುಗಿಸಿ ಮುಕ್ತಗೊಳಿಸುವ; ಇತರರಿಗೆ ವಸ್ತ್ರಾಂತರದಂತೆ ಲಿಂಗದೇಹ ಹೋದರೆ ಸಾಕು, ಜ್ಞಾನಿಗಳಿಗೆ ಸ್ನಾನವೂ ಬೇಕೆಂದು ಲೋಕಪ್ರಸಿದ್ಧ. ಅಂತು ಮೂವರೂ ಗತಿ ಪಡೆದು ಉತ್ತಮ ಮಧ್ಯಮಾಧಮ ಲೋಕದಲ್ಲಿಹರು (70—85).

(ಪದ 10) ಅನಂತಗೆ ಬ್ರಹ್ಮಕಲ್ಪ ನಿಮಿಷಮಾತ್ರವೆಂಬ ಭಾಗವತ (3—12—37). ಉದ್ಧರಿಸಿ, ಮುಗಿಸಿದ್ದು — ಕಣ್ರೆಪ್ಪೆ ತೆರೆವ ಕಾಲದಲ್ಲಿ ಜನನ ಮರಣವೈದುವ ಬ್ರಹ್ಮಾದಿ ಜೀವರ ಹರಿಗೆ ಸರಿ ಎನಬಹುದೇ? ಹರಿಗಿದು ನಿಮಿಷ[238]ವೆಂಬುದೂ ಉಪಚಾರಿಕ; ನಿಮಿಷವಿದೆಲ್ಲ ವಾದರೆ ಕಾಲದಿರವನರಿವ ಕವಿ ಯಾವ? ಅಂತಾದಿ ಇಲ್ಲದ ನಾರಾಯಣಗು, ಇಂತು ಪರಾಂತದಿ ಅಳಿವ ಜೀವರಿಗೂ ಅಂತರವಿಲ್ಲವೇ? ಅವನೆ ಸರ್ವೋತ್ತಮ, ಪರದೇವತೆ, ಸುರಚಕ್ರವರ್ತಿ, ವೇದವೇದ್ಯ; ಆಶ್ರಿತ ಮೋಹನ ಮೋಹಾಂಧಕಾರ ಮಾರ್ತಾಂಡ, ನಿರಹಂಕಾರಿ ರಕ್ಷಕ, ಸೋಹಂ ಎಂದವರಿಗೆ ಶೋಕಕಾರಕ! (86—90).

---

236. ಉಡುಪಿ ಪ್ರತಿಯಲ್ಲಿ ಈ ನುಡಿಯ ಉತ್ತರಾರ್ಧವಿಲ್ಲ, ಮುಂದಿನ ನುಡಿಯೂ ಸರಿಯಾಗಿಲ್ಲ.

237. 3ನೆಯ ಸಂಧಿ, 3ನೆಯ ಪದಾದಿಯ ನಿರ್ಣಯ ಶ್ಲೋಕದ ಮಧ್ಯಮರ ವಿಷಯದ ವಿವರಣೆ ಇಲ್ಲದೆ.

238. ಕ್ಷಣದ $\frac{1}{3}$ ಮಾತ್ರ.

ಇದು ಮುತ್ತುರತ್ನ ತೆತ್ತಿಸುವಂತೆ ಸುತತ್ವಸಾರ ಯುಕ್ತಿಯಿಂದ ಹೇಳಿದ ವಾದಿರಾಜರೋಕ್ತಿಯಲ್ಲಿ, ಸ್ಥಿತಿಯೊರವ ಪೊಸ ಬಗೆಯ ತುದಿಯ ಸಂಧಿ (91– 92). ಹಿಂದಿನ ಸಂಧಿಗಳಲ್ಲಿ ಆಯಾ ಸಂಧಿಯ ವಿಷಯ ಮಾತ್ರ ಹೇಳುತ್ತಿದ್ದ ಉಪಾಂತ್ಯ ನುಡಿ, ಇಲ್ಲಿ ಇಡೀ ಕೃತಿಯ ಬಗ್ಗೆ ಹೇಳಿ ಮಂಗಳ ಮಾಡಿದೆ. 3 ಶ್ರುತಿ, 9 ಶ್ಲೋಕ ಆಧರಿಸಿ, 92 ನುಡಿಗಳಲ್ಲಿ ಸ್ಥಿತಿಕಾರ್ಯದಂಥ ಪ್ರಮೇಯವನ್ನು ಕಾವ್ಯಮಯವಾಗಿ ಬಣ್ಣಿಸಿ, ಜನಸಾಮಾನ್ಯರಿಗೆ ಮುಟ್ಟಿಸಿದ ವಾದಿರಾಜರ ಸ್ವಂತಿಕೆ ಕೌಶಲಗಳೆರಡೂ ಗಮನಾರ್ಹ.

ಈ ಸಂಧಿಗೆ ಹೊಂದಿಯೇ ಈ ದಿವ್ಯ ಕೃತಿಯ ಫಲಶ್ರುತಿಯಿದೆ (19 ನುಡಿ) —

ಈ ಪದವೆ ಶುಭಪದ, ಈ ಪದವರ್ತಿಯ ಪದ,
ಈ ಪದವೆ ಸಂಪದಾಸ್ಪದ,
ಈ ಪದವೆ ಹರಿಪದ ದೀಪವೆನಿಪ ಪದ,
ಈ ಪದವೆ ಆಪದಂತಕ ಪದ (93)

ಭಯವ ಪರಿಹರಿಸುವ ಪದ, ನಯನ ತೋರುವ ಪದ,
ಪ್ರಿಯ ಪದವನೇರಿಸುವ ಪದ,
ಹಯವದನರಾಯನ ಪ್ರಿಯಕೆ ಪಾತುರನಾಗಿ
ಜಯಿಸುವ ವಾದಿರಾಜನ ಪದ (94)

ಇಲ್ಲಿಯ ಆದ್ಯಂತ ಪ್ರಾಸಾನುಪ್ರಾಸ ಯಮಕ ಶ್ಲೇಷಾಲಂಕಾರ ವೈಭವ ವಿಶೇಷವೆನಿಸಿದೆ. ಹರಕೆ ಹಾರೈಕೆಗಳೊಂದಿಗೆ ಮುಂದುವರಿದಿದೆ:

ಆಯುಷ್ಯ ಹೆಚ್ಚಲಿ, ಶ್ರೀಯರಸ ಮೆಚ್ಚಲಿ,
ಶ್ರೇಯೋಮಾರ್ಗ ಮನ ನೆಚ್ಚಲಿ,
ಮಾಯಿ ಬೆಚ್ಚಲಿ, ಸುಜನರಾಯಾಸ ಬಿಚ್ಚಲಿ,
ಬಾಯ ಮುಚ್ಚಲಿ ವಾದಿಗಳ (95)

ಭಕುತರೊಳಾಡಲಿ, ಮುಕುತಿಯ ಬೇಡಲಿ,
ಸುಖದ ರಾಶಿಯ ನೋಡಲಿ,
ವಿಕೃತಿಗಳೋಡಲಿ, ಸುಕೃತರ ಕೂಡಲಿ,
ಅಖಿಲರೀ ಕೃತಿಯ ಪಾಡಲಿ (96)

ಪಾಠಕರಲ್ಲಿ ಹರಿದಾಸ್ಯಭಾವ ಸ್ಥಿರವಾಗಲು ಪುನಃ ಹರಿಯನ್ನು ಸಪರಿವಾರ ನೆನೆದುದು, ಸ್ವಪ್ನಪದದ ಆದಿಯಂತಿದೆ —

ನೆನೆವೆ ನಾರಾಯಣನ, ನೆನೆವೆ ನಾರಾಯಣಿಯ,
ನೆನೆವೆ ನಾರಾಯಣ ಕುವರರ,
ನೆನೆವೆ ಹರಿವಾಹನನ, ನೆನೆವೆ ಹರಿಮಂಚವ,
ನೆನೆವೆನು ಹರಮುಖ್ಯ ಸುರರ (97)

ನೆನೆವೆ ನಾರಾಯಣನ ಪಾದವ
ನೆನೆವೆ ನಾರಾಯಣಿಯ ಚರಣವ
ನೆನೆವೆ ಪ್ರಾಣನ ಪದವ ಭಾರತೀದೇವಿಯಂಘ್ರಿಯನು (ಸ್ವ.ಪ.)

ಮುಂದಿನ ನುಡಿ ಬೆಂಗಳೂರು ಪ್ರತಿಯಲ್ಲಿ ಮಾತ್ರವಿದೆ —

ಇಂತಪ್ಪ ಹರಿಲೀಲೆ ದಶದಿಶ ಮುಟ್ಟಲಿ,
ಸಂತರ ಭಯಗಳಟ್ಟಲಿ,
ಚಿಂತೆಗಳಟ್ಟಲಿ, ಕೃತಾಂತನವರಟ್ಟಲಿ,
ಸಂತತ ಖಳರ ಮೆಟ್ಟಲಿ (98)

ಲಕ್ಷ್ಮೀದ್ವಾರಾ ಕೃಷ್ಣಾರ್ಪಣಗೈದುದು —

ಈ ದಿವ್ಯ ಕೃತಿ ಕಮಲ ಕೃಷ್ಣಾರ್ಪಿತವಾಗಿ,
ಶ್ರೀದೇವಿಯುದನ ಕೈಪಿಡಿದು,
ಮೋದದಿ ಸದಮಲ ಸಂಪದವೀಯಲಿ
ವಾದಿರಾಜ ಯೋಗಿವರಗೆ (99)

ನಿರಹಂಕಾರದಿಂದ ಹರಿಪಾದ ಸಾನ್ನಿಧ್ಯವೇ ತಮ್ಮ ಪಾದೋದಕ ಮಹಿಮೆಗೆ ಮೂಲ ಎನ್ನುವ ನುಡಿಗಳಿಂದ ಇದು ಬಹುಶಃ ಅಂತ್ಯಕಾಲದ ಕೃತಿ ಎಂದು ಧ್ವನಿತವಾಗುತ್ತದೆ —

ಅದ್ಭುತವಲ್ಲವೆ ಹಯವದನ ತನ್ನ
ಪದ ಪದುಮದ ಸನ್ನಿಧಿಯ
ಹುದುಗಿಸಿ ವಾದಿರಾಜನ ಪಾದೋದಕದಿ ವಿ
ವಿಧ ಭೀತಿಯನೋಡಿಸುವುದು (100)

ಭೂತ ಪ್ರೇತಗಳವನ ಪಾದೋದಕ ಭೀತಿಗೆ
ಕಾತರಿಸಿ ದಶದಿಸೆಗೋಡುವವು,
ಪ್ರೀತಿಯಿಂದಲಿ ಜನರು ಕೊಡುವ ಕಾಣಿಕೆಗೆ ಶ್ರೀ
ನಾಥನು ಜನರ ಸಲಹುವನು (101)

ಭೂತರಾಜರೂ ತಮಗೆ ಕಾಣಿಕೆ ಕೊಡಿಸಿ ಋಣಮುಕ್ತರಾಗುವರೆನ್ನುತ್ತಾರೆ —

ಮುಂದಿ
ಜನ್ಮಾಂತರ ಕರ್ಮಭೂಮಿಯಿಂದೊಳು
ಬೊಮ್ಮರಕ್ಕಸನಾಗಿ ಜನಿಸಿ,
ಅಮ್ಮಮ್ಮ ಈ ಮುನಿಗೆ ಹಣವವರಿಂದ ಕೊಡಿಸಿ
ತಮ್ಮ ಋಣ ಸಂದಿತೆಂದೊಪ್ಪುವರು[239] (102)

ತ್ರಿವಿಕ್ರಮನೇ ಕಾಣಿಕೆ ತರಿಸಿ ಉತ್ಸವ ಮಾಡಿಸಿಕೊಂಡುದರಿಂದ, ಕೃತಿ ಕೊನೆಗಾಲದ್ದೆಂದು ಸ್ಪಷ್ಟ —

ದೇಶದೇಶದಿಂದ ಕಪ್ಪಕಾಣಿಕೆಗಳ
ಆ ಸರ್ವೋತ್ತಮ ತಾನೆ ತರಿಸಿ
ಸ್ವಸೇವಕನ ಕೈಯಿಂ ರಥೋತ್ಸವ ಮಾಡಿಸಿ,
ಭಾಸುರ ಯಶವ ತಂದಿತ್ತ[240] (103)

ಸರಸ್ವತಿ ಸದಾ ಪ್ರಸನ್ನಳಾಗಿ ಯೋಗಿಗಳೂ ಕೃತಿ ಮನ್ನಿಸಿದರೆಂಬಲ್ಲಿ ಋಜುತ್ವಾ ಧ್ವನಿತ —

ವಾಗೀಶ್ವರೀದೇವಿ ವದನದಿ ನೆಲೆಸಿ, ಸ
ರ್ವಾಗಮ ತತ್ವಸಾರವನು
ಯೋಗಿಗಳೆಲ್ಲರು ತಲೆದೂಗುವಂದದಿ, ಆ
ವಾಗಲವರಿಗೊಂದಿಹರು (104)

ಪುಟಬೆಂಡಿನಂಥ ಹರಿಭಕ್ತರ ಹೆಚ್ಚಳಪೊಗಳಿದ ಈ ನುಡಿ ಬೆಂಗಳೂರ ಪ್ರತಿಯದು —

ಇಳೆಗೆ ಇಟ್ಟ ಬೆಂಡು ಪುಟವೆದ್ದಂ ಪೋಲ್ವಮುದ
ತಳಕೇರಿ ಒದಗಿ ಇಮ್ಮಡಿಸಿ
ತೋರುವಂತೆ ವೈಷ್ಣವರು ಖಳರಿಗಳಡಿ ಹರಿಯ
ಒಲವಿಂದ ದಿನ ದಿನ ಹೆಚ್ಚುವರು (105)

ಮುಪ್ಪಿನಲ್ಲಿ ಕೃತಿಗೈಸಿ ಕೀರ್ತಿಯಿತ್ತವನೂ ಹರಿ ಎಂಬ ಚಾರಿತ್ರಿಕ ನುಡಿಯೂ ಬೆಂಗಳೂರ ಪ್ರತಿಯದು —

ಇಳೆಗೆ ಇಟ್ಟ ಹೆಸರು
ಕಣ್ಣು ಕಾಣದ ಬಲು ಜೀರ್ಣ ದೇಹದವನ
ಮುನ್ನ ತಿದ್ದಿ ಮಂಗಳವಿತ್ತು,

---

239. ಉಡುಪಿ ಪ್ರತಿಯ ಪಾಠ ಅಸಮರ್ಪಕ — ನುಡಿಗಳೂ ಹಿಂದು ಮುಂದು.

240. 1582ರ ತ್ರಿವಿಕ್ರಮ ಸ್ಥಾಪನೆ ಇಲ್ಲಿ ಉಕ್ತ; ತ್ರಿವಿಕ್ರಮದಾಸರೆಂಬಲ್ಲಿ ಋಜುತ್ವಾ ಧ್ವನಿತ. ಈ ನುಡಿಯ 'ಕೈಯಿಂ' ಪ್ರಯೋಗ ಬಾಲಲೀಲೆ (ಪು.57)ಯಲ್ಲೂ ಬಂದಿದೆ ಕೃತಿಯೂರ್ಧದಲ್ಲಿ.

ಉನ್ನತ ಕೀರ್ತಿಯ ಜಗದೊಳು ತುಂಬಿಸಿದ ಪ್ರ
ಸನ್ನ ಹಯವದನಗೆಣೆಯು[241] (106)

ಅಂತೆಯೇ ಹರಿಗೆ ಶರಣೆಂದು ಮೊರೆಯಿಡುತ್ತಾರೆ —

ಇನ್ನು ಹಯವದನ ಎನ್ನ ಇಹಪರಗಳಿಗೆ
ನಿನ್ನ ಕಾರುಣ್ಯ ಕಾರಣವೊ,
ಅನ್ಯರನರಿಯೆ ಶರಣ್ಯಕೈಪಿಡಿದು
ಎನ್ನ ರಕ್ಷಿಪ ಭಾರ ನಿನ್ನದು (107)

ಈ ಸೊಬಗಿನ ಸೋನೆಗೆ ಸದ್ಗತಿ ಸಂಪಾದಿಸಲೆಂದು ನಮ್ರವಾಗಿ ನುಡಿದಿದ್ದಾರೆ —

ತತ್ವಸಾರದ ಸೊಬಗಿನ ಸೋನೆಯನು ಹರಿ
ಭೃತ್ಯನೆನಿಪ ವಾದಿರಾಜ
ಭಕ್ತಿಭರಿತನಾಗಿ ಪೇಳಿದನಿದ ಕೇಳಿ
ಸದ್ಗತಿ ಸಂಪಾದಿಸಿರಿ[242] (108)

ಇಲ್ಲಿಗೆ ಫಲಶ್ರುತಿಯೂ ಮುಗಿದು ಪುನರಾವರ್ತಿತ ಪಲ್ಲವಿ 109ನೆಯ ನುಡಿ ಎನಿಸಿದೆ; ಕೊನೆಯ 2 ನುಡಿ ಪ್ರತಿ ಸಂಧಿಯ ನುಡಿಗಳನ್ನು ಲೆಕ್ಕಿಸಿ ಕೃತಿ ಸ್ವರೂಪ ಸೂಚಿಸಿವೆ (ಈ 3 ಉಡುಪಿ ಪ್ರತಿಯಲ್ಲಿಲ್ಲ) —

ಮೊದಲ ಸಂಧಿಗೆ ನೂರ ನಾಲ್ವತ್ತು ಪದಗಳು,
ಪದಗಳೈವತ್ತು ದ್ವಿತೀಯಕೆ,
ಆದರ ಮೇಲಣ ಸಂಧಿ ಪದಗಳೆಂಭತ್ತೆರಡು,
ತುದಿಯ ಸಂಧಿಗೆ ನೂರ್ಹನ್ನೊಂದು[243] (110)

ಇಂತು ಮುನ್ನೂರ ಎಂಭತ್ತೆಂಟು ಪದಗಳು
ಸಂತೋಷದಿ ವಾದಿರಾಜ
ಅಂತರಂತರ ಪ್ರಮಾಣ ಶ್ಲೋಕಂಗಳ
ತಿಂತಿಣಿಯ ಕೂಡಿ ಮಾಡಿದನು[244] (111)

---

241. 'ಕೃಷ್ಣಸ್ತುತಿ—ಲಕ್ಷ್ಮೀರಾಜ್ಯವೃತ್ತಿ' ಗಳ ದೃಷ್ಟಿಯಿಂದಲ್ಲಿ ಸೂಚಿತವಾಗಿ ಕೃತಿ ಕೊನೆಗೊಳ್ಳದು. ('ಎನಗೆ ನೀನೇ ಬಂಧು' ಎಂಬ ಹಾಡಿನ ನುಡಿಯೂ 'ಎನಗಿರ್ಪ ಅಘದೋಷವ ಕಳೆದು ರಕ್ಷಿಸಿಕೊಡು' ಎಂದು ಕೊನೆಗೆ ರಚಿತ).

242. ಬೆಂಗಳೂರ ಪ್ರತಿಯ 3ನೆಯ ಸಂಧಿಯ ಅಧ್ಯಂತಕ್ಕೆ ಮಾತ್ರ ಕಾಣುವ ಸೊಬಗಿನ ಸೋನೆ' ನಾಮಾಂತರ ಪ್ರತಿಕಾರನ ಕೈವಾಡ; ವಸ್ತುತಃ ಅದು ಇಡಿಯ ಕೃತಿಯ ನಾಮಾಂತರವೆಂಬುದಿಲ್ಲ ಸ್ಪಷ್ಟ, 'ತತ್ವಸಾರ'ದಂತೆ.

243. 2,3ನೆಯ ಸಾಲುಗಳಲ್ಲಿ 'ಪದಗಳೈವತ್ತೆರಡು, ಪದಗಳೆಂಭತ್ತೊಂದು' ಎಂದಿರ ಬೇಕಾದ್ದು, ಪ್ರತಿಕಾರನಿಂದ ವ್ಯತ್ಯಾಸವಾಗಿದೆ.

244. ಅದಿ ಷಟ್ಪದಿಯನ್ನು ಹಿಡಿದರೆ 388ರ ಮೊತ್ತ ಸರಿಯಿದೆ.

ಹೀಗೆ ಜನಸಾಮಾನ್ಯರು 'ದಾರಿ ಯಾವುದಯ್ಯ ವೈಕುಂಠಕೆ' ಎನ್ನುತ್ತಿರಲು, ಪುರಂದರದಾಸರು 'ಒಂದೇ ಕೂಗಳತೆ, ಅಲ್ಲದೆ ನಮ್ಮನೆ — ಇಲ್ಲದು ಸುಮ್ಮನೆ' ಎಂದು ಹರಿನಾಮ ಸ್ತೋತ್ರಪಾನಮಾರ್ಗ ಸೂಚಿಸಿದ್ದಕ್ಕೆ ವಾದಿರಾಜರೂ 'ಕೂಗಳತೆಗೆ ಕೊಂಡವೊ, ಪಾರ್ಥೀಯುವ ಕಬ್ಬಿರೂ ಪಯಣ ಸಮ್ಮತವಾದರೆ'ಂದು 'ವೈಕುಂಠ ವರ್ಣನೆ' ಇತ್ತರು. 'ನಮಗಿದು ಕಲ್ಪಿತವೆನಿಸಿದರೂ ಅಪರೋಕ್ಷಾನುಭವ ಅವರೇ ಬಲ್ಲರು.[245] ಅದರೂ ಜನಸಾಮಾನ್ಯರಿಗಿತ್ತುದರಿಂದ ಈ ಮಹತ್ವರ ಸಾಧಾರ. ಶಾಸ್ತ್ರಕಾವ್ಯ ಸುಲಭ ಶೈಲಿಯ[246] ಸಾಂಗತ್ಯದಲ್ಲಿದೆ. ಇಂಥ 'ಪೊಸ ಬಗೆ'ಯ ವಸ್ತುವಿನ ವರ್ಣಕ ಕೃತಿಯನ್ನು ಚೆನ್ನಾಗಿ ಸಂಪಾದಿಸಿ ಕನ್ನಡಿಗರಿಗೆ ಒದಗಿಸುವುದಿನ್ನೂ ಅಗತ್ಯವೆನಿಸಿದೆ.

<u>ಕಾವ್ಯ</u>

(8) <u>ಗಜೇಂದ್ರ ಮೋಕ್ಷ</u>: ಮೋಕ್ಷಮೂಲವಾದ ಹರಿಪ್ರಸಾದಕ್ಕೆ ಭಕ್ತಿಯ ದಾರಿ ದೋರುವ ಕಥಾಪ್ರಸಂಗವಿದು ಪುರಾಣಪ್ರಸಿದ್ಧವೆನಿಸಿ ಭಾಗವತೋಕ್ತ. ಪುರಂದರಾದಿ ಹರಿದಾಸರೂ ಇದನ್ನು ಹಾಡಿದ್ದುಂ, ವಾದಿರಾಜರ 50 ಚೌಪದಿಗಳ ಕಿರುಕೃತಿಯೊಂದು ಪ್ರತ್ಯೇಕ ಅಚ್ಚಾಗಿದ್ದರೂ[247] ಅವರ ಹಾಡಿನ ಸಂಗ್ರಹಗಳಲ್ಲಿ ಬಂದಿಲ್ಲ, ವಿದ್ವಾಂಸರಿಂದ ಉಕ್ತವಾಗಿಲ್ಲ; ಪರಿಶೀಲನೆ ದೂರ ಉಳಿಯಿತು.

ಅದರ ಆರಂಭದ ದೇವತಾಸ್ತುತಿ, ಕೃತಿ ರಚಿಸುವ ನಮ್ರ ನಿವೇದನೆ ಇದು —

ಶ್ರೀನಾಥ ಪಾರ್ವತಿಯನಾಥ ಶರಣೆಂಬೆ
ವಾಣಿ ಭಾರತಿಯ ಗಜಮುಖನಬಲಗೊಂಬೆ
ನಾನು ಬಲ್ಲಷ್ಟು ಪೇಳುವೆನು ಈ ಕಥೆಯ
ಶ್ರೀನಾಥ ಗಜರಾಜಗೊಲಿದ ಸಂಗತಿಯ (1)

---

245. ಕೆ.ಬಿ.ಪಾಂಡುರಂಗಿ, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, 4—2.

246. ಫಳಿಗೆ, ಫಕ್ಕನೆ, ಗಂಟಲಗಾಣ, ಬಾಹ, ಐಸೆ, ಸಥೆ, ಧೇನಿಸು, ಉಂಬುವದಕೆ, ವ್ಯಕುತ, ಪಾತುರ, ಕೈಯ — ಮೊದಲಾದ ದೇಸೀಯ ಪ್ರಯೋಗ ಇತರ ಕೃತಿಗಳಂತೆ ಇಲ್ಲೂ ಗಮನಾರ್ಹವಾಗಿವೆ.

247. ಹೊಂಬಾಳೆ ಪ್ರಕಾಶನ ಗದಗ, 1971

ಮುಂದಿನ ನುಡಿಯಿಂದ ಕಥೆ ತೊಡಗಿದೆ. ಗೌಳ[248]ದೇಶದ ವಿಷ್ಣು ಭಕ್ತ ನೃಪ ಇಂದ್ರದ್ಯುಮ್ನ ಹರಿಯ ನೆನೆದು ರಾಜ್ಯ ತ್ಯಜಿಸಿ ಮೇರು ಮಂದರದೆಡೆ ತ್ರಿಕೂಟಾಚಲಕೆ ಬಂದ.[249] ಸಿದ್ಧ ಕಿನ್ನರ ಗಂಧರ್ವರ ಸ್ಥಾನವದು. ನದಿಯ ಸ್ನಾನ ಮಾಡಿ ದ್ವಾದಶ ನಾಮಗಳನಿಕ್ಕಿ ಸಂಧ್ಯಾ ವಂದನೆ ಮಾಡಿ ಪದ್ಮಾಸನದಿ ಧ್ಯಾನಸ್ಥನಾದ. ಅಗಸ್ತ್ಯ ಬಂದ, ವಂದನೆ ಮಾಡದಿರಲ್ಕೆಂದ, 'ಕುಂಜರದ ರೂಪಾಗಿ ಜನಿಸು ಹೋಗೆ'ಂದ. 'ತಪ್ಪಾಯ್ತು, ನಿಶ್ಶಾಪ ಎಂದಿಗೆ'ನಲು, 'ವಿಷ್ಣುಚಕ್ರವು ಬಂದು ಸೋಂಕುತಲೆ ನಿಶ್ಶಾಪವೆ'ಂದ. ಧ್ಯಾನವಡಗಿದವ, ಆ ಕ್ಷಣದಿ ಆನೆಯಾದನು ನೃಪ. ಮೇರು ಕದಳಿ ಇಳಿದು ಬರುವಂತೆ ಮದ ಸುರಿಯೆ ಆನೆಗಳ ಕೂಡಿ ಕಾನನ ಸಂಚರಿಸುತ್ತಿದ್ದ. ಬೇಸಗೆ ಬರಲು ಕೆರೆ ತೊರೆ ಬತ್ತಿ, ತನ್ನ ಸತಿ ಸುತರು ಬಳಲಿದರು. ತಾವರೆ ಕೊಳಪೊಂದ ಕಂಡ ಗಜರಾಜ ಹೊಕ್ಕು ಕ್ರೀಡಿಸುತಿರಲು

ಮುನಿಯ ಶಾಪದಲೊಂದು ಮಕರಿ ಮಡುವಿನೊಳು
ಹಲವು ಕಾಲದಿ ತಪಿಸಿ ಜೀವಿಸುತಿರಲು,
ಮದಗಜವು ಹೊಕ್ಕು ಮಡುವನೆ ಕಲಕುತಿರಲು,
ತಡೆಯದಾ ಮಕರಿ ಹಿಡಿಯಿತು ಕರಿಯ ಕಾಲು[250] (17)

ಅತ್ತಿತ್ತ ನೋಡಿದನು, ಎಳೆದು ಸೆಳೆದು ನೋಡಿದನು, ಬಿಡದು ಆ ಮಕರಿ; ಸತಿ ಸುತರೆಲ್ಲ ಸೆಳೆದರೊಂದಾಗಿ, ಕೈಲಾಗದೆನುತ ತಿರುಗಿದುವಾಯಾಸದಿಂದ ದೂರದಲಿದ್ದರು. ಮಕರಿ ಕಾಲು ಕಚ್ಚಿ ಸೆಳೆಯುತಲಿ ರಕ್ತಮಯವಾಯಿತು ನೀರು. 'ಅಕಟಾ ಎನಗಿನ್ನು ಗತಿ ಯಾರು' ಎನುತ, ದಿಕ್ಕುಗೆಟ್ಟು ಮೊರೆಯಿಟ್ಟ ಗಜರಾಜ (18–23). ವಾದಿರಾಜರಿಲ್ಲಿ ಸಹಜವಾಗಿ ತಮ್ಮ ಮೆಚ್ಚಿನ ದಶಾವತಾರ ವರ್ಣನೆಯ ಮಾಡಿಕೊಂಡಿದ್ದಾರೆ —

ವೇದಗಳ ಕದ್ದುಕೊಂಡೊಯ್ದ ದಾನವನ
ಸಾಧಿಸಿದೆ ಭೇದಿಸಿದೆ ಅವನ ಛೇದಿಸಿದೆ,
ಆದಿ ನಿಗಮವ ತಂದು ಕಮಲಜನಿಗಿತ್ತೆ,
ವೇದಾಂತವೇದ್ಯ ಮತ್ಸ್ಯಾವತಾರ ಶರಣು (24)

---

248. ಪುರಂದರದಾಸರಲ್ಲಿದು ಪಾಂಡ್ಯ ದೇಶ.

249. ಪುರಂದರದಾಸರು ಆನೆಯಾಗಿಯೇ ಬಂದನೆಂದಿದ್ದಾರೆ.

250. ಇಲ್ಲಿ ಅಂತ್ಯಪ್ರಾಸ ಗಮನಾರ್ಹ.

ಸುರಾಸುರರು ಪಾಲ್ಗಡಲ ಮಥಿಸುತಿರಲು,
ಮುರವೈರಿ ಹಾಸಿಗೆಯು ಹುರಿಮಾಡಿಕೊಂಡು,
ಭರದಿ ಮಂದರಗಿರಿಯು ಇಳಿಯುತಿರ,[251] ಬಂದು
ಗಿರಿಯನೆತ್ತಿದ ಕೂರ್ಮ ಹರಿ ನಿನಗೆ ಶರಣು (25)

ಸುರುಳಿ ಸುತ್ತಿದ ಭೂಮಿಯ ದಾಡೆಯಲಿ ತಂದೆ,
ದುರುಳ ಹಿರಣ್ಯಾಕ್ಷನನು ಬೇಗದಲಿ ಕೊಂದೆ,
ಧರಣಿ ದೇವಿಯನು ಸದಮಲದಲಿ ಗೆದ್ದ
ವರಹಾವತಾರ ಶ್ರೀಹರಿ ನಿನಗೆ ಶರಣು (26)

ಬಾಲಕನು ಕರೆಯಲಿಕೆ ಕಂಬದಲಿ ಬಂದೆ,
ಸೀಳಿ ರಕ್ಕಸನ ಕರುಳಿನ ಮಾಲೆ ಹಾಕಿದೆ,
ಶೀಲ ಪ್ರಹ್ಲಾದನಿಗೆ ಅಭಯವನು ಇತ್ತೆ,
ಶ್ರೀ ಲಕ್ಷ್ಮಿಯೊಡನಿದ್ದ ನರಸಿಂಹ ಶರಣು (27)

ಬಲಿಯು ದಾನವ ಬೇಡಿ ಬ್ರಹ್ಮಚಾರಿಯಾಗಿ,
ನೆಲವನೆಲ್ಲವ ಮೂರು ಅಡಿ ಮಾಡಿ ಅಳೆದೆ,
ಅಳೆದ ಪಾದದಲಿ ಭಾಗೀರಥಿಯು ತಂದೆ,
ಚೆಲುವ ವಾಮನಮೂರ್ತಿ ತ್ರಿವಿಕ್ರಮನೆ ಶರಣು (28)

ದುಷ್ಟ ಕ್ಷತ್ರಿಯ ನೃಪರ ಕುಲವ ಸಂಹರಿಸಿ
ರಕ್ತದಲಿ ಸ್ನಾನ ತರ್ಪಣವ ನೀ ಕೊಟ್ಟೆ,
ಮತ್ತೆ ವೇದಾಂತ ಶಾಸ್ತ್ರಗಳ ನೆರೆ ಓದಿ
ವಿಪ್ರ, ಭಾರ್ಗವರಾಮ ನಿನಗೆ ಶರಣು (29)

ಹರನ ಬಿಲ್ಲನು ಮುರಿದು ಧರಣಿಜೆಯ ತಂದೆ,
ದುರುಳ ರಾವಣನ ಶಿರಗಳ ಹತ್ತು ತರಿದೆ,
ವರವಿಭೀಷಣಗವನ ರಾಜ್ಯಗಳನಿತ್ತೆ,
ಶರಣ ರಕ್ಷಕ ಸೀತಾಪತಿ ರಾಮ ಶರಣು (30)

ಮಧುರೆಯಲಿ ಹುಟ್ಟಿ ಗೋಕುಲದಲ್ಲಿ ಬೆಳೆದೆ,
ತರಳತನದಲಿ ಹಾಲು ಬೆಣ್ಣೆಗಳ ಮೆದ್ದೆ,
ತುರುವ ಕಾಯುತ ಕೊಂದೆ ಹಲವು ರಕ್ಕಸರ,
ಬಲರಾಮ ಕೃಷ್ಣ ಗೋಪಾಲಕನೆ ಶರಣು (31)

---

251. ಇಳಿಬಿಟ್ಟ ಬೆನ್ನಿಲೆತ್ತಿದ ಕೂರ್ಮರೂಪ ಜೋ (ಬಾಲಲೀಲೆ, ಪು.241).

ತ್ರಿಪುರ ಸತಿಯರ ವ್ರತವ ಅಪಹರಿಸಿದವನೆ,[252]
ಪೃಥ್ವಿಯೊಳು ಅಶ್ವತ್ಥನಾಗಿ ಮೆರೆದವನೆ,
ಬಿಸಿಗಣ್ಣ ಹರಗೆ ಇಂಬಾಗಿ ನಿಂತವನೆ,
ಪಶುಪತಿ ಹರಗೆ ಇಂಬಾಗಿ ನಿಂತವನೆ,
ಪಶುಪತಿಪ್ರಿಯ ಬೌದ್ಧ ಅವತಾರ ಶರಣು (32)

ವರ್ಣಾಶ್ರಮಗಳೆಲ್ಲ ಒಂದಾಗಿ ಇರಲು,
ಬಿನ್ನಾಣದಿಂದ ತುರಗವನೇರಿಕೊಂಡು
ಬನ್ನಬಡಿಸುತ ಹಲವು ಪಾತಕರ ಕೊಂದೆ
ಬ್ರಹ್ಮಸ್ವರೂಪ ಕಲ್ಕ್ಯವತಾರ ಶರಣು (33)

ಅರಿಯದಂತಿರದೆ ಅಚ್ಯುತ ರಕ್ಷಿಸೆನ್ನ,
ಮರೆಯನೆಂದಿರದೆ ಮಾಧವ ರಕ್ಷಿಸೆನ್ನ,
ಕೇಳನೆಂದೆನದೆ ಕೇಶವ ರಕ್ಷಿಸೆನ್ನ,
ಕಾಣೆನೆಂದೆನದೆ ಕರುಣಿಸಿ ರಕ್ಷಿಸೆನ್ನ (34)[253]

ಗಜರಾಜನ ಮೊರೆಯನ್ನು ಕೇಳಿದ ದಾನವಾಂತಕ ವೈಕುಂಠನು[254] ಶಂಖ ಚಕ್ರಗಳಿಲ್ಲವೆಂದು ಶಂಕಿಸದೆ, ವಜ್ರಕುಂಡಲ ಹಾರ ಹೊಳೆಯೆ, ಪೀತಾಂಬರ ನೆಲಕೆ ಅಲೆಯುತಲಿ ಎದ್ದು ಬಂದನು. ಸಿಂಧುಸುತೆ ಪತಿ ಎಲ್ಲಿ ಪೋದನೋ ಎನುತ ಬರಲು, ಗರುಡ ಶಂಖ ಚಕ್ರ ಹರ ಪಾರ್ವತಿ ನಾರದರೆಲ್ಲ ನೆರೆದರು. ಚಕ್ರವನಿಟ್ಟು ಮಕರಿ ಹಲ್ಲು ಮುರಿವಂತೆ, ಗಂಧರ್ವ ರೂಪಿನಲಿ[255] ನಿಂತಿತಾ ಮಕರಿ. ಸುದರ್ಶನ ಗಜಕೆ ಸೋಕುತಲೆ ಒದಗಿದವು ಶಂಖ ಚಕ್ರ ನಾಲ್ಕು ಕೈಗಳಲಿ, ಪೀತಾಂಬರ ಕಿರೀಟ ಕುಂಡಲ ತುಳಸಿ ಮಾಲೆ ಒಪ್ಪಿದವು.[256] ಜಯ ಜಯ ಜಗನ್ನಾಥ ಎನುತ ಪದಗಳಿಗೆ ಬಂದು ಎರಗಿದನು. ವಾದ್ಯ ವೈಭವಗಳಿರಲು ಹೂಮಳೆ ಕರೆಯುವವರು, ಹರಿಯ ಕೊಂಡಾಡುವವರು, ಇವನ ಭಾಗ್ಯ ನೋಡುವವರು; ಹರಿ ಇವನೊಡನೆ ವೈಕುಂಠಕ್ಕೆ ಬರಲು ಸುರರು ಸ್ವಸ್ಥಾನ ಸೇರಿದರು (35— 47).

---

252. ತ್ರಿಪುರರ ಸತಿಯರ ಅಪಹರಿಸಿ ವ್ರತಗಳನ್ನು (ಹನುಮ ಸುವ್ವಾಲಿ, 12).

253. ಇಲ್ಲಿಯ ಪ್ರಾಸಾನುಪ್ರಾಸ ವೈಭವ ಗಮನೀಯ, ಇದು ವಾದಿರಾಜೀಯ ವೈಶಿಷ್ಟ್ಯ.

254. ಹರಿಯ ನಾಮಾಂತರ (ವೈ.ವ. 1,42).

255. 'ವಿಗಡದೇವಲಮುನಿಯ ಶಾಪದಲಿ ನಕ್ರನಾಗಿ ಹೂಹೂ ಗಂಧರ್ವ ನಿಜಗತಿಗೈದಿದನು' ಎಂದಿದೆ, ಪುರಂದರದಾಸರ 'ನಾರಾಯಣಾಯ ನಮೋ' ಎಂಬ 11 ವಾರ್ಧಕ ಷಟ್ಪದಿಗಳ ಕೃತಿ.

256. ಇದು ಸಾರೂಪ್ಯ ಮುಕ್ತಿ (ವೈ.ವ.1, 113).

ಹೊತ್ತಾರೆ ಎದ್ದು ಈ ಕಥೆ ಹೇಳಿ ಕೇಳಿದವರಿಗೆ ದುರ್ಬುದ್ಧಿ ತರಿದು ಸಾಯುಜ್ಯ ದೊರಕುವುದು.[257] ಹರಿಯ ನೆನೆದವರಿಗೆ ಪರಮಪದವಿ ಉಂಟು, ಕಾರಣ, 'ಕರಿರಾಜ ವರದನ ಶರಣೆಂದು ಭಜಿಸು' ಎಂಬ ಹರಿಕಾರುಣ್ಯದ ಫಲಶ್ರುತಿ ಹೇಳಿದ್ದಾರೆ ವಾದಿರಾಜರು (48— 49). ಕೊನೆಗೆ ಹರಿಯ ಜಯ ಜಯಕಾರದೊಡನೆ ಕೃತಿಗೆ ಮಂಗಳ ಮಾಡಿದ್ದಾರೆ —

ಜಯತು ಧ್ರುವರಾಯನಿಗೆ ವರವಿತ್ತ ದೇವ,
ಜಯತು ಪ್ರಹ್ಲಾದಗಭಯವನಿತ್ತ ದೇವ,
ಜಯತು ದ್ರೌಪದಿಯಭಿಮಾನವನು ಕಾಯ್ದ ದೇವ,
ಜಯತು ಜಯ ಹಯವದನ ಶ್ರೀ ವಾಸುದೇವ[258] (50)

ಹೀಗೆ ವಿಧಿಯ ಕೈವಾಡದ[259] ಮುಂದೆ ಹರಿಕಾರುಣ್ಯವೇ ಗತಿ ಎಂದರುಹುವ ಈ 'ಗಜೇಂದ್ರ ಮೋಕ್ಷ'ದ ಕೊನೆಗೆ ಹಯವದನಾಂಕಿತ ಇರುವುದರಿಂದಲೂ, ಕೆಲವೆಡೆ ಬಿಟ್ಟು ಸಾಮಾನ್ಯತಃ ಸಾಲ್ಗೊಂಡಿರುವ ಆದ್ಯಂತ ಪ್ರಾಸ — ದಶಾವತಾರ ವರ್ಣನದಂಥ ಸಾಮಾನ್ಯ ಲಕ್ಷಣಗಳಿರುವುದರಿಂದಲೂ, 'ಬಾಲಲೀಲೆ ಹನುಮ ಸುವ್ವಾಲಿ'ಯ ದಶಾವತಾರವರ್ಣನ ಸಾಮ್ಯ 'ವೈಕುಂಠನು, ಸಾಯುಜ್ಯ ದೊರಕುವುದು' ವೆಂಬಂಥ ಪ್ರಯೋಗಗಳ ಆಂತರಿಕ ಸಾಮ್ಯಗಳಿರುವುದರಿಂದಲೂ ಕೃತಿ ವಾದಿರಾಜರದೆಂಬಲ್ಲಿ ಅನುಮಾನವಿಲ್ಲ. ಆದರೆ ಕಾವ್ಯದ ಕಾವು ವಿಶೇಷವಾಗಿಲ್ಲದ್ದರಿಂದ ಆರಂಭದ ರಚನೆಯಾಗಿರಬಹುದು. ಆದರೂ ತನ್ನ ಭಕ್ತಿ ಸಂಗೀತ ಮೌಲ್ಯಗಳಿಂದದು ಸ್ತ್ರೀಸಾಮಾನ್ಯರ ಉದಯರಾಗವೆನಿಸಿದ್ದರಲ್ಲಿ ಅಚ್ಚರಿ ಇಲ್ಲ. ಸಂಗೀತಾನುಕೂಲ ಸಾಂಗತ್ಯದಂತಹ ಚೌಪದ ಛಂದಸ್ಸಿನ ಪ್ರಯೋಗವೂ ಇಲ್ಲಿ ಗಮನೀಯವೆನಿಸಿದೆ.

(9) ಕೀಚಕ ವಧೆ: ಭಾರತ ವಿರಾಟಪರ್ವದ ಪ್ರಸಂಗವಿಲ್ಲಿ ಭೀಮಾವತಾರಕ್ಕೆ ಸಂಬಂಧಿಸಿ ಬಂದಿದೆ. ಹರಿಯ ಭಕ್ತಿಯನ್ನೂ ಅದರಿಂದ ಮುಕ್ತಿಯನ್ನೂ ದೊರಕಿಸಿಕೊಡುವ ಜೀವೋತ್ತಮನ ಅವತಾರ ವಿಷಯವಾದ ಕಾರಣ, ಈ ಪ್ರಸಂಗಕ್ಕಿಲ್ಲಿ ಪ್ರಾಶಸ್ತ್ಯ.

---

257. ಈ ಮುಕ್ತಿ ಇವರ ಇತರ ಕೃತಿಗಳಂತ್ಯಕೂ ಉಕ್ತ (ಮಧ್ವನಾಮ, 77; ಬಾಲಲೀಲೆ, ಪು.436— 908, ಉ.511; 'ಪಾವನ ಮಾಳ್ಪುದು— ಜಯಮಂಗಳಂ (ವಾ.ಕೃ.474) ಕಿತ್ತಳೆಸೊಗಳು).

258. ಶ್ಲೇಷ ಮೂಲಕ ಅಂತ್ಯ ಪ್ರಾಸ.

259. ಜ್ಞಾನವಂತರ ವಿಧಿ ಕಾಡುವುದು ಸತ್ಯ — 'ವಿಧಿ ಮುಂದಾಗಿ ಕವಿತಿತ್ತು ಕರಿರಾಜಗೆ' (ಪುರಂದರದಾಸರ ಪದ).

ಸಾಂಗತ್ಯದಂಥ ಹಾಡುಗಳೆರಡು ಕೂಡಿದ 23 ಅಷ್ಟಪದಿಗಳನ್ನಿಲ್ಲಿ ಪ್ರಯೋಗಿಸಿದ್ದಾರೆ ವಾದಿರಾಜರು. ಪ್ರಾರಂಭದಲ್ಲಿ 'ಭೀಮಸೇನ ಭಾಮಿನಿಯಾದನು' ಎಂಬ ಅಪ್ರಾಸಪೂರ್ಣ ಪಲ್ಲವಿಯೇ ಕಥಾವಸ್ತುವನ್ನು ಸಾರಾಂಶಗೊಳಿಸಿದೆ. ಗಜಬಲದ ಭೀಮ ಸಾಮಜ ವರದನ ಹಾಡುತಲೇ ಕೀಚಕನ ಕೊಲುವ ಸೇವೆ ಸೂಚಿತವಾಗಿದೆ ಅನುಪಲ್ಲವಿಯಿಂದ —

ಭೀಮಸೇನ ಭಾಮಿನಿಯಾಗಲು
ಪ್ರೇಮದ ಸತಿಯ ಕಾಮಿಸಿದವನ
ರಘಾವ ರಾತ್ರಿಗೆ ಸೀಳುವೆನೆನ್ನುತ
ಸಾಮಜವರದನ ಪಾಡುತಲಿ

ಮೊದಲು ಕಥಾಸಂದರ್ಭವು ಸೂಚಿತ — ಧರ್ಮ ಜೂಜಾಡಿ ಸೋತು ಅನುಜರೊಡನೆ ವನಕ್ಕೆ ಹೋಗಿ ಅಜ್ಞಾತವಾಸದ ವ್ಯಾಜದಿಂದ ರೂಪ ಮಾಚಿಕೊಂಡು ಮತ್ಸ್ಯರಾಜನಲ್ಲಿ ಭೋಜನ ಮಾಡುತ್ತ ಪೂಜಿಸಿಕೊಂಬ್ರೋ ನೋಡಿಗ. ಇನ್ನು ಕಥಾರಂಭ — ದ್ರೌಪದಿ ಬರುತ, ರಾಣಿಯು ಕಾಣುತ, ಯಾರೆಂದು ಕೇಳಲು, ಪೇಳಿದಳು. (ಭಾರತಿಯಂಶವಾದ ಅವಳ) ಮುತ್ತಿನಂಥ ವಾಣಿಯ ಕೇಳಿ, ನಿನ್ನಂಥ ಜಾಣೆಯ ಕಾಣೆ, ವೇಣಿ ಹಾಕೆನುತ ಕರೆತಂದಳು. "ಪರದೇಶದಿಂದೊಬ್ಬಳು ಕೇಶ ಕಟ್ಟುವ ವೇಷದಿ ಬಂದಳು, ಶೇಷನೀ ರೂಪ ವರ್ಣಿಸಲರಿಯನು. 'ವಾಸ ಮಾಡುವೆ ಮಾಸ ಈರಾರು, ಗ್ರಾಸ ಕೊಟ್ಟು ಪೋಷಿಸು'" ಎಂದು ನುಡಿದೋಸನು ಪೇಳಲು, ಕೀಚಕನು ಮೀಸೆ ತಿರುವುತ ಮೀಸಲೆನಗೆಂದು ಪೋಷಿಸಿದ. ವಾರೆಗಣ್ಣಲೊಂದು ಸಾರಿ ನೋಡ್ಯಾಳೆಂದು ಬಾರಿ ಬಾರಿ ನೋಡುತಿರೆ, ನೀರೆ ಘೋರ ರೂಪಕಂಜಿ ಮೋರೆ ತೋರದೆ ಗಂಭೀರದಿಂದಿದ್ದಳು (1— 4). ಅವರ ಸಂವಾದ —

ಅಕ್ಕನಿಗೆ ಬಾಚಿ ಹೆಕ್ಕುವ ಸೇವೆಗೆ
ಪುಕ್ಕಟೆ ಅನ್ನಕೆ ಸಿಕ್ಕುವರೆ ನೀನು,
ಚಿಕ್ಕ ಪ್ರಾಯಕ್ಕೆನ್ನ ಪಕ್ಕಕೆ ಬಂದರೆ
ಸಕ್ಕರೆದುಟಿ ಸವಿ ದಕ್ಕಿಸುವೆ.

ರಕ್ಕಸ ನಿನಗೆ ದಕ್ಕುವಳೆ ನಾನು,
ಮುಕ್ಕಣ್ಣನಾದರು ಲೆಕ್ಕಿಸದಾ ಪತಿ
ಗಕ್ಕನೆ ಬಂದರೆ ತಿಕ್ಕಿ ನಿನ್ನ ಕಾಯ
ದಿಕ್ಕು ದಿಕ್ಕಿಗೆ ಬಲಿ ಇಕ್ಕುವರೊ (5)

ಸುದೇಷ್ಣೆಗೂ ಹೇಳಿಕೊಂಡಳು — ಕಂಡ ಕಂಡ ಬಳಿ ಪುಂಡು ಮಾಡುವನು, ಗಂಡ ಕಂಡರೆ ಚೆಂಡನಾಡುವನು; ಉಂಡ ಮನೆಗೆ ಹಗೆಗೊಂಡಳೆನ್ನದಿರು, ಲಂಡನಿಗೆ ಬುದ್ಧಿ ಪೇಳದೆ ಹಿಂದಿಕೊಳ್ಳದಿರು ದುಂಡುಮುಖಿ. ಆಕೆ ಅವನಿಗೆಂದಳು — ನಿನ್ನ ದುರುಳತನದ ಬೆರಳ ಸನ್ನೆ ಗರಳವಾಯಿತೆ? ಅರಳ ಮೊಗ್ಗೆಯು ಹೆರಳಿಗಾಕುತ್ತ ಕುರುಳು ತಿದ್ದುವ ತರಳೆಯು ಕಂಡು, ಇರುಳು ಹಗಲು ಬಾರಳು ಎನುತ್ತ ಮರುಳುಗೊಂಡರೆ ಬರುವಳೆ? ಸೈರಂಧ್ರಿಯು ದೃಷ್ಟಿಸಿ ನೋಡಲು ನಷ್ಟವಾಗುವುದು ಅಷ್ಟೈಶ್ವರ್ಯವು; ಕಟ್ಟಕಡೆಗೆ ನೀನು ಕೆಟ್ಟ ಕಂಡ್ಯ (6– 7).

ಸೃಷ್ಟಿಯಲಿ ನನ್ನಂಥ ಗಟ್ಟಿಗನಾರಕ್ಕ,
ದುಷ್ಟರ ಎದೆಯ ಮೆಟ್ಟಿ ಸೀಳುವೆನು,
ಗುಟ್ಟಿಂದ ನಾರಿಯ ಕೊಟ್ಟು ಕಳುಹಲು
ಪಟ್ಟದ ರಾಣಿಯೊಳಿಟ್ಟುಕೊಂಬೆ (8)

ಕೀಚಕನ ನೀಚ ನುಡಿ ಕೇಳಿ ನಾಚಿ, ಪತಿಯೊಳು ಸೂಚಿಸಬೇಕೆಂದು ಯೋಚಿಸಿ ಆಚೆ ಬರುತಿರೆ, ನಿಶಾಚರ ಕರವ ಚಾಚಿದನು; ಭೀಮನಲ್ಲಿ ಬಂದು ನುಡಿದಳು — ಪೊಡವಿ ಪತಿಗಳ ಮಡದಿಯಾಗಿ ನಾಡ ದೊರೆಗಳ ಬೇಡುವುದಾಯಿತು; ಕೇಡಿಗ ಮಾಡಿದ ಚೇಷ್ಟೆಗೆ ಕಡಲ ಶಾಯಿ ಕಾಪಾಡಿದ; ಅನ್ನದ ರುಚಿಯ (ಹಂಗ) ನೋಡುವರೆ? ಅವಳ ನಡುಗುವ ಧ್ವನಿ ಕಣ್ಣೀರಿಂದಾಡುವ ಮಾತು, ಬಾಡಿದ ಮುಖ ನೋಡಿದ ಭೀಮ ತೊಡೆದು ನೇತ್ರವ 'ದುಃಖ ಮಾಡದಿರು, ಅವನನ್ನು ಬಡಿದು ಯಮಗೆ ಕೊಡುವೆ ನೋಡೀಗ, ಗಾಢದಿ ಪೋಗು' ಎಂದು ಸಂಕೇತ ಭರವಸೆ ಇತ್ತ (9– 11).

ಅತ್ತ ಕೀಚಕ 'ಮೋಸ ಮಾಡಿ ಪೋದಳು ಶಶಿಮುಖಿ' ಎಂದರೂ, ಆಸೆ ಬಿಡದೆ ವ್ಯಸನಗೊಳ್ಳುತ್ತ ಪೂಶರತಾಪಕ್ಕೆ ದಾಸಿಯರಿಂದ ಕೇಸರಿಗಂಧ ಪೂಸಿಕೊಂಡು ಹಾಸು ಮಂಚದಲ್ಲಿ ಬೀಸಿಕೊಳುತ್ತ ಗಾಸಿಪಡುತಿರಲು, 'ಲೇಸಾಗಿ ನಿನ್ನಭಿಲಾಷೆ ಸಲ್ಲಿಸುವೆ' ಎಂಬ ನಳಿನಮುಖಿಯ ಮಾತ ಕೇಳಿ ಹರುಷ ತಾಳಿದ. ಅವಳು ರತಿಕೇಳಿಗೆ ಕಾಳಗದ ಮನೆಯೊಳಗೆ ಬಾರೆಂದು ಪೇಳಿದ ಸುಳುವು ಕೇಳಿ, ಭೀಮ ಖಳನ ಸೀಳುವ ವೇಳೆ ಬಂತೆಂದು ತೋಳು ಹೊಯ್ದ. ಮಡದಿಗೆ ನುಡಿದ — ನಾರಿಯಾವಾಗ ಬರುವಳೊ ಎಂದು ದಾರಿ ನೋಡುವ ಚೋರ ಕೀಚಕ ತೋರಿದ ಠಾವಿಗೆ ಸೇರುವ ಬೇಗ; ಆರು ಅರಿಯದಂತೆ, ಕರ್ಪೂರನು ಮೋಹಿಪ ತೆರದಿ ಎನಗೆ ನಾರಿಯ ರೂಪ ಶೃಂಗರಿಸು. ದ್ರೌಪದಿ ನಾಚಿದಳು (12– 14).

ಮುರಿದ್ದೆನೆನ್ನ" ಎಂದನು. ಕೀಚಕ ಬರಿಗೆ ಹೋಗಲು, ಎದ್ದು ಸಮೀರಜ ಗುದ್ದಲು ಬಿದ್ದನು ಭೂಮಿಯಲಿ. ಗದೆನೆನುತ ಅನಿರುದ್ಧನ ಸ್ಮರಿಸುತ ಎದ್ದ ಭೀಮ! (17—21).

ಕಡೆಯ ನುಡಿಗಳ ಭೀಮ ದ್ರೌಪದಿಯರ ಸಂವಾದ — 'ಕೆಟ್ಟ ಕೀಚಕ ತೊಟ್ಟ ಛಲದಿಂದ ಬಿಟ್ಟದಂತಹ ದೇಹ ಬಿಟ್ಟ, ಪಟ್ಟಾಗಿ ದೃಷ್ಟಿಸು.' 'ಭ್ರಷ್ಟನ ನೋಡುವುದೇನು?' 'ಕೊಟ್ಟ ಭಾಷೆ ಮುಟ್ಟಿತು ನಿನಗೆ, ಕೃಷ್ಣನ ದಯದಿ ಕಷ್ಟ ಹಿಂಗಿತು. ಪಟ್ಟಣಕೀ ಸುದ್ದಿ ಮುಟ್ಟದ ಮುಂಚೆ ಗುಟ್ಟಿಲಿ ಪೋಗುವ. ಅರಸು ನಮ್ಮನಿರಿಸಿಕೊಂಡು ವರುಷವಾಯಿತು. ಬಿರನ ಬಂತೆಂದು ಸರಸಿಜಾಕ್ಷಿ ಕರೆಸಿ ನಿನ್ನ ಒಳಗಿರಿಸದಿದ್ದರೆ ಹಯವದನನ ಸ್ಮರಿಸಿ ಗದೆ ಧರಿಸುವೆ (22—23). ಆದರೆ ಅಜ್ಞಾತವಾಸಕ್ಕೆನ್ನುಳ್ಳ 13 ದಿನಗಳಿದ್ದು, ಸುದೇಷ್ಣೆ ಸೈರಂಧ್ರಿಯನ್ನಿರಿಸಿಕೊಂಡಳಾಗಿ, ಭೀಮ ಗದೆ ಹಿಡಿದು ಪ್ರಕಟಗೊಳ್ಳುವ ಸಂದರ್ಭ ಬರಲಿಲ್ಲ.

ಈ ವಸ್ತುವಿವೇಚನೆಯಿಂದ ವಿರಾಟಪರ್ವದ ಮುಖ್ಯ ಪ್ರಸಂಗವನ್ನು ವಾದಿರಾಜರು ನಾಟಕೀಯವಾಗಿ ಕಥಿಸಿರುವುದು ಸ್ಪಷ್ಟ. ಭೀಮ ಪರಾಕ್ರಮದ ಕಥನಕೌಶಲ, ಪ್ರಾಸಪೂರ್ಣ ಸಂಭಾಷಣೆಗಳ ಕಿರುಗಾತ್ರದ ಪಾತ್ರಚಿತ್ರಣ, ವರ್ಣನೆ— ನೀತಿ ಪ್ರತಿಪಾದನೆಗಳೆಲ್ಲ ಚಿತ್ತಾಕರ್ಷಕ. ಮುಖ್ಯ ಘಟನೆ ಹರಿಪ್ರೇರಿತ, ಹರಿಗರ್ಪಿತವೆಂಬ ಭಕ್ತಕವಿ ದೃಷ್ಟಿ ಹರಿಭಕ್ತರಿಗೆ ಆಹ್ಲಾದಪ್ರದ. 'ಈ ರಚನೆಯನ್ನು ಓದಿದ ಮಾತ್ರಕ್ಕೆ ಆನಂದವಾಗುವುದಾದರೆ, ಇಲ್ಲಿ ಅಡಗಿರುವ ತಾತ್ವಿಕ ಮರ್ಮವನ್ನು ಅರಿತಾಗ ಇಮ್ಮಡಿ ಸಂತೋಷವಾಗುತ್ತದೆ' (ಜಿ.ವರದರಾಜರಾವ್, ವಾದಿರಾಜರ ಕೃತಿಗಳು, ಪೀಠಿಕೆ 19). 'ಲಲಿತ ಕನ್ನಡದ ಗೀತಕಾವ್ಯವಿದು, ಕೀರ್ತನೆಗಳು ಬರಿ ಧಾರ್ಮಿಕ ಸಾಹಿತ್ಯವಾಗದೆ, ಉತ್ತಮ ಸಾಹಿತ್ಯ ಸೃಷ್ಟಿ ಹೌದೆಂದು ತೋರಿಸಿದೆ' (ಕೆ.ಬಿ.ಪಾಂಡುರಂಗಿ, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, 4—2). ಅಲ್ಲದೆ ವಾದಿರಾಜರು ಜನಸಾಮಾನ್ಯರಿಗಿತ್ತ ಈ ಕಿರು ಕನ್ನಡ ಕೃತಿ 'ಒಸನು, ವಾರೆಗಣ್ಣಿಲಿ ನೋಡ್ಯಾಳು, ಹೆರಳಿಗ್ಹಾಕುತ, ಠಾವಿಲ, ಗಟ್ಯಾಗಿ, ವಾಲಿ, ಶ್ಯಾವಂತಿಗುಚ್ಛ, ಗೊಂಡ್ಯ, ಕುತ್ತಿಗ್ಯ' ಎಂಬಂತಹ ದೇಸೀಯ ಪ್ರಯೋಗಯುಕ್ತವಾಗಿರುವುದುಚಿತವೇ. ಕುಮಾರವ್ಯಾಸನು ಸ್ತ್ರೀರೂಪದ ಭೀಮನಿಗೆ 'ಎಲೆಗೆ ಕಲು ಮೈಯಾದೆ' (ವಿರಾಟಪರ್ವ 3—87) ಎಂದು ಹೇಳಿಸಿದ್ದು ಇಲ್ಲಿ 'ಮೈಯಿಲ್ಲ

ಹುಡುಕಲು ಕಲ್ಲಿದೆಯಲ್ಲಿ" ಛಂದಾಗಿದೆ. ಪ್ರಸಂಗ ಪ್ರಬಲವಾಗಿ ವಿಜಯದಾಸರೂ ಇದನ್ನು ಕುರಿತು ಬರೆದಿದ್ದಾರೆ (ಕರ್ನಾಟಕ ಹರಿದಾಸರು, 522; ಹರಿದಾಸ ಸಾಹಿತ್ಯ ಸಮೀಕ್ಷೆ, 21).

(10) ಅವತಾರತ್ರಯ ಸುವ್ವಾಲಿ:[260] ಅವತಾರತ್ರಯವೆಂದರೆ ಹನುಮ ಭೀಮ ಮಧ್ವರು. ವಾಯುವಿನ ಈ ಮೂರು ಅವತಾರಗಳ ಕಥನಕ್ಕೆ ಇಲ್ಲಿ 185 ದ್ವಿಪದಿಗಳನ್ನು ಸುವ್ವಿಗಳ ಜೊತೆಯೊಡನೆ ಬಳಸಿದ್ದರಿಂದ ಇದು 'ಅವತಾರತ್ರಯ ಸುವ್ವಾಲಿ' ಎನಿಸಿದೆ. ವಾದಿರಾಜರಿಗೆ ಅತಿ ಪ್ರಿಯವಾದ ದಶಾವತಾರ ಕೃಷ್ಣಾವತಾರ, ವಾಯ್ವಾವತಾರ ಅವರ ಕೃತಿಗಳಲ್ಲಿ ಪುನಃ ಪುನಃ ಕಾಣಿಸಿಕೊಳ್ಳುತ್ತವೆ. ಉತ್ಸಾಹಲಯದ ಭೋಗ ಷಟ್ಪದಿಯ ಕಿರುಚರಣಗಳನ್ನೊಂದು ಸಾಲಾಗಿಯೂ, ಹಿರಿಯ ಚರಣವನ್ನೊಂದು ಸಾಲಾಗಿಯೂ ಇಟ್ಟುಕೊಂಡು ಅಂಶಗಣ ಅಳವಡಿಸಿದ ದ್ವಿಪದಿಯ ಛಂದಸ್ಸು[261] ಇಲ್ಲಿ ಸುವ್ವಿ ಪದಗಳೊಡನೆ ಪ್ರಯುಕ್ತವಾಗಿದೆ. 'ಶೋಭಾನೆ'ಯಂತೆ ಮೂರು ಅವತಾರಗಳಿಗೂ 'ಸುವ್ವಿ' ಹಾಡಿದ[262] ಪಲ್ಲವಿಯಿದು —

ಸುವ್ವಿ ಹನುಮಂತ ಸುವ್ವಿ ಸುವ್ವಿ ಭೀಮಸೇನ ಸುವ್ವಿ
ಸುವ್ವಿ ಮಧ್ವರಾಯರಿಗೆ ಸುವ್ವಾಲಿ (ಪ)

ಮುಂದಿನ ಮೂರು ಭಾಗಗಳಿಗೂ ಅತ್ಯಂತ ಹೇಳಬೇಕಾದ ಈ ಪಲ್ಲವಿಯಂತೆ, ಕೃತಿಯ ಆದಿಯಲ್ಲಿ ಒಟ್ಟಾಗಿ ಶ್ರೀರಮಣ ಭಾರತೀಶರನ್ನು ಸ್ತುತಿಸಿದ ನುಡಿಯಿದೆ —

ಶ್ರೀರಮಣನಾದ ಶ್ರೀಹರಿಯ ದಿವ್ಯ ಚರಣಕೆರಗಿ
ಹರುಷದಿಂದ ಭಾರತೀಶರನ್ನು ಭಜಿಸುವೆ (1)

ಹಾಗೆಯೇ ದೇವತೆಗಳು ಹರಿಯ ಕಂಡು ರಕ್ಷಿಸೆಂದ ಎರಡು ನುಡಿ ಹೇಳಿ, ವಾದಿರಾಜರು ತಮ್ಮ ಮೆಚ್ಚಿನ ದಶಾವತಾರಕ್ಕೆಡೆ ಮಾಡಿಕೊಂಡಿದ್ದಾರೆ ಇಲ್ಲಿ —

---

260. 23 ಪುಟಗಳ ಪುಸ್ತಿಕೆಯಾಗಿ ಉಡುಪಿಯಿಂದ ಪ್ರಕಟಿತ; ಈಚೆಗೆ ಲಕ್ಷ್ಮೀಕಾಂತ ಮುರಗೋಡ ಬೆಂಗಳೂರು ಇವರಿಂದ ಪುನರ್ಮುದ್ರಿತ (ಇತರ ಸ್ತೋತ್ರಗಳೊಡನೆ).

261. ಇದೇ 'ಶ್ರೀಕೃಷ್ಣ ಬಾಲಲೀಲೆ, ಕೇಶವನಾಮ, ಕನಕದಾಸರ 'ಕೇಶವನಾಮ' ಮೊದಲಾದುವಲ್ಲಿ ಪ್ರಯುಕ್ತ.

262. 'ತತ್ತ್ವ ಸುವ್ವಾಲಿ ಬಿರುದಿನ ಸುವ್ವಾಲಿ'ಗಳಂತೆ ಪ್ರಸ್ತುತ ಕೃತಿಯೂ ಸ್ತ್ರೀ ಸಾಮಾನ್ಯರನ್ನು ಸೂಚಿಸಿದ ದೇಸೀಯ ಛಂದಸ್ಸು ಬಳಸಿದ್ದು ಇದೇ ಕಾರಣಕ್ಕೆ.

ಮೀನನಾಗಿ ನಿಗಮಗೋಧರ ದಾನವರ ಗೆಲಿದು ಬಂದು
ದಾನ ಮಾಡಿದೆಯೊ ವೇದಾದಿ ವೇದವ (4)

ಮಂದರಾದ್ರಿ ಹಾಕಿ ಜಲಧಿ ಮಥಿಸುತಿರಲು ಕೂರ್ಮರೂಪ
ದಿಂದ ಹೋಗಿ ಅಮೃತವನ್ನೆ ತಂದು ನೀಡಿದೆ (5)

ವರಹನಾಗಿ ಹಿರಣ್ಯಾಕ್ಷನ ವಧೆಯ ಮಾಡಿ ಗೆಲಿದು ಬಂದೆ
ಧರಣಿಯನೆತ್ತಿ ನಮ್ಮ ಸಲಹಿದಾತನಲ್ಲವೆ (6)

ಮಗನ ಹಗೆಯ ಬಗೆದು ದೈತ್ಯ ಮತ್ಸರವ ಮಾಡುತಿರಲು
ನರಮೃಗ ರೂಪನಾಗಿ ಮಗನ ಸಲಹಿದೆ (7)

ಇಂದ್ರಲೋಕವೆಲ್ಲ ಬಲೀಂದ್ರನಪಹರಿಸುತಿರಲು ಉ
ಪೇಂದ್ರನಾಗಿ ತಂದ ಮಧುಸೂದನನಲ್ಲವೆ (8)

ಎರಡು ಹತ್ತು ಒಂದು ಬಾರಿ ಧರಣಿನಾಯಕರ ಗೆಲಿದೆ
ಪರಶುರಾಮನಾಗಿ ನೀ ಪ್ರಕಟನಾದೆಯೊ(ಲೊ)(9)[263]

ಈಗ ಮತ್ತೆ ಕುಂಭಕರ್ಣ ರಾವಣಾದಿ ಅಸುರರೆಲ್ಲ
ಆಗ ಭೋಗದಿಂದ ಮತ್ತರಾಗುತಿರ್ದರು (10)

ಅಂದು ಮಧುರ ಪಟ್ಟಣ ಹೊಕ್ಕು ಮಾವ ಕಂಸನ
ಕೊಂದು ತಂದೆ ತಾಯೀರ ಬಂಧನ ಬಿಡಿಸಿದೆ (11)

ತ್ರಿಪುರರ ಸತಿಯರ ವ್ರತಗಳನ್ನು ಅಪಹರಿಸಿ
ನಿಪುಣನಾಗಿ ಗೆಲಿದು ಬಂದ ಚಪಳನಲ್ಲವೆ[264] (12)

ಕಲ್ಕ್ಯವತಾರನಾಗಿ ಅತ್ಯದ್ಭುತ ವಾಜಿಯನೇರಿ
ಲೆಕ್ಕವಿಲ್ಲದ ದುಷ್ಟರ ಗೆಲಿದ ದಿಟ್ಟನಲ್ಲವೆ (13)

ಇಲ್ಲಿಂದ ಹನುಮ ಸುವ್ವಾಲಿ ಮೊದಲಾಗುತ್ತದೆ: ಸುರರ ಮೊರೆ ಕೇಳಿ ಹರಿ ರಾಮನಾದ, ಭಾರತೀಶ ಹನುಮಂತನಾದ[265]— ರಾಮನೊಡನೆ ಮಿತ್ರತನ ನಡೆಸಿದ. ಮುದ್ರೆ ತೆಗೆದುಕೊಂಡು ಸಮುದ್ರ ದಾಟಿ ಲಂಕೆ ಹೊಕ್ಕು ನೋಡಿದ. ಅಂತಃಪುರ

---

263. ಬಾಲಲೀಲೆ ಪು.245.

264. ಗಜೇಂದ್ರ ಮೋಕ್ಷ, 32.

265. ಪ್ರಶಸ್ತಕಪೋಲದವ.

ಹೊಕ್ಕು ಮಂಚದಲ್ಲಿ ಮಲಗಿದ್ದ ಮಂಡೋದರಿಯ ನೋಡಿದ. ಸೀತೆ ಎಂದು ಬಗೆದ. ವಾಂಯುನರೀತಿ ಕೋರೆದಾಡೆ ಕಂಡು ಕೋಪ ತಾಳಿದ. ಜಾನಕಿಗೆ ಪಾದದಲ್ಲಿ ಪದ್ಮರೇಖೆ — ತ್ರಾಹಿ ತ್ರಾಹಿ ಎಂದು ಗಲ್ಲ ಮುಟ್ಟಿಕೊಂಡ. ಆ ತಪ್ಪಿಗೆ ಗೋದಾನ ಮಾಡಿ ಅಶೋಕವನಕೆ ಬಂದ. ಮರದ ಕೆಳಗೆ ಸೀತೆ ಕಂಡು ಸೂಕ್ಷ್ಮರೂಪನಾಗಿ ಮರವೇರಿದ. ಹತ್ತು ಮುತ್ತಿನ ಮುಕುಟವಿಟ್ಟು, ಎತ್ತರದ ಛತ್ರ ಹಿಡಿಸಿಕೊಂಡು ಬಂದ ಅಸುರ (14–23).

ಇತ್ತ ನೋಡೆ ಸೀತೆ ನಿನಗೆ ಮತ್ತೆ ಸೌಭಾಗ್ಯವೀವೆ
ಪಟ್ಟದ ಲಕ್ಷ್ಮಿ ಲಂಕೆ ನಿನಗೆ ಈವೆನೆಂದನು (24)

ಹೀಗೆ ನೋಡೆ ಸೀತೆ ನಿನಗೆ ಬಹಳ ಸೌಭಾಗ್ಯವೀವೆ
ಭಂಡಾರದ ಲಕ್ಷ್ಮಿ ಲಂಕೆ ನಿನಗೆ ಈವೆನೆಂದನು (25)[266]

ಮಂಡೋದರಿ ಕೈಯಿಂದ ಮಂಡೆಯ ಹಿಕ್ಕಿಸುವೆ
ದುಂಡುಮಲ್ಲಿಗೆ ಮುಡಿಸಿ ಮಡಿಸಿದೆಲೆಯ ಕೊಡಿಸುವೆ (26)

ಹತ್ತು ಕಾಲಿನ ಮಂಚಕ್ಕೆ ಮುತ್ತಿನ ತಲೆದಿಂಬು
ಒಪ್ಪು ಬಾರೆ ಸೀತೆ ಎನ್ನ ತೋಳೊಳೆಂದನು (27)

ಆರು ಕಾಲಿನ ಮಂಚಕ್ಕೆ ಹೂವಿನ ತಲೆದಿಂಬು
ಮಲಗು ಬಾರೆ ಸೀತೆ ಎನ್ನ ತೋಳೊಳೆಂದನು (28)[266]

ಹತ್ತು ಕಾಲಿನ ಮಂಚಕ್ಕೆ ಕಿಚ್ಚು ಕೆಂಡವನ್ನೆ ಹಚ್ಚಿ
ಒಪ್ಪು ನೀ ಶ್ರೀರಾಮರ ತೋಳೊಳೆಂದಳು (29)

ಆರು ಕಾಲಿನ ಮಂಚಕ್ಕೆ ಉರಿವ ಕೆಂಡವನ್ನೆ ಹಚ್ಚಿ
ಮಲಗುವಿ ಶ್ರೀರಾಮನ ತೋಳೊಳೆಂದಳು (30)[266]

ರಾವಣನು ಹತ್ತಿರದ ತ್ರಿಜಟೆ ಮುಂತಾದವರಿಗೆ ಸೀತೆಯನ್ನು ಒಂದು ಮಾಡಿ ಕೊಡಿರೆಂದ. ಅವರು 'ಆಕೆ ಒಂದಾಗಳು, ಲಂಕೆಗೆ ಅಳಲು ತಂದುಕೊಂಡೆ. ಸಿಡಿಲು ಪೊಟ್ಟಣ ಕಟ್ಟಿ ಕೆಡಬ್ಯಾಡ, ಸಿಡಿದು ಹೋಗೋ ಕಾಲ ಬಂದಿತು. ನಾಳೆ ಇಷ್ಟೊತ್ತಿಗೆ ರಾಮರು ನೀತುವ ಕಪ್ಪ ನಿನ್ನ ಶಿರ ಹರಿಯುವೀಳುವ ಕನಸಾಗಿದೆ. ಅವಳ ಬಿಟ್ಟು ಹೋಗಿ ಸುಖಿಯಾಗು" ಎಂದರು. ಆತ ಕೋಪಿಸಿಯ ಹೋಗುತಿರಲು ಹನುಮ ಮರವಿಳಿದ. ಸೀತೆ ಅಂಜಿ 'ಮೃಗ ಬಂದು ರಾಮರ[267] ಅಗಿಸಿತು. ಅಸುರ ಕಪಿಯ ನಿನ್ನ ಕಳುಹಿದನೆ?' ಎನ್ನಲು, ಆತ

---

266. ಅಗತ್ಯ ವ್ಯತ್ಯಾಸಗಳೊಡನೆ ಬರುವ ಪುನರಾವರ್ತನೆಯು ಸೊಗಸು ದೇಸೀಯ ಕಾಂತಿ ಕೊಡುತ್ತದೆ.

267. ಇಂಥ ಬಹುವಚನ ವಾದಿರಾಜರ ಅನ್ಯ ಕೃತಿಗಳಲ್ಲೂ ಉಂಟು (ಸ್ವಪ್ನಪದ 7; ಬಾಲಲೀಲೆ ಪು.376, 442; ಎಷ್ಟು ಸಾಹಸವಂತಾ'ದಿ ಕೀರ್ತನೆ.

ಮುದ್ರಿಕೆ ಇತ್ತು, ಎರಗಿದ. ಅದನ್ನು ಸೀತೆ ಕಂಗಳಿಗೊತ್ತಿಕೊಂಡು, ಉರದಲಿಟ್ಟು, ಶಿರದಲಿಟ್ಟುಕೊಳ್ಳುತ್ತಿದ್ದಳು (31—39).

ಏನಮ್ಮ ಹನುಮಂತ ರಾಮರು ಕ್ಷೇಮವೆ
ಶ್ರೀರಾಮ ಒಮ್ಮೆಗಾದರು ಎನ್ನ ನೆನೆವರೆ (40)[266]

ನಿಮ್ಮ ಧ್ಯಾನವತಾಯಿತು, ಕಂಗಳಿಗೆ ನಿದ್ರೆ ಇಲ್ಲ
ನಿಮ್ಮ ಹೊರತಾಗಿ ಅನ್ಯಥಾ ಇಲ್ಲವೆ (41)

ಹವಳದ ಕುಡಿಯಂತೆ ತೊಳವುತಿಪ್ಪ ರಾಮರು
ಅಯೋಧ್ಯ ಪಟ್ಟಣ ತಮಗೆ ಅಡವಿ ಎಂದರು (42)[267]

ತಾಯಿ ನಿಮ್ಮ ಹೆಗಲಲಿಟ್ಟು ವಾರಿಧಿಯ ದಾಟಿಸುವೆ
ತಾಯಿ ಚಿತ್ತೈಸು ಎಂದು ನುಡಿದ ಹನುಮನು (43)

ರಕ್ಕಸರ ಪಡೆಗಳು ಸುತ್ತು ಕಟ್ಟಿ ಬಾಹರು
ಮತ್ತೆ ನನ್ನ ಕೊಂಡು ಶರಧಿ ಹೇಗೆ ದಾಟುವಿ (44)

ಬಾಲದಿಂದ ರಕ್ಕಸರ ಲೀಲೆಯಿಂದ ಕೊಲ್ಲುವೆ
ತಾಯಿ ಚಿತ್ತೈಸು ಎಂದು ನುಡಿದ ಹನುಮನು (45)

ಸಾಲದು ಧೈರ್ಯವ ನೀ ಹೋಗಿ ಬೇಗನೆ
ರಾಮರೊಡಗೂಡಿ ಬಾರೊ ಎನ್ನುತಿದ್ದಳು (46)

ಆತ ರಾಕ್ಷಸರ ಕೊಂದು ವೃಕ್ಷ ಕಿತ್ತಿ 'ಅಮ್ಮ ಹಸಿದೆ' ಎಂದರೆ, 'ಬಿದ್ದ ಹಣ್ಣು ಮೆಲ್ಲೆ'ನಲು, ಹೆಮ್ಮರವ ಕಿತ್ತು ಬಿಸುಟು ಹಣ್ಣು ಮೆದ್ದನು. ದೂತರು ರಾವಣಗೆ ಹೇಳಲು, 'ಹಿಡಿದು ತನ್ನಿರೆ'ಂದ. ಹನುಮ ಸಿಕ್ಕದನೆಂದು ಅವರು ಬ್ರಹ್ಮಾಸ್ತ್ರ ತರಲು ನಗುತ ನಿಂತ ಹನುಮ; ಇಂದ್ರಜಿತು ಕಟ್ಟಿ ಒಯ್ಯಲು ರಾವಣ ನಸುನಕ್ಕ (47—51).

ಯಾವ ದೇಶದಿಂದ ಬಂದೆ, ಯಾರ ಕಂದನೆನುತಲಿ
ರಾವಣ ಕೇಳಿದನೆ ವಾನರೇಶಗೆ (52)

ನಮ್ಮ ಒಡೆಯ ರಾಮ, ಜನರು ಎನಗೆ ಹನುಮನೆಂಬರು
ಹೆಮ್ಮೆ ನಿನಗೆ ಬೇಡ ಶರಣೆನ್ನು ರಾವಣ (53)

ಅಲ್ಪ ನೀನು ಸತ್ಯ ಸಂಕಲ್ಪರೊಳು ವೈರ ಬೆಳೆಸಿ
ಅಲ್ಪ ಭಾಗ್ಯವಾಯ್ತು ನಿನಗೆ ತಪ್ಪದೆಂದನು (54)

ರಾವಣ ಕುಪಿತನಾಗಿ ಹಿಡಿದು ಬಡಿಯಿರೆಂದ. ಹನುಮ 'ದೂತನ ಕೊಲ್ಲುವದು ನೀತಿಯಲ್ಲ'

ಎಂದರೆ, 'ಪುರವ ಯಾತಕ್ಕೆ ಮುರಿದಿ' ಎಂದರವರು. ಆತ 'ನಾನು ಮುರಿಯಲಿಲ್ಲ ಈ ಬಾಲ ಮುರಿಯಿತು' ಎಂದು ಬಾಲ ತೋರಿದ. ರಾವಣ 'ಬಾಲಕ್ಕೆ ಶಿಕ್ಷೆ ಮಾಡುತೇನೋ' ಎನುತ ಆಳು ಕರೆಸಿ ಹೇಳಿದ. ಅವರು ಪಂಚೆಗಳ ಸುತ್ತಿದರು ಬಾಲಕೆ. ಕುಂಭಕರ್ಣಾದಿ ಮನೆಗಳಿಂದ ತಂದು ಸೀರೆ ಸುತ್ತಿದರೂ ಬಾಲ ಬೆಳೆಯಿತು. 'ಸೀತಾದೇವಿ ಸೀರೆ ತನ್ನಿರಿ'ನ್ನಲು ಹನುಮ ಬಾಲ ಮುದುರಿದ. ಅತಿಕಾಯಾದಿಗಳು ಅದ್ದಿ ತೈಲದೊಳಗೆ ದೀಪ ಮುಟ್ಟಿಸಿದರು. ರಾವಣನೇರಿದ ಉಪ್ಪರಿಗೆ ಉರಿದು ಕುಪ್ಪೆ ಬಿದ್ದವು. ಪುರವ ಸುಟ್ಟು ಬೂದಿ ಮಾಡಿದ ರಾಮರ ಬಂಟನಿಗೆ ಸೀತೆ ಮಣಿಯ ಕೊಟ್ಟಳು. ಹನುಮ ಎರಗಿ, ಜಲಧಿ ದಾಟಿ, ರಾಮರಿಗೆ ಬಾಗಿ ಮಣಿ ಕೊಟ್ಟು ಎರಗಿ ನಿಂತನು. ಪ್ರೀತಿಯಿಂದಪ್ಪಿ ಲಂಕೆಯ ವೃತ್ತಾಂತ ಅರಿತರು ರಾಮಚಂದ್ರ. ಬಳಿಕ ಸೇತುವೆ ಕಟ್ಟಿ ರಾವಣನ ಕೊಂದು ಪುರವ ಅನುಜಗಿತ್ತರು. ಜಾನಕಿ ಸಮೇತ ಜಗವ ಪಾಲಿಸುವ ರಾಮರ ಭಜಿಸಿ ಸುಖದಲಿದ್ದ ವಾನರೇಶ (55–73). ಈ ಕಥೆಯಂತ್ಯಕ್ಕೆ ಭೀಮಾವತಾರ ಸೂಚಿಸಿ, ಪಲ್ಲವಿಯನ್ನು ಪುನರಾವರ್ತಿಸಿದೆ (24–75).

ಭೀಮ ಸುವ್ವಾಲಿಯೂ ಪುನಃ ಪಲ್ಲವಿಯಿಂದಾರಂಭ: ಒಮ್ಮೆ ಹುಲಿಗೆ ಬೆದರಿ ಕುಂತಿ ಮಗನ ಸರಿಸಿ ಬಿಸುಡುತಿರಲು ನುಚ್ಚು ನೂರಾದ ಗಿರಿ ಶತಶೃಂಗವೆನಿಸಿತು.[268] ಭೀಮನೆಂಬೊ ದಿವ್ಯನಾಮದಿಂದುದಿಸಿ ಹಾರುಗುದ್ದಿ, ಮುಷ್ಟಿಯುದ್ಧ ನೀರಾಟಗಳ ಶೌರ್ಯದಿಂದ ರಾಜನಂದನರ ಗೆಲಿದ. ಶಕುನಿ ಮುಖ್ಯರು ವಿಷವಿಡಲು ಜೀರ್ಣವಾಯ್ತು; ಅರಗಿನ ಮನೆಯಲಿ ಹಾನಿ ಬಗೆಯ ಬಂದವರ ದಹಿಸಿ, ಭಕ್ತರ ಸಲಹಿದ, ಹಿಡಿಂಬನ ಕೊಂದು, ರಾಕ್ಷಸಿಯ ರಕ್ಷಿಸಿದ (1–8).

ಹಿಡಿಂಬನ ಕೊಂದು, ಹಿಡಿಂಬೆಯ ಮದುವೆಯಾದ,
ವ್ಯಾಸರಾಜ್ಞೆಯಿಂದ ಭೀಮ ಮಗನ ಪಡೆದನು (9)[269]

ಬಳಿಕ ಏಕಾಂತದಿಂದ ಏಕಚಕ್ರಕೊಪ್ಪೀಗಿ ಶ್ರೀಕಾಂತನಾಜ್ಞೆಯಿಂದ ವಾಸವಾದರು ಪಾಂಡವರು. ಬಕನ ಕೊಂದು ಸುಖ ಮಾಡಿಕೊಟ್ಟ ಭೀಮ. ಜನರೆಲ್ಲ ವಿಭೀತರಾಗಿ ಏಕಾಂತ ಭಕ್ತರು

---

268. ಕನ್ನಡ ತಾತ್ಪರ್ಯ ನಿರ್ಣಯ 2, 47; ಮ.ನಾ.ಪೂ.459; ಶ್ರೀಪಾದರಾಯರ 'ಮಧ್ವನಾಮ' 13.

269. ಈ ನುಡಿಯೇ 'ಶ್ರೀಕೃಷ್ಣಬಾಲಲೀಲೆ'ಯ ಉತ್ತರಾರ್ಧ 211ನೆಯ ನುಡಿಯಾಗಿ, ಎರಡೂ ಕೃತಿ ವಾದಿರಾಜರವೆನ್ನಲು ಅಂತರಿಕ ಪ್ರಮಾಣ; ಮಧ್ವಸುವ್ವಾಲಿ 32 = ಬಾಲಲೀಲೆ ಪೂ.458, ಪುನಃ ಪ್ರಮಾಣ.

ಕಾಮಪೂರ್ಣವಾದರು. ನಂತರ ಅರಸುಮಕ್ಕಳು ಸ್ವಯಂವರಕ್ಕೆ ಬರಲು, ವಿಪ್ರವೇಷ ಧರಿಸಿ ಪಾಂಚಾಲಪುರಕೆ ಬಂದರುಪಾಂಡವರು; ಭೂಪರು ನೋಡುತಿರಲು ದ್ರೌಪದಿಯ ಜಯಿಸಿ ಯುದ್ಧಗೈದರು. ನೃಪನು ಪುತ್ರಿಗೆ ಭೂಷಣ ಇತ್ತ, ಪಾಂಡವರು ಕೃಷ್ಣೆಯ ತಂದರು; ತಂದ ಫಲ ಹಂಚಿಕೊಂಡು ಸುಖಿಯಾಗಿರಿ ಎಂದು ಹರಸಿದಳು[270] ಕುಂತಿ. ಕೃಷ್ಣ ವಿಚಿತ್ರ ಉಡುಗೊರೆ ಕೊಟ್ಟ; ದ್ರೌಪದಿ ಮುತ್ತಿನ ಗೊಂಬೆ ಹಿಡಿದು ಹಸ್ತಿನಾವತಿಗೆ ಬಂದಳು; ಗಾಂಧಾರಿ ಯೋಚಿಸಿ ಮೃತ್ಯು ಬಂದೀತು ತನ್ನ ಪುತ್ರರಿಗೆಂದಳು. ರಾಜಸುತರೆಲ್ಲ ಕೂಡಿ ರಾಜಸೂಯಕೆಂದು ಕೃಷ್ಣನ ಪೂಜೆ ಮಾಡಿದರು. ಕೌರವರು ಕಪಟ ಜೂಜು ಹೂಡಿದರು, ಪಾಂಡವರಿಗೆ ವನವಾಸವಾಯಿತು; ನಂತರದ ಅಜ್ಞಾತವಾಸದಲ್ಲಿ ಕೀಚಕನ ಸಂಹರಿಸಿದರು, ಗೋಗ್ರಹಣದಲ್ಲಿ ಗೋವುಗಳ ಕಾಯ್ದು ತಿರುಗಿಸಿದರು. ಧಾರ್ತರಾಷ್ಟ್ರರು ಭೂಪಾಲರಾಗಿ 'ಆದಿಯಲಿ ಗೆಲಲಿಲ್ಲ ಸೂಜಿ ಎಳ್ಳಷ್ಟು ಭೂಮಿ, ರಾಜತನವು ರಾದರೆ ರಂಗ ಮಾಡಲಿ' ಎಂದರು. ದುರ್ಯೋಧನಾದಿಗಳು ಚಾಂದ್ರಮಾನದಿಂದ ದಿನ ಸಂದು ಹೋಯಿತೆಂದರೆ, ಸೌರಮಾನದಿಂದ ಸಂದುದಿಲ್ಲ ಎಂದ ಕೌರವ. ಪಾಂಡವರು ಕೌರವನೊಡನೆ ಯುದ್ಧಕೆ ನಡೆದರು (1—30).

ಸೀರಡಿಸಿದ್ದ ಗದೆಗೆ ಗಾಂಧಾರಿಸುತನ ರಕ್ತವನ್ನು
ಪಾರಣೆಯ ಮಾಡಿಸಿದ ಪವನತನಯನು! (31)

ಸಿಂಹನಾದಗೈದು ವೈರಿ ಸಂಹಾರ ಮಾಡುತ್ತ ನಾಗಸಿಂಹಗರ್ಜಿಸಿದ[271] ಭೀಮ ಧರ್ಮದಿಂದ ರಾಜ್ಯವಾಳುತಿರಲು, ಶರಣ ಭಜಿಸುತಿದ್ದರು ಕೃಷ್ಣನ ಭಕ್ತರು (32—33). ಪುನಃ ಪಲ್ಲವಿಯೊಡನೆ (34) ದ್ವಿತೀಯಾವತಾರ ಮುಗಿದಿದೆ.

ಮಧ್ವ ಸುವಾಣಿಯ ಮೊದಲಿಗೂ ಪುನರಾವರ್ತಿಸಿದ ಪಲ್ಲವಿಯು ಸೊಲ್ಲಿದೆ. ಶ್ರೀರಮಣನಾಜ್ಞೆಯಿಂದ ವಾಯು ಮಧ್ವರಾಗಿ ಕಲಿಕಾಲದ ಅಜ್ಞಾನಿಗಳ ಗೆಲಿದರು (1).

---

270. ಹೊ. ಬಾಲಲೀಲೆ ಉ.231.

271. ನರಹರಿ ಲೀಲೆ ತೋರಿದ(ಶ್ರೀಪಾದರಾಯರ 'ಮಧ್ವನಾಮ', 19).

ಜಗದೀಶ್ವರನ ಪಾದ ಕಮಲ ತಮ್ಮ ಹೃದಯದಲ್ಲಿ ಇಟ್ಟ
ತಮ್ಮ ಕೀರ್ತಿ ಮೂರು ಲೋಕದಲ್ಲಿ ಇಟ್ಟರು (2)

ಅಸುರರ ಹೃದಯದಲ್ಲಿ ಬಹಳ ಸಂತಾಪವಿಟ್ಟ
ಸುರ ಮುನೀಶ್ವರರಿಗೆಲ್ಲ ಸುಖವ ಇಟ್ಟರು (3)

ಉಡುಪಿಯ ಅನಂತೇಶ್ವರಾಲಯದ ಗರುಡ ಕಂಭದ ಮೇಲೊಬ್ಬ ಮರುಳ ಕುಣಿಯುತ್ತ, ಸರ್ವಜ್ಞರುದಿಸುವರೆಂದೂ ಸಾಧುಜನರಿಗೆ ಜ್ಞಾನ ಪ್ರಕಾಶ ಕೊಡುವರೆಂದೂ ಹೇಳಿದ. ಪಾಜಕದ ಮಧ್ಯಗೇಹ ಭಟ್ಟರು ತಪಿಸುತಿರಲು ಹರಿ ಉದ್ಧಾರಕ ಮಧ್ವರನ್ನು ಮಗನಾಗಿತ್ತ. ನಾಲ್ಕು ತಿಂಗಳಿಗೆ ಮಗುವನೆತ್ತಿಕೊಂಡು ಅನಂತೇಶ್ವರನಲ್ಲಿ ಬಂದ ತಂದೆ ಮರಳುವಾಗ ಇರುಳಾಗಿ, ಜೊತೆಯವರೊಬ್ಬ ಗ್ರಹಪೀಡಿತನಾದರೂ, ಪ್ರಾಣದೇವನ ಸಾನ್ನಿಧ್ಯ ಮಹಿಮೆಯಿಂದುಳಿದ. ಮನೆಯಲ್ಲಿ ತಾಯಿ ಮಗುವನ್ನು ಬಿಟ್ಟು ಕೆಲಸಕ್ಕೋಗುತಿರಲು, ತಡೆದಳೆಂದು ಬಿಕ್ಕಿ ಬಿಕ್ಕಿ ಅಳುತ್ತಿದ್ದರು ಮಧ್ವರು. ಅಕ್ಕ ಎತ್ತಿಕೊಂಡರೂ ಅಳುತ್ತಿರಲು ಆಕೆ ಒಮ್ಮೆ ಕುಚ್ಚಿದ ಹುರುಳಿ ತಿನಿಸಿದಳು; ತಾಯಿ ಬಂದು ಮಗಳನ್ನು ಜಬರಿಸಿದಳು. ತಾಯಿ ತಂದೆ ಮಗನ ರಕ್ಷಿಸೆಂದು ಹರಿಗೆ ಬೇಡಿಕೊಂಡರು. ಇನ್ನೊಮ್ಮೆ ತಾಯಿ ತವರ ಉತ್ಸವಕ್ಕೆ ಹೋದಾಗ ಮಧ್ವರು ಹೊರಗೆ ಹೊರಟು ಮಾರ್ಗಸ್ಥ ದೇವರಿಗೆರಗಿ ಅನಂತೇಶ್ವರನಲ್ಲಿ ಬಂದರು; ದಾರಿಯಲ್ಲಿ ಎಲ್ಲಿಗೆ ಹೊರಟಿರೆಂದವರಿಗೆ "ನಮ್ಮ ಸ್ವಾಮಿ ದರುಶನಕ್ಕೆಂ"ದರು: ಇಂದಿರೇಶನ ಪಾದ ನೆನೆದು ಆನಂದಿತರಾಗಿ ಕೈಮುಗಿದು ನಿಂತರು. ತಾಯಿ ತವರುಮನೆಯ ಉತ್ಸವದುತ್ಸಾಹದಿಂದ ಮಗನ ಮರೆತುಬಿಟ್ಟಿದ್ದಳು. ನಂತರ ಚಿಕ್ಕವನ ಕಾಣದೆ, ದಿಕ್ಕು ದಿಕ್ಕು ಗ್ರಾಮ ಗ್ರಾಮ ಹುಡುಕುತ ಅನಂತೇಶ್ವರನತ್ತ ಬಂದ ತಂದೆ, ಅವನ ಎತ್ತಿಕೊಂಡು ಬಾ ಹೋದ ಕಂಡು, 'ಹೋದ ನಿಧಿ ಕೈಸೇರಿತೆಂ'ದರು ತಾಯಿ.[272] ಮತ್ತೊಮ್ಮೆ ಬಾಲಕರೊಡನೆ ಕುಂಜಾರುಬೆಟ್ಟದ ವಿಮಾನಗಿರಿಯಲ್ಲಾಡುತಿರಲು 'ಬಾರೊ ವಾಸುದೇವ[273] ಎಂದು ಮಗನ ಕರೆದಳು; ಮಗ ಅಲ್ಲಿಂದಿಳಿದು ಪಾಜಕದಲ್ಲಿ ಪಾದ ಊರಿ[274] ಜನರ

---

272. ಇಲ್ಲೆಲ್ಲ ಪುನರಾವರ್ತಿತ ಚರಣಗಳಿವೆ.

273. ಇದು ವಾಸುದೇವನ ಪಾದಾಸಕ್ತ ಅಸುದೇವನ ಜನ್ಮನಾಮ. ಪೂರ್ಣಬೋಧರಾಗಿ ಪೂರ್ಣಪ್ರಜ್ಞ ಆಶ್ರಮನಾಮ, ಆನಂದಪ್ರದ ಶಾಸ್ತ್ರಕಾರರಿಗೆ ಆನಂದತೀರ್ಥ ಪೀಠನಾಮ (ತತ್ವಮಾನಾರ್ಥಕ ಮಧು + ವ = ಮಧ್ವ ಪ್ರಚಲಿತ ನಾಮ, ಸೂತ್ರ ಭಾಷ್ಯ ರಚಿಸಿ ಆಚಾರ್ಯ ನಾಮ).

274. ಇವುಗಳ ಹಿಂದೆ ವಿಗ್ರಹವಿರಿಸಿದರು ವಾದಿರಾಜರು.

ಪಾವನಗೊಳಿಸಿದರು. ಮಣಿಮಂತ ದೈತ್ಯಸರ್ಪವೊಂದು ಸುತ್ತಿ ಕಡಿಯುತಿರಲು ಎಡದ ಪಾದದಿಂದ ಒರೆಸಿ ಬಿಟ್ಟರು. ನೇಯಂಪಳ್ಳಿಯಲ್ಲಿ ಶಿವಭಕ್ತನ ಪುರಾಣ ಕೇಳಿ ದೂಷಿಸಿ, ಉಚಿತಾರ್ಥ ಹೇಳಿ ಸಕಲರ ಮನಸ್ಸಿಗೆ ಸುಖವಿತ್ತರು. ಎತ್ತುಕೊಳ್ಳಲಿತ್ತ ಋಣವ ಪಿತಗೆ ಬೇಡಿದವಗೆ ಮಗು ಹುಣಸೆ ಬೀಜ ಎಣಿಸುತಿರಲು, ಅದೇ ಮುಕ್ತಿಹೇತುವಾಯಿತವಗೆ. ಗುರುಸುತ ತೋಟಂತಿಲ್ಲಾಯನೊಡನೆ ಆಡುತ್ತ ಅವನ ಕಿವಿಯೂದಿ ತಲೆಬೇನೆ ಬಿಡಿಸಿದರು. ಜಗದ ಗುರುವಾಗಲು ಹಳೆ ವಸ್ತ್ರ ಒದ್ದ ಅವರ ನೋಡಿ ಸುರ ಮುನೀಶ್ವರರು ಆಶ್ಚರ್ಯ ಪಟ್ಟರು. ಯೋಗ ಪಟ್ಟ ಧರಿಸಿ ಸನ್ಯಾಸಿಯಾಗುವೆನೆಂದ ಅವರಿಗೆ ತಾಯಿ 'ಬಾಲ ನೀನು, ಬಯಸಬೇಡ ಸನ್ಯಾಸ; ಬಹಳ ತಪಸಿನಿಂದ ನಿನ್ನ ಪಡೆದೆ'.[275] ಎಂದಳು. ಆದರೂ ಉಟ್ಟ ಧೋತ್ರ ಬಿಚ್ಚಿ, ಕೌಪೀನ ಕಟ್ಟಿಕೊಂಡು ಸನ್ಯಾಸಿಯಾದರು (ಅಚ್ಯುತ ಪ್ರೇಕ್ಷರಲ್ಲಿಗೈದಿ). ತಾಯಿ 'ನಮ್ಮ ರಕ್ಷಣೆ ಮಾಡುವರ ಕಾಣೆ' ಎನ್ನಲು, ವಿಷ್ಣುತೀರ್ಥ ಎಂಬೊ ಮಗನ ಕೊಟ್ಟು ಸಂತೈಸಿ ಆಶ್ರಮಕೆ ಬಂದರು (4—35).

ಬಳಿಕ ಬದರಿಗೆ ಹೋದ ಮಧ್ವರು ಪರ್ವತ ಕಂಡು ಆಶ್ಚರ್ಯಪಟ್ಟರು. ಅಲ್ಲಿಯ ಯೋಗಿಗಳು ಜಟೆಯ ಮಸ್ತಕ ಯೋಗಿವ ವೇಷವೂ ಯೋಗವುಳ್ಳದ ವಿಷ್ಣುದಾಸ ಮಧ್ವರಾಯರ ಕಂಡು ಭಕ್ತಿಯಿಂದ ಕೈಮುಗಿದರು. ಅಂತೆಯೇ ಈ ಬದರೀ ತೀರ್ಥ ಕ್ಷೇತ್ರಕ್ಕೆ ಸಮಾನವಿಲ್ಲ. ಅಲ್ಲೇ ಸೂತ್ರ ಭಾಷ್ಯ ರಚಿಸಿ ಅವರುಶಾಸ್ತ್ರಾರ್ಥ ನಿರ್ಣಯಿಸಿದರು.[276] (36—41).

ತರುವಾಯ ಭರತಖಂಡ ಚರಿಸಿ ಉಡುಪಿಯಲ್ಲಿ ತಪಗೈದರು. ಕಡಲ ನಡುವೆ ಒಂದು ಹಡಗು ಬಂದು ನಿಂತಿರಲು ಕಂಡು ಕೈ ಬೀಸಿದರು. ಅದು ಕಡೆಗೆ ಬರಲು ಹಡಗಿನವರು ಆಚಾರ್ಯರಿಗೆ ಬೇಡಿದ್ದು ಕೊಡುವೆನೆಂದರು. ಆಚಾರ್ಯರು ಸಂತೋಷದಿಂದ ಮೂರು[277]

---

275. 'ಹತ್ತೆಂಟು ಸಾವಿರ ವರುಷ ಕಷ್ಟಪಟ್ಟು ತಪವ ಮಾಡಿ' (32) = ಬಾಲಲೀಲೆ, ಪುಟ. 458; ಏಕಕರ್ತೃಕ.

276. ಸಕಳ ಶಾಸ್ತ್ರವ ಪಠಿಸಿದ (ಶ್ರೀಪಾದರಾಯರ ಮಧ್ವನಾಮ, 23).

277. ಉಡುಪಿ ಕೃಷ್ಣ, ವಡಭಾಂಡೇಶ್ವರದ ಬಲರಾಮ, ಕುಂಜಾರುಗಿರಿಯ ದುರ್ಗಾ ಮೂರ್ತಿಗಳಿದ್ದುವು.

ಗೋಪಿಚಂದನದ ಗಟ್ಟಿ ತೆಗೆದುಕೊಂಡರು. ದ್ವಾರಕಿಯ ಕೃಷ್ಣನ ದ್ವಾದಶ ಸ್ತೋತ್ರ ಹೇಳುತ್ತ ಕರಕೊಂಡು ಬಂದರು (42—46).

ರಜತಪೀಠ ಪುರದೊಳಗೆ ರಾಜ ಮಂದಿರವ ಮಾಡಿ
ರಮ್ಯ ಮೂರ್ತಿ ಕೃಷ್ಣನ ಪ್ರತಿಷ್ಠಿಸಿದರು (47)

ಕೃಷ್ಣನೊಡನೆ ವೇದವ್ಯಾಸ ಮೂರ್ತಿ ಪ್ರತಿಷ್ಠಾಪಿಸಿ ತ್ರಿಕಾಲ ಪೂಜಿಸುತ್ತಿದ್ದರು. ಎಂಟು ಮಠದವರಿಗೆ ಎಂಟು ಮೂರುತಿಯಿತ್ತು ಹರಿಪೂಜೆ ಸಾಂಗಗೊಳಿಸಿದರು. ಉಷಃಕಾಲದ ಕೃಷ್ಣಪೂಜೆ ಮಾಡಿ ಸಾಯಂಕಾಲ ಸುಬ್ರಹ್ಮಣ್ಯಕ್ಕೆ ಬರುತ್ತಿದ್ದರು; ಮಧ್ಯಾಹ್ನ ಮಧ್ಯತಾಳ ಮಠಕ್ಕೆ ಬರುತ್ತಿದ್ದರು. ಆ ಪ್ರದೇಶದಲ್ಲಿ ಅನಾವೃಷ್ಟಿಯುಂಟಾದಾಗ ದಂಡಕಾಷ್ಠ ತರುಗಿಸಿ ದಂಡತೀರ್ಥ[278] ನಿರ್ಮಿಸಿ, ಭೂಮಿ ಒತ್ತಿ ಕಾಲುವೆ ತೆಗೆಸಿ ಭತ್ತ ಬೆಳೆಸಿದ ವಿಚಿತ್ರ ಮಹಿಮರವರು (48—53). ಆಗಿನ ಉಡುಪಿಯ ದಿವ್ಯರೂಪವಿದು —

ಅಚ್ಯುತನ ಪಟ್ಟಣದೊಳಗೆ ಚಿತ್ರಭೂಸುರು ಎಲ್ಲ
ಪರಿ ಪರಿ ಕ್ರೀಡೆಗಳ ಆಡುತಿದ್ದರು (54)

ಕೋಟಿ ಸೂರ್ಯರ ಬೆಳಕು ಗೋಪುರ ಸೂರ್ಯರ ಕಾಂತಿ
ಅಚ್ಯುತನ ಪಟ್ಟಣಕ್ಕೆ ಕಲಶಗೋಪುರ (54)

ಹಿಂದಣ ಅದ್ವೈತ ಓದಿದ್ದ ಅಚ್ಯುತ ಪ್ರೇಕ್ಷರಿಗೆ ವಿಷ್ಣು ಸರ್ವೋತ್ತಮ ಜ್ಞಾನವಿತ್ತು ಚಿತ್ತ ನಿರ್ಮಲಗೊಳಿಸಿ, 'ಗೀತಾ ತಾತ್ಪರ್ಯ ಭಾಷ್ಯ' ಮಾಡಿಕೊಟ್ಟರು. ಪುನಃ ಭರತಖಂಡ ಚರಿಸಿ ಪರಶುರಾಮ ಕ್ಷೇತ್ರದ (ಗೋವೆಯ) ಭಕ್ತನ ಭಿಕ್ಷ ಪಡೆದು ಬಾಳೆ ಹಣ್ಣು ಲೆಕ್ಕವಿಲ್ಲದೆ ಮೆದ್ದರು; ಶಂಕರಭಟ್ಟರಲ್ಲಿ 30 ಕೊಡ ಹಾಲು, 300 ಹಣ್ಣು ಮೆದ್ದು ಜೀರ್ಣಿಸಿಕೊಂಡ ನಿಗಮಸಿದ್ಧರವರು. ಅಂತೆಯೇ ಅವರ ಸ್ನಾನದಿಂದ ಗಂಗೆಯೇ ಪವಿತ್ರಳಾದಳು (55—61). ಅವರ ಶಿಷ್ಯಸೇವೆಯ ಒಂದು ಚಿತ್ರವಿದು —

ದ್ವಾದಶಾದಿತ್ಯರು ಏಕಕಾಲದಲ್ಲಿ ಉದಿಸಿದಂತೆ
ಶ್ರೀಮದಾಚಾರ್ಯರ ದ್ವಾದಶನಾಮ ಹೊಳೆದವು (62)

ಶ್ರೀಮದಾಚಾರ್ಯರ ದ್ವಾದಶನಾಮ ಒಣಗಲಿಕ್ಕೆ
ಬೇಗ ಶಿಷ್ಯ ತುಳಸಿ ವನಮಾಲೆ ಹಾಕಿದ (63)

---

278. ಉಡುಪಿಯಿಂದ ದಕ್ಷಿಣಕ್ಕೆ 7 ಮೈಲು; ವಿದ್ಯಾಗುರು ತೋಟಂತಿಲ್ಲಾಯರ ಗದ್ದೆಗೆ ನೀರು ಹರಿಸಿದರು.

ಅನಂತೇಶ್ವರಾಲಯದಲ್ಲಿ ಅವರು ಬ್ರಹ್ಮಸೂತ್ರ ಭಾಷ್ಯ ವ್ಯಾಖ್ಯಾನಿಸುವುದನ್ನಾಲಿಸಬಂದ ಆದಿಶೇಷ ಬಾನಲ್ಲಿ ಮಿಂಚಿ ಹೋಗುತ್ತಿದ್ದ.[279] ವ್ಯಾಖ್ಯಾನ ಕಾಲದಲ್ಲೊಮ್ಮೆ ದೀಪ ಶಾಂತವಾಗುತ್ತಿರಲು, ಅಂಗುಷ್ಠನಖದಿಂದ ಬೆಳಗಿಸಿದರು. ಕೇರಳಕ್ಕೆ ಹೋಗಿ ಮಾಯಾವಾದಿಗಳ ಗೆದ್ದರು. ಕೆರೆ ತೋಡಲು ಬಂದವರಿಂದಗೆಸುತ್ತಿದ್ದ ಪ್ರಭು[280] ಇವರಿಗೂ ತೋಡೆನ್ನಲು, 'ನೀ ತೋರಿಸಿ ಕೊಡೆ'ಂದರು; ಆತ ಗುದ್ದಲಿ ಹಾಕಿ ತೋರಿಸುತ್ತಿದ್ದಂತೆ ಇವರು ದಾಟಿ ನಡೆದರು. ಕಳ್ಳರು ಬಂದು ಶಿಷ್ಯರು ಕಲ್ಲಾಗಿ ನಿಂತಿರಲು ಕಳ್ಳರು ತಿರುಗಿದರು; ಇನ್ನೊಮ್ಮೆ ಕಾವಿ ವಲ್ಲಿಯನ್ನು ಗಂಟು ಕಟ್ಟಿ ಬಿಸುಟು ನೋಡುತ್ತಿರಲು ಕಳ್ಳರು ತಮ್ಮೊಳಗೇ ಕಡಿದಾಡಿ ಮಡಿದರು. ಶಿಷ್ಯರೊಡನೆ ಗಂಗೆಯನ್ನು ದಾಟಿದಾಗ 'ನಾವೆಯಿಲ್ಲದೆ ಹ್ಯಾಗೆ ದಾಟಿದಿರೆಂ'ದ ರಾಜ[281] ದೂತರಿಗೆ 'ಹರಿ ರಕ್ಷಿಸುವನೆಂ'ದು ಅವರ ಮ್ಲೇಂಛ ಭಾಷೆಯಲ್ಲೇ ಮಾತನಾಡಿ ತಿರುಗಿ ಬಂದರು. ರಾಜಮಹೇಂದ್ರಿಯ ಶೋಭನಭಟ್ಟರು ಆಚಾರ್ಯರ ವಶರಾಗಿ ಶಿಷ್ಯರಾದರು, ರಾಜಸಭೆಯೊಳಗೆ ಅಪಹೃತ ಪುಸ್ತಕ ಕೊಡಿಸಿದರು.[282] ಅಣಿಮಾದ್ಯಷ್ಟ ಸಿದ್ಧಿಯಿದ್ದ ಕಾರಣ ಆಚಾರ್ಯರೊಮ್ಮೆ ಹುಡುಗನ ಹೆಗಲೇರಿ ನರಸಿಂಹ ದೇವಾಲಯಕ್ಕೆ ಪ್ರದಕ್ಷಿಣೆ ಹಾಕಿ ಲಘಿಮಾದೋರಿದರು; (64–76).

ಇಲ್ಲಿಗೆ ಮಧ್ವ ಸುವ್ವಾಲಿ ಮುಗಿದು, ಮುಂದಿನ ನುಡಿ ಫಲಶ್ರುತಿ ಹೇಳಿದೆ —

ವಾಯುದೇವರ ಮೂರವತಾರ ಮಹಿಮೆ ಹೇಳಿ ಕೇಳಿದವರಿಗೆ
ಸಾಯುಜ್ಯ ಮುಕ್ತಿ ಕೊಡುವ ಹಯವದನನು[283] (77)

ಕೊನೆಗೆ ಸುವ್ವಾಲಿಯ ಸಾಮಾನ್ಯ ಪಲ್ಲವಿ ಪುನರುಕ್ತ, ಸೊಗಸಾದ ಮುಕ್ತಾಯಕ್ಕೆ (78).

---

279. ಸನಕಾದಿಗಳು ಶ್ರವಣಫಲ ಕೇಳಲು, ವೈಕುಂಠಲಾಭ ವರ್ಣಿಸಿದ (ಮಧ್ವವಿಜಯ 11).

280. ಈತ ದೇವಗಿರಿ ಯಾದವ ಪ್ರಭು ಮಹಾದೇವನೆಂದು ಬಿ.ವೆಂಕೋಬರಾಯರೂ ಹೊಯ್ಸಳ ಸೋಮೇಶ್ವರನೆಂದು ಪಂಡಿತಮಣಿಯವರೂ ಅಭಿಪ್ರಾಯಿಸಿದ್ದಾರೆ; ಇಲ್ಲಿ ಕೇರಳ ಭೂಪನೆಂದಿದೆ.

281. ಇವನು ಗಿಯಾಸುದ್ದೀನ ಬಲ್ಬನ ಎಂದಿದ್ದಾರೆ ವೆಂಕೋಬರಾವ್, ಪಂಡಿತಮಣಿ.

282. ಹೊಳೆದೇಶದ ಪದ್ಮತೀರ್ಥ ಕದ್ದ ಗ್ರಂಥಗಳನ್ನು ಕೇರಳದ ಜಯಸಿಂಹನ ಸಭೆಯಲ್ಲಿ ಮರಳಿಸಿದ ಪದ್ಮನಾಭತೀರ್ಥರು, ಮಧ್ವರ ಮೊದಲ ಶಿಷ್ಯರಾಗಿ (1318–24) ಪೀಠದಲ್ಲಿದ್ದರು; 'ಅನುವ್ಯಾಖ್ಯಾನಕ್ಕೆ ಸನ್ನ್ಯಾಯ ರತ್ನಾವಳಿ ಟೀಕೆ ರಚಿಸಿದರು.

283. ಬಾಲಲೀಲೆ ಪೂ.907,908, ಉ.511ರಲ್ಲೂ ಇದೇ ಚರಣವಿದ್ದು 'ಏಕ ಕರ್ತೃತ್ವಕ್ಕೆ ಇನ್ನೊಂದು ಪ್ರಬಲ ಆಂತರಿಕ ಪ್ರಮಾಣದೊರೆದಿದೆ; ಛಂದವೂ ಒಂದೇ.

'ಕೀಚಕವಧೆ'ಯಲ್ಲಿ ಭೀಮಾವತಾರದ ಪ್ರಸಂಗವೊಂದನ್ನಷ್ಟೇ ಸಂಗ್ರಹಿಸಿದ ವಾದಿರಾಜರು, ಈ ಸುವಾಲಿಯಲ್ಲಿ ಮೂರೂ ಅವತಾರಗಳ ಕಥೆಯನ್ನು ಮತ್ತಷ್ಟು ದೇಸೀಯವಾದ ಛಂದಸ್ಸಿನಲ್ಲಿ ಸುಂದರವಾಗಿ ಸಂಗ್ರಹಿಸಿದ್ದಾರೆ. ಇದರಿಂದ ರಾಮಾಯಣದ ಸುಂದರ ಕಾಂಡ, ಮಹಾಭಾರತದ ಭೀಮ ವೃತ್ತಾಂತ, ಸುಮಧ್ವ ವಿಜಯದ ಮುಖ್ಯಾಂಶಗಳನ್ನೆಲ್ಲ ವಾದಿರಾಜರು ನಮ್ಮ ನಾಡಿನ ಶ್ರೀ–ಸ್ತ್ರೀ ಸಾಮಾನ್ಯರಿಗಾಗಿ ಕನ್ನಡಿಸಿ ಕೊಟ್ಟಂತಾಗಿದೆ. ಮೂಲ ಆಕರ ಗ್ರಂಥಗಳ ದೃಷ್ಟಿಯಿಂದ ಇದು ಅತ್ಯಂತ ಸಂಗ್ರಹವೆನಿಸಿದರೂ, ಶ್ರೀಪಾದರಾಯರ 'ಜಯ ಜಯತುಗತ್ರಾಣ' ಎಂಬ 27 ಚೌಪದಗಳ 'ಮಧ್ವನಾಮ'ಕ್ಕೆ ಹೋಲಿಸಿದರೆ ತಕ್ಕಷ್ಟು ವಿಸ್ತಾರಗೊಂಡಿರುವುದನ್ನರಿಯಬೇಕು. ಶ್ರೀಪಾದರಾಯರು ವಾಯು ವರ್ಣನೆಗೆ 4, ಹನುಮಾವತಾರಕ್ಕೆ 8, ಭೀಮಾವತಾರಕ್ಕೆ 9, ಮಧ್ವಾವತಾರಕ್ಕೆ 6 ನುಡಿ ಮಾತ್ರವಿತ್ತರೆ, ವಾದಿರಾಜರು ಹರಿವರ್ಣನೆಗೆ 13, ಹನುಮಾವತಾರಕ್ಕೆ 58, ಭೀಮಾವತಾರಕ್ಕೆ 33, ಮಧ್ವಾವತಾರಕ್ಕೆ 76 ನುಡಿ ಮಾಡಿದ್ದಾರೆ. ಟಿಪ್ಪಣಿಯಲ್ಲಿ ಸೂಚಿಸಿದ 2–3 ಸಾಮಾನ್ಯಾಂಶ ಬಿಟ್ಟು ಮಿಕ್ಕೆಡೆ ಎಲ್ಲೂ ವಾದಿರಾಜರು ಪ್ರಭಾವಿತರಾಗಿಲ್ಲ. ಆದರೆ ಸುವಾಲಿಯ ಛಂದಸ್ಸು ಹಾಗೂ 4 ಸಂದರ್ಭದ ನುಡಿ ಸಾಲು 'ಶ್ರೀಕೃಷ್ಣ ಬಾಲಲೀಲೆ'ಯಲ್ಲಿರುವುದು ಅತ್ಯಂತ ಗಮನಾರ್ಹವಾಗಿದೆ, ವಾದಿರಾಜರ ಸ್ವಕೃತಿಗಳ ಪರಸ್ಪರ ಪ್ರಭಾವಕ್ಕೆ ಸ್ಪಷ್ಟ ನಿದರ್ಶನವೆನಿಸಿದೆ. (ಎರಡೂ ಏಕಕರ್ತೃಕವೆನ್ನಲು ಆಂತರಿಕ ಪ್ರಮಾಣವೆಂಬುದಂತೂ ಸರಿಯೇ). ಮಾತ್ರವಲ್ಲ, ಇವೆರಡೂ ದೇಶೀಯ ಕಾವ್ಯಗಳಲ್ಲಿರುವ 'ಗೆಂದ ಚಿತ್ರೆಲ್ಲಿ ತಾಯೀರ ತೋಳಿ ದಾವ ದಾರ ಬ್ಯಾಡ ಇಷ್ಟೊತ್ತಿಗೆ ಒಮ್ಮೆಗಾದರು ಉಡಿಸಿದಾರೆ ತಂದರೆ ಉಡುಗೊರೆ ಅಯ್ಯೊ ಜಬರಿ ಧೋತ್ರವಲ್ಲಿ ಕೊಂಬುವ ಕರಕೊಂಡು ಒಣಗಲಿಕ್ಕೆ" ಮೊದಲಾದ ಪ್ರಯೋಗವಿಧಾನ ವೀಕ್ಷಿಸಿದರೆ, ಇವು ವಾದಿರಾಜರ ಜೀವನದ ಉತ್ತರಾರ್ಧದಲ್ಲಿ ಸವಣೂರಾವಧಿಯಲ್ಲಿ ರಚಿತವಾದಂತೆನಿಸುವುದು. ಸೀತೆ, ದ್ರೌಪದಿ, ವೇದಮಾತೆಯರ ರಕ್ಷಣೆಗವತರಿಸಿದ ವಾಯುವಿನ ಮೂರು ಅವತಾರಗಳನ್ನು ವಾದಿರಾಜರು ಹಲವು ಹಾಡುಗಳಲ್ಲಿಯೂ ವಿವಿಧವಾಗಿ ವರ್ಣಿಸಿ ತಣಿದಿದ್ದಾರೆಂಬುದೂ ಗಮನೀಯ. ಈ ವಿಷಯಕ್ಕೆ ಸಂಬಂಧಿಸಿದ ಕೃತಿಗಳಲ್ಲಿ ಪ್ರಸ್ತುತ ಸುವಾಲಿ ಮಹತ್ವದ್ದಾಗಿರುವುದು ನಿರ್ವಿವಾದ.

(11) ಶ್ರೀಕೃಷ್ಣ ಬಾಲಲೀಲೆ: ಇದು 1930ರಲ್ಲಿ ಪಾವಂಜೆ ಗುರುರಾಯರಿಂದ ಉಡುಪಿಯ ಮಧ್ವ ಸಿದ್ಧಾಂತ ಗ್ರಂಥಾಲಯದ ಪರವಾಗಿ ಪ್ರಕಟಗೊಂಡಿದೆ. 1421 ನುಡಿಗಳುಳ್ಳ 120 ಪುಟಗಳ ಇದರ ಅಂದಿನ ಬೆಲೆ ಬರಿ 10 ಆಣೆ. ಆದರೆ ವಾದಿರಾಜರ ಕನ್ನಡ ಕೃತಿಗಳ ಪಟ್ಟಿಯಿಂದಲೇ ಇದು ಎಲ್ಲೆಡೆ ತಪ್ಪಿಸಿಕೊಂಡಿದೆ. ಡಾ.ಎ.ಬಿ.ಪಾಟೀಲರ 'ಪ್ರಸನ್ನವೆಂಕಟದಾಸರು (ಆಧಾರ ಗ್ರಂಥಗಳು)' ಹಾಗೂ ಮೈಸೂರು ವಿಶ್ವವಿದ್ಯಾಲಯದ 'ಕನ್ನಡ ಗ್ರಂಥಸೂಚಿ (3)' ಮಾತ್ರ ಇದನ್ನುಲ್ಲೇಖಿಸಿವೆ.[284] ಬಹುಶಃ ಆರಂಭದ ಗ್ರಂಥಕರ್ತರು ಮಾಡಿದ ಪಟ್ಟಿಯನ್ನೇ ಮುಂದಿನವರೂ ಅನುಸರಿಸಿದ್ದರಿಂದ ಇದು ನಮ್ಮ ವಿದ್ವಾಂಸರ ಕಣ್ತಪ್ಪಿಸಿಕೊಂಡಂತಿದೆ. 'ಕವಿಚರಿತ್ರೆ'ಯಿಂದಾರಂಭಿಸಿ 'ಸಾಹಿತ್ಯಚರಿತ್ರೆ'ಯವರೆಗಿನ ಬೃಹತ ಸಂಪುಟಗಳಲ್ಲೂ ಇದು ಅಲಕ್ಷಿತವಾಗಿದೆ. ಅಂತೆಯೇ ದಾಸ ಸಾಹಿತ್ಯ ಸಮೀಕ್ಷಿಸಿದ ಡಾ.ಎಚ್.ಕೆ.ವೇದವ್ಯಾಸಾಚಾರ್ಯರ 'ಕರ್ನಾಟಕದ ಹರಿದಾಸರು' ಎಂಬ ವಿಮರ್ಶಾತ್ಮಕ ಅಧ್ಯಯನ ಗ್ರಂಥದಲ್ಲೂ 'ವೈಕುಂಠ ವರ್ಣನೆ ವಾದಿರಾಜರಿಂದ ರಚಿತವಾದ ಕಾವ್ಯಗಳಲ್ಲೆಲ್ಲ ದೊಡ್ಡದು' (ಪು.632) ಎಂಬಂಥ ಉಕ್ತಿ ಇದೆ. 'ವೈಕುಂಠ ವರ್ಣನೆ' 388 ಸಾಂಗತ್ಯ ಪದಗಳ ಶಾಸ್ತ್ರಗ್ರಂಥವಾದರೆ, 'ಬಾಲಲೀಲೆ' 1421 ದ್ವಿಪದಿಗಳ ಕಾವ್ಯವೆನಿಸಿದೆ. ಇದು ಗೊತ್ತಾಗದ್ದರಿಂದಲೇ 'ಕನ್ನಡ ಕಾವ್ಯಪ್ರಪಂಚದಲ್ಲಿ ಹೆಸರು ಪಡೆಯುವಷ್ಟು ಸಾದ್ಯಂತ ಕಾವ್ಯವನ್ನು ವಾದಿರಾಜರು ಬರೆದಿಲ್ಲ' ಎಂದಿದ್ದಾರೆ ಕಬ್ಬಿ ಶೇಷಾಚಾರ್ಯರು (ಕವಿ ಕನಕದಾಸರು, ಪು.47). ಕನ್ನಡವನ್ನೇ ಅಧ್ಯಯನಗೈದ ನನಗೂ ಅಪರಿಚಿತವಾಗಿದ್ದ ಇದರ ಅಸ್ತಿತ್ವ ಪ್ರಸ್ತುತ ಸಂಶೋಧನೆಗಿಳಿದಾಗ ಮೊದಲು ಕೇಳ್ವಿಗೆ ಬಂತು. ಅದರ ಬೆನ್ನಲ್ಲೇ ಧಾರವಾಡದ ಪ್ರಾ.ಬಿ.ಎಸ್.ಕಲ್ಲಾಪುರರಲ್ಲಿ ಒಂದು ಪ್ರತಿ ಸಿಕ್ಕಿತು. ಅಭ್ಯಾಸ ಮುಂದರಿಸಿದಂತೆ ಅದರ ಇನ್ನೂ ಒಂದೆರಡು ಪ್ರತಿಗಳಿರುವುದೂ, ಈಚೆಗೆ ಬೆಂಗಳೂರಿನ ಲಕ್ಷ್ಮೀಕಾಂತ ಧೀ.ಮುದಗೋಡರಿಂದ ಪುನರ್ಮುದ್ರಣಗೊಂಡಿರುವುದೂ ತಿಳಿಯಿತು. ಆದರೆ ಹಸ್ತಪ್ರತಿಯಿಂದ ಇದ್ದಕ್ಕಿದ್ದಂತೆ ಮುದ್ರಿಸಿದ ಪಾವಂಜೆಯವರ ಪ್ರತಿಯಲ್ಲದು ಹಲವೆಡೆ ಅಶುದ್ಧವಾಗಿದೆ. ಉಪಲಬ್ಧ ಸಾಹಿತ್ಯವನ್ನವರು ಪದ್ಯವಾದರೂ ಗದ್ಯದಂತೆ ಮುದ್ರಿಸಿಡುವ ಕ್ರಮ ಇಲ್ಲಿಲ್ಲದಿರುವುದೇ ಒಂದು ವಿಶೇಷ. ಆದರೆ ಉಡುಪಿಯವರ ವಿಶಿಷ್ಟೋದ್ಧಾರದ ಮುದ್ರಣ,

---

284. ಪಾ.ಗು.ರ.ಮಾ.9—30ರ ಭಾಗವತ, ಅಡ್ಯಯವರ ಗ್ರಂಥೋಕ್ತ, (ಪು.311), ಭಾಗವತಸಾರ ಕೀರ್ತನೆ ಇದೇ ಇರಬೇಕು.

ಆಪಾತತಃ ಕಾಣುವ ಅಪವಾದಗಳನ್ನು ತಿದ್ದಬಹುದೆನಿಸುತ್ತದೆ. ಈ ನಿಟ್ಟಿನಲ್ಲಿ ಪ್ರಸ್ತುತ ಕೃತಿಯ ಪುನರುಕ್ತಿಗಳೂ ವಾದಿರಾಜರ ಇತರ ಕನ್ನಡ ಕೃತಿಗಳ ಅಧ್ಯಯನವೂ ನೆರವಾಗಬಲ್ಲವು.

ಕೃತಿಯ ಹೆಸರು 'ಶ್ರೀ ಕೃಷ್ಣ ಬಾಲಲೀಲೆ.' ಆದರೂ ಕೃಷ್ಣಭಕ್ತ ವಾದಿರಾಜರು ಭಾಗವತ ದಶಮಸ್ಕಂಧದ ಪೂರ್ವಾರ್ಧೋಕ್ತ ಬಾಲಲೀಲೆ, ಉತ್ತರಾರ್ಧೋಕ್ತ ಪ್ರೌಢಲೀಲೆಗಳನ್ನೆಲ್ಲ ಇಲ್ಲಿ ಹದವಾಗಿ ಕನ್ನಡಿಸಿದ್ದಾರೆ.[285] ಆದರಿಂದ ಪೂರ್ವಾರ್ಧದ ಕೊನೆಗೆ ಅವರೇ ನುಡಿದಂತೆ ಇದು ನಿಜವಾಗಿ 'ಗೋಪಾಲ ಚರಿತೆ' (904), ಕನ್ನಡದಲ್ಲಿ ಅವರಿತ್ತ 'ರುಕ್ಮಿಣೀಶ ವಿಜಯ.' ಅವರ ಸಂಸ್ಕೃತ ಮಹಾಕಾವ್ಯ ಪಂಡಿತರ 'ಮಾರ್ಗ'ರಚನೆ, ಈ ಕನ್ನಡ ಖಂಡ ಕಾವ್ಯ ಜನಸಾಮಾನ್ಯರ 'ದೇಸಿ' ಕೃತಿ. ಅಂತೆಯೇ ಅಂಶಗಣಗಳ ಇದರ ದ್ವಿಪದಿಗಳಲ್ಲಿ ಉತ್ಸಾಹ ಲಯದ ಭೋಗಷಟ್ಪದಿಯ ಸುಳುಹುಂಟು. ಭೋಗದ ಕಿರಿಯ ಚರಣಗಳೆರಡೂ ಸೇರಿ ಈ ದ್ವಿಪದಿಯ ಮೊದಲ ಸಾಲಾಗಿರುವುದನ್ನು 'ಅವತಾರತ್ರಯ ಸುಳಾದಿ'ಯಲ್ಲೇ ನೋಡಿದ್ದೇವೆ. ಇಲ್ಲಿಯ ಮೊದಲ ನುಡಿ ಹೀಗಿದೆ —

ಕಮಲನಾಥನ ಪಾದ ಕಮಲಗಳಿಗೆ ನಮೋ ಎಂಬೆ
ಅಮಲ ಮತಿಯ ಕೊಡುವುದೆಂದು ಕಮಲೆಗೆರಗುವೆ (1)

ಇಂಥ 2—3 ಅಂಶಗಳ ಬ್ರಹ್ಮ—ವಿಷ್ಣುಗಣದ ಶಬ್ದಗಳಿಂದ ಕೂಡಿ ಸುಬದ್ಧವಾದ ಹರಿವುಳ್ಳ 910 ನುಡಿ ಪೂರ್ವಾರ್ಧದಲ್ಲೂ, 511 ನುಡಿ ಉತ್ತರಾರ್ಧದಲ್ಲೂ ಇದ್ದು, ಇದರ ಧಾಟಿ ನಮ್ಮ ಕಿವಿ—ಮನಗಳನ್ನು ಸಂತೃಪ್ತಿಗೊಳಿಸುವುದು. ಜೊತೆಗೆ ಕೆಲವಲ್ಲಿ ಆದಿಪ್ರಾಸವಿರದಿದ್ದರೂ ವಾದಿರಾಜರು ಬಳಸುವ ಮಧ್ಯಾಂತ ಪ್ರಾಸಾನುಪ್ರಾಸ ರಸಿಕರ ತಲೆದೂಗಿಸುತ್ತವೆ. ಯುಕ್ತಿನಿಪುಣ ವಾದಿರಾಜರು ಶಾಸ್ತ್ರದಷ್ಟೇ ಸೊಗಸಾದ ಕಾವ್ಯವನ್ನು ಸಂಸ್ಕೃತದಂತೆ ಕನ್ನಡದಲ್ಲೂ ಬರೆಯಬಲ್ಲರೆನ್ನಲು ಇದು ನಿದರ್ಶನ. ತತ್ತ್ವಕ್ಕಿಂತ ಕಥೆ ವರ್ಣನೆ ಹೆಚ್ಚಾಗಿರುವ 'ಬಾಲಲೀಲೆ' ಅವರ ಕಾವ್ಯಗಳಲ್ಲೇ ಉತ್ತಮ. ಹೀಗೆ ಸರಳ ಸುಂದರವೆನಿಸುವ, ಸತ್ವ ಮೊತ್ತಗಳೆರಡು ದೃಷ್ಟಿಯಿಂದಲೂ ಹಿರಿದಾದ ಈ ಕೃತಿಯನ್ನಿಲ್ಲಿ ಸಂಕ್ಷೇಪವಾಗಿ ಸಮಾಲೋಚಿಸಿದೆ.

---

285. ಅನುಬಂಧಿತ ಕೃತಿಗಳಿಂದ ದ್ವಿತೀಯಾದಿ ಸ್ಕಂಧ ಕನ್ನಡಿಸಿರಬೇಕೆನಿಸುತ್ತದೆ.

ವಸ್ತು : ಪೂರ್ವಾರ್ಧದ ಮೊದಲ 7 ನುಡಿಗಳಲ್ಲಿ ಕ್ರಮವಾಗಿ ನಮಿಸುತ್ತ ಕವಿ ಹರಿ, ಲಕ್ಷ್ಮಿ, ವಾಯು ಅವತಾರತ್ರಯ ವ್ಯಾಸರಾಯರಿಗೆರಗಿದ್ದಾರೆ. 'ನ್ಯಾಯಸುಧೆಯ ವ್ಯಾಖ್ಯಾನ ಮಾಡಿದ ರಾಯ ರಾಮಚಂದ್ರರಿಗೆರಗಿದ' ನುಡಿ (4) ಸಂಶೋಧನೀಯ ವಾಗಿದೆ.[286] ಸರಸ್ವತಿ–ಭಾರತಿ–ರುದ್ರ–ಇಂದ್ರ–ಜಯತೀರ್ಥರನ್ನು ನಂತರ ನಮಿಸಿದ ನುಡಿಸಂಖ್ಯೆ ಮಾತ್ರ ತಾರತಮ್ಯ ದೃಷ್ಟಿಗೆ ತಪ್ಪಿವೆ. ಹೀಗೆ ಗುರುಹಿರಿಯರಿಗೆ ನಮಿಸಿ ರಾಮಕೃಷ್ಣರ ಬಾಲಲೀಲೆ ಚರಿತೆಯನೊರೆವ ಸಂಕಲ್ಪ ಸೂಚಿಸಿದ್ದಾರೆ (8–9).

ನಂತರ ಕೃಷ್ಣಾವತಾರದ ಕಥೆ ಮೊದಲಾಗಿದೆ. ಭೂಮಿ ದೇವತೆಗಳ ಕೋರಿಕೆಯಂತೆ ಅವತರಿಸಲಿದ್ದ ಕೃಷ್ಣನ ಪರಿವಾರ ಮೊದಲು ರೂಪಗೊಳ್ಳುತ್ತದೆ. ಹರಿ ಹಾಸಿಗೆಯಾದ ಶೇಷನನ್ನು ಕರೆದು 'ಜ್ಯೇಷ್ಠನಾಗಿ ಮುಂದವತರಿಸು' ಎಂದನು.[287] ಮುನಿಗಳು ತರು ಮೃಗವಾದರೆ, ಅನಿಮಿಷರು ಗೋವಳರಾದರು; ಸನಕಾದಿಗಳು ಹಸುಗಳಾದರೆ, ಪರಮಾತ್ಮ ಗೊಲ್ಲನಾದ;[288] ದ್ರೋಣ ವಸು ನಂದಗೋಪನಾದ, ಧರಾದೇವಿ ಯಶೋದೆಯಾದಳು;[289] ಕಾಶ್ಯಪ ವಸುದೇವನಾದ, ಅದಿತಿ ದೇವಕಿಯಾದಳು. ಅವರ ಮದುವೆಯ ಮೆರವಣಿಗೆಯಲ್ಲಿ 'ಆಕೆಯ ಮಗ ಮೃತ್ಯುವಾಹನ'ೆಂದ ಆಕಾಶವಾಣಿಗೆ ಅಂಜಿದ ಕಂಸ ತಂಗಿಯನ್ನು ಕಡಿಯ ಬಂದ. ಬೇಡವೆಂದ ವಸುದೇವಗೆ 'ಎನ್ನ ಪ್ರಾಣಕೆ ಮುನಿದ ತಂಗಿ ಇದ್ದು ಪ್ರಯೋಜನವೇನು? ಕಣ್ಣು ಹೋದ ಕುಬುಸ ತನಗೆ ಬೇಡ' ಎಂದ. ವಸುದೇವ ಸುತರನೀವ ಆಣೆ ಮಾಡಿ ನೆರೆಗೊಂಡ. 6 ಮಕ್ಕಳನ್ನು ಕಂಸ ಕೊಂದ. 7ನೆಯ ಗರ್ಭ ರೋಹಿಣಿಗೆ[290] ವರ್ಗವಾಗಿ

---

286. ಇಲ್ಲಿ ವ್ಯಾಖ್ಯಾನವೆಂದರೆ 'ಮಧ್ವಸುವ್ವಾಲಿ' 64–65ರಲ್ಲಿರುವಂತೆ ಉಪನ್ಯಾಸ ವೆಂದೂ, ರಾಯ ರಾಮಚಂದ್ರರೆಂದರೆ (ಮಧ್ವಸುವ್ವಾಲಿ ಪಲ್ಲವಿಯಲ್ಲೂ ಸೂಚಿಸಿದ ಮಧ್ವರಾಯರಂತೆ) ರಾಮಚಂದ್ರತೀರ್ಥರೆಂದೂ ಸ್ವೀಕರಿಸಿದಲ್ಲಿ, ವಿಬುಧೇಂದ್ರರಿಗೆ ದೀಕ್ಷೆ ಯಿತ್ತು ರಾಯರ ಮಠಕ್ಕೆ ಕಾರಣರಾದ ಈ ಉತ್ತರಾದಿಮಠೀಯರು ಶ್ರೀರಂಗಪಟ್ಟಣದ ಕಾಶೀನಾಥನಿಗೆ 24 ದಿನ ಸುಧಾ ಬೋಧಿಸಿದ ಸಂಗತಿಗೆ ಸರಿಹೋಗುತ್ತದೆ. ಇದು ಬಿ.ಎಸ್. ಕಮಲಾಪುರರ 'ಸತ್ಯಧ್ವಾ'ದಲ್ಲಿ ಉಕ್ತ (1931).

287. ನರೇಂದ್ರರು ಪ್ರಯಾಣಪೂರ್ವದಲ್ಲಿ ನರರಿಂದ ತಮ್ಮ ಹಾಸಿಗೆ ಕಳಿಸುವಂತೆ (ರುಕ್ಮಿಣೀಶ ವಿಜಯ, 1,26). ರಾಮಾವತಾರಾಂತ್ಯದಲ್ಲೂ ಲಕ್ಷ್ಮಣನನ್ನು ಮುಂದೆ ಕಳಿಸಿದ (ಕ.ನಿರ್ಣಯ, 1–155).

288. ಮೊರೆಯಿಡಬಂದ ಗೋರೂಪಧಾರಿಣಿ ಧರಿತ್ರಿಯ ಪಾಲನೆಗೆ ಗೊಲ್ಲನಾದುದು ಉಚಿತವೇ.

289. ಕ.ನಿರ್ಣಯ 2,400.

290. ಪೂರ್ವಜನ್ಮದ ಕಶ್ಯಪನ 2ನೆಯ ಮಡದಿ ಸುರಭಿ (ಕ.ನಿರ್ಣಯ, 2,43).

ಬಲರಾಮ ಹುಟ್ಟಿದ. ಅಕಳಂಕಚರಿತ ಅಷ್ಟಮ ಗರ್ಭಕ್ಕಿಳಿಯಲು ದೇವಕಿಯ ಮುಖಕಮಲ ವಿಕಸಿತವಾಯಿತು. ಶ್ರಾವಣ ಬಹುಳಾಷ್ಟಮಿಯ ಅರ್ಧರಾತ್ರಿಗೆ ಅಚ್ಯುತನ ಚರಿತೆ ಆವಿರ್ಭೂತವಾಯಿತು (10–64).

ಶುಕ್ಲ ಶೋಣಿತ ಸಂಬಂಧ ಪ್ರಸಕ್ತಿ ತನಗಿಲ್ಲವೆಂದು
ಶಂಖ ಚಕ್ರ ಚತುರ್ಭುಜದಲವತರಿಸಿದನು (65)[291]

ಪಟ್ಟಣದ ಕೇರಿಯೊಳಗೆ ಸುತ್ತೇಳು ಗೃಹದೊಳಗೆ
ಪಕ್ಷಿವಾಹನ ಕೃಷ್ಣನ ಬೆಳಕು ತುಂಬಿತು (67)[292]

ಇವನ ಕಂಡು ಅಂಜಿದ ದೇವಕಿಗೆ ಹರಿ ಅಭಯವಿತ್ತು, 'ನೀವು ಪೃಶ್ನಿ–ಸುತಪರಾಗಿದ್ದಾಗ ಗೈದ ತಪಕೆ ಮೆಚ್ಚಿ ಕೊಟ್ಟ ವರದಂತೆ ನಿನ್ನ ಗರ್ಭದಲ್ಲಿ ಪ್ರಜೇಶ್ವರನಾಗಿ, ಅದಿತಿ ಕಾಶ್ಯಪರಾದಾಗ ವಾಮನನಾಗಿ, ಈಗ ಕೃಷ್ಣನಾಗಿ ಬಂದೆ' ಎಂದ.[293] ಅವನ ಸೂಚನೆಯಂತೆ ವಸುದೇವ ಎತ್ತಿಕೊಂಡು ನಂದಗೋಕುಲಕ್ಕೆ ನಡೆಯಲು ಬೀಗಮುದ್ರೆ ಸಹಿತ ದ್ವಾರ ತೆರೆದುವು;[294] ಹನಿ ಮಳೆಗೆ ಶೇಷ ಹೆಡೆಯ ಕೊಡೆ ಮಾಡಿದ;[295] ಯಮುನೆ ದಾರಿ ಕೊಟ್ಟಳು.[296] ವಸುದೇವ ವಾಸುದೇವನ ವಿನಿಮಯಿಸಿ ಯಶೋದೆ ಹಡೆದ ದುರ್ಗಿಯೊಡನೆ ತಿರುಗಿ ಬರಲು, ಅತ್ತ ಮಗುವನ್ನು ಕೊಲ್ಲಬಂದ ಕಂಸ 'ಹೆಣ್ಣು ನಿನ್ನ ಕೊಲುವುದೇ? ಕರುಣಿಸೆಂ'ದ ತಂಗಿಗೆ 'ಹೆಣ್ಣಿನಿಂದ ಹುಟ್ಟು ಉಂಟು, ಲಯವು ಉಂಟು; ಸೀತೆ ಹುಟ್ಟಿ ಲಂಕೆಗೆ ಅಹಿತವಾಯಿತು' ಎಂದು ಸೆಳೆದು ಅಪ್ಪಳಿಸಲುಂಬಡಿ ಸ್ವರೂಪ ತೋರಿ ನಿಂತ ದುರ್ಗಿ 'ನಿನ್ನ ವೈರಿ ಅನ್ಯತ್ರ ಬೆಳೆಯುತಾನೆ' ಎಂದ ಮಾತ ಕೇಳಿ ಕಡುನೊಂದ (68–114).

---

291. ರು.ವಿ.1,52–54; ಲ.ಶೋಭಾನೆ, 62–63; ಕ.ನಿರ್ಣಯ, 1,178.

292. 'ಶ್ರೀ ಮಹಾಲಕ್ಷ್ಮಿ ವಲ್ಲಭಗೆ' ಎಂಬ ಹಾಡಿನ ಪಲ್ಲವಿಯಂತಿರುವ 'ಬೆಳಕು ತುಂಬಿತು ದ್ವಾರಾವತಿಗೆ' ಸದೃಶ ಸಾಲು, ಏಕಕರ್ತೃಕ.

293. ಕ.ನಿರ್ಣಯ, 2,40.

294. ಅವನ ಧ್ಯಾನಿಸಿದರೇ ತೊಂದರೆಯಾಗದು, ಎತ್ತಿಕೊಂಡರೇನಡ್ಡಿ (ರು.ವಿ.1,59)?

295. ಅಗ್ರಜನಾದ ತಪ್ಪಿಗೆ ಸೇವಿಸಿದ (ರು.ವಿ.1,61).

296. ಪತಿಗಾದ ಸೇತುಬಂಧನ ನೆನೆದು (ರು.ವಿ.1,63; ಕ.ನಿ.2,48).

ಇತ್ತ ಗೋಕುಲದಲ್ಲಿ ಕೃಷ್ಣನಿಗೆ ಸಂಭ್ರಮದ ಜನ್ಮೋತ್ಸವ. ನಂದಗೋಪ ದಾನ ಧರ್ಮಗೈದರೆ, ಹೆಂಗಳೆಯರು ಮಗುವನೆರೆದರು —

ಮಧು ಎಂಬ ದೈತ್ಯನ ಸದೆಬಡೆದ ಶ್ರೀಹರಿಗೆ
ಮಧುವ ತಂದು ವದನದಲ್ಲಿ ತೊಡೆದರಾಗಲೆ (122)

ಬಾಯಿಗೆ ಮಧುವನಿಟ್ಟು ನಾಭಿಯ ಛೇದಿಸಿದರು
ಭಾಗೀರಥಿ ಜನಕಗೆ ಮಜ್ಜನಕೆರೆದರು (123)

ಅಚ್ಯುತನಂತಗೆ ಹತ್ತವತಾರಗೆ
ಬಚ್ಚಂಬಲೆಯ (ತಂದು) ಬಿಸಿಮಾಡಿ ಎರೆದರು (125)

ಮತ್ಸ್ಯಗೆ ಕೂರ್ಮಗೆ ವರಾಹಗೆ ನರಹರಿಗೆ
ವಾಮನ ಭಾರ್ಗವನಿಗೆ ನೀರ ಎರೆದರು (126)

ರಾಮಗೆ ಕೃಷ್ಣಗೆ ಬೌದ್ಧಗೆ ಕಲ್ಕಿಗೆ[297]
ಬಚ್ಚಂಬಲೆಯ ತಂದು ಬಿಸಿಮಾಡಿ ಎರೆದರು (127)

ಕೇರಿಗೆಲ್ಲ ಸಕ್ಕರೆ ಬೀರಿ, ಹೈನದೋಕುಳಿಯಾಡಿದರು.[298] ಜಾತಕರ್ಮದಲ್ಲಿ ಜೋಯಿಸರು ಜಾತಕ ಹೇಳಿ ಹೋದರು, ಮುತ್ತೈದೆಯರು ಸ್ತುತಿಸಿ ವೀಳ್ಯ ಕೊಂಡು ಹೋದರು (128–146).

ಅತ್ತ ಕೊಲುವ ಹದನ ತಿಳಿಯದೆ ಕಂಸ ಮಂತ್ರಿಗಳ ಸಲಹೆ ಕೇಳಿದ. ಅವರು ಪೂತನಿಗೆ 'ಶಿಶುವ ಕೊಲ್ಲು' ಎನ್ನಲು, ಆಕೆ ವಿಷ ಧರಿಸಿ ಸಾದಾವಳಿಯುಟ್ಟು ಮುತ್ತಿನ ನರ ತೊಟ್ಟುಬಂದು,[299] ಅಸುರಾರಿಗೆ ವಿಷದ ಮೊಲೆ ಕೊಟ್ಟಳು; ಆತ ಅಸು ಹೀರೆ ಅಸುರರೂಪಿಂ ಬಿದ್ದಳು. ಜನರು ಆಶ್ಚರ್ಯಪಟ್ಟು ಬಾಲಕಗೆ ರಕ್ಷೆ ಕಟ್ಟಿದರು (147–164).

---

297. 3 ಸಾಲುಗಳಲ್ಲಿ ಕವಿಗೆ ಪ್ರಿಯವಾದ ದಶಾವತಾರ. ಇದರ ಹಿಂದುಮುಂದಿನ ನಾಲು ಪುನರಾವರ್ತನ ಹೊಂದಿ ದೇಸಿ ಕಾವ್ಯದ ಸೊಬಗನಿತ್ತಿವೆ. ವಿಹಿತ ಪಾಠ ಕಂಸದಲ್ಲಿ.

298. ಕೃಷ್ಣ, ನಮ್ಮೊಡನಿಂತು ಆಡೆಂಬಂತೆ ಗೋವಳರು ಹೈನದಾಟವಾಡಿದರು (ರು.ವಿ.2, 34).

299. ಒಳಗಣ ಊರ್ವಶಿಯಂತೆ ಸುರೂಪಿಯಾಗಿ ಬಂದಳು (ರು.ವಿ.2, 34); ಈ ವಿವರವು ತತ್ವವಾದ ದೇಸಿ ಕಾವ್ಯದಲ್ಲಿನಗತ್ಯವೆಂದು ಬಂದಿಲ್ಲ, ಕನ್ನಡ ನಿರ್ಣಯ ದಲ್ಲಿದೆ (2, 49).

ಸೂತಕ ಸರಿದು ನಾಮಕರಣ ನಡೆಸಿದರು. ಬಲಜ್ಞಾನಗಳ ಹಲಾಯುಧನನ್ನು ಬಲರಾಮನೆಂದೂ ಜ್ಞಾನಾನಂದ ಗುಣಪೂರ್ಣನನ್ನು ಕೃಷ್ಣನೆಂದೂ ಕರೆದರು. ನಂದನಿಗೆ ಗರ್ಗರು ರಾಮ–ಕೃಷ್ಣರ ಸ್ವರೂಪ ನಿರೂಪಿಸಿದರು (168–186). ಮಕ್ಕಳ ಅಲಂಕರಣವಿದು —

ರಾಮಕೃಷ್ಣರಿಬ್ಬರಿಗೂ ರೋಹಿಣಿ ಯಶೋದೆಯರು
ಮಾಣಿಕದ ಮುತ್ತಿನಾಭರಣವಿಟ್ಟರು (187)

ಆರು ಮುತ್ತಿನ ಬಾವಲಿ ಅಣಿಮುತ್ತಿನ ಚೌಕುಳಿ
ರಾಮನ ಕಿವಿಗೆ ಜರಿವ ಕುಂಡಲವಿಟ್ಟರು (193)

ಎಂಟು ಮುತ್ತಿನ ಬಾವಲಿ ಎಂಟು ಮುತ್ತಿನ ಚೌಕುಳಿ
ಕೃಷ್ಣನ ಕಿವಿಗೆ ಜರಿವ ಕುಂಡಲವಿಟ್ಟರು (194)

ಬಾಲಕಿಯರೆಲ್ಲರು ಮೋಹಿಸಬೇಕೆನುತ
ಮೂಗುತಿಯನಿಟ್ಟರು ಮುದ್ದುಕೃಷ್ಣಗೆ (195)[300]

ವಿಶ್ವಕರ್ಮನನ್ನೆಚ್ಚರಿಸಲು ಆತ ಸೊಗಸಾದ ತೊಟ್ಟಿಲು ರಚಿಸಿ ತಂದ. ಮಿತ್ರೆಯರು ತೊಟ್ಟಿಲ ಕಟ್ಟಿ ಅಲಂಕರಿಸಿದರು. ಬಂಧುಗಳೂ ಮಿತ್ರೆಯರೂ ನೋಡಬಂದರು. ನಂದನ ರಾಣಿಯರೂ ಶೃಂಗಾರವಾದರು. ತೊಟ್ಟಿಲ ಪೂಜೆ, ಆರತಿ ಮಾಡಿ, ಕಮಲನಾಭನ ತೂಗಿ ಕುಶಲ ರಾಗಗಳಿಂದ ದಶಾವತಾರ ಪಾಡಿದರು[301] (197–239):

ಮತ್ಸ್ಯನಾಗಿ ಮುನ್ನ ಬಂದಿ ಕುಹಿಹೋರನ ಕೊಂದಿ,
ಪುತ್ರನಾದ ಅಜಗೆ ವೇದವಿತ್ತ ಹರಿಗೆ ಜೋ (240)

ಸುರರು (ಅ)ಸುರರು ಕೂಡಿ ಶರಧಿಯ ಮಥನ ಮಾಡೆ
ಇಳೆ ಬಿಟ್ಟು ಬೆನ್ನಲೆತ್ತಿದ ಕೂರ್ಮರೂಪ ಜೋ (241)[302]

ಸುರುಳಿಯಾಗಿ ಸುತ್ತಿದ ಭೂಮಿ ಕೋರೆದಾಡೆಯಿಂದ ತಂದಿ
ಹರಿ ಹಿರಣ್ಯಾಕ್ಷನ ಕೊಂದಿ ವರಹರೂಪ ಜೋ (242)

ಮಗನ ಮುಂದೆ ಹಿರಣ್ಯಕನ ಕರುಳ ಬಗೆಯು ಉಗುರಿನಿಂದ
ನರಮೃಗರೂಪನಾದ ನರಹರಿಯೆ ಜೋ (243)

---

300. 'ರುಕ್ಮಿಣೀಶ ವಿಜಯ' ಪೂರ್ವಕಾವ್ಯದಲ್ಲಿರದ ಇಂಥ ದೇಶೀಯ ವರ್ಣನೆ ಇಲ್ಲಿ ಬಂದುದುಚಿತ.

301. ದಶಾವತಾರ ಬಳಸಿಕೊಂಡ ಸ್ತೋತ್ರ ಸಂದರ್ಭೋಚಿತ.

302. ಗಜೇಂದ್ರ ಮೋಕ್ಷ, 25.

ಬಲಿಯ ಪಾತಾಳಕ್ಕೆ ಮೆಟ್ಟಿ ನೆಲನ ಈರಡಿಯ ಮಾಡಿದ
ಚಲುವ ವಾಮನ(ನೆ) ತ್ರಿವಿಕ್ರಮನೆ ಹೋ (244)

ಎರಡು (ಹ)ತ್ತೊಂದು ಬಾರಿ ವೀರ ಕ್ಷತ್ರಿಯರ ಕೊಂದಿ
ಧಾರುಣಿ ವಿಪ್ರರಿಗಿತ್ತ (ಪರಶು)ರಾಮ ಹೋ (245)[303]

ವಾರಿಧಿ ಕಟ್ಟಿ ದಶಗ್ರೀವನ ಶಿರವ ತರಿದಿ
ಜಾನಕಿಯ ತಂದಿ ದಶರಥ ರಾಮನೆ ಹೋ (246)

ನಂದಗೋಕುಲದಲ್ಲಿ ಪೂರ್ಣಚಂದ್ರನಾಗಿ ಜನಿಸಿದ
ಕಂದನಾಗಿ ಪೂತನಿಯ ಕೊಂದ ಕೃಷ್ಣ ಹೋ (247)

ಮುಗ್ಧ ಸ್ತ್ರೀಯರ ವ್ರತವನು ಬುದ್ಧರೂಪದಿಂದ ಅಳಿದಿ
ವೃದ್ಧವೇಷದಿಂದ ತ್ರಿಪುರರ ಗೆದ್ದ ಹರಿಯೆ ಹೋ (248)

ಹಯವನೇರಿ ದಾಳಿ ಮಾಡಿ ಸುಜನರಿಗೆ ಸುಖವನಿತ್ತ
ಹಿಡಿದ ಕತ್ತಿಯಾಯುಧವನು (ಪಡೆದ) ಕಲ್ಕಿ ಹೋ (249)

ಹೀಗೆ ಹರಿಯ ನುತಿಸಿ ಮುಕ್ತಳಾದೆನೆಂದಳು ಗೋಪಿ. ನಾರಿಯರು ಹೊಸ್ತಿಲ ಬಾಗಿಲ ಹಿಡಿದು ಗಂಡನ್ನವರ ಹೇಳುತಿದ್ದರು, ಬಾಗಿನ ತೆಗೆದುಕೊಂಡು ಹೋಗುತಿದ್ದರು (250–262).

ಕಂಸನಾಜ್ಞೆಯಂತೆ ಶಕಟಾಸುರ ಬಂಡಿಯಾಗಿ ಬರಲು, ಅದರಡಿಯಲ್ಲಿ ಮಗುವನಿಟ್ಟು ಗೋಪಿ ವಿಪ್ರಸಂತರ್ಪಣೆಗೆ[304] ಹೋದಳು. ಸ್ತನ್ಯಪಾನ ತಡೆಯಿತೆಂದು ಹರಿ ಮುನಿದೊದೆಯೆ ಬಂಡಿ ಚೂರ್ಣವಾಗಿ ಅಸುರ ಉರುಳಿದ (263–269).

ಕೃಷ್ಣನ ಬಾಲಲೀಲೆಯ ಮೊದಲಲ್ಲಿ ಯಶೋದೆ ಹಾಲುಣಿಸಿ, ಮೀಯಿಸಿ, ಶೃಂಗರಿಸಿ, ಕಣ್ಣ ಮುಚ್ಚಿ ಮುದ್ದು ತಾ ಎಂಬಳು, ಅಂಬೆಗಾಲಿಕ್ಕಿ ತೊಂಗಾಲ ತೋರಿನೆಂದಳು. ಗಜನ ತಾಪವಳಿದ ಆನೆ ಆಡೆಂದಳು, ತಾರಕಬ್ರಹ್ಮನ ಪಡೆದ ತಾರಮ್ಯಯತ್ನನಾದೆಂದಳು,

---

303. 'ಅವತಾರತ್ರಯ ಸುವ್ವಾಲಿ'ಯ 9ರಲ್ಲಿ ನರಿಯೂದ ಪಾಠವಿದೆ.

304. ಪ್ರಥಮತಃ ಸೋದರಮಾವನಲ್ಲಿಗೈದುವ ಉಪನಿಷ್ಕ್ರಮಣ (ಹೊರಹೋಗುವ) ಉತ್ಸವ (ಋ.ವಿ.2,63; ಕ.ನಿ.2,50).

ಸುಧೆ ನೀಡಿದ ಕೈಯೊಳಗೆ ಚಪ್ಪರಿಸಿಕೊಂಡಳು, ಶ್ರೀಯರಂಗನ ಮಾಳ್ಪ ಕೈಲಿ ತೋಳ ನಾಡೆಂದಾಡಿಸಿದಳು. ಬಳಿಕ ತೊಡೆಗೇರಿಸಿಕೊಳ್ಳುವಾಗ ಬಿಟ್ಟದಂತೆ ಜರಿಯಲು ಕೆಳಗಿಟ್ಟು ಆದಿಪುರುಷನೆಂದು ನುತಿಸಿ ಬಲಿಯ ದೀಸಿದ. ಮತ್ತೆ ಹಸಿದನೆಂದುಣಿಸುವಲ್ಲಿ ದೊಡ್ಡ ತುತ್ತು ಕೇಳಲು ಅಪ್ಪಿಕೊಂಡಳು. ಚಂದ್ರನ ತಾರೆಂದು ಕಾಡಿದಾಗ ಹಿಡಿದೆತ್ತಲು, ಕೈಗಿಳಿದ ಚಂದ್ರನ ತೋರಿಸಿ ಹಾರಿಸಿದ ಕೃಷ್ಣನ ನೋಡಿ ಬೆರಗಾದಳು. ಪವಡಿಸೆಂದು ದಿಂಬನಿಟ್ಟರೆ ಊರುಮನೆ ಹೊಕ್ಕು ಅದ್ವಳಿ ಮಾಡುವ ಹೆಂಗಳ ಕಾಡದಿರೆಂದು ಒಳಗೆ ಹೋಗಲು, ಓಡಿ ಹೋಗಿ ಕನ್ನೆಯರೊಡನೆ ಸರಸವಾಡುವ. ಅವರ ಸೆರಗ ಹಿಡಿದು ಭಂಗಪಡಿಸಲು ಅವರು ಹಾವಳಿಗಾರನೆಂದು ದೂರಬಂದರು. 'ಬಟ್ಟಲ ತಾರೆಗೆ ಇಡುವ, ಕರುಗಳ ಉಣಿಸಿ[305] ಹೋಗುವ, ಹಾಲು ಮೊಸರು ಕುಡಿದು ಬಿಸಾಸಲಿಳಿದು[306] ಹೋಗುವ, ಕತ್ತಲೆ ಮನೆಯ ಹೊಕ್ಕು ಬೆಳಕು ಮಾಡಿ[307] ಒರಳ ಏರಿ ಹರವಿ ಒಡೆದು ಹೋಗುವ, ಕೋಲು ಕೊಂಡು ಪೋದರೆ ಬಗಿದಪ್ಪಿ ಸೆರಗು ತೆಗೆದು ಹೋಗುವ, ವತ್ಸದ ಬಾಲ ಮಕ್ಕಳ ಜಡಿಕೆ ಕಟ್ಟಿ ಕುಣಿವ. ಹದಿನೇರಿ ತಿರುಗುವವಗೆ ಬುದ್ಧಿ ಹೇಳಬಾರದೆ?' ಯಶೋದೆ 'ಬರಿದೆ ದೂರು ಮಾಡುವಿರಿ, ಕೃಷ್ಣನ ಹಿಡಿದುಕೊಂಡು ಬನ್ನಿ' ಎನ್ನಲು, ಬೆಣ್ಣೆ ಮೆದ್ದವನ ಒಬ್ಬರಿಂದು ದಣ್ಣಗೆ ಮತ್ತೊಬ್ಬಳೆತ್ತಿಕೊಂಡು ಬಂದರು. ಆದರೆ ಗೋಪಿ ಅವಗೆ ಮೊಲೆಯುಣಿಸಿ ಮುದ್ದಾಡುತ್ತಿದ್ದು ಅವರ ಕೈಯಲ್ಲಿಲ್ಲದಿರಲು, ಅಪ್ಪರಿ ನಾಚಿಕೆಗಳಿಂದ ಸುಮ್ಮನೆ ಹೋದರು (270–340).

ನಂತರ ಯಶೋದೆ ಮೊಸರು ಕಡೆಯುತ್ತಿರಲು, ಕೃಷ್ಣ ಹಸಿವೆನ್ನುತ್ತಿದ್ದ. ಹಾಲುಣಿಸಿ ಉಕ್ಕಿದ ಹಾಲು ಇಳಿಸಿ ಬರಲು ಒಳಗೆ ಹೋದಳು, ಕೃಷ್ಣ ಕಡಗೋಲು ಮುರಿದು ಗಡಿಗೆ ಒಡೆದು ಓಡಿ ಹೋದ. ಗೋಪಿ ಕಂಡು ಕಟ್ಟಿಹಾಕುವೆನೆಂದು ಹಿಡಿದಳು. ಊರ

---

305. 'ಬಂಧಿತರ ಬಿಡಿಸುವುದೆನ್ನ ಸ್ವಭಾವ' (ರು.ವಿ.3,49).

306. 'ನಾನೇ ದೇವರೆಂದು ಕುಡಿವ' (ರು.ವಿ.3,47).

307. ಕಂಗಳ ಸೂರ್ಯ ಚಂದ್ರರಿಂದ (ರು.ವಿ.3,57).

ಕಣ್ಣು ಸಾಲದೆ ಓಡಿದವನು ಕಡೆಗೆ ಜನನಿ ಅರಸಿದಳೆಂದು ಭಕ್ತವತ್ಸಲನಾಗಿ ಕಣ್ಣಿಗೆಳವಾದ.[308] ಯೋಗಿಗಳ ಜ್ಞಾನಕೆಟುಕದವನು ಗೇಣು ಹಗ್ಗಕ್ಕೆ ಸಿಲುಕಿ, ಒರಳಿಗೆ[309] ಕಟ್ಟಿದ ಗೋಪಿ ಒಳಗೈದಲು, ಸುಳಿದು ಬಾಹೆನೆಂದು ಹೊರಗೆ ಬಂದನು. ಪಾನಮತ್ತರಾಗಿ ನಾರದರ ಶಾಪದಿಂದ ಮತ್ತಿಯ ಮರವಾಗಿದ್ದ (ಯಮಳಾರ್ಜುನ) ನಳಕೂಬರ ನಡುವೆ ಹಾಯಲು, ಮರ ಉರುಳಿ ಎದ್ದು ಬಂದ ಇಬ್ಬರು ಪುರುಷರಿಗೆಲ್ಲರೂ ಬೋದ್ಯಪಟ್ಟರು. ಅವರು ಕ್ಷಮೆ ಕೇಳಿ ನಮಿಸಿ ವಿಮಾನವೇರಿ ಹೋದರು. ಎಲ್ಲರೂ ಕೃಷ್ಣನ ಪಾಡಿ, ಸುರರು ಮಂದಾರ ಕರೆದರು. ಇಂಥ ಕಡೆ ಕಥಾನಾಂತರಕ್ಕೆ ಬರುವ ಪಲ್ಲವಿ ಸದೃಶ ನುಡಿಯಿದು —

ಕೃಷ್ಣನ ಚರಿತೆಯನ್ನು ಕೇಳಿದ ಕಂಸನು
ಕೊಂದು ನಿದ್ರೆಗೈವುದು ಎಂದಿಗೆಂದನು (372)

ಗೋಕುಲಕ್ಕೆ ಉತ್ಪಾತ ಬಂದಿತೆಂದು[310] ಕೃಷ್ಣ ವೃಂದಾವನಕ್ಕೈದಿದ. ಅಲ್ಲಿ ಮಣ್ಣು ತಿಂದನೆಂದಾಲಿಸಿದ ಗೋಪಿ ಕೋಲು[311] ತೆಗೆದುಕೊಂಡು ಬಡಿಯಬಂದಳು. 'ಚಿಕ್ಕವರ ಮಾತ ಕೇಳಿ ಕೊಲ್ಲ ಬಂದಿ, ಬಾಯ ನೋಡೆ'ಂದ ಕೃಷ್ಣ ವಿಶ್ವರೂಪತೋರಿದ. ದೇವಾದಿ ದೇವನೆಂದು ಸ್ತುತಿಸಿ ತನ್ನ ಬಳಿಯ ಬೀಸಿದ (373 – 382).

ರಾಮ ಕೃಷ್ಣರು ತುರುಗಾಯುವಲ್ಲಿ ವತ್ಸವಾಗಿ[312] ಬಂದ ಧೇನುಕಾಸುರ, ಪಕ್ಷಿಯಾಗಿ[313] ಬಂದ ಬಕಾಸುರರೂ ಹತರಾದರು. ಕೃಷ್ಣ ಹಸಿದೆನೆಂದು ಗೋವಳರ ಕಳುಹಲು

---

308. ಉದ್ಧರು ವಿಶ್ವಂಭರನ ಕಟ್ಟಲಾರರೆಂದೇ ಹಗ್ಗ ಕುಗ್ಗಿತು, ಹರಿ ಎಂದರಿತಾಗ ಸರಿಯಾಯಿತು (ರು.ವಿ.3,53; 4,9—10).

309. ಕಳವಿಗೆ ನೆರವಾಗುತ್ತಿದ್ದ ಕಾರಣ (ರು.ವಿ.4,11).

310. ಗೋಕುಲ ಜನರ ಹೆದರಿಸಲು ಕೃಷ್ಣ ತನ್ನ ರೋಮಗಳಿಂದ ತೋಳಗಳ ಸೃಜಿಸಿದ (ರು.ವಿ. 4,18—19).

311. ಕಟ್ಟಲು ಹೊರಟಾಗ ದಂಡ ಧರಿಸಿದ್ದಳು (ರು.ವಿ.4,6); ಪ್ರಸ್ತುತ ಸಂದರ್ಭ ರು.ವಿ.3,16—17ರಲ್ಲೂ ಅಧ್ಯಾಯಾಂತರಕ್ಕೂ ಇದೆ.

312. ಜನ್ಮತಃ ಪಶುತ್ವ (ರು.ವಿ.4,27).

313. ಮತ್ಸ್ಯರೂಪಿಯನ್ನು ತಿನ್ನಬಂದುದು ತಿಮಿಂಗಿಲ ಸಾರಿದಂತಾಗಿ, ನರಕ ಯಾತನಾ ವಿಧಾನ ತಿನಿಸಿದ. (ರು.ವಿ.4, 31—35).

ಯಶೋಧೆ ಬುತ್ತಿ ಕಳಿಸಿದಳು. ನಕ್ಷತ್ರಗಳಲ್ಲಿ ಚಂದ್ರನಂತಿದ್ದ ಕೃಷ್ಣನೊಡನೆ ಉಂಡು ಅವರೆಲ್ಲ ಸುಖದಲ್ಲಿದ್ದರು. ಆಗ ಅಜನು ಬಂದು ಕರುವ ಮರೆ ಮಾಡಿದ. ಕೃಷ್ಣ ಅರಸ ಹೊರಡಲು ಗೋಪಾಲರೂ ತುರುವೂ ಮಾಯವಾದುವು. ಇದನ್ನರಿತ ಕೃಷ್ಣನೇ ಮೂರರೂ ಆಗಿ ಮನೆಗೆ ಬರಲು, ಅಜನು ಈ ತಂಡ ಯಾವುದೆಂದು ಚಿಂತಿಸಿ, ಬಂದು ಸ್ತುತಿ ಮಾಡಿದ — 'ಬ್ರಹ್ಮನೆಂಬ ಹವಿಯಿಂದ ನಿನ್ನ ಮರೆದಿದ್ದೆ ಸ್ವಾಮಿ, ಅಧಿಪತ್ಯ ಒಲ್ಲೆ, ಗೋವಳರಂದದಿ ಪಾಲಿಸೆಂ'ದ. ಪ್ರಲಂಬಾಸುರ ಬಲರಾಮನ ಹೊತ್ತೊಯ್ಯೆ, ಮಾಯಾಸುರ ಗೋವಳರ ನಡುಗಿಸಿದ; ಕೃಷ್ಣ ಇಬ್ಬರನ್ನೂ ಸಂಹರಿಸಿದ. ನೀರ ಮುಳುಗುವ ನರರನ್ನು ನಿಶಾಚರರು ವರುಣನಲ್ಲಿಗೊಯ್ಯಲು ಕೃಷ್ಣ ಬಿಡಿಸಿ ತಂದ. ಮಾಧವನ ಮಹಿಮೆಯರಿತ ಗೋವಳರು ತೋಳುದಂಡಿಗೆ ಏರಿಸಿ ಹೀಲಿಚಾಮರವಿಕ್ಕಿ ತಾವರೆ ಕೊಡೆವಿಡಿದು ಸಾಯುಜ್ಯ ಮುಕ್ತಿಗೆ ಸಂದರು. ಅವರು ತಾಳೆ ಹಣ್ಣಿಗೆ ಜಗಳಾಡುತ್ತಿರುವಾಗ ಬಂದ ಖರಾಸುರನನ್ನು ಬಲರಾಮ ಖರಹರ ತಿರುಗಿಸಿ ಬಿಡಲು ಹಣ್ಣು ಬಿದ್ದುವು[314] (383— 443).

ಬಳಿಕ ಅವರೊಡನೆ ಕಾಳಿಂದಿಯ ಮಡುವಿಗೆ ಬಂದ ಕೃಷ್ಣ ಕೊಳಲೂದುತ್ತಿರಲು, ಗೋವು ಗೋಪರು ನೀರು ಕುಡಿದು ವಿಷವಶರಾದರು; ಹರಿಯ ನೋಟಕ್ಕೆ ಮೈಮುರಿದೆದ್ದರು. ಚೆಂಡನಾಡುತ್ತಿರಲು ಯಮುನೆಗೆ ಬಿದ್ದ ಸ್ವಾಮಿ ಕದಂಬದ ಮರವೇರಿ ಮಡುವ ಧುಮುಕಿದ. ಮರಳಿ ಕಾಣದಿರಲು ಸುದ್ದಿ ಊರಿಗೆ ಮುಟ್ಟಿತು. ನಾರಿಯರೆಲ್ಲ ಓಡಿ ಬಂದರು. 'ಹತ್ತೆಂಟು ಸಾವಿರ ವರುಷ ಕಷ್ಟಪಟ್ಟು ತಪವ ಮಾಡಿ[315] ಸರ್ಪಗಿಂದಿತ್ತೆನು ಮಗನ' ಎಂದಳು ಗೋಪಿ. ಅಲ್ಲದೆ 'ಬಲನೊಡನೆ ಹೋದರೆ[316] ಬಾರವು ವಿಪತ್ತು' ಎನ್ನಲು, ಆತ 'ಬಾಲಕೃಷ್ಣಗೆ ದಾವ ಭಯ ಬಾರದೆಂ'ದ. ತಂದೆ—ತಾಯ ಹಂಬಲ

---

314. ವತ್ಸ ಧೇನುಕ ಖರ ಮೂವರಿಗುಕ್ತ (ರು.ವಿ.4,30; 5,21—26).

315. ಮಧ್ಯಸುಮಾಲಿ 32ರ ಮೊದಲ ಸಾಲು ಹೆಚ್ಚು ಶುದ್ಧವಾಗಿದೆ, ಏಕ ಕರ್ತೃತ್ವಕ್ಕೆ ಆಂತರಿಕ ಪ್ರಮಾಣ.

316. ಆತ ನಾಗವಂಶೀಯನೆಂದೇ ಬಿಟ್ಟು ಹೋದ (ರು.ವಿ.4,56).

ಕೇಳಿದ ಕೃಷ್ಣ ನಾಗನ ಹೆಡೆಯ ಮೇಲೆ ಕುಣಿಯುತ್ತಾಡಿದ, ಸುತ್ತಿದ ಸರ್ಪ ಬಿಡಿಸಿಕೊಂಡು ನಾಟ್ಯವಾಡಿದ. ಒಂದು ಕಾಲೂರುತ ಮತ್ತೊಂದನೆತ್ತುತ ಕುಣಿಯಲು ತಾಳಮದ್ದಳೆ[317] ಧಿಮಿಕೆಂದವು, ಸುರರು ಸುಮವುಗರೆದರು. ಧರೆಭಾರ ತಾಳಿದ ಶೇಷ ಹರಿಯ ಭಾರ ತಾಳದೆ ಕಂಗೆಡುತಿದ್ದ, ಕಾಳಿಂಗ ವಿಷಕಾರಿ ಕಂಗೆಟ್ಟು ಮರಳುತ್ತಿದ್ದ. ಅವನ ಹೆಂಡಿರು 'ವಾಲೆ ಭಾಗ್ಯ ಕೊಡು' ಎನ್ನಲು ಕೃಷ್ಣ ತಣಿಗೆ ಬಂದ.[318] 'ಇನ್ನು ಗರುಡ ಭೀತಿಯಿಲ್ಲ, ಸೇರು ರಮಣದ್ವೀಪ' ಎಂದ. ಇಂತು ನೀರ ನಿರ್ಮಲಗೊಳಿಸಿದವಗೆ[320] ಆರತಿ ಎತ್ತಿ ಗೋಪಿ ಅಪ್ಪಿದಳು (444— 491).

ಇನ್ನೊಮ್ಮೆ ಅಗ್ನಿ ಆವರಿಸಿರಲು ಕೃಷ್ಣ ಎಲ್ಲರೂ ಕಣ್ಮುಚ್ಚಿರೆಂದು ಕಿಚ್ಚ ನುಂಗಿದ. ಶಪಿತ ಗಂಧರ್ವ ಅಜಗರನಾಗಿ ಕೃಷ್ಣನಡಿಗೆ ಬಿದ್ದ. ಯಶೋದೆ 'ಎನ್ನತ್ತಿರ ಇರು, ಕತ್ತಲಾಗದ ಮುನ್ನ ಮನೆಗೆ ಬರುವುದು' ಎಂದಂತೆ ನಂದನೂ ಬುದ್ಧಿ ಹೇಳುತ್ತಿರಲು, ಸಂದೇಹ ಬಿಡಿಸ ಬಂದ ನಾರದ. 'ಭೂಭಾರ ಇಳುಹಲವತರಿಸಿದವರ ನೋಡಬಂದೆ. ವಸುದೇವ ವಿನಿಮಯಿಸಿದ ಶಿಶುವಿದು. ಪನ್ನಂಗ ಪರಮಾತ್ಮರು ರಾಮ— ಕೃಷ್ಣರು' ಎಂಬನಿತರಲ್ಲಿ ಸಾದ್ಯಂತ ಜ್ಞಾನವಾಗಬಾರದೆಂದು ಪುತ್ರಭಾವದಿಂದ ಬಂದು ಎರಗಿದ ಕೃಷ್ಣ(492— 507).

ಅಲ್ಲಿಂದ ಕಂಸನಲ್ಲಿ ಬಂದ ನಾರದ 'ಮಂದಮತಿ, ವಸುದೇವನ ಮಾತುಗಳಿಂದೆ, 8ನೆಯ ಮಗ ಕಂಟಕ, ನಿನ್ನ ವಂಚಿಸಿ ಗೋಕುಲದಲ್ಲಿದ್ದು ಕೊಲ್ಲುವನೆಂದರಿತಿರು' ಎಂದ. ಅಲ್ಲದೆ 'ಉಗ್ರಸೇನ ನಿನ್ನ ತಂದೆಯಲ್ಲ, ಗಂಧರ್ವ ಅವನ ರೂಪದಿಂದ ನಿನ್ನ ತಾಯ ಕೂಡಿ ಹುಟ್ಟಿದೆ; ಆಕೆ ದೇವಕಿಯ[321] ತಾಯಲ್ಲ, ನೀನು ಮಾತುಳನಲ್ಲ ಕೃಷ್ಣಗೆ' ಎಂದ(508— 516).

---

317. ಯಕ್ಷಗಾನದ ದೇಶೀಯ ವಾದ್ಯ ಶಿವ ಬ್ರಹ್ಮರು ನುಡಿಸಿದರು (ರು.ವಿ.4,68; ಕ.ನಿ.2,60).

318. ಸ್ತ್ರೀಯರ ನುಡಿಗಾರು ಕರಗರು (ರು.ವಿ.4,69).

319. ಹರಿಪಾದಾಂಕಿತಗೆ ಭಯವಿಲ್ಲ, ಭಕ್ತರಲ್ಲಿ ಕ್ರೋಧವಾ ಹರ್ಯನುಗ್ರಹ (ರು.ವಿ. 4,71).

320. ಕಾಳಿಂಗನ ಬಾಲವೆತ್ತಿ ಹಡೆ ಮಾತ್ರ ತುಳಿದು, ಕಾಳಿಂದಿಯ ಕಾಪಾಡಿದ; ಹೆಂಗಳೆಯರಲ್ಲಿ ಯಾರಿಗೆ ಪಕ್ಷಪಾತವಿರದು (ರು.ವಿ.4,64— 70).

321. ಚಿಕ್ಕಪ್ಪ ದೇವಕನ ಮಗಳು.

ಕೃಷ್ಣ ಕೊಳಲೂದುತ್ತಿದ್ದರೆ ಪಕ್ಷಿಗಳೂ ಹಾಡ್ಕಟ್ಟಿ ಕೇಳುತ್ತಿದ್ದುವು, ಎರಳೆ ಭ್ರಮಿತವಾಗುತ್ತಿದ್ದುವು, ಗೋವು ಕಿವಿ ಎತ್ತಿ ಆಲಿಸಿದುವು, ಯಮುನೆಯೂ ಸುಳಿಯದೆ ನಿಂತು ಕೇಳುತ್ತಿದ್ದಳು (517—521).

ಕೌಸ್ತುಭದ ಬೆಳಕಿಗೆ ಸೂರ್ಯ ಉದಿಸಿದನೆಂದು
ತಾವರೆಗಳು ಅರಳಿದುವು ಚಕೋರ ನರಳಿದುವು (522)

ಹರಿಯ ನಖದ ಬೆಳಕಿಗೆ ಚಂದ್ರಗಳು ಬಂದಿತೆಂದು
ಭ್ರಮಿಸುತಿದ್ದುವೆ ಚಂದ್ರಕಾಂತಿ ಪ್ರಭೆಗಳು (523)

ಸಿರಿದೇವಿ ಬಿದುರು ದೂಪಿನಿಂದ ಬಂದು ಹರಿಯ ವದನ ಶ್ರುತಿಯ ಪಾನ ಮಾಡುತ್ತಿದ್ದರೆ, ಹರಿಯ ವದನಾಮೃತಪಾನಕೆ ಆ ಬಿದುರು ಏನು ಸುಕೃತ ಮಾಡಿತೆಂದರು ಇತರರು. ಕೇರಿ ಬಳಿದು, ಪನ್ನೀರು ತಳಿದು, ಸಾಲು ದೀವಿಗಿಟ್ಟು, ರಂಗ ಬೀದಿಯಲ್ಲಿ ಬರಲು, ಅಂಗನೆಯರ ಕಂಗಳಿಗೆ ಹಬ್ಬವಾಯಿತು ಮಂಗಳಾರತಿ; ಕಂಗಳೆಂಬ ಭೃಂಗಗಳಿಂದ ಅವನ ಮುಖಾಂಬುಜ ಪಾನ ಮಾಡಿ ಧನ್ಯರಾದರು (524—528).

ಹೇಮಂತದಲ್ಲಿ ಕಾಂತೆಯರೆಲ್ಲ ಕಾಂತ ಕೃಷ್ಣನಾಗಲೆನುತ ಗೌರಿಯ ಪೂಜಿಸಿದರು.[322] ಮಾನಗೌರಿಯನರ್ಚಿಸಲು ಸೀರೆ ದಡದಲ್ಲಿಟ್ಟು ನೀರಿಗಿಳಿದರು. ಅಷ್ಟರಲ್ಲಿ ಕೃಷ್ಣನವರ ಸೀರೆ ಕಟ್ಟಿಕೊಂಡು ತರುವನೇರಿದ. 'ಒಡೆಯರಿಲ್ಲವೇ ಜಗಕೆ!' ಎಂದವರಿಗೆ 'ಮಾನಭಂಗ ಮಾಡದೆ ಬಿಡಲಾರೆ'ನೆಂದ. 'ನಾಚಿ ಸೀರೆ' ಕರುಣಿಸೆ'ಂದರೆ 'ಪಚ್ಚಾವಳಿಯುಂಟು ವನಗಳಲ್ಲಿ ಹೋಗಿ ಉಟ್ಟುಕೊಳ್ಳಿ'ರೆಂದ. ಮೌಕ್ತಿಕ— ತಾವರೆ ಎಲೆ, ಅಂಗೈ— ಕೇಶಗಳಿಂದಂಗಗಳನಾಚ್ಛಾದಿಸಿಕೊಂಡಿದ್ದವರು ಕೊನೆಗೆ ಒಬ್ಬಳ ಹೆಗಲ ಮೇಲೆ ಮತ್ತೊಬ್ಬಳು ಏರಿ ಬರುವುದನು ಕಂಡು 'ಏರಿ ಬಾ ನಿನ್ನ ಧೈರ್ಯ ನೋಡುವೆ'ನೆಂದ. 'ನಂದಗೆ ಹೇಳುವೆ' ನೆನ್ನಲು 'ಬತ್ತಲೆ ನೀರಿಗಿಳಿದ ತಪ್ಪಿಗೆ ಕೈಮುಗಿಯಿ'ರೆಂದ. ಬಂದು ಕೈ ಮುಗಿಯಲು 'ಇಂದ್ರಾದಿಗಳೊಪ್ಪರು, ಎರಡು ಕೈಯ ಮುಗಿಯಿರೆ'ಂದ. ಅಂತೆ ಮಾಡಲು ಅವರ ಮುಖ ನೋಡಿ ಒಂದೊಂದೆ ಸೀರೆ ಎತ್ತಿ ಚೆನ್ನಿ ಕೇಳಿ ಕೊಟ್ಟ. ಅವನುಟ್ಟು ಮೋಹಿಸುತ 'ನಮ್ಮ ಪ್ರೀತಿ ಪಡಿಸದಿದ್ದರೆ ಫಲ ಸಿದ್ಧಿಸದೆ'ನ್ನಲು 'ಪ್ರೀತಿಪಡಿಸುವೆ, ಫಲ ಸಿದ್ಧಿಸುವುದೆ'ಂದ[323] (533—565).

---

322. ತೇಜಸ್ವಿ ಕೃಷ್ಣ ವಶವಾಗಲು ಅವನ ಸೋದರಿ ದುರ್ಗಾಮಾತೆಯನರ್ಚಿಸಿದರು (ರು.ವಿ.5, 42— 43).

323. ವಸ್ತ್ರಾಪಹರಣದ ಈ ಸಂದರ್ಭ 'ರುಕ್ಮಿಣೀಶ ವಿಜಯ'ದಲ್ಲಿ ಸಂಕ್ಷಿಪ್ತವಾಗಿದ್ದರೆ, ಇಲ್ಲಿ ಭಾಗವತಾನುಸಾರ ವಿಸ್ತರಿತ.

ಆ ನಿತ್ಯತೃಪ್ತನೊಬ್ಬ ಹಸಿದನೆಂದು ಹೇಳಿ ಕಳಿಸಲು, ಗೋಪಾಲಕರು ಋಷಿಗಳಿಗೆ ಕರ ಮುಗಿದು ಅನ್ನ ಬೇಡಿದರೆ 'ಸ್ನಾನಾಹ್ನಿಕವಾಗಲಿಲ್ಲ, ವೇಳೆಯಲ್ಲ ಅನ್ನಕೆ'ಂದರು. ಹಾಗೇ ಬಂದು ಹೇಳಿದಾಗ 'ಪತ್ನಿಯರ ಕೇಳಿ' ಎನ್ನಲು, ಅವರು 'ಧನ್ಯರಾದೆವೆ'ಂದು ಮೃಷ್ಟಾನ್ನ ಕೊಂಡು ಬಂದರು. ಒಬ್ಬ ಮುನಿ ತಡೆಯೆ 'ದೇಹ ನಿನ್ನದೆ'ಂದು ಬಿಟ್ಟು ದೇವರ ಕಂಡಳು. ಅನ್ನ ಅರ್ಪಿಸಿದವರೆಲ್ಲ ಮುಕ್ತಿಗೆ ಸಂದರು. ಆಗ ಋಷಿಗಳು 'ಮಂದಮತಿಗಳಾದೆವು, ಜಪ ತಪವೆಷ್ಟು ಮಾಡಿದರೂ ಜ್ಞಾನ ಹುಟ್ಟಲಿಲ್ಲ' ಎಂದು ಪಶ್ಚಾತ್ತಾಪಿಸಿದರು (566—583).

ನಂದಗೋಪ ಇಂದ್ರಪರ್ವಗೈವಾಗ ಕೃಷ್ಣ ವಿವರ ಕೇಳಲು, 'ಗೋವುಗಳಿಗೂ ನಿಮಗೂ ಕ್ಷೇಮವಾಗಲು' ಎಂದುದಕ್ಕೆ, 'ಇಂದ್ರನಿಂದ ಕ್ಷೇಮ ಎಂದಿಗೂ ತಿಳಿಯಬೇಡ, ಅನ್ನ ಪರ್ವತಕಿಕ್ಕಿ ವಂದಿಸೆ'ಂದ. ಅನ್ನ ಗೋವರ್ಧನದ ಮುಂದಿಡಲು ಗೋವು ಗೋಪರೊಂದು ರೂಪಿನಿಂದ, ಕೃಷ್ಣ ಬೆಟ್ಟದ ರೂಪಿನಿಂದ[324] ಉಂಡು ಭಯಪಟ್ಟುದಿಲ್ಲ ಇಂದ್ರನಿಗೆ. ಇಂದ್ರನಿಗೆ ದೂತರಿಂದ ಸುದ್ದಿ ಹೋಗಲು ಕಾರ್ಮೇಘ ಕರೆದನು.[325] ಏಳು ದಿನ ಅಂಧಕಾರವಾಗಿ, ಸೆಳೆ ಮಳೆಗಳಿಂದಂಬುಧಿ ತುಂಬಿ, ಸಿಡಿಲು ಮಿಂಚು ಗುಡುಗು ಎರಗಲು, ಮರೆಹೊಕ್ಕ ಗೋವಳರಿಗಭಯವಿತ್ತು ಕೃಷ್ಣ ಗಿರಿಯನೆತ್ತಿದ್ದ[326] ಅವರೆಲ್ಲ 'ಯಾವ ಕಡೆ ಹೋಯಿತು ಮಳೆ?' ಎನುತಿದ್ದರು. ಇಂದ್ರ ಬಂದು ಅಸುರಾವೇಶ ಒಪ್ಪಿಕೊಂಡು ಕ್ಷೀರಾಭಿಷೇಕಗೈದ. ಮಂದಾರ ವೃಷ್ಟಿಯಾಗಿ, ಕೃಷ್ಣನ ಪಾಡಲು, ಕಂಸ ತಡಪಡಿಸಿದ. (584—605).

ಹುಣ್ಣಿಮೆ ಇರುಳು ಕಾಳಿಂದಿ ತೀರದಲ್ಲಿ ಕ್ರೀಡಿಸಲು ಕೃಷ್ಣ ವನಕೈದಿ ಮೊಂಗೊಳಲೂದುತ್ತ ಅಂಗನೆಯರ ಭ್ರಮಿಸುತಿದ್ದ. ಅವರು ಮಕ್ಕಳನ್ನು ಹಸುಗಳೆಡೆ ಬಿಟ್ಟು,

---

324. ಗಿರೀಂದ್ರವಪು— ಪರ್ವತರೂಪಧಾರಿ (ರು.ವಿ.5,54—55).

325. ವೇದವೇದ್ಯನನು ಸಹಸ್ರಾಕ್ಷ ಅರಿಯಲಿಲ್ಲ (ರು.ವಿ.5,56).

326. ಇಂದ್ರಶಕ್ತಿ ಕುಂದಿಸಲು ಅವನ ವೈರಿಯನೆತ್ತಿದ (ರು.ವಿ.5,57).

ಹಿರಿಯರಿಗುಣಬಡಿಸುವುದನುಳಿದು, ಮುಂಡ ಹಾಸಿಗೆ ಎಲೆ ಬಿಟ್ಟು, ಕಂಕಣ ಕಾಲಿಗೆ ಚಿಂತಾಕು ಕಿವಿಗಿಟ್ಟು, ಕದಪಿಗೆ ಕಪ್ಪು ಹಚ್ಚಿ, ಪಟ್ಟಾವಳಿ ಸಾರಾವಳಿ ಉಟ್ಟು, ಬಟ್ಟ ಮುತ್ತು ಕಟ್ಟಿ ಕೊಂಡು ಬರುತ್ತಿದ್ದರು. ಕೃಷ್ಣ ನಗುತ್ತ 'ಯಾಕೆ ಬಂದಿರಿ? ಈಗ ಹೀಗೆ ಬರುವುದುಚಿತ ವಲ್ಲ. ವನ ನೋಡಿ ಹೋಗಿರೆ'ಂದ. ತಲೆ ಬಾಗಿ ಧರಣಿ ಬರೆಯುತ್ತಿದ್ದವರು ಕಂಗಳ ಜಲ ಒತ್ತುತ್ತ 'ಬಂಧುಗಳು ಗತಿ ಮಾಡಲಾರರೆನುತ ಬಂದೆವು;'[327] ಇಷ್ಟಗಳ ನೆರಸಬೇಕು ಭಕ್ತವತ್ಸಲ' ಎಂದರು. ಮುಗಿಲ ಮುಟ್ಟಿಗೆಂತು ಮೇಲೆ ಮುದನನಂತ್ಯ ಅವರ ಮನವ ಸಲಿಸಿದಾಗ 'ಕೃಷ್ಣ ನಮ್ಮ ವಶವಾದನೆ'ಂದವರಿಗೆ ಆತ ಅಡಗಿಬಿಟ್ಟ. ಅವನ ಹುಡುಕತೊಡಗಿ ದವರಿಗೆ ಜಡ ಎಂಬ ಬುದ್ಧಿಯಂತೂ ಹುಟ್ಟದೆ ಹೋಯಿತು (606—641)!

ಆಲ ಅಶ್ವತ್ಥಗಳಿರ ಪಾಲಾಶ ವೃಕ್ಷಗಳಿರ
ಲಕ್ಷ್ಮೀಲೋಲನಾದ ಹರಿಯು ಕಾಣಲಿಲ್ಲವೆ (642)

ಲಕ್ಷ್ಮೀಲೋಲ ಹರಿಯು ಬಂದು ನಾರಿಯಿಂ(ದ) ನಲಿದಾಡಿ
ನಾರಿಯರೊಬ್ಬಳ ಕರೆದುಕೊಂಡು ಹೋಗುತಿದ್ದನು (643)[328]

ಲಿಂಬೆ ಕಿತ್ತಳೆಗಳಿರ ಜಂಬು ನೇರಳೆಗಳಿರ
ಶಂಬರಾರಿಪಿತನ ನೀವು ಕಾಣಲಿಲ್ಲವೆ (644)

ಶಂಬರಾರಿಪಿತನು ಬಂದು ರಂಭೆಯಿಂದ ನಲಿದಾಡಿ
ರಂಭೆಯರೊಬ್ಬಳ ಕರೆದುಕೊಂಡು ಹೋಗುತಿದ್ದನು (645)[329]

ಫಲ ಜಾತಿ ಪುಷ್ಪಗಳಿರ ಪಾದರಿ ಗುಜ್ಜರಿ
ಬಲರಾಮನ ತಮ್ಮನಿಲ್ಲಿ ಬಂದುದಿಲ್ಲವೆ, (646)

ಬಲರಾಮನ ತಮ್ಮ ಬಂದು ಲಲನೆಯಿಂದ ನಲಿದಾಡಿ
ಲಲನೆಯರೊಬ್ಬಳ ಕರೆದುಕೊಂಡು ಹೋಗುತಿದ್ದನು (647)

ಸಂಪಿಗೆ ವನಗಳಿರ ತಿಂತ್ರಿಣಿ ವೃಕ್ಷಗಳಿರ
ಕಂಸುಪಿತನ ನೀವು ಕಾಣಲಿಲ್ಲವೆ (648)

---

327. ಬಂಧುತ್ವಾದಿ ನೀವೆಂತೂ ನಿನ್ನನುಗ್ರಹಕೆ, ನೀನೇ ಸಿಕ್ಕಾಗ ಅವರೇಕೆ (ರು.ವಿ.6,57).

328. ಈ ಕಾವ್ಯವು ಜೋಡುನುಡಿಗಳ ಸಂವಾದದಲ್ಲಿ ಹಿಂದಿನ ನುಡಿಯ ಸಾಲು ಶೃಂಖಲೆಯಂತೆ ಪ್ರಾಸಪೂರ್ಣವಾಗಿ ಮುಂದಿನ ನಾಲಿಗೆ ಸಾಗುವ ಸ್ವಾರಸ್ಯ ಸಾದೃಶ್ಯ ಗಮನಾರ್ಹ.

329. ಪುನರಾವರ್ತನವೂ ಇಲ್ಲಿ ದೇಸಿ ಕಾವ್ಯದ ಸೊಗಸನಿತ್ತಿವೆ. 'ರುಕ್ಮಿಣೀಶ ವಿಜಯ'ದ 7ನೆಯ ಸರ್ಗದ ಮಾರ್ಗರೀತಿಯ ವರ್ಣನೆ ಬೇರೆ ಬಗೆಯದಾಗಿದೆ.

ಕಂತುಪಿತನು ಬಂದು ಕಾಂತೆಯಿಂದ ನಲಿದಾಡಿ
ಕಾಂತೆಯೊಬ್ಬಳ ಕರೆದುಕೊಂಡು ಹೋಗುತಿದ್ದನು (649)

ಮಾವು ಮಾತುಳಂಗಳಿರ ಬೇವು ಬೇಲದ ವೃಕ್ಷಗಳಿರ
ವೇಣುನಾದ ಹರಿಯು ನೀವು ಕಾಣಿರಿಲ್ಲವೆ (650)

ವೇಣುನಾದ ಹರಿಯು ಬಂದು ಜಾಣೆಯಿಂದ ನಲಿದಾಡಿ
ಜಾಣೆಯೊಬ್ಬಳ ಕರೆದುಕೊಂಡು ಹೋಗುತಿದ್ದನು (651)

ಅತ್ಯಂತ ಚೆಲುವೆ ಎಂದು ನೆತ್ತಿಯ ಏರಿಸಿಕೊಂಬ
ಅದ್ಭುತನ ಕಂಡಿರೆ ಅಮರ ತುಲಸಿಯೆ (652)

ಅದ್ಭುತ ಹರಿಯು ಬಂದು ಅರ್ತಿಯಿಂದ ನಲಿದಾಡಿ
ಚಿತ್ರೆಯೊಬ್ಬಳ ಕರೆದುಕೊಂಡು ಹೋಗುತಿದ್ದನು (653)

ಮಂದಗಾಳಿ ಬೀಸುವ ಮಾರುತನ ಸುತನೆ ಕೇಳು
ನಂದನ ಕಂದನಿಲ್ಲಿ ಬಂದುದಿಲ್ಲವೆ (654)

ನಂದನಕಂದ ಗೋವಿಂದ ಬಂದು ನಲಿದಾಡಿ
ರಂಭೆಯೊಬ್ಬಳ ಕರೆದುಕೊಂಡು ಹೋಗುತಿದ್ದನು (655)[329]

ತಾನು ಒಬ್ಬ ಹೋದರೆ ತವಕ ಇಲ್ಲದಿದ್ದೆವು
ನಾರಿಯೊಬ್ಬಳ ಕೊಂಡು ಹೋದ ತಾಳಲಾರೆವು (656)

(ಮೊಲ್ಲೆ) ಮಲ್ಲಿಗೆಗಳಿರ ಜಲ್ಲಿ ಮುಡಿವಾಳಗಳಿರ
ಫುಲ್ಲನಾಭ ಹರಿಯು ನೀವು ಕಾಣಿರಿಲ್ಲವೆ (657)

ಫುಲ್ಲನಾಭ ಹರಿಯು ಬಂದು ಮಲ್ಲಿಗೆ ಹೂವ ಕೊಯ್ದು
ಚೆಲುವ ಕಂಗಳ ಚದುರೆಗೆ ಮುಡಿಸುತಿದ್ದನು (658)

ಸರದ ಹೂವ ಕಟ್ಟಿ ಅವಳ ತುರುಬಿನೊಳಗೆ ಇಟ್ಟರೆ
ನಡೆಯಲಾರದಿದ್ದರವಳ ಹೆಗಲಿಗಿಟ್ಟನು (659)

ಸಂಪಿಗೆ ಹೂವ ಕೊಯ್ದು ಸೊಂಪಿನಿಂದ ಮುಡಿಸಿ ಅವಳ
ವಂಚಿಸಿ ವನದೊಳಗೆ ಬಿಟ್ಟು ಹೋದನು (660)

ಅಷ್ಟು ಮಡದಿಯರೊಳಗೆ ಇದ್ದ ಕೃಷ್ಣನೆನ್ನ ಕರೆ ತಂದು
ಬಿಟ್ಟು ಹೋದ ವನದೊಳಗೆ ಕೆಟ್ಟೆನೆಂದಳು (661)

ಹೀಗೆಂದವಳ ಬದಿಯಲಿ ಸರಸಿಜನಾಭ ಸ್ತ್ರೀಯ ಪಾದ ಚಿಹ್ನೆಗಳಿರಲು 'ಇವಳ ಹೆಗಲಿಟ್ಟು ಕೊಂಡನೆ'ಂದುಕೊಂಡು 'ವಾರಿಜನಾಭನ ತೋರೆ'ಂದರು. ಅವಳು 'ವಂಚಿಸಿ ಕರೆತಂದು

ಬಿಟ್ಟುಹೋದ ಕಾಣೆನೆ'ಂದಳು. ಆಕೆಯು ಕಾಣುತ್ತ ಅರ್ಧ ವ್ಯಾಕುಲ ಹೋದವರು 'ಸಾಕು, ತಿರುಗಲಾರೆವೆ'ಂದು ಕುಳಿತು, ಜಯ ಜಯ ಜಯವೆನಲು ಜನ್ಮಸಾಫಲ್ಯ ಮಾಡಿದ ಗುಣಸಮುದ್ರನ ಕೊಂಡಾಡಿ,[330] ಹೆಂಗಳ ಭಂಗಪಡಿಸೋದುಚಿತವೇನು ರಂಗ, ಕಾಣನೆ'ಂದರು. ಆಗ ಕಾಣಿಸಿದಾತ 'ಆಯುಧವಿಲ್ಲದ ಚೋರನಂತೆ ಅಡಗಿದನೆ'ನಲು 'ಚೋರನಾಗಿ ಇಷ್ಟೊತ್ತು ಕಾಡಿದಿ, ಇನ್ನು ಕರುಣಿಸಿ ರಾಸಕ್ರೀಡೆಯಾಡಬೇಕೆಂ'ದರು (662– 674).

ಇಬ್ಬರಿಬ್ಬರು ಸ್ತ್ರೀಯರಿಗೆ ಒಬ್ಬೊಬ್ಬ ಪುರುಷನಾಗಿ
ಮಧ್ಯ ಮಧ್ಯದಲ್ಲಿ ನಿಂತು ಮದನನಯ್ಯನು (675)

ಬಾಲಕಿಯರೆಲ್ಲರು ಸಾಲು ಸಾಲಾಗಿ ನಿಂತು ಗೋ
ಪಾಲ ಕೃಷ್ಣನ ಕೂಡೆ ಕೋಲನೊಯ್ದು ನಿಂತರು (676)

ಕಂಕಣ ಕಾಲಂದುಗೆ ಗೆಜ್ಜೆ ಕಿಂಕಿಣಿ ನಾದಗಳಿಂದ
ಕಂತುಪಿತ ಹರಿಯು ಕೂಡೆ ಕೋಲನಾಡಲು (677)

ಸೆರಗು ಜಾರಿದರೆ ಹೊದಿಸಿ ಬೆವರುಗಳ ಒರಸಿದ
ಮುಡಿಗಳ ಒರಸಿದನೆ ಕರಪದ್ಮಗಳಿಂದ (678)

ತಾಂಬೂಲವನಿಕ್ಕುತ ಚುಂಬನವ ಮಾಡುತ
ತುಂಬಿಗುರುಳ ಸಂತೈಸುತ್ತ ಬಿಗಿದಪ್ಪಿದ (679)

ಆಗ ತುಂಬುರು ನಾರದರು ಶ್ರುತಿ ಗೀತ ಹಾಡಿ, ಅಪ್ಸರೆಯರು ನಾಟ್ಯವಾಡಿದರು. ಕೃಷ್ಣನ ಲೌಕಿಕಕ್ಕೆ ಬ್ರಹ್ಮ ನಗುತ್ತಿದ್ದರೆ, ಮಂದ ಮಾರುತ ಬೀಸುತಿದ್ದ. 'ಗೋಪಿಯರು ಬಳಲಿದರೆ'ಂದು ಶ್ರೀಕಾಂತ ಜಲಕ್ರೀಡೆಗೆಳೆದ (680– 684).

ಅಂಗನೆಯರೆಲ್ಲರು ಕಾಳಿಂದಿಯೊಳಗಿಳಿದು
ರಂಗ ರಾಮರ ಕೂಡೆಯಾಡುತಿದ್ದರು (686)

ಕೃಷ್ಣಾದ್ರಿ ಕೊಳವಿಯೊಳಗೆ ಮಿತ್ರೆಯರುದಕವ ತುಂಬಿ
ಕೃಷ್ಣ ರಾಮರ ಲೀಲೆ (ಚಿ)ಮ್ಮುತಿದ್ದರು (687)

ಹವಳಾದ್ರಿ ಕೊಳವಿಯೊಳಗೆ ಹರಿಯು ಉದಕವನೆ ತುಂಬಿ
ಹರದಿಯರ ಮೇಲೆ ಕೃಷ್ಣ (ಚಿ)ಮ್ಮುತಿದ್ದನು (688)

ವಾರಿಜನಾಭ ಬಾಯೊಳಗೆ ನೀರ (ತುಂಬಿ)ಕೊಂಡು ಆ
ವರಾಯಾಯ ಸ್ಥಳವ ನೋಡಿ (ಚಿ)ಮ್ಮುತಿದ್ದನು (689)

---

330. ಇದೇ ಭಾಗವತದ (10,29,1– 18) ಪ್ರಸಿದ್ಧ ಗೋಪೀಗೀತದ ಆರಂಭ, ಇಲ್ಲಿ ಬಿಟ್ಟಿದೆ. 'ಒಪ್ಪಿತೋ ಹರೀ ನಿಮ್ಮ ದಲ್ಲಿಕೆ' ಎಂಬ 5 ನುಡಿಗಳ ಗೋಪೀಗೀತೆ ಶ್ರೀ ಕೆ.ಎಲ್.ಪುಷ್ಪರ ಪ್ರಸಾದರಿಂದ ಪ್ರಕಟಿತ, ಆದರೆ ಅಪೂರ್ಣ.

ರಂಗ ಅಂಗ್ನೆಯರೊಳಗೆ ತಾಂಬೂಲವ ತುಂಬಿಕೊಂಡು
ಅಂಗನೆಯರ ಸ್ತನದ ಮೇಲೆ ಒರಸುತಿದ್ದನು (690)

ಶ್ರವಣ ತೋರಿದಂತೆ ಅವಳ ತಲೆ ಹೆಗಲ ಮೇಲೆ ಇಟ್ಟು
ಬಹಳ ಚೆಲುವೆ ಎಂದು ಅವಳ ಮುತ್ತು ಕೊಟ್ಟನು (691)

ಉಡುವ ಸೀರೆಗಳನು ಎಲ್ಲ ಕರಗಳಿಗೆ ಸುತ್ತುನಾಕಿ
ಮೋರೆಯು ಮೇಲಿನ ನೀರ ಒರಸುತಿದ್ದನು (692)

ಜಲಕ್ರೀಡೆಯನ್ನು ಆಡಿ ಗೋಪಿಯರು ಬಳಲಿದರೆಂದು
ಪಸರಿಸಿದ ಕೇಶಂಗಳ ತಿದ್ದುತಿದ್ದನು (693)

ನಂತರ ದಡಕೆ ಬಂದು ಪಟ್ಟಾವಳಿಯನುಟ್ಟು, ಗೋಪಿಯರಿಗೆ ಉಡುಗರೆ ಕೊಟ್ಟನು. ತಮ್ಮ ಸೀರೆ ಉಟ್ಟು ಶೃಂಗಾರವಾದವರು 'ಶ್ರೀಪತಿಗೆ ಸ್ತ್ರೀಯರು ಯಾತಕೆ'ಂದರು. ಅವಗೆ ಸ್ತ್ರೀಯರ ಗೊಡವೆ ಇಲ್ಲ, ಆದರೆ ಹರುಷದಿಂದ ಸಿರಿ ಬರಲು ಧರಿಸಿ ಮೆರೆದನು. ಮತ್ತೆ ಅವನ ಚರಿತ್ರೆ ಪಾಡಿ ಸುರರು ಸುಮನಗರೆದರೆ, ಕಂಸ ಚಡಪಡಿಸಿದ (694–703).

ಕೇಶಿ ದೈತ್ಯ ಅಶ್ವರೂಪದಿಂದ ಬರಲು, ಹರಿ ಅವನ ಗಂಟಲೊಳಗೆ ಕೈಯಿಕ್ಕಿ ಸೀಳಿದ. ಎಲ್ಲರೂ ಹರಿಯ ಹಾಡಿ, ಪುಷ್ಪವೃಷ್ಟಿಯಾಗುತ್ತಿದ್ದರೆ, ಕಂಸ ಚಡಪಡಿಸಿದ (704–710).

ಮಂತ್ರಿಗಳ ಕರೆಸಿ ಕೇಳಿದ. ಅವರು ಅಕ್ರೂರನ ಕಳಿಸಲು 'ಕೃಷ್ಣನ ಕರೆತಾರೆ'ಂದ. ಆತ 'ಇದೇ ಸುದಿನವೆ'ಂದು, ಆ ಇರುಳು ಆಲೋಚಿಸಿದ — 'ಇಂದಿರೇಶ ಎನ್ನ ವಂದಿಸುವನೊ, ವೈರಿಯೆಂದು ಬಿಡಬೇಡವೆಂಬನೊ, ಮಾತೃಪಿತರ ಹದನ ಕೇಳ್ವನೊ?' ಅರುಣೋದಯಕೆ ಗಕ್ಕನೆ ತೇರನೇರಿ ಹೊರಟು 'ಹರಿಯ ಕಾಂಬೆ, ಉದ್ಧಾರವಾಯ್ತೆನ್ನ ಕುಲವೆ'ಂದ. ಹೂಬನ ಪಂಕಜ ಮುಖಿಯರ ಪಾದಾಂಕಿತ ಕಂಡು 'ಪಾವನವಾದೆನೆ'ಂದು ವೃಂದಾವನಕೆ ಬಂದು, ಗೋವಿಂದ ಗೋವ್ಗಳ ಕರೆವ ಹೊಂದ ಕಂಡ.[331] ರಾಮ ಕೃಷ್ಣರು ಕಾಮಧೇನು ಕಟ್ಟಿ ಗ್ರಾಸ ಕೊಡುತಿದ್ದರು. ಪಾಲೆ ಮಾಗುತಿ ಹೊಳೆವ ಗೋಪಿಗೆರಗಲು, ಕ್ಷೇಮ ವಾರ್ತೆ ಕೇಳುತಿದ್ದಳು. ರಾಮಕೃಷ್ಣಅಕ್ರೂರರು ಕಾಳಿಂದಿಯಲ್ಲಿ ಸಾಯಂ ಸಂಧ್ಯಾವಂದನೆ

---

331. ಹೀಗೆಯೇ ಭಕ್ತರ ಇಷ್ಟಾರ್ಥ ಕರೆವ (ರು.ವಿ.10,23).

ಮುಗಿಸಿ ಮರಳಿದರು. ಗೋಪಿ ರಾಣಿದೇವಿಗೆ ಥಾಳಿ ಹರಿವಾಣ ಬಟ್ಟಲವಿಟ್ಟಳು. ಪಾತ್ರಾಭಿಘಾರ ಮಾಡಿ ಉಪ್ಪು ಉಪ್ಪಿನಕಾಯಿ ಚಟ್ಣಿ ಬಡಿಸಿದರು. ರೋಹಿಣಿ ಹಪ್ಪಳ ಸಂಡಿಗೆ ಬಡಿಸಿದಳು. ಗೋಪಿ ಬಟ್ಟ ಮುತ್ತಿನಂಥ ಬಟುವಿ ಪಾಯಸ, ಸೂರ್ಯಮಂಡಲದಂಥ ಹೋಳಿಗೆ ಗುಳ್ಳೋರಿಗೆ, ಚಂದ್ರಮಂಡಲದಂಥ ಮಂಡಿಗೆ ದೋಸೆ ಬಡಿಸಿದಳು.[332] 'ಪ್ರಧಾನಿ ಬಂದಿರಿ, ಹಳ್ಳಿಯ ಗೊಲ್ಲರು ಒಳ್ಳೆಯ ಊಟಂಗಳನರಿಯೆವೆ'ಂದರು. ಅಕ್ರೂರ 'ಕಾಮಧೇನು ಸ್ಮರಿಸಲು ಏನು ಕಡಮೆಯಾದೀತು'[333] ಎಂದ. ಕೈ ತೊಳೆದು ತಾಂಬೂಲವಾಗಿ ಪರ್ಯಂಕದ ಮೇಲೆ ಪವಡಿಸಿದವನ ಪಾದ ಒತ್ತಿದರು; ಪರಮಪುರುಷರು. ನಂತರ ಕೃಷ್ಣನು ಬಂದ ಕಾರ್ಯ ಕೇಳಲು 'ಎಂತು ಹೇಳಲೆ'ಂದು ಸಂಕೋಚ ಅಕ್ರೂರನಿಗೆ. 'ಎನ್ನ ಕೂಡೆ ಇರಲು ಸಂಕೋಚ ಬೇಡ, ವಂಚನೆಯಿಲ್ಲದೆ ಹೇಳೆ'ನ್ನಲು 'ಬಿಲ್ಲ ಹಬ್ಬದ ನೆವದಿ ನಿಮ್ಮ ಕರೆಸಿ ಕಂಸ ಕೊಲಬೇಕೆಂದು'ದನುಸುರಿದ. 'ರಾಷ್ಟ್ರಕ್ಕೆ ಅರ್ಹ ಮಾತುಳಯ್ಯನ ಮಾತು, ಭೀತಿ ಮಾಡಿ ಇರಲಾಗದು ಬರುವೆವೆ'ಂದರು. ಅಕ್ರೂರ ನಂದನಿಗೆ 'ಘಾಲ್ಯೂಸರ ತುಂಬಿಸು, ಮುಂಜಾನೆ ಮಧುರೆಗೆ ಹೋಗಬೇಕೆ'ಂದ. ಬೆಳಿಗ್ಗೆ ರಥ ಬರಲು, ತಾಯಿ ತಂದೆಗೆರಗಿದ ಕೃಷ್ಣ. ಅವರು ಮಕ್ಕಳ ತಕ್ಕೈಸಿ ಕಣ್ಗಳಿಂ ಜಲ ಸುರಿಸುತ್ತಿದ್ದರು. 'ಚಿಕ್ಕವರು, ಪಟ್ಟಣದ ಗುರ್ತರಿಯರು, ಮೆಟ್ಟಾಯ್ತಿವು[333] ಅನೆ ಕುದುರೆ' ಎಂದ ಯಶೋದೆಗೆ 'ಅಂಥ ವಿಚಾರವನ್ನೆ ಎಣಿಸಬೇಡಿರೆ'ಂದನಕ್ರೂರ. 'ಅಕ್ರೂರ, ನೀನೆಮಗೆ ಆತ್ಮಬಂಧುವಾದರೆ, ಗಕ್ಕನೆ ಕಳುಹಿಸುವುದು, ಮಕ್ಕಳಾಣೆ' ಎನ್ನಲು 'ಹಬ್ಬದ ಮರುದಿನ ನಾನೇ ಕಳುಹಿಸ್ವೇನು,[333] ವಿಚಾರ ಬೇಡೆ'ಂದ. ತಾಯಂದಿರು ಅವರನ್ನು ಕಳಿಸಿ ಕಟ್ಟೆ ಹಂದರದ ಬಾಗಿಲಿಗೆ ಬಂದರು; ಅವರ ಪಾಲಿಗೆ ಅರಮನೆ ಅಂಧಕಾರವಾಯಿತು, ವೃಂದಾವನ (ವೃಂದ್ಯ[334]ವಾಯಿತು), ಗೋಕುಲ ಗೋಳಂತಾಯಿತು (711–764).

ಅದೇ ವೇಳೆಗೆ ದೀಪ ಹಚ್ಚಿಕೊಂಡು ಮೊಸರು ಕಡಿಯುತ್ತ, ಕಮಲನಾಭನ ಪಾಡುವ ಕೆಳದಿಯರ ಧ್ವನಿ ಸುರಲೋಕ ಮುಟ್ಟಿದರೆ, ಕಡಗ ಕಂಕಣದ ರಭಸ ಜಗಕೆ ತುಂಬಿತು.[335]

---

332. ಹೀಗೆಯೇ ಭಕ್ಷ್ಯ ವಾದಿರಾಜರ ಕಾಲದ ಊಟವು.

333. ದೇಸಿ ನುಡಿಯುಕ್ತ ಕಾವ್ಯವಿದು.

334. 'ರುಂಧ್ಯ' (ವಿಸ್ತಾರ) ಎಂಬ ಪಾಠಕ್ಕಿಂತ ಪು.449ರಲ್ಲಿರುವ ಕಾನನಾರ್ಥಕ ಪಾಠವಿದುಚಿತ.

335. ಉದ್ಗಾಯತೀನಾಮರವಿಂದಲೋಚನಂ ವ್ರಜಾಂಗನಾನಾಂ ದಿವಮಸ್ಪೃಶತ ಧ್ವನಿಃ I ದಧ್ನಶ್ಚ ನಿರ್ಮಂಥನ ಶಬ್ದ ಮಿಶ್ರಿತೋ ನಿರಸ್ಯತೇ ಏನ ದಿಶಾಮಮಂಗಲಂ II (ಭಾಗವತ, 9,46,46).

ಅನಂತರ ಅವರು ನೀರಿಗೆ ಹೋಗುತ್ತ ಊರ ಮುಂದೆ ಕೃಷ್ಣನ ತೇರು ಕಂಡರು: 'ಫುಲ್ಲ ನಾಭನ ರಥವು ಇಲ್ಲಿಗ್ಯಾಕೆ ಬಂದಿತಮ್ಮ, ಎಲ್ಲಿಯೋ ಪಯಣ' ಎಂದು ತಲ್ಲಣಿಸಿ 'ಎಲ್ಲಿಯ ಪಡಿಯಾವತ್ತಿನ ಹಬ್ಬವಮ್ಮ, ಮೃತ್ಯುವಾಗಿ[336] ಅಕ್ರೂರ ಕರೆಯಬಂದನು. ಆ ಪಾಪಿಯು ಕಡೆ ಹೋಗಿ ಅತ್ತ ಬರೋಣ' ಎನ್ನುತ್ತ ತೇರ ಮುತ್ತಿ ರಂಗನನರಸಿದರು. ಆತ 'ನೆಂಟರಿಷ್ಟರನ್ನ ಕಂಡು ಗಕ್ಕನೆ ಬರುವೆ' ಎನ್ನಲು 'ಪಟ್ಟಣದ ನಾರಿಯರ ಪ್ರೌಢತನ ಕಂಡರೆ ಬಿಟ್ಟು ಬರಲು ಮನಸು ಉಂಟೆ?' ಎಂದರು. 'ಬಾಲಪ್ಯದಾರಭ್ಯ ಕೂಡಿಯಾಡಿದ ಸ್ನೇಹದಿಂದ ಬಾಹೆನು, ನಿಮಗೆ ತಪ್ಪೆನೆ'ಂದ ಕೃಷ್ಣನಿಗವರು 'ಕೊಂಡು ಹೋಗು ನಮ್ಮ' ಎಂದರು. ಅವರ ಕಳುಹದನಕ ಪಯಣ ಮುಂದಾಗದೆಂದು ರಥದಿಳಿದು ಒಡಂಬಡಿಕೆ ಹೇಳಿ, ಬಾಯ ತಾಂಬೂಲವಿತ್ತು 'ನಾಳೆ ಬರುವೆ ನಂದನಾಣೆ', ನಿಂದರೆ ನಿಮ್ಮಾಣೆ' ಎಂದು ಮನ್ನಿಸಿದ (765—779).

ಮೂವರೂ ಕಾಳಿಂದಿಗೈತರಲು, ಅಕ್ರೂರ ನೀರ ಮುಳುಗಿ ಅರ್ಘ್ಯ ಕೊಡುತ್ತ[337] ಕೃಷ್ಣ ರಾಮರ ಕಂಡಾಶ್ಚರ್ಯಪಟ್ಟ. ಅವರು ರಥದ ಮೇಲಿರಲು ಮತ್ತೆ ಮುಳುಗಿ ಶೇಷಶಾಯಿಯ ಸುತ್ತಿದ ಸುರರೋಲಗದ ಚಂದ ಕಂಡ.[338] ಕೈ ಮುಗಿದು ಸ್ತುತಿಸಿ 'ಇಂದು ಜನ್ಮಸಾಫಲ್ಯ' ಎಂದು ಆನಂದದಿಂದ ಬಂದ. 'ಏನು ಕಂಡಿ ಅಕ್ರೂರ, ಎಂದಿನಂತಿಲ್ಲ ಮುಖ, ಆನಂದಭರಿತನಾಗಿಹುದೇನು? ಸ್ಥಳ, ಜಲ, ಆಕಾಶ, ಅಂತರಿಕ್ಷ ಯಾವುದರಲ್ಲಾಗಲಿ ಏನು ಆಶ್ಚರ್ಯ ಕಂಡಿ ಚಿಕ್ಕಪ್ಪ?' ಎಂದ ಕೃಷ್ಣ. 'ಸ್ಥಳ—ಜಲ ಎಲ್ಲ ನೋಡಿದರೂ ನೀನೆ, ಅಣುರೇಣುತೃಣಕಾಷ್ಠ ಪರಿಪೂರ್ಣ ನೀನೆ. ಅಜಭವರು ನಿನ್ನ ಮಹಿಮೆ ಪೊಗಳಲರಿಯರು. ಬರಲೆಯಿಲ್ಲವೆಂಬ ಮಾವ ಬಹಳ ವಿಚಾರ ಮಾಡುವ, ತಿರಿಯಬೇಡ ನಡೆ, ಹೊತ್ತು ಹೋಯಿತು' ಎಂದ ಅಕ್ರೂರ (780—795).

---

336. ವಿರುದ್ಧನಾಮಧೇಯ (ರು.ವಿ.10,39; ಕ.ನಿರ್ಣಯ, 2,67).

337. ಆಹ್ನಿಕಗೈದವಗೆ ವಿಶ್ವರೂಪ ದರ್ಶನ (ರು.ವಿ.10,49).

338. ವರ್ಣನೆಗೆ ನೋ. ರು.ವಿ.10,69—70; ಕ.ನಿ.2,68.

ರಾಮ ಕೃಷ್ಣರು ಮಧುರೆಗೆ ಬರುತ್ತ ಊರ ಮುಂದೆ ಕಂಸನ ಭೇರಿ ಏರುತಿರಲು ಕಂಡು ಚೂರ್ಣಗೈದರು. ರಾಯನುಡಿಕೆಯನ್ನು ಆನೆಯ ಮೇಲೊಯ್ಯುತಿದ್ದ ರಜಕಗೆ 'ನಮಗೊಂದು ಮಡಿಯ ಕೊಡಬೇಕೆ'ನ್ನಲು 'ರಾಯನುಡಿಕೆ ಕೇಳುವ ನೀನಾರೆಲೊ[339] ಎಂದ. ಅವರು 'ರಾಯ ನೋಡದವರಾವ, ರಾಯ ಹೊದಿಕೆ ಹೊದಿವೆ'ಂದರು. ಆತ 'ಹಳ್ಳಿಯ ಪೋರಗಳಿರ, ರಾಯ ಶಾಲೆಗಳನು ಹೊದಿವೆ ನುಡಿರೆ?' ಎನ್ನಲು, ಅವನ ಪ್ರಾಣ ತೆಗೆದು ಗಜದ ಕೋರೆ ಸೀಳಿ ಯಮಲೋಕಕಟ್ಟಿದ ಕೃಷ್ಣ. ಚೀನಾಂಬರ ಹೊದ್ದು, ಪೀತಾಂಬರ ಗೋಪಾಲಕರಿಗಿತ್ತು, ಬಿಕ್ಕ ನಡವಳಿಯ ಹಾಸಿ ಒಗೆದರು. ಮಾಲೆಗಾರನ ಮನೆಯ್ದಲು ರಾಯಗೆಂದ ಸುಗಂಧ ಮಾಲೆಯಿತ್ತು ಕರ ಮುಗಿದ. ಗಂಧ ಒಯ್ಯುತಿದ್ದ ಕುಬ್ಜೆ[340]ಯನ್ನು 'ಗಂಧ ದಾರಿಗೆ?[341] ಎನ್ನಲು 'ನಿನಗೆ'ಂದಿತ್ತು ಕೈಮುಗಿದಳು. 'ಹೀಗೆ ಯಾಕೆ[341] ಆದಿ?' ಎನ್ನಲು 'ಪೂರ್ವ ದುಷ್ಕರ್ಮದ ಫಲ' ಎಂದಳು. ಕಾಲು ತಲೆ ಹಿಡಿದು ಎತ್ತಲು ಚೆಲುವೆಯಾಗಿ 'ಯಾವಲ್ಲ ಗೊಲ್ಲೇಗಮಿ' ಎಂದು ಕೃಷ್ಣನ ಸೆರಗ ಹಿಡಿದಳು. 'ಕಾರ್ಯ ಆದ ಮೇಲೆ ಬಂದೇನು ನಿನ್ನ ಮನೆಗೆ' ಎಂದು ಮುಂದೆ ನಡೆದ. ಅಕ್ರೂರನಿಗೂ 'ಮತ್ತೆ ಬಾಹೆ[341] ಎಂದ. (796—815).

ಅಕ್ರೂರ ಕಂಸನಿಗೆ 'ಮಕ್ಕಳ ಕರೆತಂದೆ' ಎನಲು, ರಾಯ ಹಾಲು ಸಕ್ಕರೆ ಕುಡಿಯುತಿದ್ದ, ಅಧಿಕವಾದ ಉಡುಗರೆ ಕೊಟ್ಟ. ಅತ್ತ ಉದ್ಯಾನದಲ್ಲಿ ಕ್ಷೀರಾನ್ನ ಉಂಡ ಗೋಪಾಲಕರು ಭೋಗಸ್ಥರಾಗಿ ಭೋಗನಿದ್ರೆಯಲ್ಲಿದ್ದರೆ, ಇತ್ತ ಹರುಷದಿಂದ ಮಲಗಿದ ಭೋಗರಾಜಗೆ ದುರ್ನಿಮಿತ್ತ ಆಗುತ್ತಿದ್ದುವು. ಕತ್ತೆ ಏರಿ ಬಡ್ಡುಗತ್ತಿ ಹಿಡಿದು ದಕ್ಷಿಣಕ್ಕೈದುವ ಕನಸು ಕಂಡ; ಸಂಪಿಗೆಣ್ಣೆ ಹಚ್ಚಿಕೊಂಡು ಕೆಂಪು ದಂಡೆ ಮುಡಿದು ಕಂಪಿಸುವ ಎಡದ ಭುಜ ಕಂಡ.[342] ಎದ್ದು ಮಂದ ಎತ್ತರಿಸೆನುತ್ತ ಬಾಗಿಲಿಗೆ ಮದ್ದಾನೆ ಇಟ್ಟ. ರಾಮ ಕೃಷ್ಣರೂ ಬಿದ್ದು ತಿಲಕವಿಟ್ಟು, ಹೊಂಬಟ್ಟೆ ಚಲ್ಲಣ ಉಟ್ಟು ಮಾಲೆ ಧರಿಸಿ ಮದಕರಿಯಂತೆ ಬಂದರು.

---

339. ದೇಸಿ ಪ್ರಯೋಗ

340. ಭೂದೇವಿ ಧರ್ಮಾರ್ಥ ಕಾಮ ಪಾಲನರ ಭಾರಕ್ಕೆ ತ್ರಿವಕ್ರೆಯಾದಳು (ಭಾಗವತ), ಪಿಂಗಳಾ ಅಪ್ಸರೆ ಶೂರ್ಪಣಖಿ ತ್ರಿವಕ್ರೆಯಾದಳು (ಪು.ನಾ.ದೂ.); ಮೂಲದಲ್ಲಿರದ ಸಂವಾದ ಸ್ವಾರಸ್ಯ ಇಲ್ಲಿನಂತೆ ಕನ್ನಡ ನಿರ್ಣಯದಲ್ಲೂ ಇರುವುದು ಗಮನಾರ್ಹ. (2,69).

341. ದೇಸಿ ಪ್ರಯೋಗ.

342. ಸ್ವಪ್ನೋದ್ರಿಕ್ತ ನಿದ್ರಿಸಲಿಲ್ಲ (ರು.ವಿ.11,28).

ಅಲಂಕರಿತ ಬೀದಿಗಳಲ್ಲಿ ಕಾಂತು– ಕುಂಭಗಳೊಡನೆ ಬ್ರಾಹ್ಮಣರೂ ಕಲಶ ಪುಷ್ಪ ಸಂಪನ್ನೆಯರೂ ಎದುರಾದರು; ಸಾಲು ದೀವಿಗೆ ಮಂಗಳಾರತಿ ಸಂಭ್ರಮ ಅವರ ಕಂಗಳೆಂಬ ಭೃಂಗಗಳಿಗೆ ಹಬ್ಬವಾಗಿ, ರಂಗನ ಪಾದಾಂಬುಜ ಪಾನದಿಂದ ಧನ್ಯವಾದವು.[343] ಉಪ್ಪರಿಗೆ ಹತ್ತಿ ನೋಡುವವರು 'ಇವರ ಪಡೆದವಳು ಏನು ಪುಣ್ಯ ಮಾಡಿದಳೊ! ನೋಡಿದರೆ ಪಾಪ ಓಡಿ ಹೋಗುತ್ತವೆ, ಹ್ಯಾಗೆ ಕಂಸ ಕೊಲಿಸುವ? ಆಳು ಆಯುಧಗಳಿಲ್ಲ, ಬಾಲಕರು ಹ್ಯಾಗೆ ಗೆಲುವರು? ಪೂತನಿ– ಕೇಶಿಯರ ಕೊಲ್ಲಲು ಯಾತರಾಯುಧವಿತ್ತು ಈತಗೆ'ಂದರು. ಮಾಲೆ ಮಾಗುತಿ ವಸ್ತ್ರ ಹೊಳೆವ ಬಾಲಕಿಯರು ತೋಳಿಗೆ ಮಾಲೆ ಸುತ್ತಿ ನೋಡ ಬಂದರು. ಆತ ಮಲ್ಲರಿಗೆ ಸಿಡಿಲಿನಂತೆ, ನರರಿಗೆ ನರಹರಿಯಂತೆ, ಸಜ್ಜನರಿಗೆ ಪಾಲಕನಂತೆ, ಕಂಸನಿಗೆ ವೈರಿಯಂತೆ, ಹೆತ್ತವರಿಗೆ ಬಾಲಕನಂತೆ ತೋರಿದ; ಸಜ್ಜನರು ಸಂತೋಷಿಸಿದರೆ ದುರ್ಜನರು ದುಃಖಿಸಿದರು (816–852).

ಕೃಷ್ಣ ಬಿಲ್ಲ ಮುನ್ನೆದೆದಿ ಅದನ್ನು ಊರಲ್ಲಿ ಮುರಿದು ರಂಗಕ್ಕೆ ಬಂದ. ಮದ್ದಾನೆ[344] ರಾಮ ಕೃಷ್ಣರನ್ನು ಸೆಳೆಯಿತು. 'ಮಾವಟಿಗ, ಮಾವನ ನೋಡಬೇಕು, ಆನೆಯ ತೆಗೆ ಬೇಗ' ಎಂದ ಕೃಷ್ಣ. ಆ ದುಷ್ಟ ಬುದ್ಧಿ ಅವರ ಮೇಲೆ ಒತ್ತಿ ಗಜ ನಡೆಸಲು, ಅವನ ಪ್ರಾಣ ತೆಗೆದು, ಮುರಾರಿಯು ಕ್ರೀಡೆಯಿಂದ ಅತ್ತಿತ್ತಾಡಿಸಿ ಅದರ ಕೋರೆ ಸೀಳಿ ಯಮಲೋಕಕಟ್ಟಿದ. ಆನಂತರ ಕೊಂಬುಗಳ ಆಳಿಗೊಂದು ಹೆಗಲಲಿಟ್ಟು ಅವರು ರಂಗದೊಳಗೆ ಬರಲು, ಚಾಣೂರ ಮುಷ್ಟಿಕರು ಮಲ್ಲಯುದ್ಧಕ್ಕೆ ತಡೆದರು. 'ಚಿಕ್ಕವರು ನಾವು ಮುಷ್ಟಿಯುದ್ಧ ಅರಿಯ[345]ವೆಂದರೂ ಬಿಟ್ಟಗಳು ಬಿದ್ದರು. ರಾಮ ಕಂಗೆಟ್ಟು 'ಕರೆಕರೆ ಮೃತ್ಯುವನ್ನು ನನಗೆ ನಾನೆ ತಂದುಕೊಂಡೆ, ಕಳುಹೊ ಉಪಾಯ ಕಾಣೆನೆ'ಂದು ಮಂದವೇರಿದ.

---

343. 164,526–528ನೆಯ ನುಡಿಗಳಲ್ಲಿ ಪುನರಾವರ್ತಿತ (835–838).

344. ಕುವಲಯಾಪೀಡ ಬದಲೂ ಕುವಲಯಕೆ ಪೀಡೆ ಎಂಬನ್ವರ್ಥಕನಾಮವುಳ್ಳದು (ರು.ವಿ.11,37).

345. ಇಂಥದೇ ಸಂವಾದ ಕನ್ನಡ ನಿರ್ಣಯದಲ್ಲೂ ಉಂಟು (2,70). ಕೃಷ್ಣ ಚಾಣೂರನನ್ನೂ ರಾಮ ಮುಷ್ಟಿಕನನ್ನೂ ಕೊಂದರು (ರು.ವಿ.11,41).

ಬಿಲ್ಲು ಎಲ್ಲಿ ಮಾವ ಎಲ್ಲಿ ಹಬ್ಬ ಎಲ್ಲಿ ಎನುತಲಿ
ಅಲ್ಲಿಗೆ ನಡೆದು ಬಂದ ಫುಲ್ಲನಾಭನು (869)[346]

'ಬಂದಿರೊ ಕೃಷ್ಣ ನೀವು ಕುಳ್ಳಿರಿ, ಕಂಡೆವಯ್ಯ ನೀವು ಬಹಳ ಪರಾಕ್ರಮಿಗಳು' ಎನುತ ನಡುಗುತ್ತಿದ್ದ ಕಂಸ. ಹರಿ ಖಡ್ಗದಿಂದ ಕಂಸನ ತಲೆಯ ಕೆಳಗೆ ಹಾಕಿ ಅವನ ಮೇಲೆ ಏರಿ ನಿಂತ. ಕಾಲನೇಮಿ ಕಂಸ ಕಲಿರೂಪವೇರಿ, ಹೂಮಳೆ ಆಯಿತು (874).

ರಾಮ ಕೃಷ್ಣರು ಮುತ್ತಯ್ಯನ ಕಂಗಳ ಒರಸುತ್ತಿದ್ದರು. ಕೃಷ್ಣ ಉಗ್ರಸೇನನ ಪಾದಕ್ಕೆರಗಿ 'ಮುದ್ರಿಕೆ ಕೊಳ್ಳಿರೆ'ಂದ. 'ನಾನು ವೃದ್ಧ, ರಾಜ್ಯವಾಳಲಾರೆ' ಎನ್ನಲು, 'ನಾವು ಪಾರುಪತ್ಯ ಮಾಡ್ಡೇವು' ಎಂದು ಪಟ್ಟಗಟ್ಟಿದ. ಬಳಿಕ ಹೆತ್ತವರ ಸೆರೆ ಬಿಡಿಸಿದ. ತಾಯಿಯು[347] ಹರಿಯ ಕಿರೀಟ ಕುಂಡಲಗಳ ಕುರುಹು ಕಂಡೂ 'ಅಣ್ಣನ ಕೊಲುವರೆ' ಎನ್ನಲು, '6 ಮಂದಿ ಸಹೋದರರ ಹ್ಯಾಗೆ ಕೊಂದ ನಿಮ್ಮಣ್ಣ? ಕ್ರೂರ ಕಂಸ ಆಳಿದರೆ ನೀವು ಆಳುವರೆ?' ಎಂದು ಕಂಬನಿ ಒತ್ತಿ ಪಾದಕ್ಕೆರಗಿದ. ಆಕೆ ಹಿಂಗಿದ ಕಂಗಳು ಬಂದಂತೆ, ಬಡವಗೆ ಸಿರಿ ಬಂದಂತೆ, ಸೂರ್ಯನುದಿಸಿ ತಮನು ಹರಿದಂತೆ ಹರ್ಷಿಸಿದಳು. ತನ್ನ ನೆನೆದು ಉಸಿರು ಬಿಡುವ ವಸುದೇವನಿಗೆರಗಿ 'ಬಂಧನಂಗಳಿಂದ ಬಳಲಿದಿರೆ'ಂದು ಸಂತೈಸಿದ. ಬಂದ ಮಂತ್ರಿ–ಪೌರರಿಗೆ ಉಪಕಾರ ಹೇಳಿ, ಮಾವನ ದ್ರವ್ಯಗಳ ಬ್ರಾಹ್ಮಣರಿಗಿತ್ತ. ನಂದಗೆ 'ತಂದೆಯಂದದಿ ಸಲಹಿದಿರಿ, ನಿಮ್ಮ ಮರೆಯೆವೆ'ಂದ. ಸ್ವಜನರಿಗೆ '3 ದಿನಕೆ ಬಾಹೆ' ಎಂದು ಕಳುಹಲು, ಗೋಪ ಗೋಕುಲಕೆ ಬಂದು ಯಶೋದೆಗೆ ಹೇಳೆ ರಾಮ ಕೃಷ್ಣರ ಧ್ಯಾನಿಸುತ್ತಿದ್ದರು (875–903).

ಇಲ್ಲಿಗೆ ಪೂರ್ವಾರ್ಧ ಮುಗಿಸುತ್ತ ವಾದಿರಾಜರೆನ್ನುತ್ತಾರೆ —

ಅಪಾರ ಮಹಿಮ ಮಾಡಿದ ಗೋಪಾಲ ಚರಿತೆಯ
ಈ ಪರಿ ಪೊಗಳಲೆನಗೆ ಅಳವಲ್ಲವು (904)

ವಾಯು ಬ್ರಹ್ಮ ಸರಸ್ವತಿ ತಾ(ವು) ಪೊಗಳಲರಿಯರು
ಶ್ರೀದೇವಿ ನಿಮ್ಮ ಗುಣವ ಪೊಗಳಲರಿಯಳು (905)

---

346. ಇಂಥ ಕಡೆಯೂ ಪ್ರಾಸಾನುಪ್ರಾಸ ತುಂಬಿರುವುದು ಗಮನೀಯ.

347. ದೇಸಿ ಪ್ರಯೋಗ.

ಹಾಸಿಕೆಯಾಗಿರುವ ಶೇಷ ನಿಮ್ಮ ಪೊಗಳಲರಿಯ
ಕಾಂತೆ ಮಹಾಲಕ್ಷ್ಮಿ ನಿಮ್ಮ ಪೊಗಳಲರಿಯಳು (906)

ಆದರೂ ಈ ಕೃತಿಯ ಫಲವೇನೆಂದು ಗ್ರಂಥಾಂತ್ಯದಂತೆ ಹೇಳುತ್ತಾರೆ —

ಆಲೈಸಿ ಈ ಕಥೆಯ ಹೇಳಿದವಗೆ ಕೇಳಿದವಗೆ
ಸಾಯುಜ್ಯ ಪದವಿ ಕೊಡುವ ಶ್ರೀನಿವಾಸನು (907)
ವಾದಿರಾಜರು ಮಾಡಿದ ಬಾಲಲೀಲೆ ಹೇಳಿದರೆ
ಸಾಯುಜ್ಯ ಪದವಿ ಕೊಡುವ ಹಯವದನನು (908)

ಇವೆರಡೂ ನುಡಿಗಳ ಉತ್ತರಾರ್ಧ ಸದೃಶವಾಗಿದ್ದು, ಪುನರಾವರ್ತಿತವೆನಿಸುತ್ತದೆ. 'ಸಾಯುಜ್ಯ ಮುಕ್ತಿ' ಗಜೇಂದ್ರ ಮೋಕ್ಷದಂತ್ಯಕ್ಕೂ, ಇದೇ ಕಾವ್ಯದ 436ನೆಯ ನುಡಿಯಲ್ಲೂ, ಮಧ್ವಸುಮಾಲಿ 77ರಲ್ಲೂ, ಪುನಃ ಈ ಕಾವ್ಯಾಂತಕ್ಕೂ ಉಕ್ತವಾಗಿರುವುದು ಗಮನಾರ್ಹ. ಈ ಆಂತರಿಕ ನುಡಿ ಸಾಮ್ಯ ಇಲ್ಲಿ ಏಕಕರ್ತೃಕವೆನ್ನಲು ಪ್ರಬಲ ಆಂತರಿಕ ಪ್ರಮಾಣ. 'ವಾದಿರಾಜ' ಕವಿನಾಮ 'ಹಯವದನ' ಅಂಕಿತಗಳೆರಡೂ ಇಲ್ಲಿ ಜೋಡಣೆಗೊಂಡುದಂತೂ ನಿರ್ಣಾಯಕಾಂಶ.

ಇನ್ನು ಕಾವ್ಯಾಂತಕ್ಕಿರಬೇಕಾದ ಮಂಗಳ ಹಾಡುತ್ತಾರೆ —

ಮಂಗಳಂ ಪೂತನಾದಿ ದೈತ್ಯ ಸಂಹರನಿಗೆ
ಅಂಗನೆಯರ ಭಂಗಪಡಿಸಿದವಗೆ ಮಂಗಳಂ (909)
ದೈತ್ಯ ಕಂಸನನ್ನು ವಧಿಸಿ ಹೆತ್ತ ತಂದೆ (ತಾಯಿಗ್ಗರುಷ)
ಚಿತ್ತ ರಾಮ ಕೃಷ್ಣರಿಗೆ ಜಯ ಮಂಗಳಂ (910)

ಇಂತು ಫಲ ಮಂಗಳ, ಕವಿ—ಕಾವ್ಯ ನಾಮಗಳೆಲ್ಲ ಉಕ್ತವಾಗಿರುವ ಈ ಪೂರ್ವಾರ್ಧ ಕೂಡ ಸ್ವಯಂಪೂರ್ಣವೆನಿಸುತ್ತದೆ. ಭಾಗವತ ದಶಮಸ್ಕಂಧದ ಪೂರ್ವಾರ್ಧದಲ್ಲಿ 42ನೆಯ 'ಕಂಸವಧೆ'ಯ ನಂತರ ಇನ್ನೂ 6 ಅಧ್ಯಾಯಗಳಿದ್ದರೂ, ವಾದಿರಾಜರು ಈ ಮಹತ್ವದ ಘಟ್ಟಕ್ಕೇ 'ಬಾಲಲೀಲೆ' ಮುಗಿಸಿ, ಪ್ರೌಢ ಲೀಲೆಗಳನ್ನು ಉತ್ತರಾರ್ಧಕ್ಕಿರಿಸಿಕೊಂಡು ಈ 'ಗೋಪಾಲ ಚರಿತೆ'ಯನ್ನು (904) ಪೂರೈಸಿದ್ದಾರೆ.

ಉತ್ತರಾರ್ಧದ ಆರಂಭಕ್ಕೂ ಗೋಪಾಲನ ಚರಿತ್ರೆ ಕೊಂಡಾಡುವೆನೆಂದು, ಪುನಃ ಅವನ ಅಪಾರ ಮಹಿಮೆ ಸೂಚಿಸಿದ್ದಾರೆ (ಪೂರ್ವಾರ್ಧದಂತ್ಯದಂತೆ). ಕೃಷ್ಣ ಸಾಂದೀಪನರಲ್ಲಿ

ಷೂಕ್[348] ಓದಿ, ಗುರುಕುಮಾರನನ್ನು ಅರೆಘಳಿಗೆಯೊಳಗೆ ನೆರಹಿದ[349] ಪರದೇವತೆ· ಪಾರ್ಥರ ಕುಶಲವರಿಯಲು ಹಸ್ತಿನಾವತಿಗಟ್ಟಿದ ಅಕ್ರೂರ ಧೃತರಾಷ್ಟ್ರನಿಗೆ 'ಪಾಂಡವರ ಪಾಲನ್ನೊಲ್ದು ಧರ್ಮ' ಎಂದ· ಕುಂತಿಯ ಕಷ್ಟ ಕೇಳಿ, ಭೀಮಾರ್ಜುನರ ಕಂಡು ಬಂದು ಹೇಳಿದ (1–16)·

ಬಳಿಕ ಕೃಷ್ಣ ಉದ್ಧವನಿಗೆ[350] 'ಚಿತ್ರಾಂಗದರ ಚಿತ್ತ ನಮ್ಮ (ದೇವತ್ವದ)ತ್ತ ಇರುವುದೋ, ಅರಿತು ಬಾ' ಎಂದು ಗೋಕುಲಕ್ಕೆ ಕಳುಹಿದ· ಅಲ್ಲಿ ನೀರಿಗೊಯ್ಯುವ ನಾರಿಯರು ಕೃಷ್ಣನ ತೇರು ಕಂಡು,[351] 'ಪದ್ಮನಾಭನ ರಥವು ಇಲ್ಲೇಕೆ ಬಂದಿದೆ? ಮರಳಿ ಅಕ್ರೂರ ನಮ್ಮ ಕರೆಯಬಂದನೇ?' ಎಂದುಕೊಂಡು ಉದ್ಧವನ ಸುತ್ತುಕಟ್ಟಿ ಕೃಷ್ಣನ ಕುಶಲ ಕೇಳುತ್ತಿದ್ದರು — 'ಕನಸು ಮನಸಿನಲ್ಲಾದರೂ ಸ್ಮರಿಸುವನೇ ನಮ್ಮ? ಕರೆಸಿ ನೋಡಬೇಕೆಂದಪೇಕ್ಷಿಸುವನೆ?' ಅತ 'ಯಾವ ಕಾಲದಲ್ಲೂ ನಿಮ್ಮ ಧ್ಯಾನ ಗೋವಿಂದಗೆ, ನೋಡಿ ಬಾರೆಂದೆನ್ನ ಕಳುಹಿದ' ಎನ್ನಲು ಭಕ್ತಿಪರವಶರಾಗಿ ಅಚ್ಯುತನ ಪಾದದಲ್ಲಿ ಚಿತ್ತ ಇಟ್ಟರು· ಭ್ರಮರ[352] ಒದಗಲು ಮೋಹಿತರಾಗಿ ಪರೀಕ್ಷೆಯಿಂದಾಡಿಕೊಂಡರು· 3–4 ತಿಂಗಳಿದ್ದ ಉದ್ಧವ ತಂದೆ ತಾಯಿ ತಾಪ ಬಿಡಿಸಿ, ಅಂಗನೇರ ವಾರ್ತೆ ಕೊಂಡು ಬಂದುಸುರಿದ 'ಏನ ಹೇಳಲಿ ಸ್ವಾಮಿ ಬಾಲಕೇರ ಸ್ನೇಹವ? ಬಾಲಕರ ತೊರೆದು ನಿಮ್ಮ ಧ್ಯಾನದಲ್ಲಿರುವರು· ಅವರ ಪಾದಧೂಳಿ ನಮಗಿನ್ನಾವ ಕಾಲಕೆ ದೊರಕದು (17–31)·

ಆಸ್ತಿ ಪ್ರಾಪ್ತಿಯರು ಪಿತಗೆ ಕಂಸವಧೆ ಅರುಹಲು, ಜರಾಸಂಧನು[353] ಕೃಷ್ಣನ ಕೊಲ್ಲಲು

---

348· 64 ದಿನಗಳಲ್ಲಿ 64 ವಿದ್ಯೆಗಲಿತ (ರು·ವಿ·12,30)·

349· ಪಂಚಜನ ರಾಕ್ಷಸನ ಕೊಂದು ಯಮನಿಂದ ಬಿಡಿಸಿ ತಂದ (ರು·ವಿ·12,32)·

350· ಚಿಕ್ಕಪ್ಪ ದೇವಭಾಗನ ಮಗ, ಮಂತ್ರಿ (ಕ·ನಿಘಂಟು 2,51)·

351· ಪೂರ್ವಾರ್ಧ 768ರ ಪುನರಾವರ್ತನೆ ಭಿನ್ನ ಸಂದರ್ಭಕ್ಕೆ·

352· ಇದೇ ಭಾಗವತ ಪೂರ್ವಾರ್ಧ 45ನೆಯ ಅಧ್ಯಾಯದ ಭ್ರಮರಗೀತೆಯ ಸಂದರ್ಭ ಸೂಚನೆ·

353· ಜರೆ ಸಂಧಿಸಿ ಒಪ್ಪಿಸಿದ ಬೃಹದ್ರಥನ ಶಿಶು; ಈ ಮಗಧದ ರಾಜಧಾನಿ ಗಿರಿವ್ರಜ/ ಬಿಹಾರದ ರಾಜಗಿರಿ (ರು·ವಿ·14,9; ಕ·ನಿ·2,75)·

ಗದೆ ಬೀಸಿದುದು ನಡುವಿದ್ದ ಜರೆಯನ್ನೇ ಕೊಂದಿತು. ಛಲದಿಂದ ಉಗ್ರ ಸೈನ್ಯ ಕೂಡಿ ಮಥುರೆಯ ಮುತ್ತಿ ಮರಳಿ ಮರಳಿ ಯುದ್ಧ ಮಾಡಿ 18 ಬಾರಿ ಸೋತ. ಅವನಿಗೆ ಕಾಲಯವನನ ಸೇನೆಯೂ ಕೂಡಲು, ಕೃಷ್ಣ ದ್ವಾರಕೆಗೆ ಸರಿದು, ಬೆನ್ನಟ್ಟಿ ಬಂದ ಕಾಲಯವನನನ್ನು ಉಪಾಯವಾಗಿ[354] ಮುಚುಕುಂದರಾಯನೊರಗಿದ್ದ ಗುಹೆಯಲ್ಲಿ ಸುಡಿಸಿದನು (32–69).

ಭೀಷ್ಮಕರಾಯ ಬಾಲೆಗೆ ಸ್ವಯಂವರ ಸಾರಲು, ಮಗನಿಗೆ[355] ಬಂದಾಕೆಂದು ಜರಾಸಂಧ ಬಂದ. ಅಷ್ಟರಲ್ಲಿ ಇಂದ್ರ 'ಬಿಗಡ ಮಾಯ ಉಳ್ಳವನು ಅವಳ ಅಗಡ ಮಾಡ್ಯಾನು,[356] ಅವನ ಕರೆಯದಿರಿ; ಬಂಗಾರದ ಕೊಡದೊಳಗೆ ಗಂಗೆಯುದಕ ತುಂಬಿ ಹರಿಯ ಅಭಿಷೇಕಿಸಿ; ಉಳಿದ ರಾಯರೂ ಹೊಗಳದಿದ್ದರೆ ಬಿಡುವೆ ವಜ್ರ'[357] ಎಂದು ಹೇಳಿ ಕಳಿಸಿದ್ದ. ಇಂದ್ರಗೆ ಗರ್ವ ಬಂದಿತೆಂದು ಭೀಷ್ಮಕ ತನುಜರಿಂದ ಬಹುಮಾನಿತ ಮಾಗಧ ರಾಯರ ಮೊಳ್ಳರ ತಗ್ಗಿಸಿದ. ಕೃಷ್ಣ ಭೀಷ್ಮಕನಿಗೆ ವಿಶ್ವರೂಪದೋರಿ[358]. 'ನಿನ್ನ ಮಗಳು ಶ್ರೀದೇವಿ ತನಗಿರಲಿ, ಬೇರಾರಿಗೂ ಅರುಹಳಲ್ಲ' ಎಂದು ಹೋದ. ರಾಯರು ಕಂಗೆಟ್ಟು, ಮಾಗಧ ಉಪಾಯ ಕೇಳಲು 'ರುದ್ರನ ಮೊರೆಯುಡಿ, ಹರಿ ಬಾರದ ಮುನ್ನ ಮಾಡಿಕೊಂಬ[356] ಮದುವೆಯ' ಎಂದರು ಸಾಲ್ವ–ರುಕ್ಮಿ.[359] ಅದನಾಲಿಸಿದ ರುಕ್ಮಿಣಿ 'ದೇವರ ಪಾದ ಇನ್ನ್ಯಾಗ[356] ದೊರೆವುದೊ' ಎಂದು ಚಿಂತೇಲಿರಲು, ಒಬ್ಬ ದ್ವಿಜ ಬಂದ;[360] ಆಕೆ ಎರಗಿ 'ಕೃಷ್ಣರಾಯರ ಕರೆದು ತಂದು ಕೊಟ್ಟರೆ ವೃತ್ತಿ ಕೊಟ್ಟು ರಕ್ಷಿಸುವೆ' ಎಂದಳು. ಆತ 'ಬಾಯಮಾತಿಗವನು ಬಾರ, ವಾಲೆ[356] ಬರೆದುಕೊಡುವುದು' ಎಂದ. ಅವಳು 'ಸ್ವಸ್ತಿ ಶ್ರೀಮತು ರಕ್ಷಿಸೆ'ಂದು ಕೈಮುಗಿದು

---

354. ಕೃಷ್ಣ ಅಡಗಿರಲು ರಾಯನೇ ಕೃಷ್ಣನೆಂಬ ಅದ್ವೈತ ಬುದ್ಧಿಯುಂಟಾದ್ದು (ರು.ವಿ.14,35). ರಾಯ ದೇವತೆಗಳಿಗೆ ನೆರವಾಗಿ ನಿದ್ರಾವರ ಪಡೆದಿದ್ದ.

355. ಸಹದೇವ.

356. ದೇಸಿ ಪ್ರಯೋಗ.

357. ಕ.ನಿರ್ಣಯ, 2,99.

358. ಕ.ನಿರ್ಣಯ 2, 100.

359. ಪೂರ್ವದಲ್ಲಿ ಇಲ್ಲ (ಕ.ನಿ.2,84).

360. ವಾದಿರಾಜರ ಪೂರ್ವಾವತಾರ (ಸುದೇವ).

ಬರೆಯತೊಡಗಿದಳು. 'ಅಕ್ರೂರ,ಅಜಮಿಳ,ಅಂಬರೀಷ,ಗಜೇಂದ್ರರ ಪೊರೆದ ಭಕ್ತಶರಣ್ಯ, ಬಂದು ರಕ್ಷಿಸೆ'ಂದು ಕಾಡಿಗೆಯಿಂದ ಬರೆದ ಪಾಲೆಗೆ ಅರಿಸಿನ ಹಚ್ಚಿಮುದ್ರೆ ಒತ್ತಿಕೊಟ್ಟಳು. ಬ್ರಾಹ್ಮಣ ಕೃಷ್ಣನಲ್ಲಿ ಬರಲು 'ಯಾವ ಕಡೆಯಿಂದ ಬಂದಿರೆ'ಂದುದಕ್ಕೆ 'ಕುಂಡಿನೀಪುರದಂಗನೆ ಹೇಳಿ ಕಳುಹಿದಳು, ಪಾಲೆ ತೆಗೆದೋದಿ ಸ್ಯಂದನ ಹೂಡು' ಎಂದ. 'ಗುಣಪೂರ್ಣ, ಹೆಣ್ಣಿ ದಮಘೋಷಸುತಗೆನ್ನ ಕೊಡುವನು ಸೋದರ, ರಾಯರೆನ್ನಯ್ಯದಿರು, ಅನಾದಿ ಕಾಲದ ಪತಿ ನೀನು, ಬಂದು ರಕ್ಷಿಸು' ಎಂಬ ಓಲೆಯೋದಿ ರಥ ತರಿಸಿದ. ಯಾದವರೂ ನಡೆದರು. ಬಂದವರ ಪೂಜೆ ಮಾಡುತ್ತಿದ್ದ ರುಕ್ಮ. 'ರಂಗನಿಲ್ಲದ ಕಂಗಳಿಗೆ ಭಂಗ ಬಂತು. ಅವನಿಲ್ಲದ ಪಟ್ಟಮಂಚ, ಅಷ್ಟಭೋಗದ ಸತಿಯರು ನನಗ್ಯಾತಕೆ? ಅತ್ತತ್ತ ಹೋಗಿ ಬಾಗಿಲಿಕ್ಕಿ' ಎಂದಳು ರುಕ್ಮಿಣಿ. ಕಷ್ಟದಿಂದ ಮಲಗಲು ಸ್ವಪ್ನದಲ್ಲಿ ಬಂದ ಕೃಷ್ಣ ಮುತ್ತಿನ ಹಾರವಿತ್ತ; ನಗುತ ಎದ್ದು ಕುರುಳು ತಿದ್ದುತ ನುಡಿದಳು (76— 128) —

ಅಚ್ಯುತರಾಯ ಬಂದು ಹಸ್ತೇಲಿ ಕುಳಿತುಕೊಂಡು
ಮುತ್ತಿನ ಸರವ ತೆಗೆದು ಕೊಡುತಲಿದ್ದನು (129)

ಯಾದವರಾಯ ಬಂದು ಸಾರೇಲಿ ಕುಳಿತುಕೊಂಡು
ಹೂವ ತಂದು ಕಬರಿಯಲ್ಲಿ ಮುಡಿಸುತಿದ್ದನು (130)

'ಸ್ವಪ್ನ ಸತ್ಯವಾಗುವುದೆ'ಂದು ಮುತ್ತೈದೆಯರಿಗೆ ವೀಳ್ಯ ಕೊಟ್ಟಳು. ಥಳಿಗೆ ಬಟ್ಟಲು ಹಾಕಿ ಬ್ರಾಹ್ಮಣ ಕರೆಯಬರಲು, ಕುಲದೇವತೆಗೆ ನಡೆದಳು ವೈಭವಗಳೊಂದಿಗೆ. ರುದ್ರರಾಣಿ ಪೂಜೆ ಮಾಡಿ, ಅಂಗನೆಯರ ಪೂಜಿಸಿ ಮರದ ಬಾಗಿಣ ಕೊಟ್ಟಳು. ಆ ಹಂಸಗಾಮಿನಿಯ ಚೆಲ್ವಿಕೆಗೆ ರಾಯರೆಲ್ಲ ಮೂರ್ಛೆ ಹೋದರು. ಅರಳುಗಂಗಳ ಬಾಲೆ ಎಡಗೈಲಿ ಕುರುಳ ತಿದ್ದಿ ಹರಿಯುನೆದುರು ಹೋಗುತ್ತಿದ್ದರೆ, ನರಿಗಳೊಳಗೆ ಕರಿಯನೊಯ್ಯುವಂತೆ ಮೃಗರಾಜ ನಡುಹೊಕ್ಕು ಕೈಹಿಡಿದು ರಥವನೇರಿಸಿದ.[361] ರುಕ್ಮಿಣಿ ಸ್ವಾಮಿಗೆ ಮಾಲೆ ಹಾಕಿದಳು. ದಾಳಿ ಹರಿದು ಬಂದ ರುಕ್ಮನ ಹಿಡಿದು ಹೆಡಮುರಿಗೆ ಕಟ್ಟಿ,[362] ಬಾಣದಿಂದ ಕೇಶ ಮೀಸೆ ಸವರಿ, ಮಸಿಯ ಬೊಟ್ಟನಿಟ್ಟು ರುಕ್ಮಿಣಿಗೆ ತೋರೆಂದ ಕೃಷ್ಣ. 'ಸೋದರನನ್ನು ಉಳುಹಿ ಬಿಡುವುದೆ'ನಲು ಹೆಡಮುರಿಗೆ ಬಿಚ್ಚಿದ. ನರ್ಮದೆ ದಾಟಿ ದ್ವಾರಕೆಗೆ ಬಂದ. ಕಮಲಮುಖಿಯರು ಕದಲಾರತಿ ಎತ್ತಿ ಪಾದ ತೊಳೆದು ಹಸೆಗೆ ತಂದರು. ಮುತ್ತಿನ ಕರಿಮಣಿಗೆ ರತ್ನದ ಹರಳು ಬಿಗಿದು

361. 'ಉತ್ಸಾರ್ಯ ನಾಮಕರಜ್ಞೈರಲಕಾನ್, ಶೃಗಾಲ ಮಧ್ಯಾದಿವ ನಾಗಹೃದ್ಧರಿಃ (ಮೂಲ ವಾಕ್ಯ ಭಾಗ).

362. ದೇಸಿ ಪ್ರಯೋಗ.

ಮಡದಿಗೆ ಕಟ್ಟಿದ ಕೃಷ್ಣ. ಬ್ರಾಹ್ಮಣರು ಹೋಮವಿರಿಸಿ ಕಂಕಣಧಾರ ಕಟ್ಟಿದರು. ಅವಳು ಮುಗುಳು ನಗುತ ನಾಚಿ ತಲೆಬಾಗಿ ಎಡಗಡೆ ಕುಳಿತಳು. ಕಂಕಣದ ಕೈ ಹಿಡಿಯೆ ಪಂಕಜ ಮುಖಿ ನಡುಗೆ, ವೈಕುಂಠಪತಿಗೆ ಸ್ತ್ರೀಯರ ಮಂಚನೆಯೋ ಸರಿ! ಬಟ್ಟಲ ಮಾನಗಳಂ ಮಾಣಿಕ್ಯ ತುಂಬಿ ಹೊಸ್ತಿಲ ಬಾಗಿಲಲಿಟ್ಟು ಎಡವಿಸಿದರು.[363] ಸುಭದ್ರೆ ಮಗಳ ಬೇಡಿದಳಲೆ.

ಕೃಷ್ಣ — ಎನ್ನ ಮಡದಿ ಮಗಳ ನಿನ್ನ ಮನೆಗೆ ಕೊಡುವಳೆ?

ಸುಭದ್ರೆ — ಆವು ಕಾವ ಗೋವಳೆತ್ತ, ಪಾಂಡವರ ಭಾಗ್ಯವೆತ್ತ? ಏನು ಕಾರಣ ಹೆಣ್ಣ ಕೊಡದ್ರಿ?

ಕೃಷ್ಣ — ಅತ್ತೆ ಮಕ್ಕಳ ಭಾಗ್ಯವಿತ್ತ ಸೂರೆ ಹೋದರೇನೆ, ಹಸ್ತಿನಾವತಿಗೆ ಹೆಣ್ಣ ಕೊಡೆನು. ದುಷ್ಟ ಭೀಮ ಭಿಕ್ಷೆ ಬೇಡಿ ಬಕನ ಸೀಳಿ ಬಂದುದಿಲ್ಲವೆ? ಕುಂತಿಯ ಕೊಟ್ಟು ಅಂತರ ಆಯಿತು. ಪಾಂಡವರಿಗೆ ಹೆಣ್ಣಕೊಡೆನು.

ಸುಭದ್ರೆ — ಕೊಟ್ಟರೂ ಒಲ್ಲೆನೊ, ನಿನ್ನ ಹೆಂಡಿರೆಲ್ಲ ಗಂಡುಮ್ಯಾಗೇರು.

ಕೃಷ್ಣ — ಪಾಂಡವರು ನಿಮಗೆ ಕಾಂತರೇನಿರೋ?

ಸುಭದ್ರೆ — ಪಾಂಡವರು ನಿಮಗೆ ಬಲವರೇನಿರೋ?

ದೇವಕಿ ಮುತ್ತಿನ ಸರ ಕೊಟ್ಟು, ಹಾಲು ತುಪ್ಪ ದೇವರ ಜಗಲಿಗೊಯ್ಯುತ್ತಿದ್ದ,[363] ಆರತಿ ಬೆಳಗಿದಳು ರಂಗ ಕರ್ಪೂರ ಗಂಧದೋಕುಳಿಯಾಡೆ, ಬಲರಾಮ ಬೀಗರಿಗೆ ಉಡುಗರೆ ಕೊಟ್ಟ. ಬಳಗ ಕೂಡಿ ಭೀಷ್ಮಕ ತನ್ನ ಪಟ್ಟಣಕೆ ತೆರಳಿದ[364] (131—186).

ಸತ್ರಾಜಿತನ ತಮ್ಮ ಪ್ರಸೇನ ಸ್ಯಮಂತಕ ಕೇಳಿದ್ದ ಕೃಷ್ಣನೊಡನೆ ಬೇಟೆಗೆ ಹೋದಾಗ ಸಿಂಹ ಒಯ್ದ ಮಣಿ ಜಾಂಬವಂತನ ಪಾಲಾಗಿದ್ದರೂ, ಅಪಾದಿತ ಕೃಷ್ಣ ಹೆಜ್ಜೆ ಅರಸಿ ಬಂದು ಯುದ್ಧ ಮಾಡಲು ಜಾಂಬವ ಸೋತು, ಎದುರಿಗೆ ರಾಮ ಕಂಡು 'ತ್ರಾಹಿ ತ್ರಾಹಿ' ಎಂದು ಕೈಮುಗಿದು, ಪುತ್ರಿಸಹಿತ ರತ್ನವಿತ್ತು ಕೃತಾರ್ಥನಾದ. ಸತ್ರಾಜಿತನೂ ಕುತ್ಸಿತ ಕರ್ಮ ಕಳೆಯಲು ರತ್ನಸಹಿತ ಭಾಮೆಯನ್ನಿತ್ತು. ಕೃಷ್ಣ ಸತ್ಯಭಾಮೆಯ[365] ಮದುವೆಯಾಗಿ

---

363. ದೇಸೀಯ ರೂಢಿಗಳು. ಕೃಷ್ಣ—ಸುಭದ್ರಾ ಸಂವಾದ ಸ್ವಾರಸ್ಯಕರ.

364. ರುಕ್ಮಿಣೀ ವಿವಾಹವಿಲ್ಲಿ 110 ನುಡಿಗಳಲ್ಲಿ ಅಡಕವಾಗಿದ್ದರೆ, 'ರುಕ್ಮಿಣೀಶ ವಿಜಯ' 14,38ರಿಂದ ಕಾವ್ಯಾಂತದನಕ 330 ಶ್ಲೋಕಗಳಿಗೆ ಹಬ್ಬಿದೆ.

365. ಭೂದೇವಿಯವತಾರ.

ರತ್ನ ತಿರುಗಿ ಕೊಟ್ಟನು. ಹೀಗೆಯೇ ಸಾಹಸಗೈದು ಲಕ್ಷಣಾ ನೀಲಾ ಭದ್ರಾ ಮಿತ್ರಾ ಕಾಳಿಂದಿಯರನ್ನೂ ಮದುವೆಯಾದನು[366] (188—209).

ಅರಗಿನ ಮನೆಯ ಸುದ್ದಿ ಕೇಳಿ ಕೃಷ್ಣ ಪಾಂಡವರ ಕಾಣಬಂದ. ಭೀಮ ಹಿಡಿಂಬೆಯ ಮದುವೆಯಾಗ ಮಗನ ಪಡೆದ.[367] ಭಾಮೆಗಾಗಿ ಶತಧನ್ವ ಸತ್ರಾಜಿತನ ಕೊಲ್ಲುವನಿತರಲ್ಲಿ ಕೃಷ್ಣೆಯ ಸ್ವಯಂವರ ಬಂತು. ಪಾಂಡವರೂ ಏಕಚಕ್ರದಲ್ಲಿ ಬಕನ ಸೀಳಿ ಬಂದು, ಫಲ್ಗುಣ ಹೆದೆ ಏರಿಸಲು ದ್ರೌಪದಿ ಮಾಲೆ ಹಾಕಿದಳು. ಯುದ್ಧದಲ್ಲಿ ರಾಯರ ಸೋಲಿಸಿ ಪರ್ಣಶಾಲೆಗೆ ಬಂದು 'ಭಿಕ್ಷೆ ತಂದೆವೆ'ನ್ನಲು ತಾಯಿ 'ಹಂಚಿಕೊಂಡು ಉಣ್ಣಿ ಐವರು' ಎಂದಳು. 'ಅಮ್ಮನ ಮಾತು ಅನೃತವಾಗದೆಂ'ದರು. ದ್ರುಪದ ಮಗನ ಕಳಿಸಿ ಕ್ಷತ್ರೇ[368]ರೆಂದರಿತು ಕರೆಕಳುಹಿ, ಆಯುಧಾಗಾರ ಹೊಕ್ಕ ಅರ್ಜುನನ ಪಾದ ತೊಳೆವಲ್ಲಿ ಪಂಚಪಾದ ಕಂಡು ಸಂಕೋಚಪಟ್ಟು, ಕೃಷ್ಣ ಬಂದು ಪಂಚಲ ತೋರಿಸಿ ಧಾರೆ ಎರೆಸಿದ (210—244).

ಅಲ್ಲಿಂದ ಬಂದವನೇ ಶತಧನ್ವನ ಬೆನ್ನಟ್ಟಿ ಚಕ್ರದಿಂದ ಕುಟ್ಟಿದ. ಸುಭದ್ರೆಯನ್ನಾಶಿಸಿ ಸುಯೋಧನ ಗದೆ ಕಲಿವ ನೆವದಲಿ[368] ಬಂದಾಗಲೇ, ಅಣ್ಣನ ಶಯ್ಯಾಗಾರ ಹೊಕ್ಕು ಯಾತ್ರೆಗೈಯುತ್ತಿದ್ದ ಮುನಿವೇಷದರ್ಜುನನ ಕರೆತಂದ ಬಲರಾಮ. ಎಲ್ಲರೂ ವನ ಭೋಜನಕ್ಕೆ ಹೋದಾಗ ಅರ್ಜುನ ಸುಭದ್ರೆಯನ್ನಪಹರಿಸಿದ. ಆ ದಂಪತಿಯೊಡನೆ ಕೃಷ್ಣ ಭಾಮೆ ಸಹಿತ ಬೇಟೆಗ್ಹೋದ ಖಾಂಡವವನಕೆ.[369] ಅಗ್ನಿ ಜೀರ್ಣ ಹೆಚ್ಚಿಸಿಕೊಳ್ಳಬರಲು, ಇಂದ್ರ ಕರೆದ ಮಳೆಯನ್ನು ಶರಪಂಜರದಿಂದ ತಡೆದು ಗಾಂಡೀವಿ ಎನಿಸಿದ ಅರ್ಜುನ (251—274).

ಕೃಷ್ಣ—ಭೀಷ್ಮೆಯರಲ್ಲಿ ಬಂದ ನಾರದ ಅವಳ ಕೊಂಡಾಡಿ ಪಾರಿಜಾತ ಪುಷ್ಪವಿತ್ತು ದನ್ನಾಲಿಸಿದ ಭಾಮೆ 'ಇನ್ನು ಪನ್ನಂಗಶಯನನ ಮೋರೆ ನೋಡೆನೆ'ಂದಳು. 'ಏನಾಯಿತೆ'ಂದು

---

366. ಅಷ್ಟಮಹಿಷಿಯರು (ನೋ.ಕ.ನಿ.2,161; ರು.ವಿ.19,12; 'ಅಷ್ಟಮಹಿಷೀ ಕೃಷ್ಣ ಸ್ತೋತ್ರ').

367. 211ನೆಯ ಈ ನುಡಿ ಭೀಮ ಸುಮ್ಮಾಲಯ 9ರಲ್ಲಿ ಶುದ್ಧ ಪಾಠದೊಡನಿದ್ದು, ಏಕಕರ್ತೃತ್ವಕ್ಕೆ ಆಂತರಿಕ ಪ್ರಮಾಣ.

368. ದೇಸಿ ನುಡಿ.

369. ಇಲ್ಲೇ ಕೃಷ್ಣ ಪಾಂಡವರಿಗೆ ಇಂದ್ರಪ್ರಸ್ಥ ನಿರ್ಮಿಸಿದ (ಪು.ನಾ.ಜಾ.174).

ಬಂದವಗೆ 'ಅತ್ತೆ ಸಾರು, ಕಪಟದ ಮಾತು ಸಲ್ಲ' ಎಂದಳು. ಮಾಂತಾಪುರುಷ ಆಲಂಗಿಸಿ 'ನಿನ್ನ ಕರೆದೊಯ್ದು ಪಾರಿಜಾತ ತರುವ ತಂದು ಬಾಗಿಲಲ್ಲಿರಿಸುವೆನೆ'ಂದ. ನರಕಾಸುರ ಅದಿತಿಯ ಕರ್ಣಕುಂಡಲಾದಿಗಳನ್ನಪಹರಿಸಿದನೆಂದು ಸುರಪ ಮೊರೆಯಿಡಲು, ಭಾಮೆಯೊಡನೆ ಗರುಡನನೇರಿ ಹೋಗಿ ನರಕನ ಕೊಂದು, ಮುತ್ತಿನ ಮಾಲೆಯನೊಯ್ದು ಅದಿತಿಗಿತ್ತ, ಬಳಿಕ ನಂದನಕೆ ಬರೆ ಪಾರಿಜಾತ ಕುಸುಮವಾಘ್ರಾಣಿಸಿದಳು. 'ಕೃಷ್ಣ ನನಗೆ ಕೊಟ್ಟು ಸತಿಯರೊಳಗೆ ಹೆಚ್ಚಿನೆ' ಎನ್ನಲು, 'ಬೇಡವೇ ಭಾಮಕೀ ಪೌಲೋಮಿ ತರುವಿದು, ಸವರೋಷದಿಂದವರರು ಜಗಳಕ್ಕೆ ಬಾಹೋರು' ಎಂದರೂ ಕೇಳದೆ, 'ಬಿಟ್ಟೆನೊ ಪ್ರಾಣ ನಿನ್ನ ಪಾದದಡಿಯಲಿ' ಎಂಬ ಡೊಂಕು ಮಾತು ಕೇಳಿ ಅಪ್ಪಿದ, ಚುಂಬಿಸಿದ. ತರುವ ತೆಗೆದುಕೊಂಡರು. ಬೇಡ ಎಂದ ವನಪಾಲಕರು ಪೌಲೋಮಿಗ್ಹೇಳಲು, 'ವಸುಧೆ ಮೇಲೆ ಸುರತರು ಉಂಟೆ? ಉಂಡು ನಿನ್ನ ಮನೆಯ ಕೊಂಡ, ಗಂಡಸುತನವೆಲ್ಲಿ?' ಎಂದವಳ ನುಡಿಗೆ ಇಂದ್ರ ಎದ್ದರೂ 'ಹರಿಯ ಹಿಡಿಯಲಾರೆನೆ, ಬಾಣ ಒದಗವು, ಧೈರ್ಯ ಸಾಲದು' ಎನ್ನಲು, ಮಡದಿಯರೇ ಬಾಣ ಹೂಡಿದರು. ಶೂಲಪಾಣಿ—ಇಂದ್ರರ ಸೋಲಿಸಿ ಸ್ತೋತ್ರಗೊಂಡ ಚಕ್ರಪಾಣಿ ಪಂಚವರ್ಣದ ಹಕ್ಕಿಮೇಲೆ ಮಿಂಚು ಮೇಘ ಹೊಳೆದಂತೆ ದ್ವಾರಕೆಗೈತಂದು, ಭಾಮೆಯ ಮನೆಯ ಮುಂದೆ ತರುವಿರಿಸಿ, ಅನುಕೂಲ ವನಿತೇರ ಮನೆ ಮನೆಗೆ ಬಂದು, ಒಬ್ಬೊಬ್ಬರಿಂದ 10 (ಗಂಡು, 1 ಹೆಣ್ಣು) ಮಕ್ಕಳ ಪಡೆದ[370] (275—323).

ಜರಾಸಂಧನ ಯಜ್ಞಕ್ಕೆ ಕಪ್ಪ ಕೇಳಿದ ಹಂಸ—ಡಿಭಿಕರ[371] ಅಸುವ ತೆಗೆದು ಕೊಟ್ಟ ಕೃಷ್ಣ. ಸೂರ್ಯ ಗ್ರಹಣಾರ್ಥ ಕುರುಕ್ಷೇತ್ರ ಯಜ್ಞಕ್ಕೆ ಸಪರಿವಾರ ಬಂದಿರಲು, ಕೃಷ್ಣ ಧರ್ಮಜರು ಕುಶಲ ಕೇಳಿದಂತೆ, ಕೃಷ್ಣಪತ್ನೇರಿಗೆ ಕೃಷ್ಣೆ 'ನಿಮ್ಮ ತಂದ ಕ್ರಮ ಹೇಳಿರೆ'ಂದಳು; ಅವರೆಲ್ಲ ತಮ್ಮ ವಿವಾಹಕ್ರಮ ಹೇಳಿ, ಕೃಷ್ಣೆಯ ವಿವಾಹ ಕ್ರಮ ಕೇಳಿದರು. 'ಮನದೊಳಗಹಂಕಾರವಿಲ್ಲ ಧರ್ಮನರಸಿಗೆ'ಂದ ಕೃಷ್ಣ. ನಾರದಾದಿಗಳ ಸಲಹೆಯಂತೆ ವಸುದೇವ ಯಜ್ಞಗೈದು ದಾನವಿತ್ತು, ತ್ರಿತಾಪ ಕಳೆದ; ಕೃಷ್ಣ ಪರಮಪುರುಷನೆಂದರಿತು ಸ್ತುತಿಸಿದ. ಕೃಷ್ಣ ಮುನಿ ರಾಯ ಗಂಧರ್ವರ ಬಹುಮಾನಿಸಿದ (324—351).

---

370. ಹತ್ತು ಹತ್ತೆನಿಪ ಕ್ರಮದಿಂದ ಪುತ್ರರ ಸೃಷ್ಟಿಸಿದವರುಂಟೆ' (ಲ.ಶೋಭಾನೆ 49; ಕ.ಸಿ.2,187).

371. ಮಧುಕೈಟಭರು ಈಗ ಬೃಹ್ರದತ್ತ (ಸಾಲ್ವ) ಸುತರು (ಕ.ಸಿ.2—39,112).

ರುಕ್ಮಿಣಿಯೊಡನೊಮ್ಮೆ ಸರಸವಾಡುತ್ತ 'ನಿಮ್ಮಣ್ಣನ ವಂಚಿಸಿ ಎನಗೆ ಮಾಲೆ ಬರೆವರೆ? ದೇಶಕರಾಂತರ ಮಗಳು ಪರದೇಸಿ ಗೋವಳಗೆ ಬರೆವರೆ! ಹೋಗು' ಎನಲು, ಕಂಗಳ ಜಲ ತುಂಬಿ ಕುಂಭಿನಿಗೆ ಬಿದ್ದಳು, ಮುಖ—ಸ್ತನ ಕುಂದಿದವು. ಚಕ್ರಧರ ಮುತ್ತಿನ ಮುಡಿ ಬಿಗಿದು 'ಸರಸವಾಡಿದರೆ ಮೂರ್ಛೆಗೈವರೆ!' ಎಂದ. 'ಚಿಕ್ಕಂದಿನಿಂದ ಅಭಿಮಾನಿ, ಕಣ್ಣೆತ್ತಿ ನೋಡದೊಬ್ಬರ, ಒತ್ತಿ ಮಾತ ತಾಳಲಾರೆ'ಂದಳು ಸೇವಕಿ'ಸುಮ್ಮನೆ ಮಾತಾಡಿದರೆ ಗಮ್ಮನೆ ಮುನಿವರೆ, ಚಿನ್ನದ ಗೊಂಬೆ, ಬಣ್ಣದ ಚೆಂಡು ಚಾರೆ' ಎನ್ನಲು, ಮುದದಿ ನಗುತ ಎದ್ದು ಬಂದು ತೊಡೆಯ ಮೇಲೆ ಕುಳಿತು ನುಡಿದಳು — 'ಕಂಡು ಕೊಂಡೆ ನಿಮ್ಮ ಪಾದಾಂಬುಜದ ನಿಜಸೇವೆಯ. ದೇಶಕರಾಂತರ ಮಗಳೆಂದಿರಿ, ಸರ್ವ ರಾಂತರು ನಿಮ್ಮ ಹೃದಯದಲ್ಲಿಹೋರು'[372] (353—367).

ಅನೇಕ ಸ್ತ್ರೀಯರ ಸಂತೈಸುವ ಕೃಷ್ಣನ ಚರಿತ್ರೆ ನೋಡಬಂದ ನಾರದ. ಒಂದು ಮಂದಿರದಿ ಗಂಧಪರಿಮಳ ಪೂಸಿ ಮಂದಾರ ಮಾಲೆ ಧರಿಸಿ ನಗುತಿಹ, ಮತ್ತೊಂದರಲಿ ನಾರಿ ಉದ್ಧವರೊಡನೆ ದಾಯಮಾಡಿ ಸೋಲಿಸಿ ನಗುತಿಹ; ಮಗುದೊಂದರಲಿ ಅಳುವ ಮಕ್ಕಳೆತ್ತಿಕೊಂಡು ಕಾಂತೇರ ಕರೆಯುತ್ತ ತೊಟ್ಟಿಲ ತೂಗುವ. ಹೀಗೆಯೇ ಕುದುರೆ ಕುಣಿಸುತ, ಚದುರಂಗವಾಡುತ, ಮಕ್ಕಳಿಗಸ್ತ್ರ ಕಲಿಸುತ, ಸ್ನಾನ ದಾನ ಧ್ಯಾನ ಮಂತ್ರ ಪೂಜೆ ಅಗ್ನಿಹೋತ್ರ ಪುರಾಣ ವ್ಯಾಖ್ಯಾನನಿರತ, ಜಲಕ್ರೀಡೆ ಏಕಾಂತವಾಡುತ, ಕನ್ಯಾದಾನ ಗೈಯುತ, ಕನ್ನಡಿ ನೋಡುತ, ಬ್ರಹ್ಮಭೋಜನಗೈಸುತ, ಗಂಧವೀಳ್ಯವಿತ್ತು ವಂದಿಸಿ ಜನ್ಮ ಸಾಫಲ್ಯವೆನುತ, ಚೋರರ ದಂಡಿಸಿ ಗುರುಗಳ ಅಂದಣವೇರಿಸಿ ಇಹ ಅಪಾರ ಮಹಿಮನ ಪೊಗಳುತ ತೆರಳಿದ ನಾರದ (368—378).

ಯಮಲೋಕದಲ್ಲಿ ನರಕ ಭೋಗಿಸುತ್ತಿದ್ದ ಪಾಂಡು 'ಧರ್ಮರಾಜಸೂಯವು ಮಾಡಿದರೆ ನಾ ಸ್ವರ್ಗವೇರುವೆ' ಎನ್ನಲು, ನಾರದ ಬಂದು ಹೇಳಿದ. ಕೃಷ್ಣ ಬರಲು ಧರ್ಮಜ ನಮಿಸಿ, ನಾರದನ ಮಾತು ತಿಳಿಸಿದ. ಕೃಷ್ಣನು 'ಮಗಧರಾಜ ಪ್ರಬಲ, ಯಜ್ಞ ಮಾಡಲಾಗದು; ಭೀಮಾರ್ಜುನರ ಕಳುಹಿ ಅವನ ಮಡುಹಿದರೆ ಯಾಗ ಪೂರ್ಣವಾಗೊದೆ'ಂದ. ಧರ್ಮ

---

372. ದೇಸಿ ಪ್ರಯೋಗ. ಇಲ್ಲಿಯ ರುಕ್ಮಿಣಿ ಸುಕುಮಾರಿ, 'ಸರಸಭಾರತೀ ವಿಲಾಸ' 4ರಲ್ಲಿ ಲಕ್ಷ್ಮಿ ಕೃಷ್ಣನ ಆಕ್ಷೇಪಗಳಿಗೆ ವೇದಸಮ್ಮತ ಅರ್ಥ ಹೇಳಿ ಮಂಗಲದೇವತೆ ಎನಿಸಿದ್ದಾಳೆ.

'ನಮ್ಮನ ಮನಸ್ಸು ಹೋದರೆ ತನುವು ನಿಲ್ಲುವುದೆ?' ಎನ್ನಲು, ಕೃಷ್ಣ 'ಅವರ ತಿರುಗಿ ತಂದು ತೋರುವೆ' ಎಂದ. ಭೀಮ 'ಕೃಷ್ಣನ ಮುಂದೆ ಕುಟ್ಟಿ ಹಾಕುವೆನವನ, ಸೃಷ್ಟಿಪತಿ ಅಪ್ಪಣೆಯ ಪಾಲಿಸೆ'ಂದ. ಧರ್ಮ ಒಪ್ಪಿದ. ದ್ವಿಜ ವೇಷದಿಂದ ಮಗಧ ಹೊಕ್ಕರು. ಜರಾಸಂಧ 'ಏನ ಬೇಡುವಿರ'ನಲು ಭೀಮ ಯುದ್ಧಭಿಕ್ಷೆ ಬೇಡಿದ. ಪಟ್ಟಣದ ಹೊರಗೆ ಮಂಡಲ ಬರೆದು 18 ದಿನ ಯುದ್ಧಗೈದರು. ತೃಣದ ಕೊನೆ ಹಿಡಿದು ಕೃಷ್ಣ ತಿರುಗಿ ಮುರಿಗಿ ತೋರಿದ,[373] ಭೀಮ ಬಾಹುದಿಂದ ಮಡುಹಿದ. ಕೃಷ್ಣ ಸೆರೆ ಬಿಡಿಸಿದರಸರು[374] 'ಸ್ವಾಮಿ ನಿಮ್ಮ ಕಂಡೆವು, ಜರಾಸಂಧ ದಯಮಾಡಿದ' ಎಂದರು. ಇವರು ಜರಾಸಂಧನ ಮಗ (ಸಹದೇವ)[375] ಗಭಿಷೇಕಗೈದು, ಮಗಳನ್ನು ತಮ್ಮ (ಸಹದೇವ)ಗೆ ತಂದುಕೊಂಡು ಭಂಡಾರಸಹಿತ ಬಂದರು (379– 408).

ಧರ್ಮ ಯಜ್ಞ ಮಾಡಿದ, ಕೃಷ್ಣ ಸುಭದ್ರೆಗೆ ದೀಕ್ಷೆ ಕಟ್ಟಿದರು. ಕೌರವನು 'ಅಗ್ರಪೂಜೆ ಯಾರಿಗೆ'ನ್ನಲು 'ಕೃಷ್ಣಪಾದ ಪೂಜಿಸೆಂ'ದ ಭೀಷ್ಮ. 'ರಾಜ ಮುಖ್ಯಗಳು ಅಳಿದರೆ? ಕುಲಗೋತ್ರವಿರದ ಪೂತನಿಯ ಕೊಂದ ಕಿಡಿಗೇಡಿಗೆ ಅಗ್ರಪೂಜೆ ಹ್ಯಾಗೆ ದೊರೆವುದೊ?' ಎಂದ ಶಿಶುಪಾಲ. ಭೀಮ ತುಟಿಯ ತಿರುಗಿ 'ನಾಲಗೆ ಸೀಳಿ ಕುಟ್ಟಿಹಾಕುವೆನೆ'ನ್ನಲು ಮುತ್ತಕ ತೆಕ್ಕೆಯಿಂದ ಭಟಾಕ್ಷಿಗಿ[376] ಹಿಡಿದು ನುಡಿದ 'ಕೊಂದಾನು ಕೃಷ್ಣ, ತಿರುಗೊ ಹಿಂದಕೆ.' ಕೃಷ್ಣ ತಲೆ ತೆಗೆಯಲು ಅವನ ತೇಜಸ್ಸು ವಾಸುದೇವನ ಕೂಡಿತು. ಯಜ್ಞಾಂತ ಸ್ನಾನ ಮಾಡಿ ವಕ್ರಪಾಣಿಯಂತೊಪ್ಪಿದ ಧರ್ಮ. ಮುಖ್ಯರಿಗೆ ಆ ನೋಟ ಪ್ರಶ್ನಿಸಿತು, 'ಜಯವಿಜಯರೇ ಹಿರಣ್ಯಾಕ್ಷ ಹಿರಣ್ಯಕಶ್ಯಪ, ರಾವಣ– ಕುಂಭಕರ್ಣ, ಶಿಶುಪಾಲ– ದಂತವಕ್ರ[377]ರೆಂದರು (409– 423).

---

373. 'ವಿಟಪಂ ಪಾಟಯನ್ನಿವ' (ಭಾಗವತ), 'ಕಡ್ಡಿ ಮುರಿದು' (ಕ.ನಿ.2,200); 'ತಿರುಗಿ ಮುರಿಗಿ' ದೇಸಿ ನುಡಿ.

374. ಭೈರವೋಪಾಸಕ ಮಾಗಧ ನರಮೇಧಕ್ಕೆ ಹಿಡಿದಿದ್ದರಸರು 20,800.

375. ಕ.ನಿ.2,244–245.

376. ಮೂರೂ ದೇಸಿ ನುಡಿ ಗಮನಾರ್ಹ.

377. ಶಿಶುಪಾಲ ವಸುದೇವ ಸೋದರಿ ಶ್ರುತಶ್ರವೆಯ ಸುತ; ಅವನ 3 ಕಣ್ಣು, 4 ಕೈಗಳಲ್ಲಿ ಹೆಚ್ಚಿನವು ಆಕಾಶವಾಣಿಯಂತೆ ಕೃಷ್ಣನೆತ್ತಿಕೊಳ್ಳಲು ಇಂಗಿ, ಅತ್ತೆಗಿತ್ತ ವಾಗ್ದಾನದಂತೆ ಅವನ 100 ತಪ್ಪು ಸಹಿಸಿಕೊಂಡ. ಆಗ ಕರೂಷಾಧಿಪ ದಂತವಕ್ರ ಏರಿ ಬಂದು ಹತನಾದ.

ನಾರದ 'ಜಾಂಬವತೀಸುತ ಸಾಂಬ ಕೌರವಕುಮಾರಿ ಲಕ್ಷಣೆಯನ್ನಪಹರಿಸಿ ಬಂಧಿತನಾದನೆ'ನ್ನಲು, ಬಲರಾಮ ನೇಗಿಲು ಪಿಡಿದು ಹಸ್ತಿನಾವತಿಯನ್ನೆಳೆಗಿಸಿ ಬಿಡಿಸಿದ. ಭಾರತ ಯುದ್ಧವಾಗಿ ಕೃಷ್ಣ ತಂಗಿಯೊಡನೆ ಬರುವಲ್ಲಿ ಕೌರವ ನಾಶಕನ ಶಪಿಸಲಿದ್ದ ಉದಂಕ ವಿಶ್ವರೂಪ ಕಂಡು ಸ್ತುತಿಸಿದ. ರುಕ್ಮಿಣೀಪುತ್ರ ಪ್ರದ್ಯುಮ್ನ ತನ್ನನಪಹರಿಸಿದ ಶಂಬರನ ಸೀಳಿ, ರುಕ್ಮಸುತೆ ರುಕ್ಮವತಿ(ರತಿ)ಯ ವರಿಸಲು, ಬಲರಾಮ ಜೂಜಿನ ವಾದದಲ್ಲಿ ಬೀಗನ ಕೊಂದರೆ, ಕೃಷ್ಣಮುಗುಧನಾಗಿದ್ದ! ನೃಗರಾಜ ದಾನವಿತ್ತ ಗೋವು ಮರಳಿದ್ದನ್ನರಿಯದೆ ಮತ್ತೊಬ್ಬರಿಗಿತ್ತು, ಓತಿಕ್ಯಾತನಾಗಿ ಹಾಳು ಬಾವಿಯಲ್ಲಿದ್ದು, ಕೃಷ್ಣಕಟಾಕ್ಷದಿಂದ ಉದ್ಧೃತನಾಗಿ ಸ್ತುತಿಸಿಹೋದ (424— 435).

ಕೃಷ್ಣ ಶ್ರೀದೇವಿ ಭೂದೇವಿ ಸೇವಿತನಾಗಿರಲು, ಬಂದ ಕುಚೇಲ[378]ನನ್ನಾಲಿಂಗಿಸಿ ಸತ್ಕರಿಸಿ 'ಅತ್ತಿಗೆ ಏನು ಕಳುಹಿದಳು' ಎಂದು ಅವಲಕ್ಕಿ ಗಂಟ ಹುಡುಕಿ ಮುಕ್ಕಿ ಮೋಕ್ಷದೈಶ್ವರ್ಯವಿತ್ತು, ಮತ್ತೆ ಬೇಡೆ ಲಕ್ಷ್ಮಿ ತಡೆದಳು. ಸ್ನಾನ ಊಟ ನಿದ್ರೆಯಾಗಿ ಎಂದೆಂದಿನ ಮಾತು ಆಡಿಕೊಂಡರು; ಅತ್ತ ವಿಶ್ವಕರ್ಮ ಪಟ್ಟಣ ಕೋಟೆ ಮಾವಟಿ ಕಟ್ಟಿಸಿರಲು ಎಲ್ಲರೂ ಸುದಾಮನನ್ನು ರಾಜವೈಭವದಿಂದ ಎದುರುಗೊಂಡರು. ಕೃಷ್ಣ ಧ್ಯಾನದಿಂದಾತ ಪುರವನಾಳಿ ಸ್ವಜನರಿಂದ ಪರಲೋಕವೇರಿದ. ಹೀಗೆ ಹರಿಯಿಂದ ದೋಷ ಪರಿಹಾರ ಲಾಭಗಳುಂಟು. ಮುಕ್ತಿ ಶಕ್ತಿ ಕೊಡುವ ಪುರಂದರವಿಠಲ[379] (436— 456).

ಬಾಣ ಸಚಿವಸುತೆ ಚಿತ್ರಲೇಖೆ ಬರೆದು ತೋರಿ (ಉಷೆಯು ಸ್ವಪ್ನದಲ್ಲಿ ಸಂಧಿಸಿ)ದ್ದ ಪ್ರದ್ಯುಮ್ನ ಪುತ್ರ ಅನಿರುದ್ಧನನ್ನಪಹರಿಸಿದ ಬಾಣನ 10 ತೋಳು ಕತ್ತರಿಸಿ, ಕೃಷ್ಣ ಮೊಮ್ಮಗನ ಬಿಡಿಸಿ ತಂದ (457).

---

378. ಸಾಂದೀಪನಾಶ್ರಮದ ಸಹಪಾಠಿ ಸುದಾಮ ಬಾಲ್ಯ ಸ್ನೇಹಿತನೆಂದು ಪು.322 ರಲ್ಲೂ ಉಕ್ತ.

379. ಪುರಂದರದಾಸರ ಅಂಕಿತದ ಪ್ರಭಾವ; ಇದರಿಂದ ಕೃತಿ ಕೊನೆಗಾಲದ್ದೆಂದು ಸೂಚಿತ; ಉತ್ತರ ಕರ್ನಾಟಕದ ಭಾಷಾ ಸಂಪರ್ಕವೂ ಇದಕ್ಕೆ ಪೋಷಕ.

ಕೃಷ್ಣನೊಮ್ಮೆ ಅಶ್ವಮೇಧ ಕೈಕೊಂಡಾಗ ಹುಲ್ಲು ಕಟ್ಟಿ ಬಂದ ಬ್ರಾಹ್ಮಣ 'ನನ್ನ ಬಾಲಕರ ರೂಹ ಕಾಣೆನೆ'ಂದ. ಪಾರ್ಥ 'ನಿನ್ನ ಭವನ ತೋರಿಸು, ಬಾಲಕರ ನೆಲಹದಿದ್ದರೆ ಪಾವಕ ಹೋಗುವೆ' ಎಂದು ಹೋಗಿ ಪ್ರಸವ ಕಾಲಕ್ಕೆ ಶರದಿಗ್ಬಂಧನಗೈದರೂ ಮಗು ಕಾಣದಾಯಿತು. ವಹ್ನಿ ಬೀಳಲಿದ್ದ ಪಾರ್ಥನೊಡನೆ ಕೃಷ್ಣ ಅನಂತಾಸನಕ್ಕೈದಿ ಪ್ರಾರಬ್ಧ ಭೋಗಾರ್ಥ ತಾನೇ ಒಯ್ದಿದ್ದ ಕುಮಾರರ ಕರೆಸಿದ. ಯಜ್ಞಶಾಲೆಗೆ ಬಂದು ಸೀಮೆ ಮೀರಿ ಹೋದೆನೆಂದು ಪ್ರಾಯಶ್ಚಿತ್ತ ಕೊಂಡು, ದಾನವಿತ್ತ. ರುಕ್ಮಿಣಿಯೂ ದಾನ ಧರ್ಮಗೈದಳು. ದೇವಕಿ 'ವಿಪ್ರನ ಮಕ್ಕಳಂತೆನ್ನ ಮಕ್ಕಳ ತಂದು ತೋರೆ'ನ್ನಲು ಬಂದ ಮಕ್ಕಳು ಕೃಷ್ಣನುಂಡು ಬಿಟ್ಟ ಮೊಲೆಯುಂಡು ಸದ್ಗತಿಗೆ ಹೋದರು. ಕೃಷ್ಣ ಅಂಗನೆಯರೊಡನೆ ಅವಭೃತಕ್ರೀಡೆ (458—488).

ಗಂಗಾದೇವಿಯ ಒಳಗೆ ಪಾಂಡುರಂಗ ಇಳಿದ
ಅಂಗನೆಯರ್ ನೀರೆಗಳ ಮಾಡೆ ಕಟ್ಟಿದ (489)

ಅಂಬರದ ಅಂಗನೇರು ಶ್ರೀರಂಗನ ಕ್ರೀಡೆ ಕಂಡು
ಅಂಗದಿಂದ ಇಂಥ ಗಂಡನ ಬಯಸುತಿದ್ದರು (492)

ಸುರನಾರಿಯರು ನರಹರಿಯ ಕ್ರೀಡೆಯ ಕಂಡು
ಆದಿಮೂರ್ತಿಗೆ ಜಾಜಿ ಕುಸುಮದ ಮಳೆಯ ಕರೆದರು (493)

ಅನಂತಮೂರುತಿ ಸ್ನಾನವನ್ನೆ ಮಾಡುತಿದ್ದನು (495)
ಅವಭೃತ ಸ್ನಾನವನು ಖಗವಾಹನನಿಂದು ಮಾಡಿ
ಮೃಗವಾಹನ ಮುದದಿಂದ ಬಂದು ಬೀಸಿದ (496)

ನಂತರ ಬ್ರಾಹ್ಮಣರಿಗೆ ಬಾಗಿ ದಾನವಿತ್ತ. ಕೃಷ್ಣಾ ಸ್ನಾನ, ಕೃಷ್ಣಭೃತ್ಯರ ಸಂಗ, ಕೃಷ್ಣ ಶಾಸ್ತ್ರ ಶ್ರವಣ, ಕೃಷ್ಣದರುಶನವಿತ್ತು ರಕ್ಷಿಸೆಂದು ಕವಿ ಕೋರಿದಾಗ್ರೆ ಇಲ್ಲಿ (499—500).

ಬಂಧುಗಳ ಕೊಂದಾವ ಕೃಷ್ಣ, ಅವನ ಕೊಂದೇನೆಂದು ದಂತವಕ್ರ ದಂಡೆತ್ತಿ ಬಂದ. ಸಾಗರದತ್ತ ಸಿಂಹನೋಟ ಬೀರಿ ತಿರುಗಿದ ಕೃಷ್ಣ ಅವನ ತಲೆ ತೆಗೆಯಲು, ತೇಜಸ್ಸು ಹರಿಯ ಸೇರಿತು.[380] (ಜಯ ವಿಜಯರಿಯ ವೈಕುಂಠದ) ಚಿತ್ರ ಜಾವಡಿಗೆ[381] ಬರಲು ಮುಕ್ತಸುರರು ಸ್ವಾಗತಿಸಿದರು (501—505).

---

380. ಶಿಶುಪಾಲ ವಧಾಂತ್ಯಸದೃಶ ಪುನರಾವರ್ತಿತ ನುಡಿ.

381. ವೈ.ವರ್ಣನೆ, 1,76—100ರ ದೇಸೀ ಪದಪ್ರಯೋಗ, 'ಏಕಕರ್ತೃತ್ವಕ್ಕೆ ಅಂತರಿಕ ಪ್ರಮಾಣ.

ದೇವಕಿ 'ಕಂದ, ನಿನ್ನ ಬಾಲಲೀಲೆ ನೋಡುವೆ' ಎನ್ನಲು, ಕುಪ್ಪುಸ ಟೊಂಕಕ್ಕೆ ಸುತ್ತಿ ತೋಳ ತಿದ್ದಿ ನದುವು ಮಾಡಿ ಗಿಳಿ ಕಂಗಳಿಂದ ರಮಣಿ ಪಕಿಯುವಂತೆ ಕುಣಿದ ಕೃಷ್ಣ ರುಕ್ಮಿಣಿ 'ಈ ರೂಪ ಎನಗೆ ಬೇಕು' ಎಂದೆನಿಸಿಕೊಂಡಳು[382] (506—509).

ಇಲ್ಲಿಗೆ ಕಾವ್ಯ ಮುಗಿಸಿ, ಕವಿ ಕಾವ್ಯನಾಮ ಅಂಕಿತಗಳೊಡನೆ ಫಲಶ್ರುತಿಯನ್ನು ಪುನರಾವರ್ತನಗೊಳಿಸಿದ್ದಾರೆ ಶೃಂಖಲಾರೂಪದಿಂದ ವಾದಿರಾಜರು —

'ಏಳು ನೂ(ರ) ಎಪ್ಪತ್ತು[383] ಬಾಲಲೀಲೆ ಕಥೆಗಳನ್ನು
ವಾದಿರಾಜ(ರು) ಮಾಡಿದರು ಒಂದರ್ತಿಯಿಂದಲಿ (510)

ವಾದಿರಾಜರು ಮಾಡಿದ ಬಾಲಲೀಲೆ ಹೇಳಿ ಕೇಳಿದವರಿಗೆ
ಸಾಯುಜ್ಯ ಮುಕ್ತಿ ಕೊಡುವ ಹಯವದನನು[384] (511)

ಪೂರ್ವಾರ್ಧಾಂತ್ಯದ ಮಂಗಳ ನುಡಿಗಳೂ ಇಲ್ಲದ್ದರೆ ಇನ್ನೂ ಚೆನ್ನಾಗಿರುತ್ತಿತ್ತು, ಕಾವ್ಯಕ್ಕೆ ಒಳ್ಳೆಯ ಮುಕ್ತಾಯವೆನಿಸುತ್ತಿತ್ತು; ಇಂಥ ಪುನರಾವರ್ತನ ಕಾವ್ಯಾಂತಕ್ಕೆ ಅವಶ್ಯವೇ. ಈಗ ಇರುವಂತೆ ಒಟ್ಟು 1421 ನುಡಿಗಳಲ್ಲಿ ಎಷ್ಟೋ ನುಡಿ ಸಾಲು ಪದಪುಂಜ ಪುನರಾವರ್ತಿತರಾದರೂ, ಅವೆಲ್ಲ ಅಂತೂ ಸಂದರ್ಭಕ್ಕೆ ಅಗತ್ಯವೆನಿಸಿದ್ದು, ಕೆಲವೆಡೆಯ ಅಲ್ಪ ವ್ಯತ್ಯಾಸವೂ ಕವಿಯ ಜಾಣ್ಮೆಯನ್ನೇ ಸೂಚಿಸುತ್ತವೆ; ಅಲ್ಲದೆ, ಇವುಗಳಿಂದ ಈ ಕೃತಿ ದೇಸಿಯ ಸೊಗಸು ಪಡೆದಿದೆ.

ಈ ಕಾವ್ಯದ ವಸ್ತು ಭಾಗವತ ದಶಮಸ್ಕಂಧವನ್ನಾಧರಿಸಿದ್ದಕ್ಕೇ ಪೂರ್ವಾರ್ಧ—ಉತ್ತರಾರ್ಧವೆಂದು ವಿಭಾಗಗೊಂಡುದು ಸ್ಪಷ್ಟ. 'ರುಕ್ಮಿಣೀಶ ವಿಜಯ'ದಲ್ಲಿ ಈ

---

382. ಕೃಷ್ಣ ದೇವಕಿ ಅರ್ಧ ಕಡೆಯುದನ್ನು ಪೂರೈಸಲು ಕಡಗೋಲು ನೇಣು ಧರಿಸಿ ನಿಂತ ರೂಪು ವಿಶ್ವಕರ್ಮನಿಂದ ಮಾಡಿಸಿಟ್ಟುಕೊಂಡಳು. ಗೋಪೀಸರದ ಚಂದನ ತಿಳಿದು ಉಡುಪಿಗೆ ಬಂತು. (ರಜತಪೀಠ 30; 'ರುಗ್ಮ ಭೂಷಾ' ಕೀರ್ತನೋಕ್ತ).

383. ಈ ಸಂಖ್ಯೆ ಸಂಸ್ಕೃತ—ಕನ್ನಡದ ಎಲ್ಲ ಕೃತಿಗಳಲ್ಲಿನ ಮೊತ್ತವಿರಬೇಕು. ಇದರಿಂದಲೂ ಈ ಕೃತಿ ಕೊನೆಗಾಲದ್ದೆನಿಸುವುದು. ಬಾಲಲೀಲೆಯ ಅಪ್ರಕಟಿತ ಹಾಡುಗಳೂ ಒಂದೆರಡಿರುವುದಿಲ್ಲ ಗಮನಾರ್ಹ.

384. 2 ಅನುಬಂಧ ಕೃತಿಗಳಂತ್ಯ (ಪೂ. 907—908) ಹಾಗೂ ಮಧ್ವನಮಾಲಿ 77ರ ಸಾದೃಶ್ಯ ಪುನರಾವರ್ತನೆ, ಏಕಕರ್ತೃಕತ್ವಕ್ಕೂ ಆಂತರಿಕ ಪ್ರಮಾಣ. 'ಸಾಯುಜ್ಯ', 'ಪಾವನವಾಳ್ವುದು' ಮೊದಲಾದ ಕೀರ್ತನಗಳಲ್ಲೂ ಉಕ್ತವಾಗಿ ವಾದಿರಾಜರ ಒಲವಿಗೆ ದ್ಯೋತಕ.

ಕ್ರಮವಿರದಿದ್ದರೂ 1238 ಶ್ಲೋಕಗಳಲ್ಲಿ 908 ಬಾಲಲೀಲೆಗಳನ್ನೇ ಕುರಿತು, 330 ಮಾತ್ರ ಮುಖ್ಯ ಕಥಾನಕಯುಕ್ತ; ಆ ರುಕ್ಮಿಣೀ ವಿವಾಹವಿಲ್ಲಯ ಉತ್ತರಾರ್ಧ 76–186ರ 110 ನುಡಿಗಳಲ್ಲಿ ಅಡಕ. ಹೀಗೆ ಸಂಸ್ಕೃತ ಕಾವ್ಯಕ್ಕಿಂತ ಮುನ್ನಡೆದು ಮುಗಿದರೂ ಅದು ಮಹಾಕಾವ್ಯ, ಇದು ಖಂಡಕಾವ್ಯ; ಅದು ಮಾರ್ಗ, ಇದು ದೇಸಿ. ಆ ಪಂಡಿತರ ಪ್ರೌಢ ಕಲ್ಪನೆಗಳ ಕಾವ್ಯದ ರೀತಿಗಿಂತ ಈ ಜನಸಾಮಾನ್ಯರ ಕೃತಿಯ ಶೈಲಿ ಸರಳ. 'ಶ್ರೀಕೃಷ್ಣ ಬಾಲಲೀಲೆ' ಇದರ ಹೆಸರಾದರೂ ಕಿಶೋರ ಪ್ರೌಢಲೀಲೆಗಳನ್ನೂ ಒಳಗೊಂಡುದರಿಂದ ವಸ್ತುತಃ ಇದು 'ಕೃಷ್ಣಲೀಲೆ' ಮಾತ್ರ. ಅಥವಾ ಪೂರ್ವಾರ್ಧವನ್ನು 'ಬಾಲಲೀಲೆ' ಎಂದೂ, ಒಟ್ಟು ಕೃತಿಯನ್ನು (ಪೂ.9,904ರಲ್ಲಿ) ವಾದಿರಾಜರೇ ಸೂಚಿಸಿದಂತೆ 'ಕೃಷ್ಣಚರಿತೆ ಗೋಪಾಲಚರಿತೆ' ಎಂದೂ ಕರೆಯಬಹುದು. ವಾದಿರಾಜರು 103 ಅಧ್ಯಾಯಗಳ ದಶಮಸ್ಕಂಧವನ್ನೆಲ್ಲ ಕನ್ನಡಿಸಿದ ಪ್ರಥಮರಾಗಿದ್ದಾರೆ, ಪ್ರಸನ್ನವೆಂಕಟದಾಸರ (1680–1752) 'ಕನ್ನಡ ಭಾಗವತ' ಪೂರ್ವಾರ್ಧದ 48 ಅಧ್ಯಾಯಗಳನ್ನಷ್ಟೇ ಒಳಗೊಂಡಿರುವುದರಿಂದ.

ಪಾತ್ರ

ಕೃತಿನಾಮದಿಂದ ಇಲ್ಲಿ ಕೃಷ್ಣನೇ ಕಥಾನಾಯಕನೆಂಬುದು ಸ್ಪಷ್ಟ. ಅಲ್ಲದೆ ಭಾಗವತ ಮೂಲದಂತೆ, 'ರುಕ್ಮಿಣೀಶ ವಿಜಯ'ದಂತೆ ಅವನ ಪಾತ್ರವಿಲ್ಲಿ ದಿವ್ಯವಾಗಿ ಮೂಡಿರುವುದೂ ಸಹಜ. ಅವನು ಪರಮಾತ್ಮನೆಂಬ ಕಲ್ಪನೆಯಿಂದಲೇ ಕಾವ್ಯದ ಆರಂಭ–ಅಂತ್ಯ. 'ದೇವಕಿಯಲ್ಲವತರಿಸಿ ಅಸುರರ ಕೊಂದು ವಸುಧೆ ಭಾರ ಇಳುಹುವೆನೆ'ಂದು ಅವನೇ ತಿಳಿಸುವ (ಪೂ.16,17). ಶಿಶುಪಾಲ–ದಂತವಕ್ರರ ಕೊಲ್ಲಲು ಅವರ ತೇಜಸ್ಸು ಹರಿಯ ಸೇರಿತು (ಉ.419,504). ಆದರೂ ಅವತಾರ ರೂಪದಲ್ಲಿ ಕೃಷ್ಣ ಹಲವೆಡೆ ಮಾನವೀಯವಾಗಿ ನಡೆದುಕೊಳ್ಳುವುದು ಗಮನಾರ್ಹ. ಅನ್ಯರಿಗೆ ತನ್ನ ದೈವತ್ವ ತಿಳಿಯುವ ಸಂದರ್ಭ ಬಂದಾಗ ಮಾಯಾಜಾಲ ಬೀಸುವನು. ತಾನವತರಿಸುವಾಗ ಎಲ್ಲರಿಗೂ ನಿದ್ರೆ ಕವಿಸಿದ್ದು (ಪೂ.62), ಯಶೋದೆ ತೊಡೆಯಿಂದ ಬಿದ್ದಂತೆ ಜಾರಿದವನ ಆದಿಪುರುಷನೆಂದು ನುತಿಸುವಲ್ಲೂ ವಿಶ್ವರೂಪ ಕಂಡು ನುತಿಸುವಲ್ಲೂ ಬಲೆ ಬೀಸಿದ್ದು (ಪೂ.286,382), ನಾರದರು ಬಂದು ನಿಜಸ್ವರೂಪ ನಿವೇದಿಸಲು ತಾಯ್ತಂದೆಗಳಿಗೆ 'ಅದ್ಯಂತ ಜ್ಞಾನವಾಗದಿರಲೆಂದು ಪುತ್ರಭಾವದಿಂದೆ'ರಗಿದ್ದು (ಪೂ.507), ಬಲರಾಮ ಜೂಜಾಡುತ್ತ ರುಕ್ಮಿಯನ್ನು

ಕೊಂದರೂ 'ಕೃಷ್ಣ ಮುಗುಧನಾಗಿ ತೋರುತಿ'ದ್ದುದು (ಉ·431) ಮೊದಲಾದುವು ಇದಕ್ಕೆ ನಿದರ್ಶನ. ಬ್ರಹ್ಮೇಂದ್ರಾದಿಗಳು ಅಹಂಕರಿಸಿದಾಗಲೂ ಕೃಷ್ಣ ಪರದೇವತೆಯಾಗಿ ಅವರನ್ನು ಮರ್ದಿಸದಿರಲಿಲ್ಲ (ಪೂ·419,599). ಅವನಲ್ಲಿ ಭಕ್ತಿಯುಳ್ಳ ಗೋಪಿಯರಿಗೆ ಅವನ ಸ್ವರೂಪ ಸೂಚಿತವಾದರೂ, ಕೃಷ್ಣ ತಮ್ಮ ವಶವಾದನೆಂದಹಂಕರಿಸಿದಾಗ ಭಕ್ತವತ್ಸಲನಾಗಿ ಅಡಗಿಕೊಂಡಿದ್ದು ಬುದ್ಧಿಗಲಿಸಿದ (ಪೂ·639– 640); ಅದರಂತೆ ಭಕ್ತ ಅರ್ಜುನ ಅಹಂಕರಿಸಿದಾಗಲೂ ಅವನ ಮಿತಿದೋರಿ ಬುದ್ಧಿಗಲಿಸಿದ (ಉ·460– 475). ಶುದ್ಧ ಭಕ್ತಿಯುಳ್ಳ ಋಷಿಪತ್ನಿಯರು – ಅಕ್ರೂರರಿಗೆ ಅನುಗ್ರಹಿಸಿದರೂ, ಕರ್ಮನಿರತ ಋಷಿಗಳಿಗೂ ಸದಾ ಕೃಷ್ಣನ ಸಂಹಾರ ಧ್ಯಾನದಲ್ಲಿದ್ದ ಕಂಸನಿಗೂ ಅವನ ಸ್ವರೂಪವರಿಯಲಿಲ್ಲ. ಕಂಸನ ಕೊಂದು, ಹಿರಿಯರ ಕಂಬನಿ ತೊಡೆದು ಎರಗುವಲ್ಲಿಯೂ ಅವನ ಮಾನವೀಯ ನಡೆ ಸ್ಪುಟವಾಗಿ ಚಿತ್ರಿತ (ಪೂ·875 – 895). ನಂದನಿಗೆ 'ತಂದೆಯೆಂದದಿ ನಲಹದಿಂ ಎಂದಿಗೂ ಮರೆಯವೆ'ನ್ನಲು ಆತ ಮಾನವಾಗಿ ಬಿಡುವ (ಪೂ·898– 900). ಕೃಷ್ಣನ ದಿವ್ಯತ್ವ ಮಾನವೀಯತೆಗಳಿಗಿದು ಧ್ವನಿಪೂರ್ಣ ವ್ಯಾಖ್ಯಾನ! ಜರಾಸಂಧನನ್ನು 18 ಸಲ ಸೋಲಿಸಿದರೂ ಹೆಚ್ಚು ಹಿಂಸೆಯಾಗದಿರಲು ಉಪಾಯವಾಗಿ ದ್ವಾರಕೆಗೆ ಸರಿದುದು ಕೃಷ್ಣನ ಮುತ್ಸದ್ದಿತನ; ಹಾಗೆಯೇ ಬೆನ್ನಟ್ಟಿದ ಕಾಲಯವನನನ್ನು ಮುಚುಕುಂದನಿಂದ ಸುಡಿಸಿ ಆ ಭಕ್ತನನ್ನುದ್ಧರಿಸಿದ್ದೂ ಕೃಷ್ಣನ ಗುರಿಸಾಧನೆಗೆ ಕುರುಹು (ಉ·41,61 – 69). ಆತ ಅಣ್ಣನೊಡನೆ ಗೋಮಂತಕ ಪರ್ವತಾಗ್ರದಲ್ಲಿರುತ್ತ, ಗರುಡನು ಬಲಿ ಕದ್ದ ಹರಿಯ ಕಿರೀಟ ತಂದು ಕೃಷ್ಣಗಿತ್ತುದು ಅವನ ಅವತಾರ ಸ್ವರೂಪಕ್ಕೆ ತರ್ಕಧ್ವನಿ (ಉ·48 – 54)! ಅಂತೆಯೆ ಕಂಸನ ರಾಜ್ಯವನ್ನು ಉಗ್ರಸೇನಗಿತ್ತು, ಶ್ರೀದೇವಿ ರುಕ್ಮಿಣಿಯನ್ನಪಹರಿಸಿ, ಜಾಂಬವಂತಗೆ ರಾಮರೂಪದೋರಿ, ಸ್ಯಮಂತಕವನ್ನು ಸತ್ರಾಜಿತಗಿತ್ತು, ಜಾಂಬುವತಿ– ಭಾಮೆಯರ ಕೈಹಿಡಿದ (ಉ·76– 205). ಶ್ರೀದೇವಿ ಸೇವಿತನಾದರೂ ಸಹಪಾಠಿ ಸುದಾಮ ಕುಚೇಲನಾಗಿ ದಂಪತಿಗಳವನ ಸೇವೆಗೈದು, ಮುಷ್ಟಿ ಅವಲಕ್ಕಿಗೇ ಮೋಕ್ಷವಿತ್ತ ಕೃಷ್ಣ (ಉ·436– 456). ಇಂಥ ಪರದೇವತೆ ಅಶ್ವಮೇಧ ಕೈಕೊಂಡು, ಅರ್ಜುನಗೆ ಬುದ್ಧಿಗಲಿಸಲು ಅನಂತಾಸನಕ್ಕೆ ಹೋಗಿ ಬಂದ ಸೀಮೋಲ್ಲಂಘನೆಗೆ ಪ್ರಾಯಶ್ಚಿತ್ತ ಕೊಂಡನೆಂಬುದು ಕೇವಲ ಲೋಕಶಿಕ್ಷಾರ್ಥ (ಉ·475)! ಹೀಗೆ ಕೃಷ್ಣನ ಯಾವ ಲೀಲೆಯನ್ನು ಪರಿಶೀಲಿಸಿದರೂ ಅವನ ನಡೆ ಆದರ್ಶಪೂರ್ಣವಾಗಿ ಆತ ಪುರುಷೋತ್ತಮನೆನಿಸುವ. ಇಂತು ದೈವೀಕಲ್ಪನೆಯು ಕಾವ್ಯದಲ್ಲಿ ಕೆಲವೆಡೆ ಆತ ಅಮಾನುಷಾತೀತ ವರ್ತನೆದೋರಿದರೆ, ಅದು ಕೇವಲ ಸಹಜ.

ಇನ್ನು ಈ ಖಂಡಕಾವ್ಯದಲ್ಲಿ ಕಥಾನಾಯಿಕೆ ರುಕ್ಮಿಣಿಯ ಚೆಲುವು, ಅಭಿಮಾನ, ಸೌಕುಮಾರ್ಯ (ಉ·141,361), ಅವಳ ಪ್ರತಿಸ್ಪರ್ಧಿ ಭಾಮೆಯ ಪ್ರೇಮ, ಮಾತುಗಾರಿಕೆ (ಉ·301) ಮುಂತಾದ ಕೆಲ ಅಂಶ ಸೂಚಿತವಾದರೂ, ಈ ಪಾತ್ರಗಳ ಚಿತ್ರಣಕ್ಕೆ ಹೆಚ್ಚು ಅವಕಾಶವಾಗಿಲ್ಲ; ಕೃಷ್ಣನ ಕುಟುಂಬದ ಇತರ ವ್ಯಕ್ತಿಗಳಾಗಲಿ, ಪ್ರತಿನಾಯಕ ಕಂಸ ಶಿಶುಪಾಲಾದಿಗಳಾಗಲಿ ಕೃಷ್ಣನಂತೆ ಪೂರ್ಣಪಾತ್ರಗಳಾಗಿ ಅರಳಿಲ್ಲ, ಅವನ ಲೀಲೆಗಳ ಸಂಗ್ರಹದ ಭರದಲ್ಲಿ.

## ಶೈಲಿ

ಭಾಗವತದ 103 ಅಧ್ಯಾಯಗಳ ವಿವರ ಬರಿ 1421 ದ್ವಿಪದಿಗಳಲ್ಲಿದ್ದ ಕಾರಣ, ವಾದಿರಾಜರು ಮುಕ್ಕಾಲು ಭಾಗ ಬಿಟ್ಟು ಕಾಲುಭಾಗ ಸಂಗ್ರಹಿಸಿರುವರು· ಆದರಿಂದ ಮೂಲದ ಎಷ್ಟೋ ಅಮುಖ್ಯ ಕಥಾಪ್ರಸಂಗ – ವರ್ಣನೆ ಇಲ್ಲಿ ಬಂದಿಲ್ಲ· ಉದಾಹರಣೆಗೆ – ಕೃಷ್ಣ ಅಡಗಿದಾಗಿನ 'ಗೋಪೀಗೀತೆ' ಇಲ್ಲಿಲ್ಲ· ವಿಶೇಷವಾಗಿ ಸಂಗ್ರಹಗೊಂಡ ಉತ್ತರಾರ್ಧದಲ್ಲಿ ಒಂದೊಂದು ಅಧ್ಯಾಯದ ವೃತ್ತಾಂತ ಒಂದೆರಡೇ ನುಡಿಗಿಳಿದುದರಿಂದ ಮೂಲಕಥೆ ಅರಿಯದೆ ಸೂಚನೆ ಸ್ಪಷ್ಟವಾಗವು· 90ನೆಯ ಅಧ್ಯಾಯದ ಸಾಂಬವಿಮೋಚನೆ 426ರಿಂದ ಮೂರೇ ನುಡಿಗಳಷ್ಟಿದೆ· ಪ್ರದ್ಯುಮ್ನನು ಶಂಬರನಿಂದ ಪಾರಾಗಿ ಬರುವ 68ನೆಯ ಅಧ್ಯಾಯದ ವೃತ್ತ, ರುಗ್ಮವತಿಯನ್ನು ವರಿಸುವ 75ನೆಯ ಅಧ್ಯಾಯದ ವೃತ್ತಗಳೆರಡೂ 429ರಲ್ಲಿವೆ· 85ನೆಯ ಅಧ್ಯಾಯದ (ನೃಗರಾಜನ) ಕಥೆ 434ರಿಂದ 2 ನುಡಿಗಳಲ್ಲಿ ಮೂಡಿದೆ· ಅನಿರುದ್ಧ ವಿವಾಹದ 77ನೆಯ ಅಧ್ಯಾಯ 457ರಲ್ಲಿ ಬಂದಿದೆ· ಇದರಿಂದ ವಾದಿರಾಜರು ಮೂಲದ ಅನುಪೂರ್ವಿಯನ್ನನುಸರಿಸದೆ ಪ್ರಸಂಗಗಳನ್ನು ಹಿಂದು ಮುಂದು ಮಾಡಿಕೊಂಡುದೂ ಸುವ್ಯಕ್ತ· ಮಾತ್ರವಲ್ಲ, ದೇಸೀಯ ಕಾವ್ಯ ರಚಿಸ ಹೊರಟುದರಿಂದ, ಮೂಲ ಹಾಗೂ ಮಾರ್ಗ ಕಾವ್ಯದಲ್ಲಿರದ ಎಷ್ಟೋ ವರ್ಣನಾವಸರ ಇಲ್ಲಿವೆ· ಉದಾಹರಣೆಗೆ, ಕೃಷ್ಣ ಜನ್ಮೋತ್ಸವದಲ್ಲಿ ಗೋಪಿಯರು ದಶಾವತಾರಿಗೆ ನೀರೆರೆವುದು, ಸಕ್ಕರೆ ಬೀರಿ ಆರತಿ ಎತ್ತುವುದು, ನಾಮಕರಣದಲ್ಲಿ ಸಂಭ್ರಮದಿಂದ ತೊಟ್ಟಿಲಿಕ್ಕಿ ಹಾಡುವುದು (ಪೂ·122—262)· ವಾದಿರಾಜರು ಇವನ್ನು ಕೇವಲ ಕಲ್ಪಿಸದೆ ಕನ್ನಡ ನಾಡಿನಲ್ಲಿ ಕಂಡಂತೆ ಬಣ್ಣಿಸಿದ್ದು ಇವುಗಳ ವಾಸ್ತವತೆಗೆ ಕಾರಣ· ಇವುಗಳಿಂದ ಕೃತಿ ಕೇವಲ ಸಂಗ್ರಹಾನುವಾದವೆನಿಸದೆ, ಸ್ವತಂತ್ರ ದೇಸೀಯ ಸೊಬಗು ಪಡೆದಿದೆ·

ಕಥಾವಸ್ತುವಿನಲ್ಲಿಯ ಹೆಚ್ಚು ಕಡಿಮೆಗೊಳಿಸುವ ಅವಕಾಶ ಪಡೆದರೂ, ವಾದಿರಾಜರು ಕೃಷ್ಣನ ಹಾಗೂ ಇತರರ ಪಾತ್ರ ಚಿತ್ರಣದಲ್ಲಿ ವಿಶೇಷ ವ್ಯತ್ಯಾಸಗೈದಿಲ್ಲ. ಮೂಲದ ಕಲ್ಪನೆಯೇ ಇಲ್ಲೂ ಪಡಿಮೂಡಿದೆ. 'ರುಕ್ಮಿಣೀಶ ವಿಜಯ' ಮಹಾಕಾವ್ಯದಲ್ಲಿ ಭಕ್ತಿಯೊಡನೆ ದೈವೀ ಶೃಂಗಾರ ಹೆಚ್ಚು ಸೇರಿದ್ದರೂ, ಇಲ್ಲಿ ಮೂಲದಂತೆ ಭಕ್ತಿಪ್ರಧಾನವಾಗಿ ಬಂದಿದೆ. ಕೃಷ್ಣನ ದಿವ್ಯ ಪಾತ್ರದ ಕಲ್ಪನೆ ಉಭಯತ್ರ ಇದ್ದರೂ, ಇಲ್ಲಿಯ ಲೀಲೆಗಳು ಭಕ್ತಿಭಾವವನ್ನೇ ಸೂಸಿವೆ. ಶೃಂಗಾರ ಬಂದಿದ್ದರೂ ಆನುಷಂಗಿಕವೆನಿಸಿದೆ.

ಹೀಗೆ ಮೂಲವನ್ನೇ ಆದಷ್ಟು ಕನ್ನಡಿಸಿದ ಇವರ ರೀತಿ ಮಾತ್ರ ದೇಸೀಯವಾದ್ದರಿಂದ ಇಲ್ಲಿಯ ವರ್ಣನೆ, ಸಂಭಾಷಣೆ, ಛಂದೋಲಂಕಾರ, ಪದವಿನ್ಯಾಸಗಳೆಲ್ಲ ದೇಸೀಯ ಸೊಗಡಿನಿಂದ ಕೂಡಿವೆ. ಉದಾಹರಣೆಗೆ — ಕೃಷ್ಣ ಜನ್ಮೋತ್ಸವದ (122— 262) ಕೆಲ ನುಡಿಗಳನ್ನಿಲ್ಲಿ ನೋಡಬಹುದು:

ಪೂತನಾ ಸಂಹಾರಿ ತೊಟಿಲಲ್ಲಿರುವ ಚಿತ್ರವಿದು —

ಕವಡೆ ಭುಜಧಾರಗಳ ಹೊನ್ನ ಕಂಕಣದ ನಡುವೆ
ಕಮಲನಾಭನ ತೋಳು ತೊಡೆಯುಲೊಪ್ಪುತಿದ್ದಿತು (162)

ಎಂಟು ಮುತ್ತಿನ ಚಾವಳಿ ಎಂಟು ಮುತ್ತಿನ ಚೌಕುಳಿ
ಕೃಷ್ಣನ ಕಿವಿಗೆ ಜರಿವ ಕುಂಡಲವನಿಟ್ಟರು (194)

ಬಾಲೆಯರೆಲ್ಲರು ಮೋಹಿಸಬೇಕೆನುತ
ಮೂಗುತಿಯನಿಟ್ಟರು ಮುದ್ದು ಕೃಷ್ಣಗೆ (195)

ಹಾರಸರಗಳನೆ ಹಾಕಿ ತೋಳು ಬೊಟ್ಟುಗಳನೆ ಕಟ್ಟಿ
ಘೋರವಾದ ಮುಂಗೈಯ ಮುರಾರಿಗಿಟ್ಟರು (216)

ಕಂದನ ಕಾಲಡಿಯಲಿ ಕಡಲೆ ಗುಗ್ಗರಿ ಇಟ್ಟು
ಅಂಗನೆಯರು ತಂದು ತೊಟ್ಟಿಲೊಳಗೆ ಇಟ್ಟರು (231)

ಅಡಿಗೆಯ ಮನೆಯೊಳಗೆ ಅರವ ಗುಂಡಪ್ಪನ
ಹರದಿಯರು ತಂದು ತೊಟ್ಟಿಲೊಳಗೆ ಇಟ್ಟರು (232)

ಮುತ್ತೈದೆಯರು ಮುಂದೆ ಬಂದು ಮುತ್ತಿನ ಕದವ ಹಿಡಿದು
ಹೊಸ್ತಿಲೊಳಗೆ ಗಂಡನ್ಹೆಸರ ಹೇಳು ಎಂದರು (252)

ಮಿತ್ರೆಯರಿಬ್ಬರು ಹೊಸ್ತಿಲ ಹಿಡಿದು ನಿಂತು
ಅಲ್ಲಿಯಿಂದ ಗಂಡನ್ಹೆಸರ ಹೇಳುತಿದ್ದರು (266)

ಬಾಲಕಿಯರೆಲ್ಲರು ಬಾಗಿಲುಗಳ ತೆರೆದುಕೊಂಡು
ಬೇಗದಿಂದ ತಮ್ಮ ಮನೆಗೆ ಪೋಗುತಿದ್ದರು (261)

ಅಮೂಲ್ಯವಾದ ಇಂಥ ವರ್ಣನೆಗಳಲ್ಲಿ ಇಂದಿಗೂ ಜೀವಂತವಾಗಿರುವ ನಮ್ಮ ನಾಡ ಸಂಸ್ಕೃತಿ ಪಡಿಮೂಡಿದೆ. ಪು.517ರಿಂದಾರಂಭಿಸಿ ನೂರಾರು ನುಡಿಗಳಲ್ಲಿ ಹಲವು ಸೊಗಸಾದ ವರ್ಣನೆಗಳಿದ್ದು, ಅಂತರ್ಧಾನನಾದ ಕೃಷ್ಣನನ್ನರಸುತ್ತ ಗೋಪಿಯರು ಜಡ ಜಾತಿಯನ್ನು ಪ್ರಶ್ನಿಸಿ ಸ್ವಾರಸ್ಯಕರ ಉತ್ತರ ಪಡೆವ ಶೃಂಖಲಾರೂಪದ ಪ್ರಾಸಪೂರ್ಣ ನುಡಿ ಜೋಡು 642–660ರಲ್ಲಿರುವುದನ್ನಾಗಲೇ ಲಕ್ಷಿಸಿದ್ದೇವೆ. ಗೋಪೀ ಕೃಷ್ಣರ ರಾಸಕ್ರೀಡೆ (675–679), ಜಲಕ್ರೀಡೆ (686–692)ಯ ಬಣ್ಣನೆಗಳನ್ನು ವಸ್ತುವಿವೇಚನೆಯಲ್ಲಿ ಬಗೆದಿದ್ದೇವೆ. ಆಕ್ರೂರನ ಉಪಚಾರವಿದು —

ಲಾಳ ದೀವಿಗೆಯನಿಟ್ಟು ಥಾಲಿ ಹರಿವಾಣ ಬೆಳಗಿ
ಮಾಣಿಕದ ಬಟ್ಟಲ ತಂದು ನಡುವೆ ಇಟ್ಟಳು (733)

ಪಾತ್ರಾಭಿಘಾರವ ಮಾಡಿ ಪಾಯಸವ ಬಡಿಸಿದರು
ಉಪ್ಪು ಉಪ್ಪಿನಕಾಯಿ ಬಟ್ಟಲಗಳ (734)

ಸೂರ್ಯಮಂಡಲ ಪೋಲುವ ಹೋಳಿಗೆ ಗುಳ್ಳೋರಿಗೆ
ನಾರಿಸಂದನಗೋಪಿ ತಂದು ಬಡಿಸುತಿದ್ದಳು (737)

ಚಂದ್ರಮಂಡಲ ಪೋಲುವ ಮಂಡಿಗೆ ದೋಸೆಗಳನು
ರಂಭೆ ನಂದನ ಗೋಪಿ ತಂದು ಬಡಿಸುತಿದ್ದಳು (738)

ಎಡೆಮಾಡಿ ಯಶೋದಾದೇವಿ ಷಡ್ರಸಾನ್ನವನು ಬಡಿಸೆ
ಶೋಧಿಸಿ ಎರೆದಳ್ ತಿಳಿತುಪ್ಪವ (739)

ಮುಖ್ಯಭಾವ ಮೂಲಾನುಸಾರಿಯಾದರೂ ರುಕ್ಮಿಣಿಯ ಚೆಲುವನ್ನು ಬಣ್ಣಿಸಿದ ನುಡಿಗಳಿವು ದೇಸೀಯ ಶೈಲಿಯಲ್ಲಿವೆ (ಉತ್ತರಾರ್ಧದಲ್ಲಿ) —

ರಾಜೀವಲೋಚನೆ ಹಂಸಗಾಮಿನಿ ನಡೆದು ಬರಲು
ವಸುಧೆ ರಾಯರೆಲ್ಲರೂ ಮೂರ್ಛೆಗೈದರು (141)

ಅರಳುಗಂಗಳ ಬಾಲೆ ಎಡಗೈಯಿಂ ಕುರುಳ ತಿದ್ದಿ
ಎದುರಾಗಿ ನೋಡುತಿದ್ದಳು ಶ್ರೀಹರಿಯ ರಥವನ (142)

ರುಕ್ಮಿಣಿಯ ವಿವಾಹದಲ್ಲಿ ಮನೆ ತುಂಬಿಸಿಕೊಳ್ಳುವಾಗ ಹೊಸ್ತಿಲೊಳಗಿಟ್ಟ ಮಾಣಿಕ್ಯದ ಬಟ್ಟಲು—ಮಾನಗಳನ್ನೆಡವಿಸಿದ್ದೂ ಸುಭದ್ರೆ ಮಗಳ ಬೇಡಿದ್ದೂ ನಮ್ಮ ದೇಸೀಯ ಪದ್ಧತಿಗಳೇ.

ಆಗಿನ ಕೃಷ್ಣ–ಸುಭದ್ರೆಯರ ಸಂವಾದವೂ ದೇಸೀಯ ನುಡಿಗಳಿಂದ ಕೂಡಿರುವುದನ್ನಾಗಲೇ ಸಮಾಲೋಚಿಸಿದ್ದೇವೆ. ಇಂಥ ದೇಸೀಯ ಸೊಬಗನ್ನು ಮೂಲದಲ್ಲಿ ಕಾಣಲಾರೆವು. ಎಷ್ಟೋ ಕಡೆ ಇಡಿಯ ನುಡಿ, ಸಾಲು, ಪದಗಳನ್ನು ಪುನರಾವರ್ತಿಸುವ, ಜಾಣ್ಮೆಯಿಂದ ತುಸು ವ್ಯತ್ಯಾಸಗೊಳಿಸುವ ತಂತ್ರವಿಶೇಷವೂ ಈ ಕಾವ್ಯದ ದೇಸೀಯ ಕಾಂತಿಯನ್ನು ಹೆಚ್ಚಿಸಿದೆ. ಮೇಲೆ ಉದಾಹರಿಸಿದ 231–232, 737–738 ರಲ್ಲೇ ಇಂಥ ನಿದರ್ಶನವಿದೆ; ಇವನ್ನು ಕಾವ್ಯದುದ್ದಕ್ಕೂ ಕಾಣಬಹುದು.

ಈ ಕೃತಿ ವಿವೇಚನೆಯ ಆರಂಭದಲ್ಲಿ ನಿರೂಪಿಸಿದಂತೆ ಇಲ್ಲಿಯ ಛಂದಸ್ಸೂ ದೇಸೀಯ ಅಂಶಗಳಿಂದ ಯುಕ್ತವೆಂಬುದು ಸ್ಪಷ್ಟ. ಮೊದಲ ನುಡಿಯ ವಿಶ್ಲೇಷಣೆಯಿಂದ ಇಲ್ಲಿ ಬ್ರಹ್ಮಗಣಪ್ರಧಾನ ಅಂಶಗಳ ದ್ವಿಪದೀ ಛಂದಸ್ಸನ್ನು ವಾದಿರಾಜರು ನಿರ್ಮಿಸಿಕೊಂಡಿರುವುದೂ ಸುವ್ಯಕ್ತ. ಕೆಲವೆಡೆ ವಿಷ್ಣು–ರುದ್ರಗಣಗಳಿದ್ದರೂ, ಉತ್ಸಾಹಲಯದ ಭೋಗಷಟ್ಪದಿಯ ಧಾಟಿಯಲ್ಲಿರುವ ಇದರ ಸುಖವಾದ ಓಟ ಜನಸಾಮಾನ್ಯರ ಬಾಯಲ್ಲಿ ಕಥೆಯನ್ನು ತುಂಬ ಸುಗಮಗೊಳಿಸಿಕೊಂಡು ಹೋಗುವಂಥದು. 'ಅವತಾರತ್ರಯ ಸುವ್ವಾಲಿ'ಯಲ್ಲೇ ಬಳಕೆಗೊಂಡ ಛಂದವಿದು ವಾದಿರಾಜ– ಕನಕದಾಸರ 'ಕೇಶವನಾಮ'ದಂತಹ ದಾಸಸಾಹಿತ್ಯದ ಕೃತಿಗಳಿಗೂ ಹೊಂದಿಕೊಂಡಿದೆ.

ಇದಕ್ಕನುಗುಣವಾಗಿ ಇಲ್ಲಿಯ ಭಾಷೆಯೂ ತುಂಬ ತಿಳಿಯಾಗಿದೆ. ಇದು ನಡುಗನ್ನಡವಾದರೂ ಮಾರ್ಗ ಕಾವ್ಯಗಳಂತೆ ಪ್ರೌಢವಾಗದೆ ಹೊಸಗನ್ನಡದಂತೆ ಸುಲಭವಾಗಿದ್ದು, ಕಥಾನಕವನ್ನು ಸಾಮಾನ್ಯರಿಗೆ ಮುಟ್ಟಿಸುವಲ್ಲಿ ಯಶಸ್ವಿಯಾಗಿದೆ. ಹಳಗನ್ನಡದ ವ್ಯಂಜನಾಂತ ಪ್ರಯೋಗ ಇಲ್ಲಿ ಇಲ್ಲವೇ ಇಲ್ಲವೆಂಬಷ್ಟು ವಿರಳ. ಆದರೆ 'ಪ–ಹ' ಅಕ್ಷರಗಳೆರಡೂ ಒಂದೇ ನುಡಿಯಲ್ಲಿರುವಷ್ಟು ಮಿಶ್ರಿತ. (ಮೇಲೆ ಉದ್ಧರಿಸಿದ ಪು.252, 261ರಲ್ಲೇ ನಿದರ್ಶಿತ). 'ವಸುಧೆಭಾರ'ದಂತಹ ಷಷ್ಠೀಲೋಪದ ಪ್ರಯೋಗಗಳು ಹೇರಳ. ಆದರೆ ಭಾಷಾ ದೃಷ್ಟಿಯಿಂದ ಇದರಲ್ಲಿ ಎದ್ದು ಕಾಣುವ ಅಂಶ ದೇಸೀ ಪ್ರಯೋಗ. ಸಾಮಾನ್ಯರನ್ನುದ್ದೇಶಿಸಿದ ಈ ಕೃತಿಯಲ್ಲಿ ಅದರ ಪ್ರಮಾಣವೂ ಹೆಚ್ಚಿದೆ. ಉದಾಹರಣೆಗೆ — ಹೊಳೆ,ತಳಿಗಿ, ಮೆಚ್ಚಾಳುವ, ಸವನ, ಉಂಬ, ಕಾಂಬ, ಬಾಹ, ಕೂತನು, ಆದಾವ, ದಾರಿಗೆ ಕೈರಿ, ಎಂತ, ಶುರುವಾದವು, ಜೋಡಲ್ಲ, ಏಸು, ಎಷ್ಟೆಂತ, ಸಂಗಾತ, ಹಸಗೆಟ್ಟು, ವಾಳೆ,

ಕುತ್ತಿಗುದ್ದು, ಹಾಸಿಕಿಂಡ, ಎಡವಾಡಿ, ಮುಂಜಾನೆ, ಕಂಡಿ, ಪೋರ, ತಾಯವ್ವ, ಪಾಲಸೋದು, ಹಾಕ್ಗೆ, ಬಂಗಾರ, ಮೋರೆ, ಮೋತಿ, ಅಂಗಸೇರ, ಮಗನೆ, ಮುತ್ಯ, ಘಟ್ಯಾಗಿ, ತಕ್ಕಿ, ಕೊಂದಾವ, ಯಾತರ, ಯಾವಲ್ಲಿಗ್ಹೋಗುವಿ, ಕಡವ್ಯಾದೀತು, ಕಳುಹಿಸ್ಯೇನು, ನೀಡ್ಯಾರಲೋ' ಇತ್ಯಾದಿ. ಇವುಗಳಲ್ಲಿ ಕೆಲವು ಕೇವಲ ಉತ್ತರ ಕರ್ನಾಟಕದ ಪ್ರಯೋಗಗಳಾಗಿದ್ದು, ವಾದಿರಾಜರು ನೋಡಗೆ ಬಂದ ಕೊನೆಗಾಲದಲ್ಲಿ (1582– 1600) ಅವರ ಭಾಷೆ ಸೇರಿ ಬಳಕೆಗೊಂಡಂತಿದೆ. ಉ.455ರ 'ಪುರಂದರವಿಠಲ' ಎಂಬ ಪ್ರಯೋಗವೂ ಇದರ ಪುರಂದರೋತ್ತರ ಕಾಲದ ರಚನೆ ಸೂಚಕ.[385] ಇದರಂತ್ಯದ 770 ಬಾಲಲೀಲೆಗಳ ಮೊತ್ತ ರಚಿತವೆಂಬ ಉಕ್ತಿಯೂ ಇದು ಕೊನೆಗಾಲದ ಕೃತಿ ಎನ್ನಲು ಪೋಷಕ.[385] ಇದರಲ್ಲಿ 'ಬಚ್ಚಂಬಲೆ ಅಸುಳೆ – ಕೊಡದ್ರಿ – ಎಂತ' ಎಂಬಂಥ ಕೆಲ ವಿಶಿಷ್ಟ ಪ್ರಯೋಗ ಹಾಗೂ ಪ್ರತಿಕಾರರ ಅಜ್ಞಾನದಿಂದುಳಿದ ಪ್ರಶ್ನಾರ್ಥಕ ತಪ್ಪುಗಳಿದ್ದರೂ, ಒಟ್ಟು ಕಾವ್ಯ ಅರ್ಥವಾಗಿ ರಸಾನುಭವ ಹೊಂದಲು ಯಾವ ಅಡ್ಡಿಯೂ ಇಲ್ಲ.

ರಸದ ವಿಷಯದಲ್ಲಿದು 'ರುಕ್ಮಿಣೀಶ ವಿಜಯ'ದಂತೆ ವಿವಾದ್ಯವಲ್ಲ. (ಅದು ಮಾಘ ಕಾವ್ಯದೊಡನೆ ಸ್ಪರ್ಧಿಸ ಹೊರಟು ಶೃಂಗಾರವನ್ನು ಭಕ್ತಿಯ ಸಮಕ್ಕೆ ಹೆಚ್ಚಿಸಿಕೊಂಡು ಪ್ರಧಾನರಸವಾವುದೆಂದು ವಿವಾದ್ಯ, 'ಗದಾಯುದ್ಧ'ದಂತೆ). ಪ್ರಸ್ತುತ ಕೃತಿಯಲ್ಲಿ ಶೃಂಗಾರಾದಿಗಳು ಪ್ರಸಂಗೋಚಿತವಾಗಿದ್ದರೂ ಭಕ್ತಿರಸವೇ ಮುಖ್ಯ. ಭಾಗವತ ಮೂಲಾನುಸಾರ ಕೃಷ್ಣ ಪಾತ್ರದ ದೈವೀ ಪರಿಕಲ್ಪನೆಯಿಂದ ಅವನ ಲೀಲೆಗಳಲ್ಲಿ ಭಕ್ತಿಭಾವವೇ ಇಲ್ಲಿ ಸ್ಥಾಯಿಯೂ ಎಂಬುದನ್ನು ನಮ್ಮ ಅನುಭವಕ್ಕೆ ತಂದುಕೊಡುತ್ತವೆ.

ಅಲಂಕಾರಗಳ ವಿಷಯದಲ್ಲಿ 'ರುಕ್ಮಿಣೀಶ ವಿಜಯ'ವು ಉತ್ಪ್ರೇಕ್ಷೆಯನ್ನು ವಿಶೇಷವಾಗಿ ಬಳಸಿದಂತೆ, ಪ್ರಸ್ತುತ ಕೃತಿ ವಾದಿರಾಜರ ವೈಶಿಷ್ಟ್ಯವೆನಿಸಿದ ಪ್ರಾಸಾನುಪ್ರಾಸಾಲಂಕಾರಗಳನ್ನೇ ಹೆಚ್ಚಾಗಿ ತೋರಿದೆ ಎನ್ನಬೇಕು. ಕೆಲವು ನುಡಿಗಳಲ್ಲಿ ಆದಿ ಪ್ರಾಸವಿರದಿದ್ದರೂ ಅನುಪ್ರಾಸ ವಿರುತ್ತದೆ, ಇಲ್ಲ ಅಂತ್ಯ ಪ್ರಾಸ ಬರುತ್ತದೆ. ಉದಾಹರಣೆ –

---

385. ಅನುಬಂಧಿಕ ಕೃತಿಯಂತ್ಯದಲ್ಲಿ ಮಾತ್ರ ಈ ಅಂಕಿತ ಪ್ರಕ್ಷಿಪ್ತವಾಗಿದೆ 'ಹಯವದನ'ದ ಜಾಗದಲ್ಲಿ; ಇದು ಬಾಲಲೀಲೆ.

ಶಂಖ ಚಕ್ರ ಗದಾ ಪದ್ಮ ಅಂಕಿತ ಪೀತಾಂಬರ ಉಟ್ಟ
ಪಂಕಜಾಕ್ಷನ ಕಂಡು ಅವರು ಶಂಕಿಸಿದರು (ಪೂ·73)

ಲಕ್ಷ್ಮೀಶ ಎನ್ನ ಅಪರಾಧವನ್ನು ಕ್ಷಮಿಸಬೇಕು
ಕುಕ್ಷಿ ಒಳಗೆ ಇಟ್ಟು ನನ್ನ ರಕ್ಷಿಸೆಂದನು (ಉ· 199)

ಕನ್ನಡದ ವಿಶೇಷವೆನಿಸುವ ಪ್ರಾಸ ವಾದಿರಾಜರ ಎಲ್ಲ ಕೃತಿಗಳಲ್ಲೂ ಇದ್ದು, ಅವರ ಸಂಸ್ಕೃತ ಕೃತಿಗಳಿಗೂ ಹಬ್ಬಿರುವುದು ಕನ್ನಡದ ಪ್ರಭಾವವೇ ಸರಿ. ಈ ಕೃತಿಯಲ್ಲಿ ಇತರ ಅಲಂಕಾರಗಳೂ ಹಿತಮಿತವಾಗಿದ್ದು ರಸವನ್ನು ಪೋಷಿಸಿವೆ.

ವಾದಿರಾಜರ ಇಡಿಯಾದ ಕನ್ನಡ ಕೃತಿಗಳಲ್ಲಿ ಕೆಲವರಿಂದ ಕಾವ್ಯವೆನಿಸಿಕೊಂಡ 'ಲಕ್ಷ್ಮೀಶೋಭಾನೆ' ಲಕ್ಷ್ಮೀ ಸ್ವಯಂವರ ವೃತ್ತಾಂತಯುಕ್ತವಾದರೂ, ಅದು ಹರಿಸರ್ವೋತ್ತಮತ್ವ ಸಮರ್ಥನೆಗೆ ಬಳಕೆಗೊಂಡು ಶಾಸ್ತ್ರ ಭಾಗ ಹೆಚ್ಚಿದೆ. ಪ್ರಸ್ತುತ ಕೃತಿಯಲ್ಲಿ ತತ್ತ್ವಭಾಗ ಅಲ್ಲಿ ಇಲ್ಲಿ ಸೂಚಿತವಾದರೂ (ಪೂ·582, ಉ·51–53, 64–67, 345–348) ಅದೇ ಮೇಲ್ಗೈಯಾಗಿಲ್ಲ. ಆದ್ದರಿಂದ ಇಡಿಯ ಕನ್ನಡ ಕೃತಿಗಳಲ್ಲಿದೇ ಶುದ್ಧ ಕಾವ್ಯವೆನಿಸಿಕೊಳ್ಳಲು ಅರ್ಹವಾಗಿದೆ. ವಾದಿರಾಜರಂಥ ದಾರ್ಶನಿಕ ಕವಿವರ್ಯರು ದಶಮಸ್ಕಂಧದ ತಾತ್ತ್ವಿಕ ಭಾಗಗಳನ್ನೆಲ್ಲ ಸವರಿ ಕೃಷ್ಣನ ಲೀಲೆಗಳನ್ನಷ್ಟೇ ಕನ್ನಡಿಸಿ ಇಷ್ಟೊಂದು ಲಲಿತ ಕೃತಿ ರಚಿಸಿದ್ದೇ ಅಚ್ಚರಿ! ಇದನ್ನು ಲಕ್ಷಿಸದವರಿಗೆ 'ವೈಕುಂಠ ವರ್ಣನೆ ವಾದಿರಾಜರಚಿತ ಕಾವ್ಯಗಳಲ್ಲಿ ದೊಡ್ಡದು' ಎಂಬ ಎಚ್.ಕೆ.ವೇದವ್ಯಾಸಾಚಾರ್ಯರ ಹೇಳಿಕೆ, ಹಾಗೂ 'ಕನ್ನಡ ಕಾವ್ಯ ಪ್ರಪಂಚದಲ್ಲಿ ಹೆಸರು ಪಡೆಯುತಕ್ಕ ಸಾಧ್ಯಂತ ಕಾವ್ಯವನ್ನು ವಾದಿರಾಜರು ಬರೆದಿಲ್ಲ' ಎಂಬ ಶೇಷಾಚಾರ್ಯ ಕಟ್ಟಿಯವರ ಹೇಳಿಕೆ ಸರಿಯಲ್ಲ ಎಂದು ವೇದ್ಯವಾಗುತ್ತದೆ. ಇಂತು ಗುಣ–ಗಾತ್ರಗಳ ದೃಷ್ಟಿಯಿಂದ ಮಹತ್ತಾದ ಕೃತಿಯಿದು ಮಹಾಕಾವ್ಯದ ಹಾಸು–ಬೀಸು ಹೊಂದದಿದ್ದರೂ, ಸತ್ತ್ವಯುತ ಖಂಡಕಾವ್ಯವಾಗಿ ಬಂದಿದೆ ವಾದಿರಾಜರ ಅಪ್ರತಿಮ ಪ್ರತಿಭಾಸ್ಪರ್ಶದಿಂದ. ಅವರ ಇಂಥ ಅನುಗ್ರಹ 1930ರಲ್ಲಿ ಅಚ್ಚಾಗಿಯೂ ವಿದ್ವಾಂಸರ ಕಣ್ತಪ್ಪಿಸಿಕೊಂಡುದು ಮಾತ್ರ ಚೋದ್ಯ. 1932ರಲ್ಲಿ ಬೇಲೂರು ಕೇಶವದಾಸರು ಇದನ್ನು ಗಮನಿಸದೆ 1924ರಲ್ಲಿ ಶ್ರೀನಿವಾಸಭಟ್ಟರಿತ್ತ ಕೃತಿಗಳ ಪಟ್ಟಿಯನ್ನೇ ಕೊಟ್ಟಿದ್ದು ಇದಕ್ಕೆ ಕಾರಣವಿರಬಹುದು. ಉಡುಪಿಯ ಪ್ರತಿಯು ವಿಶಿಷ್ಟೋಚ್ಚಾರದ ಮುದ್ರಣ (ಕೊಪ್ಪಳುಗಾಳ, ಬೈದನು, ಪಟ್ಟಾವಳಿಗಳೊಪ್ಪಿದೆ, ಪೀತಾಬ್ರ, ಗಂಡಾಂತ್ರ, ನಳಕೂಬ್ರ), ಸ್ವರಗಳನ್ನೂ ವ್ಯಂಜನದಂತೆ ಕಾಣಿಸಿದ್ದು (ಯೆರೆದರು, ಯೆಳದಾನು, ವರಳ, ವದಂಬಡಿಸಿದ, ವ್ಹಾರುಜಾತ), ಸಕಾರ ಶಕಾರವಾದ್ದು (ಶೆರೆಮನೆ, ಶೀರೆ, ಶೆಳೆದನು, ಶರಗ),

ಬಳಕೆ ನುಡಿಯ ದೀರ್ಘ ರೂಪ (ಜಗದೊಳಗೆ, ಮರುಗುತಾ, ಸಾಲದಾ, ವಿಪ್ರನಾ ಮಕ್ಕಳಾನು) ಆಪಾತತಃ ತೋರುವ ಅಪಪಾಠ (ಮುಕುಟ, ಪಟ್ಟ, ನಿಷ್ಠುರ, ಹದಿನೆಂಟು ಭಾರಿ, ಧಾಳಿ, ಸಂಪನ್ನಸ್ವಾಮಿ, ಪನ್ನಂಗನಾಭ, ತೆಗಿದು, ಉತ್ಸವ), ಕೆಲವಲ್ಲಿ ಉದು ಪ್ರತ್ಯಯವಿದ್ದೂ (ಪೂ·335,499, 634) ಅನ್ಯತ್ರ ಬಳಸದಿದ್ದುದು, ಕೆಲ ಪದಮಧ್ಯ ಎಕಾರವನ್ನು ಅಕಾರ ಗೊಳಿಸಿರುವುದು (ತೆಗದು, ಒಡದು, ಮೆರದು), ಕೆಲ ಅಲು ಪ್ರತ್ಯಯ ಇಕಾರಾಂತಗೊಳಿ ಸಿರುವುದು (ಮುಗಿರಾಲಿ, ತಸಗಿರಾಲಿ, ಬರುತಿರಾಲಿ) ಇತ್ಯಾದಿಗಳನ್ನು ಸರಿಪಡಿಸಬಹುದೆನಿಸುತ್ತದೆ· (ಒರಸು, ಬೆರಸಿ ಎಂಬಂಥ ಕೆಲವು ಪ್ರಬಲ ದೇಸೀರೂಪ ಬಿಟ್ಟು)· ಆದರೆ ಇತ್ತೀಚೆಗೆ ಬಂದ ಪುನರ್ಮುದ್ರಣವೂ ಈ ಕಾರ್ಯ ಮಾಡಿಲ್ಲ· (ಇದಕ್ಕೆ ಮುನ್ನ ಕೈಕೊಂಡ ನನ್ನ ಅಧ್ಯಯನ ಫಲರೂಪದ ಸಾಹಸವಿನ್ನೂ ಪ್ರಕಟವಾಗಬೇಕಿದೆ)· ಈ ನಿಟ್ಟಿನಲ್ಲಿ ಅನ್ಯ ಕೃತಿಗಳ ಅಧ್ಯಯನ, ಪುನರಾವರ್ತಿತ ನುಡಿಗಳು ತುಂಬ ಸಹಾಯಕವಾಗಿವೆ· ಇಷ್ಟಾದರೂ ಅನ್ಯಹಸ್ತಪ್ರತಿ ಲಭಿಸುವ ವರೆಗೆ ಕೆಲವು ನುಡಿಭಾಗ ಅರ್ಥವಾಗದೆ ಪ್ರಶ್ನಾರ್ಥಕ ಚಿಹ್ನೆ ಉಳಿಯಬೇಕಾಗುತ್ತದೆ, ಅನಿವಾರ್ಯವಾಗಿ·

12) <u>ಭ್ರಮರಗೀತೆ</u>: ಭಾಗವತಾನುಗುಣ 'ಬಾಲಲೀಲೆಯ ಉ·17– 31ರಲ್ಲಿ ಸಂಕ್ಷಿಪ್ತ ವಾಗಿ ಸೂಚಿಸಿದ[386] ಭ್ರಮರಗೀತೆಯ ಸಂದರ್ಭವನ್ನಿಲ್ಲಿ ವಿಸ್ತರಿಸಿಕೊಂಡ ವಾದಿರಾಜರ ಪ್ರತಿಭಾ ಕೌಶಲದ ಔಚಿತ್ಯ ಸ್ತುತ್ಯ· ದಶಮಸ್ಕಂಧ 45ನೆಯ ಅಧ್ಯಾಯದಲ್ಲಿ ಕೃಷ್ಣ ಕಳಿಸಿದ ಉದ್ಧವನೆದುರು ನೇರವಾಗಿ ನುಡಿಯದ ಗೋಪಿಕೆಯರು ಭ್ರಮರ ನಿಮಿತ್ತ ಮಾಡಿಕೊಂಡು ತಮ್ಮ ವಿರಹ ತೋಡಿಕೊಳ್ಳುವುದೇ ಇದರ ಮುಖ್ಯ ವಿಷಯ· 12–21ರ ಮಾಲಿನೀವೃಂದಸ್ಸಿನ 10 ವೃತ್ತಗಳಲ್ಲಿ ಹೆಪ್ಪುಗಟ್ಟಿದ ಈ ದಿವ್ಯ ವಿರಹಗೀತವನ್ನು ಶ್ರೀಪಾದ ರಾಯರು 'ಭೃಂಗ ನಿನ್ನಟ್ಟಿದನೆ' ಎಂದು ದೇಶಿರಾಗ ಅಟ್ಟತಾಳದಲ್ಲಿ ಅಷ್ಟಪದಿಗಳ ರೂಪದಿಂದ ಕನ್ನಡಿಸಿದ್ದು, ಕೆಲ ಹಸ್ತಪ್ರತಿಗಳಲ್ಲಿ ಪ್ರಸನ್ನವೆಂಕಟದಾಸರ ಅಂಕಿತ ಅಂಟಿಸಿಕೊಂಡಿದೆ· ಇದು 'ಭಾಗವತದ 17 ಶ್ಲೋಕಗಳ ಆಧಾರ ಪಡೆದ ಸ್ವಂತ ಗೀತ· ಮೂಲ ಕೃಷ್ಣ ಪ್ರಶಸ್ತಿಪರ,

---

386· ರುಕ್ಮಿಣೀಶ ವಿಜಯ, 13, 29– 40·

ಇದು ಗೋಪೀವಿರಹಗೀತ ಮಾತ್ರ. ಉದ್ಧವ ಸಾಂತ್ವನ– ಕೃಷ್ಣ ಪ್ರಶಸ್ತಿ ಇಲ್ಲ. ದೀರ್ಘವಾದ ಅಷ್ಟಪದಿ ಒಳ್ಳೆ ನಡಿಗೆ ಇತ್ತಿವೆ. 'ಗೋಪಿಯರ ತ್ವರಿತೋಕ್ತಿಗೆ' (ಅನಂತ ಪದ್ಮನಾಭರಾವ್, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರು ವಿ.ವಿ. 4,2). ವಾದಿರಾಜರ 'ಭ್ರಮರಗೀತ'ವಾದರೋ ಮೂಲ ಶ್ಲೋಕ– ವ್ಯಾಖ್ಯಾನಗಳೊಡನೆ 25 ಹಾಡುಗಳಾಗಿ ಹರಿದಿರುವುದರಿಂದ ಸ್ವಾಭಾವಿಕ ವಿಸ್ತಾರವಾಗಿದೆ. ಮಾತ್ರವಲ್ಲ, ಈ ಹಾಡುಗಳು ಸುಳಾದಿಯ ರಾಗ– ತಾಳ ಹೊಂದಿ ಸಂಗೀತದ ಜೋಡು ಪಡೆದಿರುವುದರಿಂದ, 'ಗೀತಗೋವಿಂದ'ದಂತೆ ಒಂದು ಅಭಿನವ ಸಂಗೀತರೂಪಕ ಸಿದ್ಧಗೊಂಡುದು ಸೋಜಿಗದ ಸಂಗತಿ.[387]

(ಪದ 1) ನಾಟಿ ರಾಗದ ಗಣೇಶ ಸ್ತುತಿ, ಕವಿ– ಕಾವ್ಯ ಪ್ರಸ್ತಾಪ –

ಶ್ರೀ ವನಜನಾಭನಾಜ್ಞೆಯಿಂದ ಸುಜನರ ಕಾರ್ಯಕ್ಕೆ
ಅಪಾರ ವಿಘ್ನಗಳು ಬರಲು ಅ(ವ)ನ್ನಾ ಕ್ಷಣದೊಳೇ
ವಸುಧೆಯೊಳಗೆ ಪರಿಹರಿಸಿ ಸಲಹುವ
ನಮ್ಮ ಹೊಟ್ಟೆ ಗಣಪ ಈ(ವು)ದೆಮಗೆ ಶುಭವ (1)

ಆವಾಗ ಹಂಸವದನನಮಲ ದಿವ್ಯಶ್ರೀ ಮೂರ್ತಿಯನೆ ಭಾವಶುದ್ಧದಲಿ ನೆನೆವಂತೆ ಕೃಪೆ ಮಾಡು, (ಇಷ್ಟು ಮೇಲಿಣ ಭಾಗ ಉಗಾಭೋಗವಾಗಿ ಮುದ್ರಿತ– ವಾದಿರಾಜರ ಕೃತಿಗಳು, ಪು.547ರಲ್ಲಿ). ಶ್ರೀ ಭಾಗವತ ಮಹಾಪುರಾಣವನು – ಶ್ರೀಭ್ರಮರಗೀತೆಯನು ಶುಭಜನರೆಲ್ಲ ತಿಳಿಯಲು ಸುವ್ಯಾಖ್ಯಾನದಿಂದ ವಿಸ್ತರಿಸಿ, ಸುಲಲಿತ ಸುಳಾದಿ ತಾಳಗಳಿಂದ ವಿರಚಿಸಿದನಾ ಮುನಿರಾಜಕಂಠೀರವ. ಸುಚರಿತ ಸುಗುಣ ವಾದಿರಾಜೇಂದ್ರ, ಅಭಿನವ ನಾಟಕ ಚರಿತ್ರೆಯನು (ಸಾವಧಾನದಿಂದ) ಕೇಳಿ ಸಜ್ಜನರು (2) ಈ ನುಡಿಯಿಂದ ಕವಿ– ಕಾವ್ಯನಾಮ, ನಾಟಕೀಯ ಸಂಗೀತಮಯ ಕೃತಿ ಸ್ವರೂಪ ಸೂಚಿತ.

(ಪದ 2) ನಾಟಿರಾಗ – ತ್ರಿಪುಟ ತಾಳದಲ್ಲಿ, ಇದನ್ನು ಕೃಷ್ಣನೆದುರು ಪ್ರಯೋಗಿಸಿದಂತೆ ಹೇಳಿದೆ –

---

387. ಇದು ಉಡುಪಿಯ ಮಧ್ವಸಿದ್ಧಾಂತ ಗ್ರಂಥಾಲಯದಿಂದ 1922ರಲ್ಲಿ ಗದ್ಯದಂತೆ ಉದ್ದಕ್ಕೂ ಅಚ್ಚಾಗಿ ಬಂದಿದ್ದು, ಅಶುದ್ಧ ಪಾಠಯುಕ್ತವಾಗಿದೆ. 3 ಆಕರಗಳ ನೆರವಿನಿಂದ ಒಂದು ಪ್ರತಿ ಬರಲಿದೆ ಕನ್ನಡ ಅಧ್ಯಯನ ಸಂಸ್ಥೆಯಿಂದ.

ನವರಸಭರಿತ ಭ್ರಮರಗೀತೆಯರ್ಥವ ವಿವರದಿಂದ ಬಣ್ಣಿಸಿ
ದಿವಿಜವಂದಿತ ಗೋವಿಂದನ ಸಮ್ಮುಖದಿ ನಾಟ್ಯವನಾಡಿಸುವೆ ನಾನು (1)

ನರ್ತಿಸುತ್ತ ಕೃಷ್ಣರನೆ ಪಾಡುತ್ತ ಗೋಕುಲದ
ಲಲನೆಯರೆಲ್ಲ ಒಲಿದು ಬಂದರೊ (2)

(ಪದ 3) ಪಂತುವರಾಳಿ ರಾಗ — ಆದಿತಾಳದ ಹರಿಸ್ತುತಿ —

ಯಶೋದೆಯ ಕಂದ, ನಮ್ಮ ತೊದಲ್ನುಡಿಗಳನ್ನು ಕೃಪಾಸಿಂಧು ಲಾಲಿಸು, ಅಕ್ಷ
ಯಿಂದು ನೋಲಿಸೊ, ಎಂದೆಂದು ಪಾಲಿಸೊ (ಪ)

ಅಜಮಿಳಸಂಭವನ ಕಾಯ್ದೆ
ಗಜೇಂದ್ರನಿಗಭಯವಿತ್ತೆ
ತ್ರಿಜಗವನಳೆದು ದೇವೇಂದ್ರಗೆ
ರಾಜ್ಯವ ಮಜಭಾಪುರೆ ಕೊಟ್ಟೆ
ಸುತಳದಿ ಭಜಕ ಬಲಿಯನಿಟ್ಟೆ
ಧರ್ಮಧ್ವಜಕೆ ನೀ ಬಲಕಟ್ಟೆ (1)

ಆಲದೆಲೆಯ ಮೇಲೆ ನೀ ಪುಟ್ಟ ಬಾಲಕನಾಗಿ ಮಲಗಿ
ಕಾಲ ಬೆರಳ ಚುಂಬಿಸುತ ಜಠರದಿ ಜಗ
ಜಾಲವನಾಂತೆ ಮುನ್ನ, ಸ್ವಾಮಿ
ಪೋಲುವರಾರು ನಿನ್ನ, ಕೃಪಾಳು ಪ್ರಸನ್ನ (2)

ಶ್ರುತಿ ತತಿಗಳ ತಂದು ಸುಜನರ ಮತಿಗೆ ಮಂಗಳವಿತ್ತೆ
ಕೃತಿಗಳಲಿ ಹಯವದನನ ಪಾದವ ಸತತ ನೆನೆವ ಭಕ್ತ
ಕುಜನರುನ್ನತ ಬಿ(ಸಿ)ಲಿಗೆ ಬತ್ತ
ಸಂಸಾರವಿಷ್ಯದ ತರುವ ಕಿತ್ತ (3)

(ಪದ 4) ಶಂಕರಾಭರಣ ರಾಗ — ಅಟ್ಟತಾಳದಲ್ಲಿ ಕೃತಿಗೆ ಪೀಠಿಕೆ —

ಬಾರನೇಕೆ ಮುರಾರಿ ಮಧು(ರೆ)ಯ
ನಾರಿಯರ ನೆಚ್ಚಿದನೊ ನಮ್ಮ ವಿ
ಚಾರವನು ಬಿಟ್ಟಲ್ಲಿ ಬಹುದಿನ ತಡೆದ ಕಾರಣದಿ
ವಾರಿಜಾನನೆ ಕೇಳು ಭಕ್ತರ
ಧೀನನಲ್ಲವೆ ಕೃಷ್ಣರಾಯನು
ದಾರ(ದ)ರಿತ್ರೆಯನು ಮಧುರಾಪುರದ ವಾರ್ತೆಯನು (1) (ಭಾಮಿನಿ ಷಟ್ಪದಿ)

ಮಧುರೆಯಲ್ಲಿ ಮಲ್ಲರ ಗೆದ್ದು ಕಂಸನ
ಸದೆದುಗ್ರಸೇನಗೆ ಪಟ್ಟವ ಕಟ್ಟಿ
ಮುದದಿ ಗೋಪಿಯರ ಸಂತೈಸಬೇಕೆಂದು
ಸದ್ಗುಣನಿಧಿ ಮನೆಗೆ ಬಂದ (2)

(ಪದ 5) ಮುಖಾರಿ ರಾಗ — ಆದಿತಾಳದಲ್ಲಿ, ಉದ್ಧವದೌತ್ಯ —

ಒಂದು ದಿವಸ ಶ್ರೀಕೃಷ್ಣ ಯಾದವ
ವೃಂದ ಸಹಿತೋಲಗದಿ ಗೋಪಿಯ
ರಂದು ತನ್ನನೆ ನಂಬಿದವರನು ಸಲಹಬೇಕೆನುತ
ಬಂಧುಪ್ರಿಯ ಉದ್ಧವನ ಬರಹೇ
ಳೆಂದು ದೂತಗೆ ನೇಮಿಸಲು, ಗೋ
ವಿಂದನಟ್ಟಲು ಬಂದನಲು ಉದ್ಧವನು ಪೊರವಂಟ (1) (ಭಾಮಿನಿ ಷಟ್ಪದಿ)

ಎನ್ನ ಪ್ರಿಯನುದ್ಧವನೆ ಗುಣಸಂ
ಪನ್ನ ಬಾರೈ, ಈ ವ್ರಜದ ಗೋಪಿಯರು
ತನುಮನಧನಂಗಳನೀಡಾಡಿ ಬನ್ನಬಡುವರಿದ್ದೆಡೆಗೆ ನೀ ಪೋಗಿ
ಎನ್ನ ವಚನವ ನೀ ಹೇಳು, ಇಷ್ಟಂಗಳನೀವೆ, ಪೋಗಿ ಬಾ ನೀನು (3)

ಹರಿ ಕಳುಹಲುದ್ಧವ ಹರುಷವನೆ ಕೈಕೊಂಡು
ಧುರದಿಂದ ಮಧುರೆಯನು ತೆರಳಿ
ಸಿರಿವಲ್ಲಭನ ವಾರುತೆಯ ತಿಳಿಸುವೆನೆಂದು
ತರುಣಿಯರಿದ್ದ ಗೋಕುಲಕೆ ತಾ ಬಂದ (4)

ಎತ್ತಲಿಂದ ಬಂದೆ ಉದ್ಧವ,
ಚಿತ್ತಜನ ಪಿತನಟ್ಟಿದನೊ, ತಾ
ನತ್ತ ಸುಖದಲ್ಲಿಹನೊ, ನಮ್ಮ ವಿಚಾರವನು ಮ(ರೆ)ದನೊ,
ಹೆತ್ತ ತಾಯಿ ತಂದೆಯರ ನೋಡ
ಲಿತ್ತ ನಿನ್ನ ಕಳುಹಿದನೊ, ಪುರು
ಷೋತ್ತಮನ ಮನದೊಲವು ಮತ್ತೇನೆಂದು ಕೇಳಿದರು (5)[388]

---

388. ಜಾನೀಮಸ್ತ್ವಾಂ ಯದುಪತೇಃ ಪಾರ್ಷದಾರ್ಯಮನುವ್ರತಂ।
ಭರ್ತ್ರೇಹ ಪ್ರೇಷಿತಃ ಪಿತ್ರೋರ್ಭವಾನ್ ಪ್ರಿಯ ಚಿಕೀರ್ಷಯಾ ॥
ಅನ್ಯಥಾ ಗೋವ್ರಜೇ ತಸ್ಯ ಸ್ಮರಣೀಯಂ ನ ಚಕ್ಷ್ಮಹೇ।
ಸ್ನೇಹಾನುಬಂಧೋ ಬಂಧೂನಾಂ ಮುನೇರಪಿ ಸುದುಸ್ತ್ಯಜಃ ॥
(ಭಾ. 45, 4–5).

(ಪದ 6) ಭೈರವಿ ರಾಗ – ಅಟ್ಟತಾಳದಲ್ಲಿ, ವಿರಹಾಲಾಪ –

ನಿಲ್ಲಲಾರೆ ಹರಿಯು ಕಾಣದೆ
ನಿಲ್ಲಲಾರೆ ಪಾಣಿಯ ಮಾವನನು, ರಂಗನ ಕಾಣದೆ (ಪ)

ಗುಣಗಣ ಸಿಂಧುವಿನ, ಅಸುರರ
ಅಣಕದಿ ಕೊಲ್ಲುವನ
ಪೆಣ್ಗೆ ಮೋಹಿಸಿದ ಜಯಂತನ
ತೃಣವೆಸೆದು ಗೆಲಿದವನ (1)

ಜಲಧಿಪತಿಯು ಮಥಿಸಿ ಅದರಿಂದ
ಜಲಧಿಜೆಯಳ ತಂದನ
ಒಲಿದು ವಾದಿರಾಜನ ಸಲಹುವ
ಸುಲಭ ಬಾಲಕೃಷ್ಣನ (3)

(ಹಯವದನಾಂಕಿತವಿರದ ವಾದಿರಾಜನಾಮಯುಕ್ತ ಪದಗಳೂ ಇರುವುದಕ್ಕಿದು ಸಾಕ್ಷಿ)·

(ಪದ 7) ಸೌರಾಷ್ಟ್ರ ರಾಗ – ರೂಪಕತಾಳದಲ್ಲಿ, ಭ್ರಮರವಾಕ್ಯ(ದಿಂ)ದ ಪ್ರಸ್ತಾಪ –

ಭ್ರಮರವನೆ ಗುರಿ ಮಾಡಿ ಹರಿ ಕಳುಹಿದುದ್ಧವನ
ಸಮ್ಮುಖದಿ ಗೋಕುಲದ ರಮಣಿ ಆಡಿದಳು[389]

ಇಲ್ಲಿಂದಾರಂಭವಾಗುವ 'ಭ್ರಮರಗೀತೆ'ಯು ಭಾಗದ ಮೂಲ ಶ್ಲೋಕವಿದು –

ಮಧುಪ ಕಿತವ ಬಂಧೋ ಮಾಸ್ಪೃಶಾಂಘ್ರಿಂ ಸಪತ್ನ್ಯಾಃ
ಕುಚವಿಲುಲಿತಮಾಲಾ ಕುಂಕುಮಶ್ಮಶ್ರುಭಿರ್ನಃ ।
ವಹತು ಮಧುಪತಿಸ್ತನ್ಮಾನಿನೀನಾಂ ಪ್ರಸಾದಂ
ಯದುಸದಸಿ ವಿಡಂಬ್ಯಂ ಯಸ್ಯ ದೂತಸ್ತ್ವಮೀದೃಕ್ ॥ 12 ॥

(ಪದ 8) ಸೌರಾಷ್ಟ್ರ ರಾಗ – ಝಂಪೆ ತಾಳದಲ್ಲಿ (ಮೊದಲ ನುಡಿಯು
ಮೂಲಾನುವಾದ –

ಎಲೆ ಕಿತವ ಪ್ರಿಯ ಮಧುಪ, ಈ ನಮ್ಮ ಸವತಿಯರ
ಮೊಲೆಯ ಕುಂಕುಮದ ಕರುಬಿನ ಮೀಸೆಯು
ಮಲಿನ, ಮುಟ್ಟದಿರೆಮ್ಮ ನಿಮ್ಮ ದೈವತನು ಮೆಚ್ಚದ
ಲಲನೆಯರು ಮುಡಿದ ಹೂಗಳ ಮುಡಿಯಲಿ (1)

---

389· ಕಾಚಿನ್ಮಧುಕರಂ ದೃಷ್ಟ್ವಾ ಧ್ಯಾಯಂತೀ ಕೃಷ್ಣಸಂಗಮಂ ।
ಪ್ರಿಯ ಪ್ರಸ್ಥಾಪಿತಂ ದೂತಂ ಕಲ್ಪಯಿತ್ವೇದಮಬ್ರವೀತ್ ॥ 11 ॥

ಇಂಥ 8 ನುಡಿಗಳ ಈ ಹಾಡು ಕಿತವ ಕೃಷ್ಣನನ್ನು ವರ್ಣಿಸಿವೆ. ಪೊಕ್ಕು ಕೆಲವರ ಗೆಲುವ, ನಕ್ಕು ಕೆಲವರ ಗೆಲುವ, ನೋಕ್ಕಿದರೆ ಮುರಿವ ರಕ್ಕಸದಲ್ಲಣ. ಬುದ್ಧರೂಪದಿ ಪ್ರಾಜ್ಞರಿಗೆ ದುರ್ಬುದ್ಧಿ ಕಲಿಸಿ, ಕಪಟದಿ ಬಲಿಯನು ಗೆದ್ದು, ಯಮುನ ದರ್ಪನ ಮಾಡಿ, ಕುಜನರಿಗದಟನಾದವ. ಭೀಮನಿಂದ ಜರಾಸಂಧನ ಹಾಮುದಿ ಕೊಲ್ಲಿಸಿದವ. ನಮ್ಮಕೊಲ್ಲು ಸುದತಿಯು ಬಂದು ನಿ ಮುತ್ತ ಮರೆತ, (ನಮ್ಮ) ಮದ ಕಂಡು ಕಣ್ಣರಿಯದ; ಅಧಮಚರಿತರಿಗೆ ಕಿತವನಲ್ಲವೆ? ಮಧ್ವನ ಕುಡಿದು ನೋಕ್ಕಿ ನಡೆವ ಮಧ್ವನ ಅನುಚರರ ಅರಿ ಕಿತವನೇ ಸ್ವೈ. 'ಅವನ ತೋರ' ಎಂಬುದು ಗೋವಿಂದರ ಕೋರಿಕೆ (2–8).

(ಪದ 9) ಕಾಂಬೋದಿ ರಾಗ — ಝಂಪೆ ತಾಳದಲ್ಲಿ ಮುಂದುವರಿದ 8 ನುಡಿಗಳಿವೆ. ಹೆಣ್ಣು–ಹೊನ್ನಿಂದ ನೋಕ್ಕಿ ತಾವೇ ಈಶ್ವರರೆಂದು ದುರ್ಮಾರ್ಗಿಗಳಾಗಿ ಅಡಗಿಸುವವರಿಗೆ ಅಹಿತ ಕಿತವನೆನಿಸಿದರೂ, ದುರಿತಕಾದೂರ ಭಕ್ತರಿಗೊಲಿದವನಾಗಿ ಅವನ ಕಿತವನೆಂಬವ ಹುಚ್ಚನಲ್ಲವೆ (1–7). ಆದರಿಂದ ಗೋವಿಂದರು ಬೇಡಿದರು —

ಅಲಸದೆ ಮಧ್ವ(ರ)ಗೆ ಪೋಗಿ
ಸುಲಭ ಹಯವದನನಾದ
ಚೆಲುವ ಕೃಷ್ಣನ ತಂದೆಮ್ಮ
ನಾಳುಹಬೇಕೊ, ಮಧ್ವಪ (8)

(ಪದ 10) ಕೇದಾರ ಗೌಳ ರಾಗ — ಝಂಪೆತಾಳದ ಹಾಡು 11 ನುಡಿಗಳಿಂದ ಶ್ಲೋಕಾರ್ಥ ಪ್ರಾರ್ಥಿಸಿದೆ —

ಮಧ್ವ(ರ)ಯು ಮಾನಿನಿಯರ ಪ್ರಸಾದ ಕೊಳಲೆಂದು ನಾವು ವಿ
ನೋದದಿಂದೆಂದ ಮಾತಿಗೆ ಕೃಷ್ಣ ನೋಯಬಾರದು
ಇದನು ಬುಧರಿಗೆ ಸಮ್ಮತ ಮಾಡುವ ನಮ್ಮ ಪ್ರೀತಿಗೆ
ಮುದನಿತ ಮೆಚ್ಚುವದಾಶ್ಚರ್ಯವಲ್ಲವೆಲೆ ಮಧ್ವಪ (1)

ಹರಿ ತನ್ನ ಪ್ರತಿಮೆಗಿತ್ತ ಭೋಜ್ಯ ಮತ್ತು ಹೃದಯದ ಬಯಕೆಯನು ಸ್ವೀಕರಿಸಿ; ಮಾನವರೊಪ್ಪು ಉಂಡ ಶೇಷಾನ್ನವ ಧೇನಿಸುತ[390] ತನಗೀಯಲು ತುತ್ತು ತುತ್ತಿಗೆ ಉಂಬ (2–3)।

---

390. ದೇಸೀ ಪ್ರಯೋಗ.

ಅದಂತಿರಲಿ, ನಿಮ್ಮ ಕೃಷ್ಣ ರಮಿಸುವಾಗಲಿ ಮಮ್ಮಧರ
ಸುಧೆಗಳನು ತಾನು ಸವಿದುಕೊಳ್ಳನೆ,
ಅದರಿಂದ ಮಾನಿನಿಯರ ಪ್ರಸಾದ ಕೊಳಲೆಂದು ನಾವು ವಿ
ನೋದದಿಂದಂದ ಮಾತಿಗೆ ನೊಂದುಕೊಂಬರೆ, ಮಧುಪ (4)

ಭತ್ತ ಇಲಿ ಹೆಗ್ಗಣದೆಂಜಲು, ಪಾಲು ಕರುವಿನೆಂಜಲು, ಮಧುವು ನೊಣಗಳ ಎಂಜಲು (5)

ವಹ ಪ್ರಾಪಣೆ ಎಂಬ ಧಾತು ವ್ಯಾಕರಣ(ವೆ)ಂಬ, ತನ್ನ
ಸಹಜ ಪ್ರಸಾದವನೆ ಮಧುರಾಪುರದಲಿ
ಇಹಂಥಾ ಮಾನಿನಿಯರ್ಗೆ ವಿಧಿಸಲೆಂದು ವಹಿಸೆ, ಮನದಿ
ಕುಹಕವಿಟ್ಟುಕೊಂಡು ನುಡಿದ ಮಾತಿದಲ್ಲ, ಮಧುಪ (7)

ನಮ್ಮನ್ನು ಕರುಣೆಯಿಂದ ಹೊರೆವಂತೆ, ಮಧುರೆಯವರ
ಇಮ್ಮನವ ಮಾಡದೆ, ಮಧುರೆಯ ಸತಿಯರ
ಕರ್ಮಬಂಧವ ಪರಿದು, ಮುಕ್ತಿಯನೀವ ಪ್ರಸಾದ
ವಂ ಮಾತಿ ತಿಳಿಸಲೆಂದವ್ಯನೆ, ಮಧುಪ (8)

(ಪದ 11) ವಸಂತಭೈರವಿ ರಾಗದ 3 ನುಡಿಗಳಲ್ಲಿ, ಝಂಪೆ ತಾಳದಿಂದಿರುವ 2 ನುಡಿ ಮೂಲದ 13ನೆಯ ಶ್ಲೋಕ ವಿವರಿಸಿವೆ —

ಸಕೃದಧರ ಸುಧಾಂ ಸ್ವಾಂ ಮೋಹಿನೀಂ ಪಾಯಯಿತ್ವಾ
ಸುಮನಸ ಇವ ಸದ್ಯಃ ತತ್ಯಜೇಽಸ್ಮಾನ್ ಭವಾದೃಕ್ ।
ಪರಿಚರತಿ ಕಥಂ ತತ್ಪದ್ಮಕಿಂಜಲ್ಕಪಾದಂ
ಅಪಿ ಬತ ಹೃತಚೇತಾ ಉತ್ತಮಶ್ಲೋಕ ಜಲ್ಪೈಃ ॥ 13 ॥

ಒಮ್ಮೆ ತನ್ನಧರ ಸುಧೆಯನು ಸವಿಯನು ನೀಡಿ, ಮು
ಕ್ತಿಮ್ಮನವ ಮಾಡಿ ಮಧುರೆಯ ಸತಿಯರ
ನಿಮ್ಮರಸನೊಲಿಸುವವನು, ಹೊಸ ಹೊಸ ಕುಸುಮಗಳಲಿ
ಸುವಾಸನದಿಂದ ಸುಳಿಸುವ ಸಖನಲ್ಲವೆ (1)

ಹರವಿರಿಂಚಾದಿ ಸುರನಿಕರ ಕೊಂಡಾಡುತಿರೆ,
ಪರಮಪಾವನ ಕೀರ್ತಿಯುಳ್ಳ, ಹರಿಯು
ಸರಸೋಕ್ತಿಗಳಿಗೆ ಮರುಳಾಗಿ, ಸಿರಿ ಇವನ ಪದಪದುಮ
ಪರಿಚಾರರಂತಿಹಳು, ಕೇಳು ಮಧುಪ (2)

(ಪದ 12) ಮಧ್ಯಮಾವತಿ ರಾಗದ 4 ನುಡಿಗಳಲ್ಲಿ ಝಂಪೆ ತಾಳದಿಂದಿರುವ 3 ನುಡಿ ಮೂಲದ 14ನೆಯ ಶ್ಲೋಕ ವಿವರಿಸಿವೆ —

ಕಿಮಿಹ ಬಹು ಷಡಂಘ್ರೇ ಗಾಯಸಿ ತ್ವಂ ಯದೂನಾಂ
ಅಧಿಪತಿಮಗೃಹಾಣಾಮಗ್ರತೋ ನಃ ಪುರಾಣಂ
ವಿಜಯಸಖಸಖೀನಾಂ ಗಾಯತಾಂ ತತ್ ಪ್ರಸಂಗಃ
ಕ್ಷಪಿತಕುಚರುಜಸ್ತೇ ಕಲ್ಪಯಂತೀಷ್ಟಮಿಷ್ಟಾಃ ॥ 14 ॥

ಆರು ಪದದಲಿ ನೆಲವನೂರಿ ಬಹ ಚಂಚಲನ
ಚಾರುವಾಕರಿಗೆ ಗುರು ತಪ್ಪಿದವರ
ಆರ ಭಂಗಿಸಬಂದೆ, ಪುರದ ನಾರಿಯರಿಂದ
ಪೂರೈಸಿಕೊಳಲಿ ತನ್ನಯ ಬಯಕೆಯ (1)

ಗೃಹಗತಿ ಇದಲೆ ನೀ ತುಂಬಿ ತನ್ನ ಸಂಭ್ರಮ ಗ
ರುಹವಿಲ್ಲದವರಿಗರುಹಲೇತಕೆ,
ಅಹಿತನರಸಿಪುರದರಸನಾದ ಮುರಹರನ
ಮಹಿಮೆಯನು ಪುರದ ಸತಿಯರಿಗರುಹು (2)

ಸಿರಿಯವನ ಬಿಗಿದಪ್ಪಿ ಕುಚದ ಬೇಸರ ಕಳೆದು
ಹರುಷ ವಾರಿಧಿಯೊಳೋಲಾಡುವವಳ
ನರಸಖನ ಸಖಿಯರವರಿಂದೆ ಒಲಿಸಲಿ, ಭೃಂಗ
ವಿರಹದಿಂದ ನೊಂದವರಿಗಿನ್ನೇನು ಫಲವು (3)

(ಪದ 13) ನಾದನಾಮಕ್ರಿಯಾ ರಾಗದಲ್ಲಿ ಝಂಪೆ ತಾಳದ 7 ನುಡಿ, ರೂಪಕ ತಾಳದ 3 ನುಡಿಗಳಿಂದ ಮೂಲ 15ನೆಯ ಶ್ಲೋಕ ವಿವೃತ —

ದಿವಿ ಭುವಿ ಚ ರಸಾಯಾಂ ಕಾಃ ಸ್ತ್ರಿಯಸ್ತದ್ದುರಾಪಾಃ
ಕಪಟ ರುಚಿರಹಾಸ ಭ್ರೂವಿಜೃಂಭಸ್ಯ ಯಾಃ ಸ್ಯುಃ ।
ಚರಣರಜ ಉಪಾಸ್ತೇ ಯಸ್ಯ ಭೂತಿರ್ವಯಂ ಕಾ
ಅಪಿ ಚ ಕೃಪಣ ಪಕ್ಷೇ ಹ್ಯುತ್ತಮಶ್ಲೋಕಶಬ್ದಃ ॥ 15 ॥

ಹರಿಯ ಕಪಟದ ನೋಟಕೆರಗದಂಗನೆಯರನು
ಚರ(ಅ)ಚರರೊಳಗಾವ ಕಾಣೆವಮ್ಮ,
ಸ್ಮರನ ಪೆತ್ತ ಮಹಾಲಕುಮಿ ಚಂಚಲತೆಯನು
ತೊರೆದಿವನ ಚರಣಸೇವೆಯ ಮಾಳ್ಪಳು (1)

ಆ ಗೋವಳ ನಮ್ಮ ಬಿಟ್ಟರೂ ಇವನ ಪುಣ್ಯನಾಮ ಬಿಡದು ದೀನ ಪಕ್ಷ. ಕಪಟ ನೋಟದವನೆಂದರೆ ಮುಕ್ತಿಸುಖವಹನೆಂದವ್ವೆಸೆ. ಜನ ದಿಟ ವೇದವನೋದಿ ಯಜ್ಞ ಮಾಡಲು, ಅವಗೆ

ಕುಮತಿ ಕೊಡಲು ತೊಟ್ಟಿಲೊಳಿರ್ದ ಬುದ್ಧ ನುಡಿದ ನಗೆ ಕಪಟ ನಗೆ; ಕುಜನರ ಸುಮಾರ್ಗವ ನೀಕರಿಸಿ, ಶ್ರುತಿ ಮತ ಜರೆದು, ದುರ್ವೃತ್ತ ಕಲಿಸಿದಾ ಕೃಷ್ಣನ ನಗೆ ಕಪಟ ನಗೆ. ನಾರದ ಸಾಲ್ವನ ಸತ್ಯವ ಪೇಳೆ ಸಭೆಯೊಳಗೆ ಕುಳ್ಳಿರ್ದ ಕೃಷ್ಣನ ಮಂದಹಾಸವೆ ಸಾಲ್ವನ ಕುಲಕಾರಾರ ಮಾಯ್ರವನ ನಗೆ ಕಪಟ ನಗೆ (2— 6).

ತನ್ನವರಿಗಖಿಳ ಸಂಪದವೀವುದು ಸುಗುಣಾಸಂ
ಪನ್ನ ಕೃಷ್ಣನ ಮುದ್ದು ಮೊಗದ ಮಂದಹಾಸ,
ಅನ್ಯಜನರ್ಗೆದೆಶೂಲವ, ಮನ ಮನೆ ಕೊಂಬುವನು,
ನಿಸಾಕ್ಷಿ ಮುಸಿಯಲ್ಲ, ಬಲ್ಲವನ ಬಗೆಯು (7)

ನಲ್ಲನಿಲ್ಲದ ಸತಿ ಚೆಲುವಿದ್ದು ಫಲವೇನು?
ಬಲ್ಲವರಿಲ್ಲದ ಸಭೆಯು ಫಲವೇನು?
ಸಲ್ಲದ ಫಲಗಳಿಗೆ ಸವಿಯಿದ್ದು ಫಲವೇನು? ನಮ್ಮ
ನೊಲ್ಲದ ಹಯವದನ ತಾನೆಲ್ಲಿದ್ದರೇನು? (8)

ಅವನ ಕಂಗಳನೋಟ ನೆನೆಯುವ ತ
ನ್ನವನಟ್ಟಿದ ಯಮದವನ್ಯಾಕೆ ಬಾರ?
ಶಿವನಿಂ ಬೆಂದವನ ಪೆತ್ತವನ ನಮ್ಮವನೆಂದು ಮಾ
ಧವನ ನಂಬಿದವ, ನಮ್ಮ ಜವನಿಗೊಪ್ಪಿಸಿದ (9)

(ಪದ 14) ಪಹಾಡಿ ರಾಗ — ಝಂಪೆ ತಾಳದ 11 ನುಡಿ, 16ನೆಯ ಶ್ಲೋಕಕ್ಕೆ —

ವಿಸೃಜ ಶಿರಸಿ ಪಾದಂ ವೇದ್ಮ್ಯಹಂ ಚಾಟುಕಾರೈ
ರಲಮನುನಯ ಸಾರೆಯಾರ್ಹಿ ದಾತ್ಯೇರಮ್ಯಕುಂದಂ !
ಸ್ವಕೃತ ಇಹ ವಿಶಿಷ್ಟಾಪತ್ಯಪತಾಪ್ಯ ಲೋಕಾಃ
ವ್ಯಸೃಜದಕೃತವೇತ್ತಾಃ ಕಿಂ ನು ಸಂಧೇಯಮಸ್ಯ ॥ 16 ॥

ತಲೆಯ ಮೇಲಿಟ್ಟು ನಮ್ಮ ಪದವಿಡಿಯಲು, ಭೃಂಗ
ಬಲು ಚಾಟುಗಾರತನವನೆ ತೋರಿದ,
ಫಲವೇನು ನಿನ್ನೊಡನೆ ಕೊಲೆಗಾರನಲ್ಲವೆ, ಅವ
ನೊಳು ದಾತ್ಯವನು ಮಾಡಾ ಪೋಗು ಪುರಿಗೆ (1)

ತನಗಾಗಿ ಮನೆಯ ಬಿಟ್ಟೆವು, ಪತಿಯನಗಲಿದೆವು,
ತನಯರ ಮರೆದು, ಲೋಕವ ಜ(ರೆ)ದೆವು,
ಕನಸು ಕಂಡಂತಾಯ್ತು, ಕೃತಘ್ನನಲ್ಲವೆ, ನಮ್ಮ
ವನದೊಳು ಬಿಸುಟವನೊಳು ಸಂಧಿಯೆ? (2)

ಅವನನ್ನು ಅಕೃತವೇತ್ತನೆಂದು, ಅಕೃತಕ ವೇದ. ಅಜ್ಞರೇನು ತುಂಬಿಹ ಕರುಣ ಚರಾವಿಟ್ಟರು ನೊಂದುಕೊಳನು, ಸಿರಿಯುನದಂತು ಮೋರಿಟ್ಟಪ್ಪನು. ಅವನ ಮೇಲೆ ಮುಳಗಬೇಕು, ಕುಳ್ಳಿರಬೇಕು — ಜನನಿಯುಂತೆ ತಾಳಿಕೊಂಬ; ಸರ್ವಂ ಸಹಿ ಎಂಬೂ ಭೂಮಿ ಪಟ್ಟದರಸಿ — ಅವಳಷ್ಟು ವಿರಲ ತಾಳಿಕೊಳನೆ? ಅವನಮ್ಮ ಒಲಿಸದಿರೆ ಕೊಲೆಗಾರನೆಂದವ್ರನೆ? ದೀನಸುತರ ಕೊಲೆಗಾರನೆಂಬುದವನ ಬಿರುದಲ್ಲವೆ? ಭಕ್ತರ ಭವಾರ್ತಿಯುನು ಕಿತ್ತು ಮುಕ್ತಿಯುನೀವನ ಕೊಲೆ ಹೀನವೆ? ವಿತ್ತ ಪೋದ ಮಾಳ್ವಲದ[391] ನೆನನೆನದು[391] ಹಲುಬುವನ ತೆರದಿ ಹರಿ ಚರಿತವನೆ ಅನವರತ ಅನುರಾಗದಿಂದ ನೆನೆಯುತಿಪ್ಪುದು ಸಂಧಿಯುಲ್ಲವೆ? (3— 10).

ಶೃತಿಯು ಬಿಟ್ಟ ಕಥಕನ ಬಾಳು ಗೋಳಲ್ಲವೆ?
ವ್ರತವ ಬಿಟ್ಟ ಯುತಿಗಳ ಬಾಳು ಗೋಳಲ್ಲವೆ?
ಪಥವ ಬಿಟ್ಟ ಪಥಿಕನ ಬಾಳು ಗೋಳಲ್ಲವೆ? ಹಯುವದನ ಶ್ರೀ
ಪತಿಯು ಬಿಟ್ಟರೆಮ್ಮ ಮನದರತಿಯುು ಗೋಳಲ್ಲವೆ? (11)

(ಪದ 15) ಕಲ್ಯಾಣಿ ರಾಗದಲ್ಲಿ ಝಂಪೆ ತಾಳದಿಂದಾರಂಭವಾಗಿ ಅಟ್ಟತಾಳದಿಂದ ಮುಗಿದ 10 ನುಡಿ, ಮೂಲದ 17ನೆಯು ಶ್ಲೋಕಕ್ಕೆ ಸುವ್ಯಾಖ್ಯಾನವೆನಿಸಿವೆ —

ಮೃಗಯುರಿವ ಕಪೀಂದ್ರಂ ವಿವ್ಯಧೇ ಯುಃ ಕಿರಾತಃ
ಸ್ತ್ರಿಯುಮಕೃತ ವಿರೂಪಾಂ ಸ್ತ್ರೀಜಿತಃ ಕಾಮಯುಮಾನಾಂ ।
ಬಲಿಮಪಿ ಬಲಿಮಾಸಂ ವೇದವಿದ್ವರ್ಗವಂದ್ಯಃ
ತದಲಮಸಿತ ಸಖ್ಯೈರ್ದುಸ್ತ್ಯಜಸ್ತತ್ಕಥಾರ್ಥಃ ॥ 17 ॥

ಬಲಿಗೆ ಬಲದೊಳಗಿಟ್ಟ; ಕಪಿಗೆ ಬಾಣವ ತೊಟ್ಟ,
ಒಲಿದು ಬಂದವಳ ಮೂಗು ತರಿದು ಬಿಟ್ಟ,
ಛಲದಂಕಮಲ್ಲ ವೇದವಿದ್ವರ್ಗವಂದ್ಯಗಡ,
ಅಳಿ, ನಮಗೆ ಬದ್ಧನೊಳು ಸಖ್ಯಸಲ್ಲ (1)

ರಾಮ ಶೂರ್ಪನಖಿಯುಂಥ ಅನಾಯುಂಗನೆಯು ಮೆಚ್ಚ, ಸಿರಿಯುನಪಹರಿಸೆ ತಾಳ. ಕಾಮಯುಮಾನೇರಿ ಕಂಡವರಕಾಮಿನಿ ಕೆಡಿಸುವ ಹೀನಕಾಮಿನಿಯುರೊಳು ಸೀಮೆಯು ನಿರಿಸ ಬಂದವ ತಾಳ್ವನೆ? ಇಂದ್ರನ ರಾಜ್ಯವ ಸೆಳಕೊಂಡು[391] ಆಳಿದ ಬಲಿಯುನು ಕೆಡಿಸದೆ ಮುಂದೆ ಇಂದ್ರ ಪಟ್ಟವ ಕಟ್ಟಿದ. ತಮ್ಮನ ವಧುವ ತಾನೆ ರಮಿಸುವ ಕಪಿಗೆ ಸನ್ಮಾರ್ಗದೊಡೆಯು ಶಿಕ್ಷಿಸದೆ ಬಿಡ. ಮುಕುತಿ ಈವ ಹರಿಗೆ 'ಕಿರಾತನೆ'ಂತೊಮ್ಮುದೊ? ಕೃಷ್ಣ 'ಅಸಿತ'ನೆಂದರೆ

391. ದೇಸೀ ರೂಪಗಳು.

ತಪ್ಪಲ್ಲ, ಭವಬಂಧನ ತಪ್ಪಿಸಿ ಮುಕ್ತಿ ಈವನೆಂದರ್ಥ. ಇದನೆ ಮನದೊಳಗಿಟ್ಟು ಬದ್ಧನೆಂದೆವು. ಒಮ್ಮೆ ಸಖ್ಯವಾದುದೆ ಸಾಕು, ನಮಗೆ ಹಮ್ಮು ಬಂದುದರಿಂದ ಬಿಟ್ಟನು; ನಿರ್ಮಲ ಕಥಾಮೃತ ಸವಿಸುತಿಪ್ಪುದೆ ಸಾಕು ತನ್ಮಹಿಮೆ ಅರಿಯದಬಲೆಯರ್ಗೆ (2— 9).

ನಮ್ಮ ನಲ್ಲನಿಗೆ ಸರಿ ಯಾರು ಕೆಳದಿ
ನಮ್ಮ ನಲ್ಲನಂಥ ಚೆಲುವನಾರು ಕೆಳದಿ
ನಮ್ಮ ನಲ್ಲನಂಥ ಸೊಬಗನಾರು ಕೆಳದಿ
ನಮ್ಮನಾಳ್ವ ಹಯವದನ ಶ್ರೀಹರಿ(ಯು) (10)

(ಪದ 16) ತೋಡಿ ರಾಗ— ಆದಿತಾಳದ 5 ನುಡಿ, ಮೇಲಿನದಕ್ಕೇ ಪೂರಕ —

ವಿಠಲರಾಯ ನಮ್ಮ ಬಿಟ್ಟೋಡಿದನಾಕೆಲೊ[392]ಭ್ರಮರ, ಕಂ
ಚಿಟ್ಟವನ ತುತಿಸಿ ಮನನಿಷ್ಠೆಯುಂದೋಲಿಸಲು
ಇಷ್ಟಂಗಳೆಲ್ಲ ಇಲ್ಲ
ಕೊಟ್ಟು ಕಾ(ಯು)ದೆ ವೃಥಾ (ಪ)

ಬಾ ಎನಲು ಬಂದು ವಾಯುಮತ[393] ಮನ್ನಿಸುವುದು ಸಾಕೆ? ನಮ್ಮ ಕಾಯಲೋಸುಗ ಹೆತ್ತ ತಾಯಿ ಮನೆಗ್ಯಾಕೆ ಬಾರ? ಕಾಳಿಂಗ ಮೆಟ್ಟಿ ಬೆಟ್ಟವ ಹೊರಿಸಲು ಸಿಟ್ಟಿಲ್ಲದವ ಎಮ್ಮೊಳಿದ್ದರು ಭಯವುಂಟೊ? ಅನೇಕ ಭಕ್ತರನುದ್ಧರಿಸಿದವ ಈ ನಾರಿಯರ ಪೊರೆಯದೆ ಬಿಡುವನೆ (1— 4)?

ಹಯವದನ ಕಂಜನಯನ ಶ್ರೀಯುಂದರಿ ತನ್ನನು
ದಯವಾಗಲು ಗಡ!
ನ್ಯಾಯಕೋವಿದ ಭಕುತ ಭಯಭಂಜನ ಲಕುಮಿ
ಪ್ರಿಯ ಇಂದೆಮ್ಮೊಳುಪೇಕ್ಷೆಯ ಮಾಡುವನೆ? (5)

(ಪದ 17) ಕೇದಾರಗೌಳ ರಾಗ — ಝಂಪೆ ತಾಳದಿಂದಾರಂಭವಾಗಿ ಬಿಲಹರಿರಾಗ — ಅಟ್ಟತಾಳದಿಂದ ಮುಗಿವ 4 ನುಡಿ, ಮೂಲದ 18ನೆಯ ಶ್ಲೋಕಕ್ಕೆ —

ಯದನುಚರಿತಲೀಲಾ ಕರ್ಣಪೀಯೂಷವಿಪ್ರುಟ್
ಸಕೃದದನ ವಿಧೂತದ್ವಂದ್ವಧರ್ಮಾವಿನಷ್ಟಾಃ ।
ಸಪದಿ ಗೃಹ ಕುಟುಂಬಂ ದೀನ ಮುತ್ಸೃಜ್ಯ ದೀನಾಃ
ಬಹವ ಇಹ ವಿಹಂಗಾ ಭಿಕ್ಷುಚರ್ಯಾಂ ಚರಂತಿ ॥ 18 ॥

---

392. ದೇಸೀ ರೂಪ.
393. ಮಧ್ವಮತ ನಿರೂಪಣೆ ಗಮನಾರ್ಹ.

ಅವನ ಚರಿತಾಮೃತದ ಬಿಂದು ಕರ್ಣಕೆ ಬೀಳೆ,
ಭವನ ಸುತ ವನಿತಾದಿಗಳನು ಬಿಸುಟು,
ಅವನಿಯೊಳು ಭಿಕ್ಷಚರ್ಯವನೆ ಚರಿಸುವರು ಗಡ,
ಅವನ ಕಥೆಗಳ ಕೇಳದವನೊ (1)

ಪರೀಕ್ಷಿತ ನಿಜಸಂಪದ ತೊರೆದು ಶುಕಮುಖದಿಂದ ಹರಿಕಥೆ ಕೇಳಿ ಪರಲೋಕ ಸಾಧಿಸಿದ. ಸನಕಾದಿಗಳು ಕೃಷ್ಣನ ಚರಿತ್ರೆ ಬಣ್ಣಿಸೆ ಸುಖಿಸಿದವನಾವ (2—3)?

ಎಂದೊಡನಾಡುವೆ
ಎಂದು ಕೊಂಡಾಡುವೆ
ಎಂದು ಹಂಸವದನನ
ಹೊಂದಿ ಮುದಾಂಡುವೆ (4)

(ಪದ 18) ಪಂತುವರಾಳಿ ರಾಗ — ಝಂಪೆ ತಾಳದ 4 ನುಡಿ, ಮೂಲ ಶ್ಲೋಕ 19ಕ್ಕೆ —

ವಯಮೃತಮಿವ ಜಿಹ್ಮವ್ಯಾಹೃತಂ ಶ್ರದ್ಧಧಾನಾಃ
ಕುಲಿಕರುತಮಿವಾಜ್ಞಾಃ ಕೃಷ್ಣವಧ್ವೋ ಹರಿಣ್ಯಃ ।
ದದೃಶುರಸಕೃದೇತತ್ತನ್ನಖಸ್ಪರ್ಶ ತೀವ್ರ
ಸ್ಮರರುಜ ಉಪಮಂತ್ರಿನ್ ಭಣ್ಯತಾಮನ್ಯವಾರ್ತಾ ॥ 19 ॥

ಘಂಟೆಯಾ ಬೇಟೆಗಾರನ ಕುಟಿಲ ಸ್ವರಕೆ
ಅಂಟೊಸಿ ಬಂದು ಬಳಲುವ ಮೃಗಂಗಳ
ನೆಂಟರಾದೆವು ನಾವು, ಅವನ ನಖ ನಮ್ಮ ಕುಚಕೆ
ಕಂಟಕದಾಯಿತು ಪೇಳು ನೀ ಮಾರ್ಗಿಯು (1)

ಸೈರಂಧ್ರಿಗೆ ಸಂಧಿಯು ನಡೆಸಿದ ಕಪಟಿಯ ಸಮ್ಮಾರ್ಗಿಯು ಬಂದನು, ಇವನು ಆರವನೋ ನೆಚ್ಚಬಾರದು. ನೊಂದು ನಾವೆಂದು, ಮುಕುಂದನನಾರು ನಿಂದಿಪರು? ದುಃಖ ಬದ್ಧ ನೀಚನೆಂದರೂ ದುಃಖಂಯಾತಿ ಬದ್ಧಂಯಾತಿ ನೀಚಂಯಾತಿ ಎಂಬರ್ಥ. ದುಷ್ಕೃತದೂರನಿಗೆ ದೋಷಾರು ನುಡಿವರೊ (2—4).

(ಪದ 19) ರೇಗುಪ್ತಿ ರಾಗ — ಝಂಪೆ ತಾಳದಿಂದಾರಂಭಿಸಿ ಆದಿತಾಳದಿಂದ ಮುಗಿವ 5 ನುಡಿ, 'ವಸುದೇವಗೃಹೇ ಸಾಕ್ಷಾತ ಭಗವಾನ ಪುರುಷಃ ಪರಃ । ಜನಿಷ್ಯತೇ ತತ ಪ್ರಿಯಾರ್ಥಂ ಸಂಭವಂತು ಸುರಸ್ತ್ರಿಯಃ ॥' ಎಂಬ ಬ್ರಹ್ಮವಾಕ್ಯದಂತವತರಿಸಿದ ಗೋಪಿಯರ ಮಧುರ ಭಾವ ನಿರೂಪಿಸಿವೆ —

ಸುರರಸುರರ್ಗರಸಿಪ್ಪ ವಿ(ರಿ)ಂಚನಾ ಮುದ್ದು ನುಡಿಯಲು
ಸುರುವ ಜಿಹ್ವೆಗೆ ಸಿರಿ ಈವ ನುಡಿಗಳ,
ಖರ[394] ಎಂದು ನಾವು ಬಂದು, ಧರೆಗೆ ಬಂದವರಿಂದ
ಅರಿಯದವರಾಗಿ ಹರಿಯ ಪದಗಳಾದವು (1)

ಉಗುರು ಕುರುಹಿಂದ ಕುದಕೆ ಬರುತಿಪ್ಪ ಬೇಸರಕೆ, ಕಾಮನೆಂಬ ಕೃಷ್ಣನಿಗೆ ಹರಿಗಳವೋಲು ಕಂಡೆಂದವ್ಯನೆ. ಭ್ರಾಂತರು ಮರುಳುಗೊಳಲಿ ಎನುತ ಪೇಳಿದ ಆ ಪದದ ಈ ಅರ್ಥಕೆ ಶ್ರೀಕಾಂತ ಮೆಚ್ಚಿ ಚಿಂತಿತಾರ್ಥವ ಕೊಡಲಿಬೇಕು. ಸರ್ವ ಜೀವರೊಳಗೆ ಭಿನ್ನನಾದ[395] ಹರಿಯು ಪುಣ್ಯವಾರ್ತೆ — ಕಥೆಗಳ ಕೇಳಿ ಧನ್ಯವಾದವೆಂದವ್ಯನೆ (2— 4).

ಅಂಜೆ ನಾನು ಮುದನಗೆ
ಅಂಜೆ ಮಂದ ಮಾರುತಗೆ
ಕಂಜಾಕ್ಷ ಹಯವದನ
ನಂಜಿಗಿಲ್ಲ ಬಂದನಾಗಿ (5)

(ಪದ 20) ನಾದನಾಮಕ್ರಿಯಾ ರಾಗ — ಆದಿ ತಾಳದಲ್ಲಿ ಮುಂಬರಿದ 5 ನುಡಿ, ಅಟ್ಟ ತಾಳದಲ್ಲಿರುವ 3 ನುಡಿಗಳು ಅವರ ಮಧುರ ಭಾವ ಸೂಸಿವೆ —

ಚಂದ್ರ ಕಿರಣಗಳಿಂದತಿ ಪೂಜ್ಯ ನೋಡೆ
ಚಂದ್ರಮಂಡಲದಂತೆ ಮುಖ ತೇಜ
ಇಂದ್ರಾದಿ ಸುರರಿಂದತಿ ಸೇವ್ಯ ಈಗ
ಇಂದು ಇಂದುಮುಖಿ ನೀ ಕರೆದು ತಾರೆ (1)

ಸರಸಿಜನಯನನ ಸರಸಪ್ರಿಯ ನೋಡೆ
ಸನಕಾದಿ ವಂದ್ಯ ಸಜ್ಜನ ಗೇಯ
ಸರಸಿಜಾಕ್ಷಿಯರ ಕಾಮಿತದಾಯ
ನವ್ಯ ಸವತಿಯರನು ಮೆಚ್ಚಿದವನಾರೆ (2)

ಕಾಮನ ಪೆತ್ತ ಕಾಮಿತದಾಯ ಪೋದ
ಮಾವನ ಕೊಂದು ಮಲ್ಲರ ಗೆದ್ದ
ದೇವಕಿನಂದನ ಎಂದು ಬಂದ ಈಗ
ಭಾವಕಿ ಕರೆದು ಬೇಗನೆ ತಾರೆ (3)

---

394. ದೇಸೀ ರೂಪ.

395. ದ್ವೈತ ಪ್ರತಿಪಾದನೆ ಗಮನಿಸಿ.

ಬಂದ ನಿನ್ನಾಶ್ರತಿಂದು ಬೇಗನೆ ಬಾರೆ ಈಗ
ಛಂದದ ವೇದವ ತಂದವ ನೀರೆ
ಮಂದರಗಿರಿ ಎತ್ತಿದವನ್ಯಾರೆ ಈಗ
ಮಂದಗಮನೆ ನೀ ಕರೆದು ತಾರೆ (4)

ನಲ್ಲನುಳಿದರುಳಿಂತೆನು ನೀರೆ ನಮ್ಮ
ಚೆಲ್ಲ ರಂಗನ ಬೇಗ ಕರೆ ತಾರೆ
ಎಲ್ಲಿಂದು ಬಲ್ಲ ಹಬ್ಬವ ಬಾರೆ ಜೀವ
ತಲ್ಲಣಿಸುತಿದೆ ನಮ್ಮ ಗೊಲ್ಲನಿಲ್ಲದೆ (5)

ಅದ್ಭ ಕೃಷ್ಣಬಂದೇಳು ಬಾಳೆ
ಚದ್ಮರದಿಂದೀ (ಇ)ರುಳ್
ಬಿದ್ದರು ಬೆಳ್ಳಿಂದು ಬೇಗ
ಹದ್ದನಾರತಿಂದು ತಾರೆ (6)

ಇನ್ನೇಳ್ ಗೋಪಿಂದು ಕಂದ
ನನ್ನಿಂದು ಮಾಡುತ ಬಂದ
ಹೂನ್ನು ತಾಗಿ ಪಾದಪೂಜೆ
ಂದುನ್ನು ಮಾಡುವ ಬೇಗ ಬಾರೆ ಕೃಷ್ಣ ಬಂದ (7)

ಮಲ್ಲರ ಮಡುಹಿ ಬಂದ
ಬಲ್ಲಿದ ಮಾವನ ಕೊಂದ
ಚೆಲ್ವ ಹಂದುವದನ ನೀ
ನೆಲ್ಲದ್ಮರಲ್ಲಿಗೆ ಬಂದ (8)

(ಪದ 21) ಸೌರಾಷ್ಟ್ರ ರಾಗ — ಆದಿ ತಾಳದಿಂದ ಮುಂಬರಿದ 5 ನುಡಿಗಳ ಮಧುರ ಭಾವ —

ಕುಸುಮಮವನನ ಬರ
ಲಸವ ಶಶಿಂದು ಕಾಂತಿ
ಮುಸುಕಲು ಮನ್ಮಥನ
ಅನಮೂಶರ ತಾಕಲು (ಪ)

ಶೃಂಗಾರ ರಸ ಬಸಿವ
ಹೆಂಗಳ ಗಣಂಗಳೊಳು ಕ
ರ್ಣಂಗಳೊಳು ಪೊಕ್ಕು ಪೊಕ್ಕು
ಕಂಗೆಡಿಸಿ ಕಾಡುತಿದೆ (1)

ರಂಗವಲ್ಲಿಂದುನಿಕ್ಕ
ಶೃಂಗರಿಸಿ ವಿರಳಗೆ
ಮಂಗಳಾರತಿಂದು ತಾರೆ
ಕಂಗಳ ಹಬ್ಬಮಾಂಯಿತು(2)

ಬಂಗಾರ ಸರ್ವಾಂಗಕಿಟ್ಟು
ತುಂಗ ಹಾರಂಗಳನಿಟ್ಟು
ಅಂಗುಲಿಗೆ ರಂಗಮಾಣಿಕ
ದುಂಗುರಂಗಳನಿಡುವ (3)

ಪೊಂಗೊಳಲೂದುತ್ತ ಶ್ರೀ
ರಂಗ ಮನೆಗೆ ಬಂದರೆ
ಅಂಗನೆ ಅಂಗಜನಿವ
ನಂಜಾಲಗಾಗಬೇಕು (4)

ಸಿರಿದೇವಿ ಇವನ ಶ್ರೀ
ಚರಣಕ್ಕೆರಗುವಳು
ಹರಿ ಸರ್ವೇಶ್ವರ ನಮ್ಮನ(ರ)
ಹೊರೆಯು ಬಿಡನೆ ಸಖಿ (5)

(ಪದ 22) ಮೇಚಕಾಳಿ (ಆನಂದಭೈರವಿ) ರಾಗ — ರೂಪಕ ತಾಳದಿಂದ ಮೊದಲಾಗಿ ಆದಿ ತಾಳದ 3ನೆಯ ನುಡಿಯಿಂದ ಮುಗಿವ ರಚನೆ, ಮೂಲ ಶ್ಲೋಕ 20 ಕ್ಕೆ —

ಪ್ರಿಯ ಸಖ ಪುನರಾಗಾಃ ಪ್ರೇಯಸಾ ಪ್ರೇಷಿತಸ್ತ್ವಂ
ವರಯ ಕಿಮನುರುಂಧೇ ಮಾನನೀಯೋಽಸಿ ಮೇಽಂಗ ।
ನಯಸಿ ಕಥಮಿಹಾಸ್ಮಾನ್ ದುಸ್ತ್ಯಜಂ ಬಂಧು ಪಾರ್ಶ್ವಂ
ಸತತಮುರಸಿ ಸೌಮ್ಯ ಶ್ರೀರ್ವಧೂಸ್ಸಾಕಮಾಸ್ತೇ ॥ 20 ॥

ಕರೆಯಲಟ್ಟಿ ಪ್ರಿಯ ನಿನ್ನೊಳ್ವೆಟ್ಟು ಕಳುಹೆ, ಮಧುರೆಗೆ
ಮರಳಿ, ಮರಳಿ ಗೋಕುಲಕ್ಕೆ ತೆರಳಿ ಬಂದೆಯ?
ಬರಸಿಕೊ ನಿನ್ನಿಷ್ಟವನು ಪ್ರಿಯ ಸಖನೆ, ಅವನ
ಪರಮ ಬಂಧು, ಮಾನನೀಯರ, ಪೇಳು ಮಧುಕರ (1)

ಎಂತು ಕೊಂಡೊಯ್ಯುವೆ ನಮ್ಮ ಶ್ರೀಕಾಂತನ ಬಳಿಗೆ,
ಕಾಂತೆಯೊಬ್ಬಳು ಅವನ ದಲು ಉದರದ ಮೇಲೆ
ಸಂತತ ನೆಲಸಿ[396]ಹಳು,ರಮೆಗು ನಮಗು ಮ
ಹಾಂತರಂತರವೆಂಬರು ಮಹಾಂತರೆಲ್ಲರು (2)

ಇಷ್ಟು ಮೂಲದ ಭಾವ ಬಟ್ಟರೆ, ಈ ಹಾಡಿನ ಉಳಿದ ನುಡಿಗಳಲ್ಲಿ ಕೃಷ್ಣನನ್ನು ಗೋಪಿಯರ ದೃಷ್ಟಿಯಿಂದ ಪರಿಭಾವಿಸಿ, ವಿವರದಲ್ಲಿ ಸುಂದರ ದೇಸೀ ಛಂದದಿಂದ ಬಣ್ಣಿಸಿ, ಕೃಷ್ಣನ ಬಾಲಲೀಲೆಯ ಚಿತ್ರಗಳನ್ನೇ ಸಂಗ್ರಹಿಸಿವೆ —[397]

---

396. ದೇಸೀ ರೂಪ

397. ಪಾವಂಜೆಯವರ 'ವಾದಿರಾಜರ ಕೀರ್ತನೆಗಳು (ಭಾಗ 1)' 1925, ಪು.75 ರಿಂದ ಬಿಡಿಯಾಗಿ ಪಾಠಾಂತರಗಳೊಡನೆ ಮುದ್ರಿತ ಹಾಡಿದು.

ಗೊಲ್ಲತಿಯರ ಮನೆಯ ಬಿಟ್ಟನೆ, ಅವನು ನಮ್ಮ
ಸೊಲ್ಲಿಗೆ ಸೋತು ಮನವನಿಟ್ಟನೆ,
ಲಲಿತಗಂಧ ಕಸ್ತೂರಿ ಇಟ್ಟನೆ, ರಂಗರಾಯ
ಮಲೆತ ಮಾವಗೆ ದ್ವೇಷವ ತೊಟ್ಟನೆ (3)

ಕಸ್ತೂರಿಯ ಬೊಟ್ಟನಿಟ್ಟನೆ, ಅವನು ನಮ್ಮ
ಮಸ್ತಕದಲ್ಲಿ ಮಲ್ಲಿಗೆ ತುರುಬಿದ,
ಮನ್ನ ಕೃಷ್ಣ ಮುಂದೆ ನಡೆಯಲು, ಕಾಲ ತೊಡರು
ಮುತ್ತಿನಂದದಿ ಹೆಜ್ಜೆಗೊಂಡಿವೆ (4)

ನಾರಿಯರೆಲ್ಲ ವಿಕಳಗೆಟ್ಟು ಬಂದರಾಗ ಹರಿಯ ಕಾಂಬ[398] ತವಕದಿ. ಗುಣುತ ಗುಡುತ ತೊಡುತಲಿದ್ದವರೆಲ್ಲ ಓಡುತ ಕಂಕಣ ಕಾಲಿಗಿಟ್ಟರು, ಕಡಗ ಕಿವಿಗಿಟ್ಟರು, ವಾಲೆ[398] ಬೆರಳಿಗಿಟ್ಟರು, ಬಿಸಿ ಪಾಯಸ ತಂದು ಮಕ್ಕಳ ಬಟ್ಟ[398] ಸುಟ್ಟರು, ನಂದನರ ಬಿಸುಟು ಎದ್ದರು, ಪಾತ್ರೆ ಹಿಡಿದು ಮಕ್ಕಳನೆಳೆವುತ ಬಂದರು. 'ರಂಗ ಚೆಲುವ ರಾಮ ಚೆಲುವನೋ? ಶ್ಯಾಮನ ರಾಮ ಪೋಲ್ವನೆ? ಜೀವ ಹೊಡೆಯನಾಗಬಲ್ಲನೆ ಭಾವ? ಪೂತನಿಯಸುವ ಹೀರಿದ, ಮಾತೆ ಕಪ್ಪನ್ನಿಟ್ಟು ಮಗುವ ನೋಡಿದಳು. ಮರ್ತ್ಯರೊಳಗೆ ಎಣಿಸಲಾಗದು, ಕರ್ತ ಕೃಷ್ಣನವಳ ಉದರದಿ ಬಂದುದಿಲ್ಲ,[399] ಸತ್ಯಸಂಕಲ್ಪನಿವ.' ಹೀಗೆಂದು ಸತಿಯರು ರತಿಪತಿಗೆ ಮನವನಿಟ್ಟು ಅವನ ಚಿತ್ತ ಸೂರೆಗೊಂಡರು. ಕೊಳಲ ಧ್ವನಿ ಕೇಳಿ, ಅವನ ಬಳಿಗೆ ಸಂದರು. 'ನಳಿನನಾಭ ಕಾಯೋ' ಎಂದರೆ ಬಲಿಯ ಕವಚ[398] ಬಿಸುಟು ಪೋದ ಮೋಸದಲ್ಲಿ. ಕುಬುಜೆ ಅವನ ಸೆರಗ ಹಿಡಿದು ಲೋಲನೇತ್ರೆಯಾದಳು, ಡೊಂಕು ಹೋಗಿ ಮೇಳಮೇಳಕೆ[398] ಕರೆದಳು, ಸಿರಿಯರಸಗೆ ಯೋಗ್ಯಳಾದಳು, ಮಂಜುಳ ಪಾದ ದೊರಕಿತೆಂದಳು. ರಜಕನ ಮಡುಹಿ ಮಡಿಯನುಟ್ಟು, ಸಿಂಗದ ಮರಿಯಂತೆ ನಡೆದು, ಧನುವ ಮುರಿದು, ಗಜವ ಕೊಂದನು. ಚಾಣೂರನ್ನ[398] ಅಪ್ಪಳಿಸಿ, ಸೇನೆ ನುಗ್ಗು ಮಾಡಿದ. ವಿಶ್ವರೂಪಗೆ ಬೆದರಿ ಕೆಲವರಳಿದರು, ಹೃದಯದಿಂದ ಕೃಷ್ಣ ತೊಲಗಿ ಶ್ವಾಸವಡಗಲು ಕೆಲವರಳಿದರು; ಆಯುಧ ಹಿಡಿದವರು ಇವನೆ ಕೃಷ್ಣ ಕೊಲ್ಲು ಎನುತ ಹುಲ್ಲು ಕಿತ್ತು ಕುಣಿ ಮಾಡಿದರು. ಚಕ್ರಧರ ರಥ–ಗಜಗಳ ಬಲಕೆ ಘಾಯವಿತ್ತ, ತರುವ ಕಿತ್ತು ಕರಿ ತುರಗ ನರ ಸಮೂಹ ಚೂರ್ಣಗೈದ. 'ಮಾವ ನೀನು ನಮ್ಮ ಕರೆಸಿದೆ ಬಿಲ್ಲ ಹಬ್ಬಕೆ, ನಾವುದಕ್ಕೆ ಮಲ್ಲರ ಕಳುಹಿದೆ; ಜೀವ ಸಹಿತ ನಿನ್ನ ಬಿಡುವನೆ' ಎಂದು ಲಂಘಿಸಿ ಮಂಚದಲಿದ್ದ ಕಂಸನ ಶಿರವ ಗುದ್ದಿ ಕೆಡಹಿದ; ಅವನ ಹೆಂಡರ ಮಂಗಳಸೂತ್ರದ ಗಂಡ ಬಿಡಿಸಿದ. ಪೂತನಾದ್ಯನೇಕ ಖಳರ ಕೊಂದವಗೆ ಅನ್ಯರಾಶ್ರಯ–ಆಯುಧ ಬೇಕೆ?[400] ಇಂದ್ರ ಕಳುಹೆ ಸ್ಯಂದನ ಏರಿದ,

---

398. ದೇಸೀ ಪ್ರಯೋಗ.
399. ಬಾಲಲೀಲೆ ಪು.65, ಲಕ್ಷ್ಮೀಶೋಭಾನೆ 62–63.
400. ಬಾಲಲೀಲೆ, ಪು.844.

ಬುಧರು ತುತಿಸಲು, ಕಟ್ಟು ಬಿಡಿಸಿ ತಾಯಿ ತಂದೆಯ ಮುಂದಿಟ್ಟು, ಪಟ್ಟವನುಗ್ರಸೇನಗೆ ಕಟ್ಟಿಸಿದ.[401] ಹೀಗೆ 'ಹಂಸವದನನ ತುತಿಸಿ ತುತಿಸಿ ಅಚ್ಯುವೆ ನಮ್ಮ ಭವದ ಬೇಸರ' ಎಂಬುದು ವಾದಿರಾಜರ ಧ್ವನಿಗೂಡಿಕೆ; 'ಅಟ್ಟದನಿದಕೊ ತನ್ನ ಭೃತ್ಯನ, ವಿಠಲ ನಮ್ಮ ಬಿಟ್ಟವನಲ್ಲ ಕೇಳು ಕೆಳದಿ' ಎಂಬುದು ಗೋಪಿಯರ ಭರವಸೆ.

(ಪದ 23) ಮಾರವ (ಧನಾಸಿ) ರಾಗ— ಝಂಪೆ ತಾಳದ 5 ನುಡಿ, ಶ್ಲೋಕ 21ಕ್ಕೆ—

ಅಪಿಚಿತ ಮಧುಪುರ್ಯಾಮಾರ್ಯಪುತ್ರೋಽಧುನಾಸ್ತೇ
ಸ್ಮರತಿ ಸ ಪಿತೃಗೇಹಂ ಸೌಮ್ಯ ಬಂಧೂಂಶ್ಚ ಗೋಪಾನ್!
ಕ್ವಚಿದಪಿ ಸ ಕಥಾನಃ ಕಿಂಕರೀಣಾಂ ಗೃಣೀತೇ
ಭುಜಮಗರು ಸುಗಂಧಂ ಮೂರ್ಧ್ನ್ಯಧಾಸ್ಯತ್ ಕದಾನು ॥ 21 ॥

ಮಧುರಾಪುರಿಯಲಿ ನಮ್ಮ ನಲ್ಲನಿಹನೆ, ಈ ವಜ್ರದ
ಸದನವನು ತಂದೆ ತಾಯಿ ಬಳಗವ
ಒದಗಿ ಬಹ ಗೋಪರನು ಗೋವುಗಳೊಮ್ಮೊಮ್ಮೆ ನಮ್ಮ ವಿನೋ
ದದ ಕಥೆಗಳನು ತುತಿಸುವನೆ, ರಸಿಕ (1)

ಅಗರು ಗಂಧದ ಕರವ ಶಿರದಲ್ಲಿಟ್ಟು, ಸಿರಿಯರಸ ತನ್ನ
ಅಗಲಿ ಬಳಲುವ ಬಾಲೆಯರ ಕೂಡನೆ,
ಸೊಗಸು ನುಡಿಯಿಂದ ನಮ್ಮ ಸೋಲಿಸಿ, ಮುಕುಂದ ತನ್ನ
ಮುಗುಳು ನಗೆಯಿಂದ ಮುದ್ದಿಸಿ ಮೆರೆಯುವನೆ (2)

ಸನಕಾದಿಗಳ ಮನಕೆ ನಿಲುಕದವ ಮನೆ ಮನೆಗೆ ಬಂದೆಮ್ಮ ಒಲಿಸಲೇಕೆ? ಮನಬಂದವನ ಮೆಚ್ಚಿದೆ ಪಕಟ! ಅವನ ಸವಿಮಾತುಗಳ ಕೇಳಿ ನಮ್ಮ ಶೋಕ ಕಳೆಯಲೋಸುಗ ಕೃಷ್ಣ ನುಡಿದ ನುಡಿಗಳ ನುಡಿಯಲಿ. ಸಕಲರಿಗವನೆ ಗತಿ (3—5).

(ಪದ 24) ಮೋಹರಂಜನಿ ರಾಗ — ಆದಿತಾಳದ 7 ನುಡಿ, 'ಕೃಷ್ಣ ದರ್ಶನ ಲಾಲಸ' ರಿಂದಾದ್ಯಂತ ಪ್ರಾಸಬದ್ಧವಾಗಿ ಬಾಲಲೀಲೆಗಳನ್ನು ಸಂಗ್ರಹಿಸಿವೆ ಮತ್ತೆ (ವಾದಿರಾಜರಿಗೆ ಪ್ರಿಯವಾಗಿ) —

---

401. ಬಾಲಲೀಲೆ, ಪು. 881.

ಕಂಜಾಕ್ಷ ಹರಿಯು ಕಂಡಲ್ಲದೆ, ಈ
ಪಂಜರದಿ ಈ ಗಿಳಿ ನಿಲ್ಲದೆ (ಪ)

ಬಾಲತನದಲಿ ಮನೆ ಮನೆಯು ಪೊಕ್ಕು
ಪಾಲಗುಡಿವನು ಮನದಣಿಯು,
ಲಾಲಿಸಿದವನು ಇನ್ನು ಮುನಿಯು,
ಲೋಲಾಕ್ಷಿ ಬಿಡಸ್ವರ ಘನಣಿಯು[402] (1)

ಏಳು ವರ್ಷದ ಶಿಶು ಪೋಗಿ
ಆಲಸ್ಯ ಹಸಿ ತೃಷೆಯು[403] ನೀಗಿ,
ಶೈಲವನೆತ್ತಿದ ನಮಗಾಗಿ,
ಕಾಲಮೇಲೆ ಬಿದ್ದನಿಂದ್ರ ಬಾಗಿ (2)

ಕಾಳಿಂದಿ ಮಡುವಿನೊಳಾಡಿ
ಕಾಳಿಯು ನಾಗಗೆ ಮದ್ದು ಹೂಡಿ,
ಮಾಕ್ಕಳೆ[402] ಅವನೊಳು ಕೃಪೆ ಮಾಡಿ
ಪಾಲಿಸಿದ ಕರುಣಾದಿ ನೋಡಿ (3)

ಪಾರಿಜಾತದ ಹೂಗಳ ತಂದು
ನಾರದ ಮುನೀಂದ್ರ ತಾನೆ ಬಂದು,
ಸಾರಿದನಲ್ಲೆ ಗತಿ ನೀನೆಂದು,
ನರಸುರಾದಿಗಳಿಗೆ ಹಿತ ಬಂಧು (4)

ವೃಂದಾವನದೊಳಿವನ ಲೀಲೆ ಆ
ನಂದವನುಣಿಸಿತೆಲೆ ಬಾಲೆ,
ಎಂದವನ ಕಥೆಕರ್ಣದೊಳೆ, ಹಾ
ಗೆಂದು ಭಾವಿಸೆ ಪುಣ್ಯಶೀಲೆ (5)

ಸಕಲಸುರರ ಶಿರೋರನ್ನ,
ಮುಕುತಿದಾಯಕ ಸುಪ್ರಸನ್ನ,
ಶ್ರೀಕೃಷ್ಣನಟ್ಟಿದ ಉದ್ಧವನ್ನು, ಒಂದು
ಮಾತು ಕೇಳಿ ಮನ್ನಿಸೆನವನಿನ್ನು (6)

ಚೆಲುವ ಹಂತುವದನನ್ನು, ನೀರೆ
ನಲ್ಲನಿಲ್ಲಿಗೆ ಬಾರದಿರೆ,
ಸುಲಭನನ್ನು ಬೇಗ ಕರೆತಾರೆ, ನಾ
ವೆಲ್ಲ(ವ)ರಲ್ಲಿಗೆ ಹೋಹ ಬಾರೆ (7)

---

402. ದೇಸೀ ನುಡಿ.

403. ಲಕ್ಷ್ಮೀಶೋಭಾನೆ 33ರ ಪ್ರಯೋಗ.

ಇದರ ಮುಂದಣ ಕಥಾಭಾಗಕ್ಕೆ ಗದ್ಯವಿತ್ತಿದ್ದಾರೆ ವಾದಿರಾಜರು — 'ಚಿಂತೆ ಬೇಡೆಲೆ ತಾಯಿ, ನಿಮ್ಮೊಳು ಸಂತತ ಬಿಡೆನೆಂದೆನ್ನ ಕಾಂತ ಕಳುಹಲು ಬಂದೆ. ಸಕಲ ಮನೋರಥದಿ ಸಂತುಷಿತನ ಕರೆದು ತಾಹೆನೆಂದು ಅಂತರಂಗದಿ ಹರಿಯು ನೆನೆನೆನೆದು ಏಕಾಂತ ಭಕುತನುದ್ಧವನು ನಡೆದನು ಕೃಷ್ಣನಿದ್ದೆಡೆಗೆ. ಹರಿಯು ನೆನೆನೆನೆದು ಕರಗುವ ಗೋಪಕಾಂತೆಯರನೆ ಸಂತೈಸಬೇಕೆಂದು 'ಕೃಷ್ಣ, ಕೃಪಾಳು, ಎನ್ನಿಷ್ಟದಾಯಕನೆ, ಈ ಗೋಪಿಯರ ತೃಷ್ಣೆಯ ಬಿಡಿಸಯ್ಯ' ಎಂದು ಬಿನ್ನಹ ಮಾಡಿದನು. ದೇವಾರಾಧ್ಯ ಗೋಪಿಯರ ಮನದಲ್ಲಿ ನಿಂದ.

(ಪದ 25) ಆಹೇರಿ ರಾಗ — ಅಟ್ಟತಾಳದ 7 ನುಡಿ, ಗೋಪಿಯರ ಸಂಭ್ರಮಕ್ಕೆ —

ಎನ್ನ ಮನದರಸ ಕೃಷ್ಣಯ್ಯ,
ಇನ್ನೊಮ್ಮೆ ನೀ ಕುಣಿದಾಡು ಥೈ ಥೈಯ್ಯ (ಪ)

ಕಾಮ ಕೋಮಲ ದಿವ್ಯಶರೀರ,
ಶ್ರೀ ಮನೋಹರ ಸುವಿಹಾರ,
ಸಾಮದಗಾನರು ನಿಧನಿಪದಪಮಮ,
ಮಾಮತ್ಸ್ಯ ಎನ್ನಲಾಡು ಥೈಥೈಯ್ಯ (1)

ತಾನಾನಾನಾನಾನಾ ತನತಂದನಾನಾ
ತಾನಾನಾನಾನಾ ನತನತಂದನಾನಾ
ತಾನಾನಾನಾನಾನಾ ತಂದನಾ ಎಂದು
ಹನುಮಂತ ಪಾಡಲಾಡು ಥೈಥೈಯ್ಯ (2)

ಅ(ರ್ರ)ಯ್ಯಂ ಧಿಂ ಧಿಂ ಧಿಮಿಕೆಂಬ ಗಂಧರ್ವ
ರಿದ್ದರಾದ ಮದ್ದಳೆಗಳಿಗೆ,
ತತ್ತಥೈ ಥೈ ಥೈ ಥೈ ಥೈ ಎಂದು
ನುತ್ತ ತಾಳ ಒತ್ತಲಾಡು ಥೈ ಥೈಯ್ಯ (3)

ರಂಭೆ ಬಂದಳೆಲೆ ರಸಿಕರರಸ, ತ್ರಿ
ಯಂಬಕ ಬಂದ, ನಾರದ ಬಂದನು,
ತುಂಬುರ ನಿನ್ನ ನುತಿಸುತ್ತ ಬಂದನು,
ಅಂಬುಜಾಕ್ಷ ಕುಣಿದಾಡೊ ಥೈಥೈಯ್ಯ (4)

ಉಂಗುರವಿಟ್ಟಂಗುಲಿಗಳಿಂದಲಿ ರಾ
ರಂಗಳ ಬಾರಿಸುತ್ತ, ಬಗೆ ಬಗೆಯ
ಸಂಗೀತದಂಗವನಿತ್ತು ರಾಗಂಗಳ
ಪಾಂಗದಿಂದ ಕುಣಿದಾಡು ಥೈಥೈ ಎಂದು (5)

ಅಷ್ಟೈಶ್ವರ್ಯದ ಅದುಭುತ ಬಾಲನೆ,
ಮೆಟ್ಟಿದ ಹೆಜ್ಜೆ ಇಳೆಯದಂದದಿ,
ಹೊಟ್ಟೆಯ ಜಗವಲುಗದಂದಾಡಿ ಲಘುತೆಯಿಂ,
ಕೃಷ್ಣ ಮೂರುತಿ ಕುಣಿದಾಡೊ ಥೈ ಥೈ ಎಂದು (6)

ಅಘಕುಲ ದೂರನೆ, ಅಮರಧಾರನೆ,
ನಿಗಮವ ತಂದ ಹಯವದನನೆ,
ಮೃಗಧರನಂದದಿ ಮುಗುಳು ನಗೆಯಿಂದಲಿ,
ಸುಗುಣನಿಧಿಯೆ ಕುಣಿದಾಡೊ ಥೈ ಥೈ ಎಂದು (7)

ಈ ಹಾಡು ವಾದಿರಾಜರಿಗಿದ್ದ ಸಂಗೀತ— ನೃತ್ಯಗಳ ಪರಿಚಯದ ಪೂರ್ಣ ದರ್ಶನ ಮಾಡಿಸುತ್ತದೆ. ಹನುಮಂತಾದಿಗಳ ಗಾನ— ವಾದ್ಯಗಳ ಹಿನ್ನೆಲೆಗೆ ಕೃಷ್ಣನೂ ರಾಗ ವಿಸ್ತಾರಗೆಯ್ಯುತ್ತಾ ಕುಣಿಯಬೇಕೆಂಬುದು ಬರಿಯ ಗೋಪಿಯರ ಕೋರಿಕೆಯಲ್ಲ, 'ರುಕ್ಮಿಣೀಶ ವಿಜಯ ಬಾಲಲೀಲೆ'ಗಳ ಕಾಳಿಂಗಮರ್ದನನನ್ನು ಕುಣಿಸಿದ ವಾದಿರಾಜರ ಕೋರಿಕೆಯೂ ಆಗಿದೆ.

ಕೊನೆಗೆ, ಶ್ರೀ ರಾಗದ ನುಡಿ, ಕವಿ ಪ್ರಶಸ್ತಿಯಾಗಿ ಬಂದಿದೆ —
ಸಿರಿಹಯಗ್ರೀವ ಪದಕಂಜ ಭೃಂಗ, ಭಾವಜನ ಮದಭಂಗ, ಮುನಿಕುಲೋತ್ತುಂಗ, ಪರವಾದಿ ಗಿರಿವಜ್ರದಂಡ, ಭೂಮಂಡಲದಿ ವಾದಿರಾಜ ಆಶ್ರಿತ ಜನಸುರಭೂಜ. (ಸಿದ್ಧಪುರುಷ ವಾದಿರಾಜರ ಈ ನುಡಿ ಕೃತಿ ಕೊನೆಗಾಲದ್ದೆಂಬ ಸೂಚನೆ ನೀಡುವಂತಿದೆ).

ಹೀಗೆ 170ಕ್ಕೂ ಹೆಚ್ಚು ಪ್ರಾಸಪೂರ್ಣ ನುಡಿಗಳಲ್ಲಿ ರಾಗ— ತಾಳಬದ್ಧ ಹಾಡುಗಳಾಗಿ ಬಂದ ಈ ಸಂಗೀತರೂಪಕ ವಾದಿರಾಜರ ಕೃತಿಗಳಲ್ಲೂ ವಿಶಿಷ್ಟವೆನಿಸಿದೆ. ಅವರ ಕಾಲದಲ್ಲಿದು ನಿಜಕ್ಕೂ ನವೀನ ಪ್ರಯೋಗ. 'ವೈಕುಂಠ ವರ್ಣನೆ'ಯಲ್ಲೂ ಶ್ಲೋಕ ಬಳಸಿ ರಾಗ— ತಾಳ ಸಹಿತ ಪದಗಳಭಾಗ ಮಾಡಿದ್ದರೂ ಅದು ಉದ್ದಕ್ಕೂ ಸಾಂಗತ್ಯದ ಕೃತಿ. 'ಭ್ರಮರ ಗೀತ' ಭಾಗವತ ಶ್ಲೋಕ ಬಳಸಿದರೂ ವಿವಿಧ ಛಂದದ ಹಾಡುಗಳಲ್ಲಿ ಹರವಾಗಿ ಹರಡಿದ ಗೀತರೂಪಕ. ಕಾರಣ ಶ್ರೀಪಾದರಾಜರ ಕೃತಿಗಿಂತಲೂ ವಾದಿರಾಜರದು ಹೆಚ್ಚು ಸ್ವತಂತ್ರ ರಚನೆ ಎನ್ನಲು ಯಾವುದೇ ಅಭ್ಯಂತರವಿಲ್ಲ. ದೇಸೀಯವಾದ ವಿವಿಧ ಛಂದೋಬಂಧಗಳಲ್ಲಿ ಕರ್ನಾಟಕ ಸಂಗೀತದ ರಾಗ— ಸುಳಾದಿ ತಾಳ ಅಳವಡಿಸಿ 'ಗೋವಿಂದನ ಸಮ್ಮುಖದಲಿ ನಾಟ್ಯ ವಾಡಿಸುವೆನೆ'ಂದು ವಾದಿರಾಜರ ಕೃತಿಯುದನ್ನು ಸ್ವತಂತ್ರ ಸಂಗೀತರೂಪಕವೆಂದೇ ಪರಿಗಣಿಸಬೇಕಿದೆ.

ಹಳಗನ್ನಡದ ಮಾರ್ಗ ಸಾಹಿತ್ಯದಲ್ಲಿ ನಾಟಕಗಳೇ ಇಲ್ಲದಾಗ ಇಂಥ ಸಂಗೀತರೂಪಕ ಬಂದುದನ್ನು ನಮ್ಮ ಬಹುಜನ ವಿಮರ್ಶಕರು ಗಮನಿಸಿದಂತಿಲ್ಲ. ಸಾಹಿತ್ಯ — ಸಂಗೀತಗಳ ಮಧುರ ಸಮ್ಮೇಳನವನ್ನು ಇಂತು ಸಾಧಿಸಿದ ಇನ್ನೊಂದು ಕೃತಿ ಇದ್ದಂತಿಲ್ಲ ಕನ್ನಡದಲ್ಲಿ. ಇಂಥ ಕೃತಿ ರಚನೆಗೆ ಜಯದೇವನ 'ಗೀತಗೋವಿಂದ' ಪ್ರೇರಣೆ ನೀಡಿರಬಹುದು. ಶ್ರೀಪಾದರಾಜರ ರಚನೆ 9 ಅಷ್ಟಪದಿಗಳಲ್ಲಿರುವುದೂ ಇಲ್ಲಿ ಗಮನಾರ್ಹ. ಆದರೆ ವಾದಿರಾಜರ ರಚನೆ 25 ಹಾಡಾಗಿ ಹರಿದಲ್ಲಿ ಮೂಲದ ಆಧಾರ ಅತ್ಯಲ್ಪವೆನಿಸಿ ಸ್ವತಂತ್ರ ಕಾಂತಿ ಹೆಚ್ಚಿದೆ. ಆಧಾರದ ಹಾಡುಗಳಲ್ಲೂ ಮೂಲದ ಭಾವ 1–2 ನುಡಿಗಳಲ್ಲಿದ್ದು ಉಳಿಕೆಯವು ಕಲ್ಪನಾ ವಿಸ್ತಾರದವಾಗಿವೆ, 'ಸ್ವವ್ಯಾಖ್ಯಾನ'ವೆನಿಸಿವೆ; ಕೆಲವು ಹಾಡಂತೂ ಸಂಪೂರ್ಣ ಸ್ವತಂತ್ರವಾಗಿವೆ (ಮೂಲ ಪ್ರತಿಬಿಂಬಿತವಾಗದಲ್ಲಿ). ಶ್ರೀಪಾದರಾಜರು ಭ್ರಮರವನ್ನೇ 'ಕಿತವ' ಎಂದಿದ್ದರೆ, ವಾದಿರಾಜರು ಮೂಲದಂತೆ 'ಕಿತವಪ್ರಿಯ' (8,1) ಎಂದಿದ್ದಾರೆ. ಇಂಥ ಶಬ್ದ ಪ್ರಯೋಗಿಸಿದರೂ ಹರಿಯ ವಿಷಯದಲ್ಲವು ಸದರ್ಥಸೂಚಕವೆಂಬ ಪ್ರತಿಪಾದನಾ ಕೌಶಲ ವಾದಿರಾಜರ ಗೋಪಿಯರದು. ಶ್ರೀಪಾದರಾಜರ ಕಿರುಕೃತಿಯಲ್ಲಿರದ ಅದ್ಯಂತ ಉದ್ಧವನ ಪ್ರವೇಶ — ಸಾಂತ್ವನ ವಾದಿರಾಜರಲ್ಲಿವೆ, ಮೂಲದಂತೆ ಒಂದು ಜಾಕಟ್ಟು ಒದಗಿಸಲು, 'ಹರಿಯ ಉರದಲ್ಲಿ ಸಿರಿ ಸದಾ ಇರುವುದರಿಂದ ತಮ್ಮ ಗತಿ ಏನೆಂಬ ಮೂಲದ ಗೋಪಿಯರಿಗಿಂತ, 'ಲಕುಮಿ ರಮಣನ ಗೊಲ್ಲತೇರಾವು' ಎಂಬ ಶ್ರೀಪಾದರಾಜರ ಗೋಪಿಯರು ಭಿನ್ನರೆನಿಸಿದ್ದು, 'ರಮೆಗು ನಮಗು ಮಹಾಂತರಂತರವೆಂಬರು ಮಹಾಂತರಲ್ಲರು' ಎನ್ನುವಂತೆ ವಾದಿರಾಜರ ಉಕ್ತಿಯಲ್ಲಿ ಪಡಿನುಡಿದಿದ್ದಾರೆ. ಈ ಕೃತಿಯ ನಾಯಕನಾದ ಕೃಷ್ಣ ಪರಮಾತ್ಮನೆಂದೇ ಚಿತ್ರಿತನಾಗಿದ್ದು, ಅವನಲ್ಲಿರುವ ಗೋಪಿಯರ ಬಗೆಗಿನ ಕರುಣಾಪೂರ್ಣ ಆಸಕ್ತಿ; ಅವರ ಮಧುರವಾದ ಆರ್ತ ಭಕ್ತಿ, ಉದ್ಧವನದೌತ್ಯ ಅವನ ಜ್ಞಾನಕ್ಕಿಂತ ಹಿರಿದೆಂದು ತೋರಿದ ಭಕ್ತಿಯ ಶಕ್ತಿ — ಇವೆಲ್ಲ ನಮ್ಮ ಮನದಲ್ಲಿ ಅಚ್ಚೊತ್ತುವಂತಿವೆ. ದಿವ್ಯ ಯೋಗದಗ್ಧ ಗೋಪಿಯರಿಂದ ಅಲ್ಲಲ್ಲಿ ತುಸು ತತ್ವ ಸೂಚಿತವಾದರೂ ಈ ಕಾವ್ಯದ ಮಾಲ್ಯ ಕುಂದಿಲ್ಲ. ಕೃತಿಯ ಉದ್ದಕ್ಕೂ ಕೇಳುವ ಅವರ ಪರಿಶುದ್ಧ ಸಂಸ್ಕಾರಪೂರ್ಣ ಪ್ರೇಮ ನಮ್ಮನ್ನೂ ಕರಗಿಸಿಬಿಡುವಂಥದು. ಅವರ ವಿಪ್ರಲಂಭ ಶೃಂಗಾರ ಮಧುರ ಭಕ್ತಿಯಾಗಿ ಮಾಗಿದ ಫಲ ವಾದಿರಾಜರ 'ಭ್ರಮರಗೀತ'. ಇದರ ಭಾಷೆಯಲ್ಲೂ ಕಾಣುವ 'ಒಲಿಸಿಕೊಂಬೋದು ನಿಚ್ಚಟ, ಉಂಬ, ಕಾಂಬ, ಧೇನಿಸುತ, ಮರಿಯಾದೆ, ಮಾಕ್ಕಳೆ,

ನೆನನೆನದು, ನೆಕಕೊಂಡು, ಬಿಟ್ಟೋದನ್ಯಾಕೊ, ಖರೆ, ನೆಲಸಿಹಳು, ಕವಚ ಪೂರಾರನ್ನ, ಭಸಣಿ' ಮುಂತಾದವಿಷ್ಟು ದೇಸೀರೂಪ ಗಮನಾರ್ಹವಾಗಿವೆ.

13) <u>ನಾರದ ಕೊರವಂಜಿ:</u> 'ವಾದಿರಾಜರ ಕೃತಿಗಳು' ಏಕ ಆಕರ ವಿಭಾಗದ 'ನಾರದ ಕೊರವಂಜಿ' (ಕೀರ್ತನೆ 58), ಸುರತ್ಕಲ ನರಹರಿದಾಸರ ತುಳು ಲಿಪ್ಯಂತರಿತ ಕನ್ನಡ ಪ್ರತಿಯೊಡನೆ ವಿಶೇಷ ಪಾಠಾಂತರಗಳಿಲ್ಲದೆ, ಕನ್ನಡ ಅಧ್ಯಯನ ಸಂಸ್ಥೆಯ ಓಲೆಗರಿ ಪ್ರತಿಯಲ್ಲೂ ಇರುವುದರಿಂದ (ಕ.725, 1—11) ವಿಶ್ವಸನೀಯ ಕೃತಿ. ಇದರ 57 ನುಡಿ ಹಾಗೂ ಗದ್ಯ ರುಕ್ಮಿಣಿಯನ್ನು ಕೃಷ್ಣ ಕೈಹಿಡಿದ ಕಣಿ ಹೇಳಿದ 'ನಾರದ ಕೊರವಂಜಿ'ಯನ್ನೇ ಬಣ್ಣಿಸಿದೆ. ಶ್ರೀನಿವಾಸ ಕೊರವಂಜಿಯಾಗಿ ಪದ್ಮಾವತಿಯಲ್ಲಿಗೈದಿ ತನ್ನ ಕಾರ್ಯ ತಾ ಸಾಧಿಸಿದಂತೆ ಕೊರವಂಜಿ ವೇಷದ ನಾರದ ಕೃಷ್ಣನಿಗೇ ಹಂಬಲಿಸುತ್ತಿದ್ದ ರುಕ್ಮಿಣಿಗೆ ಅವನೇ ವರಿಸುವನೆಂದು ಸಂತಸಗೊಳಿಸಿದ ಈ ಕಥಾವಸ್ತುವಿನಲ್ಲಿ, ತೆಲುಗಿನ ಕೊರವಂಜಿ ಪದಗಳ ಪ್ರಭಾವದಿಂದ ಆ ನುಡಿ ಬರೆದಿದೆ. ಮಧ್ವರು ಮ್ಲೇಂಛ ಅರಸರೊಡನೆ ಅವರ ಭಾಷೆಯಲ್ಲೇ ಸಂವಾದಿಸಿದಂತೆ, ವಾದಿರಾಜರೂ ಇಲ್ಲಿ ತೆಲುಗು ನುಡಿಯನ್ನು ಮೇಳವಿಸಿರುವುದು ಅವರ ಪ್ರತಿಭೆಗೆ ದ್ಯೋತಕ. ಮಾತ್ರವಲ್ಲ, ಈಗಲೂ ಬಾಗಿಲಿಗೆ ಬರುವ ಕೊರವಂಜಿಯರ ತೆಲುಗು ಮಿಶ್ರಿತ ಕಣಿ ಕೇಳಿದಲ್ಲಿ, ಈ ಭಾಷಾ ಮಿಶ್ರಣ ತಂತ್ರ ಕೃತಿಗೆ ವಾಸ್ತವತೆಯ ಕಳೆ ಕೊಟ್ಟಿದೆ ಎನ್ನಬಹುದು.

ಮೊದಲ ನುಡಿ ಆದ್ಯಂತ ಪ್ರಾಸಪೂರ್ಣವಾಗಿ ಹಯವದನಗೆ ಜಯಕಾರ ಹಾಕಿದೆ —

ಜಯ ಜಯ ದಯಾಕರನೆ, ಹಯವದನ ಭಯಹರನೆ,
ಜಯಶೀಲ ಸಾಧ್ವರನೆ, ಜಯ ದೀನೋದ್ಧರನೆ,
ನಿಯತ ಶ್ರೀ ಭೂಧರನೆ, ನಯಗುಣಾಸ್ವೀಕರನೆ,
ಪ್ರಿಯಜನ ಮನೋಹರನೆ, ಸುಯಶೀ ಸಾಕಾರನೆ, ಜಯಜಯ (1)

ಹರಿ ಪತಿಯಾಗಲೆಂದು ರುಕುಮಿಣಿ ನೆನೆಯುತಿರಲು ಕೊರವಂಜಿ ವೇಷದಿ ಹರುಷವೀವೆನೆಂದು ನಾರದ ಬಂದ — ಮಂದಹಾಸ ತೋರುತ್ತ, ಅಂದಿಗೆ ಧಿಂಧಿಮಿಕೆಂದು ನಿಂದಭೀಷ್ಟ ಪೇಳುತ್ತ, ಗಗನದ ಮಧ್ಯವು ಸ್ತನಭಾರಕೆ ಬಗ್ಗುತ, ಚಂಚಲಾಕ್ಷಿ ನೋಡುತ, ಕನಕಕುಂಡಲದಿಂದ

ಗಂಡಭಾಗ ಹೊಳೆಯುತ್ತ, ಕಂಕಣ ನಾದದಿಂದ ಕೈಯ ತೋರಿ ಕರೆಯುತ್ತ, ಚುಂಗು ಜಾರಲು ಒಲ್ಯಾತ್ತ, ಕಿಂಕಿಣಿ ಉಲಿಯೊಳು ಕೀರವಾಣಿ ಸರಸವಾಡುತ್ತ, ಸರಿಯುಲ್ಲವೆಂದು ತನ್ನ ಪಾಡಿ, ರನ್ನ ಕೆತ್ತಿಸಿದ ಚಿನ್ನದ ಬುಟ್ಟಿ ನೆತ್ತಿಯಲಿಟ್ಟು, ಬೆನ್ನಿರಿ ಸಿಂಗಾರ ಕಟ್ಟಿ (4–11). ಕಥನ ಗದ್ಯ — ಸುಗುಣಾಂಗಿಯರು ಪೇಳಲು ರುಕುಮಿಣಿ ನಗುತ 'ಬೇಗ ಕರೆ' ಎಂದಳು. ದೂತಿಯರು ಕರೆಯಲು ಶ್ರೀರಾಗದಿಂ ದಿವ್ಯಗಾನ ಪಾಡುತ್ತ ಬಂದಾಳು ಧಿಂಧಿಮಿಕೆನ್ನುತ (12–14),

ಚೆಲುವ ತುರುಬಿನಿಂದಲಿ ಜಗುಳುವ
ಚಲಿಸುವ ಪುಷ್ಪದಂದದಿ
ನಲಿನಲಿ ನಲಿದಾಡುತ್ತ ಮಲ್ಲಿಗೆ
ಝಣಿಲ ಝಣಿಲ ಝಣಿಲೆಂದು ಉದುರುತ್ತ
ಕಿಲಕಿಲಕಿಲಿ ಎಂದು ನಗುತ್ತ (15)

ರನ್ನದ ಬುಟ್ಟಿಯು ಕಂಕುಳಲ್ಲಿಟ್ಟು ನೃತ್ಯವನಾಡುತ್ತ, ಮುತ್ತಿನ ಹಾರ ಉರದೊಳಲ್ಲಾಡುತ, ಭುಜಕೀರ್ತಿಯೊಪ್ಪುವ, ಅಕರ್ಣಾಂತ ನೋಟಗಳಿಂದ, ಕಾಂಚೀ ಸಂಚಯಾಂಚಿತ ಪೀತಾಂಬರಾವಲಂಬಿತ ನಿತಂಬದಿಂದೊಪ್ಪುವ, ಪುಷ್ಪಾಲಂಕೃತ ಕುಂತಳದಿಂದೊಪ್ಪುವ ಕೊರವಂಜಿ ಬುಟ್ಟಿಯು ಅಂಕದಲ್ಲಿಟ್ಟು, ಸಿಂಗನ ಮುಂದಿಟ್ಟು ಆಡಿದಳು — 'ಅವ್ವವ್ವ ಕೈಯ ತೋರೆ, ನೀ ಉಂಡ ಊಟ, ಕಂಡ ಕನಸುಗಳೆಲ್ಲ ಕಂಡಾಗ್ಗೆ ಪೇಳುವೆ; ರುಕುಮಿಣಿ, ನಿನ್ನ ಚೆಲುವಿಕೆ ಎಂತು ಬಣ್ಣಿಪೆ! ಕನ್ನಡಿಯಂತೆ ಮುಖಚಂದ್ರ, ನೀಲಕುಂತಳ, ಬಾಲಚಂದ್ರನ ಸೋಲಿಸುವ ಲಲಾಟ, ಬಿಲ್ಲ ನಿರಾಕರಿಸುವ ಹುಬ್ಬು, ಎರಳೆ ಕಂಗಳ ತಿರಸ್ಕರಿಸುವ ನೋಟ, ಸಂಪಿಗೆ ಮೊಗ್ಗೆ ಸೋಲಿಸುವ ನಾಸಾಮಣಿ, ಕುಂದ ಕುಟ್ಮಲ ಮೋಹಿಸುವ ದಂತಪಂಕ್ತಿ, ಖಂಡಸಕ್ಕರೆಯುಂದಧಿಕ ರಸದ ಅಧರ, ಭಕ್ತರ ಅಜ್ಞಾನ ನಿರಾಕರಿಸುವ ನಗೆಚಂದ್ರಿಕೆ, ಹಚ್ಚಬೊಟ್ಟಿನ ಚುಬುಕಾಗ್ರ, ಕಂಬುಕಂಠ, ಭೂಷಣ ಕರಯುಗ, ಕುಚಕುಂಭಯುಗ, ನಾಭಿ ತ್ರಿವಳಿ, ಮೇಖಲಾಕಿಂಕಿಣಿ ಕಟಿ, ಊರು ಜಾನು ಜಂಘಾಯುಗ, ಕಾಲಕಡಗದ ಗುಲ್ಫಯುಗ, ಕೆಂದಾವರೆ ಮೋಹಿಸುವ ಪಾದಪದ್ಮ. ಚೆಲ್ವಿನ ಪ್ರತಿಮೆಯಂತೋ ಲಾವಣ್ಯದ ಖಣಿಯಂತೋ ಎಂದೊಪ್ಪುವ ನಿನ್ನ ಕೀರ್ತಿಯ ಕೇಳಿ ಬಂದೆನಮ್ಮ. ಕೊರವಿ ಸಾರಿ ಕಪ್ಪುವ ತಂದೆ (16,19).

ಸತ್ಯಮುಗಾ ಚೆಪ್ಪುತಾನಮ್ಮ, ಸಂತೋಷಮುಗಾ ವಿನುವಮ್ಮ
ಸತ್ಯ ಹರಿಶ್ಚಂದ್ರುನಿಕಿ ಚಾಲ ಚೆಪ್ಪಿತಿ (20)

ಕನ್ನೆ ಬಿಡವ್ ನಾ ಮಾಟ ನಿನ್ನ ಕಾಲಂ ನೆ ನೇನಿಕು,
ಚಿನ್ನ ಸಿಂಗಾಸೀ ತೊಂಡೂನೆ ಚಪ್ಪಗಮ್ಮೇನೇ (21)

(ಸತ್ಯ ಉಸಿರುವೆ, ಸಂತಸದಿಂದಾಲಿಸಮ್ಮ, ಹರಿಶ್ಚಂದ್ರನಾಣೆಗೆ ಹೇಳುವೆ, ನಿನ್ನ ಪಾದದಾಣೆಗೆ ಹೇಳುವೆ, ಕಂದನಾಣೆಂತಾಗಿ ಹೇಳುವೆ). ರುಕುಮಿಣಿ ವಜ್ರಪೀಠದಲಿ ಕುಳಿತು, ಚಿನ್ನದ ಮೊರಗಳಲಿ ರನ್ನಗಳ ಇಟ್ಟುಕೊಂಡು ನುಡಿದಳು —

ತಲ್ಲ ನಾ ಅಭೀಷ್ಟಮುಲೆಲ್ಲ ತಾರ್ಕಣ್ಯಮುಗಾ ಚೆಪ್ಪಿತಿನಿಕು,
ಮೌಲಿಸೀನ ನೊಲುಮ್ಮಲೆಲ್ಲ ವನಿತೆನ ನಿಂತುಾ (22)

(ತಾಯೆ ನನ್ನಭೀಷ್ಟಗಳ ಮುಚ್ಚುಮರೆಯಿಲ್ಲದುಸಿರುವೆ, ಗುಪಿತವೆಲ್ಲ ಉಸಿರುವೆ). ಕೊರವಿ 'ನೆನೆಸಿಕೋ ಅಭೀಷ್ಟವ' ಎಂದು 'ಮಹಾಲಕ್ಷ್ಮಿ ಉಡುಪಿನ ಕೃಷ್ಣ ಸೋದೆ ತ್ರಿವಿಕ್ರಮಾದಿ[404]ಗಳೆಲ್ಲ ಎನ್ನ ವಾಕ್ಯಬಲದಿಂ ಪೇಳಿರಂತು' ಎನುತಲೆಂದಳು — 'ಎಲೆ ದುಂಡೀ, ನಿನ್ನ ಕರದಿಂದು ಕೂಡಾಕ್ಷ್ಯನು ರಂಗ, ಹರಿಂತು ಕೈಹಿಡಿದು ಕೂಡುವ, ಶುಭದ ನುಡಿ ಕೇಳು. ಬಂತೇ ಮನಸಿಗೆ ನಾ ಹೇಳಿದುದು?' ರುಕುಮಿಣಿ 'ಮೆಚ್ಚಿದೆ, ನೀನೆ ಮಹಾಜ್ಞಳು' ಎನಲು 'ನವನೀತಚೋರ ನೀ ಕಳುಹಿದ ಬ್ರಾಹ್ಮಣನಿಂದ[405] ನಿನ್ನ ಮಾತಲ್ಲಕೇಳಿ ರನ್ನಗಳ ಕೊಟ್ಟು ಕಳುಹಿದನಮ್ಮ. ಸಂಭ್ರಮದಿಂದವನ ಬರವ. 3— 4 ಘಳಿಗೆಂತೊಳಗೆ ಬರುತಾನೆ ಕನ್ನಾರಿ ರಂಗ. ರಾಜರ ನೋಡಿಸಿ ನಿನ್ನ ಕರೆದೊಯ್ಯುವ. ನಾ ಹೋಗಿ ಬಂದೇನಮ್ಮ'(29— 45).

ರುಕುಮಿಣಿ ಪುರದಿಂ ತೆರಳಿ ಗೌರಿಪೂಜೆಂತುಂ ಮಾಡಿ ಬಾಹಾಗ ಹರಿ ಬಂದು ರುಕುಮಿಣಿಯಂತು ಹಾರಿಸಿಕೊಂಡು ಹಿಂದಾದ ರಥದಲ್ಲಿಟ್ಟು ಜರಾಸಂಧಾದಿರಾಂತರ ಗರ್ವ ಮುರಿದು ತೆರಳಿದನು. ತಾನಾಗ (51). ಶಂಖ ಭೇರಿ ಮೊಳಗಿ, ಗಂಧರ್ವಾದಿಗಳು ಗಾನಗೈದು, ಬ್ರಹ್ಮಾದಿಗಳು ಹೂಮಳೆಗರೆದು, ಮುತ್ತೈದೆಯರು ಆರತಿ ಎತ್ತಿ ಮಂಗಳ ಪದ ಹಾಡಿದರು —

---

404. ಸ್ಥಾಪನೆ 1582, ಕಾರಣ ಕೃತಿ ನಂತರದ ಕಾಲದ್ದು.

405. ವಾದಿರಾಜರ ಪೂರ್ವಾವತಾರ ಸುದೇವ.

ಜಯ ಜಯಾ ರುಕುಮಿಣಿ
ಕೈಯ ಪಿಡಿದನು ಬೇಗ
ತೋಯಜಾಕ್ಷನು ಬಂದ ಮುದದಿಂದ (52)

ಕೊನೆಗೂ ಕೊರವಿ ಬಂದು 'ನಿನ್ನರದಿ ಅಪ್ಪಿಕೊಂಡು ಎಂದೆಂದು ಬಿಡನು. ಪುಣ್ಯದ ಮಾತೆಲ್ಲ ಈ ಧನ್ಯವಾಯಿತಲ್ಲ' ಎನಲು, ರುಕುಮಿಣಿ ಸರ್ವಾಭರಣವಿತ್ತು ಕಳಿಸಿ ಪಾಂಡುರಂಗನ ಕೂಡಿ ಸಂತೋಷದಿಂದ ಬಾಳಿದಳು.

ಈ ಕಥಾವಸ್ತುವಿನ ವಿಶ್ಲೇಷಣೆಯಿಂದ ಇಲ್ಲಿ ವಾದಿರಾಜರು ರುಕ್ಮಿಣಿಯ ಕಲ್ಯಾಣಕ್ಕಿಂತ ನಾರದ ಕೊರವಂಜಿಯಾಗಿ ಬಂದು ಕಣಿ ಹೇಳಿದ ಪ್ರಸಂಗವನ್ನೇ ವಿಶೇಷ ಲಕ್ಷಿಸಿ 50 ನುಡಿಗಳ ವರೆಗೂ ವರ್ಣಿಸಿದ್ದು ಸುವಿದಿತ. ರುಕ್ಮಿಣಿಯ ಹರಣ–ಕಲ್ಯಾಣ ವಿವರಗೊಳ್ಳದೆ ಕೊನೆಯ 7 ನುಡಿಗಳ ಭಾಗದಲ್ಲಿ ಸೂಚಿತವಾಗಿದೆ, ಅಷ್ಟೇ. ಆದರಿಂದ ಈ ಕೃತಿಯ ವಸ್ತು "ರುಕ್ಮಿಣಿಯ ಕಲ್ಯಾಣವನ್ನು ಕುರಿತದ್ದು. ಶ್ರೀ ವಾದಿರಾಜರು ಸಂಸ್ಕೃತದಲ್ಲಿ 'ರುಕ್ಮಿಣೀಶ ವಿಜಯ'ವನ್ನು ಬರೆದು ಪ್ರಖ್ಯಾತರಾಗಿರುವುದರಿಂದ ಅದೇ ವಸ್ತುವನ್ನು ಜನಸಾಮಾನ್ಯರ ಸಲುವಾಗಿ ಈ ಸರಳ ರೀತಿಯಲ್ಲಿ ಬರೆದಿರಬಹುದು" (ಡಿ.ವರದರಾಜರಾವ್, ವಾದಿರಾಜರ ಕೃತಿಗಳು, ಪೀಠಿಕೆ,45) ಎಂಬ ಅಭಿಪ್ರಾಯ ಸರಿ ಎನಿಸದು. ಅದನ್ನು ಬೇಕಾದರೆ 'ಬಾಲಲೀಲೆ'ಯ ರುಕ್ಮಿಣೀ ಸ್ವಯಂವರದ ಭಾಗಕ್ಕೆ ಅನ್ವಯಿಸಬಹುದು. ಕಾರಣ ಈ ಕಿರುಕೃತಿಯಲ್ಲಿ ಕೊರವಂಜಿ–ರುಕ್ಮಿಣಿಯರ ಪಾತ್ರ ಮಾತ್ರ ಸಾಂಪ್ರದಾಯಿಕವಾಗಿ ಮೂಡಿವೆ; ಕೃಷ್ಣನ ವರ್ಣನೆ ಅವರ ಮಾತುಗಳಲ್ಲೇ ಸ್ವಲ್ಪ ಬಂದಿದೆ. ಕೃಷ್ಣ–ರುಕ್ಮಿಣಿಯರ ದಿವ್ಯ ಶೃಂಗಾರ ಇಲ್ಲಿ ಧ್ವನಿತ. ಪ್ರಾಸ, ಪ್ರೀತಿಯೊಡನೆ 'ನೆನೆವುತ್ತ, ಒಲವುತ್ತ, ಉಡುಪಿನ ಕೃಷ್ಣ, ನೋಡಿದೆ ತ್ರಿವಿಕ್ರಮ, ಬಾಹಾಗ' ಇತ್ಯಾದಿ ಪದಪ್ರಯೋಗ ಅನ್ಯ ಕೃತಿಗಳಂತೆ ಇಲ್ಲೂ ಇರುವುದು ವಾದಿರಾಜರ ಕರ್ತೃತ್ವಕ್ಕೆ ಆಂತರಿಕ ಪ್ರಮಾಣ. ಗದ್ಯ ಮಾತ್ರ 'ಭ್ರಮರಗೀತೆ'ಯ ಗದ್ಯದಂತೆ ಕಾವ್ಯಮಯವಾಗಿಯೇ ಬಂದಿದೆ ಇಲ್ಲಿ. ಈ ಕೃತಿಯ ಪ್ರೇರಣೆಯಿಂದಲೆಂಬಂತೆ ಪ್ರಸನ್ನ ವೆಂಕಟದಾಸರು 34 ಪದ 199 ನುಡಿಗಳ ಹಾಡಾಗಿ ಇದೇ ವಸ್ತುವನ್ನು ವಿಸ್ತರಿಸಿ, 'ದುಂಡಿ–ಸಿಂಗ' (ಚೆಲುವೆ–ಕೂಸು) ಎಂಬಂಥ ಕೆಲ ಉಭಯ ಸಾಮಾನ್ಯ ಪ್ರಯೋಗ ಬಳಸಿದ್ದರೂ, ಪ್ರಭಾವ ವಿಶೇಷವಿಲ್ಲದ ಸ್ವತಂತ್ರ ರಚನೆಯಿತ್ತಿದ್ದಾರೆ.

14) <u>ಕೇಶವನಾಮಗಳು</u>: ಹರಿಯ ದಶಾವತಾರಗಳಂತೆ ಕೇಶವಾದಿ 24 ರೂಪಗಳನ್ನು ವಾದಿರಾಜರು ವಿವಿಧವಾಗಿ 4 ಕೃತಿಗಳಲ್ಲಿ ವರ್ಣಿಸಿರುವುದು ಗಮನಾರ್ಹವೆನಿಸಿದೆ. (ಸಂಸ್ಕೃತದಲ್ಲೂ ಅವರು 24 ಶ್ಲೋಕಗಳ ಚತುರ್ವಿಂಶತಿ ಮೂರ್ತಿಭೇದನ ಸ್ತುತಿ ಇತ್ತುದನ್ನು ಮರೆಯುವಂತಿಲ್ಲ). 2 ಭಿನ್ನ ಛಂದದ ಕೃತಿಗಳಲ್ಲಿ (24 + 1) 25 ನುಡಿ, ಇನ್ನೊಂದರಲ್ಲಿ 24 ನುಡಿ, ಮತ್ತೊಂದರಲ್ಲಿ 14 ನುಡಿಗಳಿವೆ. ಒಂದೊಂದರಲ್ಲೂ ಒಂದೊಂದು ವೈಶಿಷ್ಟ್ಯ ವ್ಯಕ್ತವಾಗಿದೆ.

(1)

ಅಂಶಗಣದ ತ್ರಿಪದಿಯ ಪುನರಾವರ್ತಿತ ಸಾಲೂ ಮುದ್ರಣಗೊಂಡು ಚೌಕಗಳಂತೆ ಗೋಚರಿಸುವ ಕೃತಿಯ ಪಲ್ಲವ್ಯನುಪಲ್ಲವಿ ಇವು —

ರಂಗ ಬಾರೊ ನರಸಿಂಗ ಬಾರೊ (ಪ)
ಅಂಗಜನಯ್ಯ ಕೊನೇರಿ ತಿಮ್ಮ ರಂಗ ಬಾರೊ (ಅ.ಪ.)

ಪಲ್ಲವಿಯಲ್ಲಿರುವಂತೆ ನರಹರಿಯ ನಾಮ ಬಹುತೇಕ ನುಡಿಗಳಲ್ಲಿದ್ದು ಪ್ರಾಶಸ್ತ್ಯ ಪಡೆದಿದೆ —

ಸಾಸಿರ ಮೂರುತಿ ವಾಸವವಂದ್ಯನೆ
ಸಾಸಿರ ನಾಮದೊಡೆಯನೆ
ಸಾಸಿರ ನಾಮದೊಡೆಯನೆ, ನರಹರಿ
ಕೇಶವ ನಮ್ಮ ಮನೆದೈವ (1)

ಮೊದಲ ಚರಣದುತ್ತರಾರ್ಧಕ್ಕೂ ಇರುವ ಆದಿಪ್ರಾಸ, ಪುನರಾವರ್ತಿತ ಚರಣಾಂತ್ಯದ ನರಹರಿ ನಾಮಕ ವಿಶೇಷರೂಪ, ಅಂತ್ಯಚರಣಾರಂಭದ ಕೇಶವಾದಿ ನಾಮ, ಅದೇ ನಮ್ಮ ಕುಲದೈವ ಎಂಬ ಅಂತ್ಯ — ಇವು ಎಲ್ಲ ನುಡಿಗಳಲ್ಲಿ ಸಾಮಾನ್ಯವಾಗಿರುವ ರಚನಾ ಕೌಶಲವಿಲ್ಲಿ ಗಮನೀಯ. ಕೇಶವಾದಿ ನಾಮಗಳ ದ್ವಿತೀಯಾಕ್ಷರ ಲಕ್ಷಿಸಿಯೇ ಆದಿಪ್ರಾಸ ಪೋಣಿಸಿಕೊಳ್ಳುವ ಜಾಣ್ಮೆ ನೋಡಿ —

ಚಾರಣ ವಂದ್ಯನೆ ಕಾರುಣ್ಯರೂಪನೆ
ಪುರಾಣಗಳಲ್ಲಿ ಪೊಗಳುವ
ಪುರಾಣಗಳಲ್ಲಿ ಪೊಗಳುವ, ನರಹರಿ
ನಾರಾಯಣ ನಮ್ಮ ಮನೆದೈವ (2)

ಹೀಗೆಯೇ ಮಾಧವ—ಗೋವಿಂದಾದಿ ನಾಮಗಳ ನುಡಿ ಮುಂಬರಿವಲ್ಲಿ ವಾದಿರಾಜರಿಗೆ ಪ್ರಿಯವಾದ ಕೃಷ್ಣಾವತಾರದ ವಿಶೇಷ ವಿಶೇಷವಾಗಿವೆ. 'ಯಾದವ ಕುಲದಲ್ಲಿ

ಸಾಧುಗಳರಸನೆ, ಗೋವರ್ಧನಗಿರಿ ಎತ್ತಿ ಕೊಡೆ ಮಾಡಿ' ಎಂಬ ನುಡಿ (3,4) ಮಾಧವ ಗೋವಿಂದರಿಗೆ ಸರಿ; ಆದರೆ 'ದುಷ್ಟ ಕಂಸನ ಗೆಲಿದು ಶಿಷ್ಟ ಪರಿಪಾಲನೆನಿಸಿದ ವಿಷ್ಣುವೆ, ವಿದುರನ ಮನೆಯಲಿ ನಲಿದುಂಡ ಮಧುಸೂದನ, ಅಕ್ರೂರನೊಡನೆ ಮಧುರೆಗೆ ಪೋದ ತ್ರಿವಿಕ್ರಮನೆ, ಶ್ರೀಧರ ಗೋಪಿತನಯನೆ' ಎಂಬ (5–9) ನುಡಿ ಗಮನಿಸಿ. ಅಂತೆಯೇ 'ವಸುದೇವತನಯನೆ, ಶಿಶುಪಾಲನ ಗೆಲಿದನೆ, ವಶವ ಮಾಡಿದೆಯೊ ತ್ರಿಪುರರ ವಾಸುದೇವ' ಎಂಬುವು (14) ಕೃಷ್ಣ–ವಿಷ್ಣುನಾಮಗಳಿಗೆ ಉಚಿತವೆನಿಸಿದರೂ, 'ಧ್ವನಿ ಕೇಳಿ ಬಂದ ಕುಬುಜೆಯ ಅನಿರುದ್ಧ, ಪಾರಿಜಾತದ ಹೂವ ನಾರಿಗೆ ಇತ್ತನೆ ಪುರುಷೋತ್ತಮ' ಎಂಬ (16–17) ನುಡಿ ವಾದಿರಾಜರ ಕೃಷ್ಣಾವತಾರದ ಒಲವನ್ನೆತ್ತಿ ತೋರುವಂತಿಲ್ಲವೇ? ಇನ್ನು ನರಸಿಂಹನಾಮಕ್ಕೆ ನರಹರಿಯ ವಿಶೇಷ ತಪ್ಪಿಸಿದ ಜಾಣ್ಮೆಯಿದು —

ನರಕಾಸುರನ ಕೊಂದು ಹಿರಣ್ಯನ ಮರ್ದಿಸಿ
ಕರುಳ ಬಗೆದು ವನಮಾಲೆ ಹಾಕಿ
ಕರುಳ ಬಗೆದು ವನಮಾಲೆ ಹಾಕಿದ, ಹರಿ
ನರಸಿಂಹನೆ ನಮ್ಮ ಮನದೈವ (19)

ಕೊನೆಗೆ ಕೃಷ್ಣನಾಮ 'ವೃಷ್ಣಿಯ ಕುಲತಿಲಕನೆ' ಎಂಬಂತಿರುವುದು ಸಮುಚಿತವೇ. ಮುಕ್ತಾಯದಲ್ಲಿ ಮುದ್ರಿಕೆ ಇರುವ ಮಂಗಳದ ನುಡಿಯಿದೆ —

ಇಪ್ಪತ್ತನಾಲ್ಕು ನಾಮಂಗಳ ಪಠಿಸುವನು
ಅಪ್ಪ ಕೇಶವನ ಚರಿತೆಯನು
ಅಪ್ಪ ಕೇಶವನ ಚರಿತೆಯನು ಪಾಡಲು
ಒಪ್ಪಿಕೊಳ್ಳುವ ಹಯವದನ (25)

ಈ ನುಡಿಯಿಂದಲೇ ಕೃತಿಗೆ 'ಕೇಶವನಾಮ' ಎಂದಿರುವುದೂ ಸಮುಚಿತವೆಂದು ಸೂಚಿತ. ಇಂತು ಚತುರ್ವಿಂಶತಿ ರೂಪಗಳನ್ನು ಸರಳ ಸುಂದರವಾಗಿ ಬಣ್ಣಿಸಿದ ಕೃತಿಯಿದು ರಚನಾ ಕೌಶಲ್ಯದೊಡನೆ ಸ್ತೋತ್ರಮಾಲಿಕೆಯಾಗಿ ಭಕ್ತರ ಕೊರಳನ್ನಲಂಕರಿಸಿದರಲ್ಲಿ ಅಚ್ಚರಿಯಿಲ್ಲ.

(2)

'ಕೃಷ್ಣ ಮುರಾರಿ ಕೇಶವ ಮುರಾರಿ'
ಅಚ್ಯುತಾನಂತ ಗೋವಿಂದ ಮುರಾರಿ

ಎಂಬ ಪಲ್ಲವಿಯ ಏಕಾಕರದ ಕೃತಿಯೂ 25 ದ್ವಿಪದಿಗಳಿಂದ ಕೇಶವನಾಮ ಹಾಡಿದೆ.

2ನೆಯ ಸಾಲು 'ಮುರಾರಿ'ಯಿಂದ ಮುಗಿದಿವೆ —

ವೇಷಧಾರಿಯಾಗಿ ಬಂದು ಅಸುರರ ಸಂಹರಿಸಿ
ಭೂಸುರರಿಗ್ವರವನಿತ್ತೊ ಕೇಶವ ಮುರಾರಿ (1)

ದೇಸೀ ರೂಪ ಪ್ರಾಸಾನುಪ್ರಾಸಗಳ ಹಾಗೂ ಕೃಷ್ಣಾವತಾರದ ಒಲವು ಇಲ್ಲೂ ಸುವ್ಯಕ್ತವಾಗಿದೆ —

ಇದ್ದ ಗೋಪೇರ ಮನೆಯ ಕದ್ದು ಬೆಣ್ಣೆಯ ಮೆದ್ದ
ಪದ್ಮದಳಾಕ್ಷ ಪ್ರದ್ಯುಮ್ನ ಮುರಾರಿ (15)

'ಸೀಮೆನಾಳುವ, ಸಲ್ಹೊ, ಮುದ್ದುಮರಿಗಳೊಕ್ಕೊ, ಉಬ್ಬಿಲ್ಲ, ಗರುವ' ಎಂಬಂಥ ದೇಸೀ ರೂಪಗಳೂ ಗಮನಾರ್ಹ. 25ನೆಯ ನುಡಿ ಹಂಸಪದನಾಂಕಿತವಾಗಿದ್ದು, ಈ ಕೃತಿ ಹೆಚ್ಚು ಸರಳತೆ ತೋರಿದೆ.

(3)

ಕೇಶವ ಜಗದೀಶ ಸಾಸಿರ ಭಾನುಕೋಟಿ ಸಂಕಾಶ
ವಾಸವಾದಿಗಳ ವಂದ್ಯ ಸೀತಾಪತೆ (1)

ಎಂಬ ನುಡಿಯಿಂದಾರಂಭವಾಗುವ ಏಕಾಕ್ಷರದ ಕೇಶವನಾಮದಲ್ಲೂ 24 ದ್ವಿಪದಿಗಳಿದ್ದು, ಅವೆಲ್ಲ ಕೇಶವಾದಿನಾಮಗಳಿಂದ ಮೊದಲಾಗಿವೆ; 'ಸೀತಾಪತೆ' ಎಂಬಂತೆ ಮುಗಿದಿವೆ, ರಾಮಾವತಾರದೊಲವು ತೋರಿವೆ. ಅಲ್ಲದೆ, 2ನೆಯ ಸಾಲಿನ ಆರಂಭದಕ್ಕೆ ದಶಾವತಾರಗಳನ್ನು ಜೋಡಿಸಿಕೊಂಡ ಜಾಣ್ಮೆ 3— 12ನೆಯ ನುಡಿಗಳಲ್ಲಿರುವುದು ಇಲ್ಲಿಯ ವಿಶೇಷವೆನಿಸಿದೆ —

ಮಾಧವ ಮಂಗಳಗಾತ್ರ ವೇದವನ್ನ ಕದ್ದು ಒಯ್ದ
ಆ ಖಳನ ಕೊಂದೆ ಸೀತಾಪತೆ (3)

ಇಲ್ಲಿ ಮತ್ಸ್ಯಾವತಾರ ಸೂಚಿತ. ಇದರಂತೆ 'ವಿಷ್ಣುವೆ ವರಾಹರೂಪನಾದ, ಮಧುಸೂದನ ಹರಿಯಾದ, ತ್ರಿವಿಕ್ರಮ ವಾಮನರೂಪಿಯಾದ, ರಾಮನ ಕ್ಷತ್ರೇರ ಕೊಂದ, ಶ್ರೀಧರ ಜಾನಕಿಯ ತಂದ, ಹೃಷಿಕೇಶ ವಸುದೇವ ಸುತನಾದ, ಪದ್ಮನಾಭ ಬುದ್ಧಾವತಾರಗೈದ, ದಾಮೋದರ ಕಲ್ಕಿನಾದ' ಉಕ್ತಿಗಳಿವೆ ಮುಂದೆ. ದಶಾವತಾರಗಳೊಡನೆ ರಾಮಾವತಾರದ ಒಲವು ತೋರಿದ ಈ ಕೃತಿಯ ಜನಾರ್ದನ ನಾಮದ ನುಡಿ —

ಜನಾರ್ದನ ರೂಪನಾಗಿ ಜಾನಕಿಯ ತಂದ
ಜಾಹ್ನವೀಜನಕ ರಾಮ ಸೀತಾಪತೆ (20)

ಇಲ್ಲಿ ಜಕಾರದ ಪ್ರಾಸವೂ ಮನಸ್ಸಿಗೆ ಪ್ರೇರಕವಾದಂತಿದೆ. ಕೊನೆಯ ನುಡಿ ಕೃಷ್ಣ ನಾಮದಿಂದಲೂ ರಾಮನಾಮ ಹಯವದನಾಂಕಿತಗಳನ್ನು ಪ್ರಾಸಬದ್ಧವಾಗಿ ಹೊಂದಿದೆ —

ರಕ್ಷಿಸಯ್ಯ ಕೃಷ್ಣರಾಮ ರಕ್ಷಿಸಯ್ಯ ಹಯವದನ
ಪಕ್ಷಿವಾಹನ ರಾಮ ಸೀತಾಪತೆ (24)

ಈ ಕೇಶವನಾಮವೂ ದ್ವಿಪದಿ; ಆದರಿದು 'ಅವತಾರತ್ರಯ ಸುವ್ವಾಲಿ — ಬಾಲಲೀಲೆಗಳಲ್ಲಿ ಬಳಕೆಗೊಂಡುದೆಂಬಂಶ ಇಲ್ಲಿ ಗಮನಾರ್ಹ. ಮಾತ್ರವಲ್ಲ, ಇದೇ ಛಂದದಲ್ಲಿ ಕೇಶವ ನಾಮ ರಚಿಸಿದ ಕನಕದಾಸರ ಮೇಲೆ ಇದು ಪ್ರಭಾವ ಬೀರಿದಂತಿದೆ. ಉದಾಹರಣೆಗೆ ವಾದಿರಾಜ– ಕನಕದಾಸರ ಈ ನುಡಿಗಳನ್ನು ನೋಡಿ —

ವಾಸುದೇವ ನಿಮ್ಮ ಪಾದಕೆ ವಂದನೆಯ ಮಾಡುವೆನಯ್ಯ
ದೋಷರಾಶಿ ನಾಶ ಮಾಡು ಸೀತಾಪತೆ (14)

ಸಂಕರುಷಣ ದೇವ ನಿಮ್ಮ ಕಿಂಕರರು ನಾವೆಲ್ಲರಯ್ಯ
ಪಂಕಜಾನನ ವಂದ್ಯ ಸೀತಾಪತೆ (13)

ಪುರುಷೋತ್ತಮ ಪುಣ್ಯನಾಮ ಸ್ಮರಿಸುವ ಜನರ
ಮನೋಹರುಷ ನೀಡಿದ ರಾಮ ಸೀತಾಪತೆ (17)

ಈಶ ನಿನ್ನ ಆ ಚರಣಭಜನೆ ಆಶೆಯಿಂದ ಮಾಡುವೆನು
ದೋಷರಾಶಿ ನಾಶ ಮಾಡು ಶ್ರೀಶ ಕೇಶವ (1)

ಪಂಕಜಾಕ್ಷ ನೀನು ಎನ್ನ ಮಂಕುಬುದ್ಧಿ ಬಿಡಿಸಿ ನಿನ್ನ
ಕಿಂಕರನನು ಮಾಡಿಕೊಳ್ಳು ಸಂಕರುಷಣ (13)

ಹರುಷದಿಂದ ನಿನ್ನ ನಾಮ ಸ್ಮರಿಸುವಂತೆ ಮಾಡು ಪ್ರೇಮ
ಇರಿಸು ನಿನ್ನ ಚರಣದಲ್ಲಿ ಪುರುಷೋತ್ತಮ (17)

ಕನಕದಾಸರು ವಾದಿರಾಜರ ಇತರ ಕೃತಿ ಭಾಗಗಳಿಂದಲೂ ಪ್ರಭಾವಿತರಾಗಿರುವುದನ್ನು ಅಂತಹ ಕೃತಿ ಭಾಗ ಪರಿಶೀಲಿಸುವಲ್ಲಿ ಕಾಣಬಹುದು. ಕಾರಣ ಪ್ರಸ್ತುತ ಕೇಶವನಾಮ ಕನಕದಾಸರ ಕೃತಿಗಿಂತ ಮುಂಚಿನದೆನ್ನಬಹುದು.

(4)

'ಗುಬ್ಬಿಯಾಳೊ ಗೋವಿಂದ ಗೋವಿಂದ, ಗೋವಿಂದ ಗೋವಿಂದನೆಂದು ನೆನೆಯುತಲೊ ಗುಬ್ಬಿಯಾಳೊ' ಎಂಬ ಪಲ್ಲವಿಯ ಹಾಡು 12 ದ್ವಿಪದಿಗಳಲ್ಲಿ ಸಾಗಿದೊಂದರಂತೆ ಕೇಶವನಾಮ ಹಾಗೂ 'ಗುಬ್ಬಿಯಾಳೊ' ಎಂಬ ಸೊಲ್ಲನ್ನು ಹೇಳಿದೆ. (ಆಂಧ್ರ ಸ್ತ್ರೀಯರು ದೀಪಾವಳಿಯೊಡನೆ ತಿರುಗುತ್ತ ಹಾಡುವ 'ಗುಬ್ಬೆಳ್ಳೊ' ಎಂಬ ಸೊಲ್ಲಿನ ಪಡಿ) –

ಕೇಶವನ್ನ ನೆನೆದರೆ ಕ್ಲೇಶ ಪರಿಹಾರವು ಗುಬ್ಬಿಯಾಳೊ
ನಾರಾಯಣನ ಧ್ಯಾನದಿಂದ ನರಕಭಯವಿಲ್ಲವೊ ಗುಬ್ಬಿಯಾಳೊ (1)

ಇದರಂತೆ 24 ನಾಮ ಹಾಗೂ ಅವುಗಳ ಕಾರ್ಯ ಪ್ರಾಸಭರಿತವಾಗಿದ್ದು, 13–14ನೆಯ ನುಡಿ 'ಈ ಗುಬ್ಬಿ ಪಾಡುವರಿಗೆ ಇಹ ಪರದ ಫಲ, ಹಯವದನನ ಪಾದಧ್ಯಾನ ನಿತ್ಯ' ಎಂದಿವೆ.

ಅಂತೂ ಈ ಕೇಶವನಾಮಗಳೇ ವಾದಿರಾಜರ ಕನ್ನಡ ಕೃತಿಗಳಲ್ಲಿ ಒಂದು ವೈಶಿಷ್ಟ್ಯವೆಂಬಂತಿವೆ.

## 2. ಬಿಡಿ ರಚನೆಗಳು

ವಾದಿರಾಜರ ಇಡಿಯ ಕನ್ನಡ ಕೃತಿಗಳಿಗಿಂತ ಬಿಡಿ ಬಿಡಿಯಾದ ಹಾಡುಗಳ ಸಂಖ್ಯೆ ಸತ್ತುಗಳರಡೂ ಹೆಚ್ಚು. ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿದ 'ವಾದಿರಾಜರ ಕೃತಿಗಳ'ಲ್ಲೇ ಸುಮಾರು 313 ರಚನೆಗಳಿವೆ. ಇವುಗಳಲ್ಲಿ 10 ಸುಳಾದಿ, 12 ಉಗಾಭೋಗ ಹಾಗೂ 6 ಸಮಗ್ರ ಕೃತಿಗಳೂ ಸೇರಿವೆ. ಹಾಗೆಯೇ 'ಅಕ್ಕ ನಂದಗೋಪನ ಅರಮನೆಯೊಳಗೊಬ್ಬ, ಹೇಗೆ ಕೊಟ್ಟನು ಹೊನ್ನಸಾಗರನು, ಫಲಹಾರವ ಮಾಡೊ, ಏಳು ಮಾರುತನೆ, ಕೇಳಲೊಲ್ಲನೆ ಎನ್ನ ಮಾತು, ಬೇಗ ಜಾವದಿ ಬಾರೊ, ವೇಣಿ ಮಾಧವನ ತೋರಿಸೆ, ಮುಂದೆ ಬೋಳಾದರೇನು' ಎಂಬಂಥ ಕೆಲವು ಪುರಂದರ– ವಿಜಯದಾಸಾದ್ಯನ್ಯರವೆಂದರೂ, 'ದಯಮಾಡೊ, ಬಿಂದುಮಾಧವ, ಬಾರಯ್ಯ ಯದುಕುಲತಿಲಕ, ಬಾರೈ ನಿನ್ನ ಮುದ್ದು ಮೊಗವನು ತೋರೈ – ಇವು ಬೇರೆ ಹಾಡಾಗಿರದೆ ಪಾಠಾಂತರಗಳ ಒಂದೇ ಹಾಡೆಂದರೂ, ಈ ಪ್ರಕಟಣೆಯಲ್ಲಿರದೆ ಅನ್ಯ ಪ್ರಕಟಣೆಗಳಲ್ಲೋ ಅಪ್ರಕಟಿತವಾಗಿಯೋ ಇರುವ ಕೆಲವು ಉಪಲಬ್ಧ ಕೀರ್ತನೆ ಸೇರಿ ಇವುಗಳ ಮೊತ್ತ ಸಹಜವಾಗಿ 300ಕ್ಕೂ ಮಿಕ್ಕಿದೆ.

ಇದರಲ್ಲಿ ಎರಡಕ್ಕಿಂತ ಹೆಚ್ಚು ಆಕರಗಳ ಸುಮಾರು 170 ರಚನೆಗಳಂತೂ ವಿಶ್ವಸನೀಯ ವೆನಿಸಿವೆ. ಇವೆಲ್ಲ ಹಲವು ವಿಷಯಗಳನ್ನು ಕುರಿತದ್ದು, ಕೆಲ ವಿಷಯ ಹಲವು ಹಾಡುಗಳಲ್ಲಿರು ವುದರಿಂದ, ಇದನ್ನು ಬಿಡಿ ಬಿಡಿಯಾಗಿ ಪರಿಶೀಲಿಸುವುದರ ಬದಲು, ವಿಷಯಾನುಗುಣ ಗುಂಪು ಗಳಾಗಿ ಸಮಾಲೋಚಿಸುವುದು ಸೂಕ್ತ. ಇದು ವಾದಿರಾಜರ ವ್ಯಕ್ತಿತ್ವದ ಕೆಲ ಆಸಕ್ತಿಕಾರಕ ಮುಖಗಳನ್ನೂ ತೋರಿಸಿಕೊಡುತ್ತದೆ.

1) ಆತ್ಮನಿವೇದನೆ

ವಾದಿರಾಜರು ಮುಮುಕ್ಷುಯೋಗಿಯಾದರೂ ಬಾಲಯತಿಯಾಗಿ ಬೆಳೆದು ಜನಸಾಮಾನ್ಯ ರಿಗೂ ಸಾಹಿತ್ಯ ಸೃಜಿಸಿದ್ದರಿಂದ, ಕೆಲ ಕೃತಿಗಳಲ್ಲಿ ಸಾಧಕರಂತೆಯೇ ಆತ್ಮ ನಿರೀಕ್ಷಣೆ-ನಿವೇದನೆ ಕಾಣಿಸಿದ್ದಾರೆ. ಅವರ ವ್ಯಕ್ತಿತ್ವದೊಳಗು ಎಷ್ಟೇ ಉನ್ನತವಾದರೂ, ಲೋಕಕ್ಕೆ ತೋರಿದ ಹೊರರೂಪ ಮಾನವೀಯ ಭಾವ ಮಿಡಿದಲ್ಲದೆ ಅವರ ನುಡಿ ಸವಿನುಡಿಯು ಸಾಹಿತ್ಯವೆನಿಸುವುದೆಂತು? ಅಂತೆಯೇ ಮುಮುಕ್ಷುರೂಪ ಮಾಡಿಕೊಂಡು ಹರಿದಾಸರಾಗಿ, ಭಕ್ತಿಯುದಿಸಿರದ ಸಾಧಕನ ಮನಸ್ಥಿತಿಯನ್ನವರು ನಿರೀಕ್ಷಿಸಿದ ರೀತಿ ಹೃದ್ಯವೆನಿಸಿದೆ. 'ಏನು ಬಂದೆಯೋ ಜೀವ ಶರೀರದೊಳು ವ್ಯರ್ಥವಾಗಿ, ಹೋಗುತಿದೆ ಹೊತ್ತು ಬರಿದೆ ವ್ಯರ್ಥವಾಗಿ, ದಾನವಿಲ್ಲ ಧರ್ಮವಿಲ್ಲ ಜ್ಞಾನವಿಲ್ಲ, ವಿಷಯಾಸೆ ಬಿಡಲೊಲ್ಲದೊ ದೇವ' ಎಂಬಂಥ ರಚನೆ ಲೌಕಿಕ ಆಸಕ್ತಿ, ಅಲೌಕಿಕ ಅನಾಸಕ್ತಿ ವರ್ಣಿಸಿ ಪಶ್ಚಾತ್ತಾಪ ಸೂಚಿಸಿವೆ. ಈ ಅಂತರಂಗದ ತಳಮಳ ನಿವೇದಿಸಿ ಲೌಕಿಕ ಬಿಡಿಸೆಂದು ಅಲೌಕಿಕ ಆಶಿಸಿದ ಬಗೆ ಇದು —

ಏನ ಹೇಳಲಿ ನರಹರಿ ನಿನ್ನ ಮಹಿಮೆಯು (ಪ)
ಧ್ಯಾನ ಮಾಡೇನೆಂದರೆ ನಿಲ್ಲಗೊಡದು ಮನ (ಅ.ಪ.)

..............................

ಲೇಸಾಗಿ ನಾಯಿ ಬಾಲಕೆ ನಾರಾಯಣ ತೈಲ
ಏನು ಬಾರಿ ತೀಡಿದರೆ ನೀಟಾಗುವುದೊ (2)

..............................

ಮಾಧವ ಭಕ್ತವತ್ಸಲ ಹಯವದನನೆ
ನೀ ದಯಮಾಡಿ ನಿನ್ನಂತೆ ಮಾಡೆನ್ನ ಮನ (3)

ಈ ಶರಣಾಗತ ಭಾವ ನಿವೇದಿಸಿದ ಇನ್ನೂ ಕೆಲವು ಕೃತಿಗಳ ಪಲ್ಲವಿ ಇಲ್ಲಿವೆ — "ಧರೆಯೊಳಗೆ ಬಹು ದೀನನಾಗಿ ಬಾಳುವೆ "(ಉಗಾಭೋಗ), ನಿನ್ನ ದಾಸನು ನಾನೆಂತಾಹೆನಯ್ಯ, ಅರ್ಜಿಪೆ ನೆಂಬಾಸೆ ಧನವಯ್ಯ (ಉಗಾಭೋಗ), ಬಾಗಿಲ ಬದ್ದಿಹ ಭಜಕನು ನಾನು, ಇನ್ನಾರಿಗುಸುರುವೆ, ನಿನಗೆ ನೀನೆ ಕೃಷ್ಣ ದಯಮಾಡಿ ಸಲಹಯ್ಯ, ನಿನ್ನ ಧ್ಯಾನಿಸುವ ಬಗೆ ಹ್ಯಾಂಗೊ,[406] ಇನ್ನೇನ ಮಾಡುವೆ ಇನ್ನಾರ ಬೇಡುವೆ, ನೂಕ್ಕಿದ ಕಲಿ ಇಕ್ಕೋ ಶಿಕ್ಷಿಸು, ಕೃಷ್ಣ ಕರಿಯು ಕಾಯ್ದ ಕರುಣ, ನಿತ್ಯ ನಿಗಮ ನಿಕರ ನಿಶ್ಚಿತ ನಿರ್ಮಲ ನಿಜವನ, ಮಾರ ಜಗದೇಕ ವೀರ ನಿನ್ನ ಕುಮಾರ, ದಾರಿಯು ತೋರೋ ಗೋಪಾಲ, ಆರಿಗಾರೋ ಕೃಷ್ಣ ಕುಮಾರ ಕುಮಾರನೆ, ನಿನ್ನನೇ ನಂಬಿಕೆ (ಉಗಾಭೋಗ), ಮೂಢನು ನಾನಯ್ಯ ನಿನ್ನನು ಬೇಡ ಲರಿಯೆನಯ್ಯ, ಮುದದಿ ನಂಬಿದೆನೊ ಹಯವದನನೆ, ಹಿಂದೂ ಮುಂದೂ ಎಂದೆಂದಿಗೂ ಗೋವಿಂದನೆ ಎನಗೆ ಬಂಧು, ನೀ ಕರುಣದಿಂದ ಪಾಲಿಸದಿದ್ದರೆ ಇನ್ನು ನಾ ಕಾಣೆ ಮನ್ನಿಸುವರ, ಅಡಿಗಾಧಾರವಿಲ್ಲ ಹಿಡಿವುದಕೆ ಕೊಂಬಿಲ್ಲ (ಉಗಾಭೋಗ), ಆವ ರೀತಿಯಿಂದ ನೀ ಎನ್ನ ಪಾಲಿಸೊ, ಕರುಣಿಸಿ ಕೇಳು ಕಂದನ ಮಾತ, ದೇವರ ದೇವನೆ ಕಾಯೊ, ಕಾಯಯ್ಯ ಕರುಣಿ ಮುಕ್ತಿಸರಣಿ." ಲೌಕಿಕವಳಿದು ಅಲೌಕಿಕ ಬರಲೆಂಬ ಭಾವದಿಂದಲೇ ಅರಳಿದ ಅತ್ಯಂತ ಪ್ರಾಸಪೂರ್ಣ ಪದವಿದು —

ಒಲ್ಲೆ ದುರಿತಗಳೊಲ್ಲೆ ಒಲ್ಲೆ
ಫುಲ್ಲನಾಭನ ಸ್ಮರಣೆ ಇಲ್ಲದೆ ಇರಲೊಲ್ಲೆ (ಪ)

ದುರ್ಜನರ ಸಂಗವನೆಂದೆಂದಿಗೂ ಒಲ್ಲೆ
ಸಜ್ಜನರ ವಿರಸಗಳೊಲ್ಲೆ ಒಲ್ಲೆ
ಅರ್ಜುನಸಖ ನಿನ್ನ ಸೇವೆಯು ಬಿಡಲೊಲ್ಲೆ
ಅಬ್ಜಬಾಣನ ಮೇಳ ಒಲ್ಲೆ ಒಲ್ಲೆನೊ ಸ್ವಾಮಿ (1)

ಬಲ್ಲೆನೆಂಬೊ ಅಹಂಕಾರ ಎಂದೆಂದಿಗೂ ಒಲ್ಲೆ
ಸಲ್ಲದ ಸುಖಗಳ ಒಲ್ಲೆ ಒಲ್ಲೆ
ಬಲ್ಲಿದ ಹರಿ ನಿಮ್ಮ ಪಾದವ ಬಿಡಲೊಲ್ಲೆ
ಕ್ಷುಲ್ಲ ದೇವರ ಪೂಜೆ ಒಲ್ಲೆ ಒಲ್ಲೆನೊ ಸ್ವಾಮಿ (2)

ಹರಿನಾಮಸ್ಮರಣೆಯು ಮನದಿ ತೊರೆದಿರಲೊಲ್ಲೆ
ದುರುವಿಷಯದಿ ಹರುಷ ಒಲ್ಲೆ ಒಲ್ಲೆ
ಕರುಣಿ ಹಯವದನನ ಕಂಡಲ್ಲದೆ ವಿರಕ್ತ
ಕಾರುಣ್ಯದ ಹವಣು ಒಲ್ಲೆ ಒಲ್ಲೆನೊ ಸ್ವಾಮಿ (3)

---

406. ಗುರು ವಾದಿರಾಜರ ಕೀರ್ತನೆ, ಪು.51.

'ಎಲು ಜಿಹ್ವೆ ಚೀಲದೊಳಗೆ' ಎಂದು ಮೊದಲಾಗುವ ಸುಳಾದಿಯೂ ಲೋಕಾಸಕ್ತನಿಗೆ ಹರಿ ಮರೆತುಹೋಗುವನೆಂದು 'ವೈರಾಗ್ಯ ಭಾಗ್ಯವಿತ್ತೆನ್ನ ಸಲಹಯ್ಯ' ಎಂಬ ಮೊರೆಯಿಟ್ಟು, 'ವೈರಾಗ್ಯ ಸುಳಾದಿ' ಎನಿಸಿದೆ. ಸ್ವತಃ ಸರ್ವಜ್ಞ ಮುಕ್ತದವರಾದರೂ ಲೌಕಿಕ ಶುಷ್ಕ ವಿದ್ಯೆಯನ್ನಲ್ಲಗಳೆದ ವಿನಯಪೂರ್ಣ ವ್ಯಕ್ತಿತ್ವ ವಾದಿರಾಜರ ಉಕ್ತಿಗಳಲ್ಲಿ ಸ್ಪಷ್ಟವಾಗಿ ನಿವೇದಿತ. 'ಓದುವುದು ವೇದ ಹಾಕುವುದು ಗಾಳ' ಎಂಬ ಗಾದೆಯಿಂದಲೇ ಮೊದಲಾಗಿದೆ ಒಂದು ಕೃತಿ. 'ಓದಿ ಮರುಳಾದರಯ್ಯ ಬೋಧವಿಲ್ಲದೆ'[407] ಎಂದು ಇತರರ ಕುರಿತೂ, 'ಓದಿ ಮರುಳಾದೆನಯ್ಯ ಓದನ ಮಾತ್ರಕ್ಕೆ'ಂದು ('ಈಗಲೋ ಇನ್ನಾವಾಗಲೋ' ಎಂಬ ಕೊನೆಗೊಳದ ಕೃತಿಯಲ್ಲಿ) ತಮ್ಮ ಬಗ್ಗೆಯೂ ಹೇಳಿದ್ದಾರೆ. 'ಸಕಲ ಸಾಧನವೆನಗೆ ಕೈ ಸೇರಿತು, ಮುಕುತಿಯು ಮಾತ್ರಗೆ ಬಾರದ ಧನವು' ಎಂಬ ಕೃತಿಯಲ್ಲಿ ಲೌಕಿಕ ಸಾಧನ ಅಲೌಕಿಕ ಮರೆತುದನ್ನೊರೆದಿದ್ದಾರೆ ವ್ಯಂಗ್ಯವಾಗಿ. ಈ ವಿಷಯದಲ್ಲಿದವರ ಕೋರಿಕೆಯು ಪ್ರತೀಕ ಈ ಪ್ರಾಸಪೂರ್ಣ ಉಗಾಭೋಗ —

ನಿನ್ನ ಧ್ಯಾನದ ಶಕ್ತಿಯು ಕೊಡೊ
ಅನ್ಯರಲಿ ವಿರಕ್ತಿಯು ಕೊಡೊ
ನಿನ್ನ ನೋಡುವ ಯುಕ್ತಿಯು ಕೊಡೊ
ನಿನ್ನ ಪಾಡುವ ಭಕ್ತಿಯು ಕೊಡೊ ನಿ
ನ್ನತ್ತ ಬರುವ ಸಂಪತ್ತಿಯು ಕೊಡೊ
ಚಿತ್ತದಿ ತತ್ವದ ಕೃತ್ಯವ ತೋರೊ
ಮತ್ತೆ ತುದಿಯಲಿ ಎನಗೆ ಮುಕ್ತಿಯು ಕೊಡೊ
ಅತ್ತಿತ್ತ ಮಾಡೊ ಭವಕತ್ತಲೆ ಎನಗೆ
ಮುತ್ತಿದೆ ಹಯವದನ

ಇವೆಲ್ಲ ಕೃತಿ ಲೌಕಿಕದ ವಿರುದ್ಧ ಅಲೌಕಿಕದಗತ್ಯವನ್ನು ಪ್ರತಿಪಾದಿಸಿರುವುದು ಸ್ಪಷ್ಟ. 'ಬಾಳು ಬಾಳೆ'ಂಬ ಹಾಡೊಂದು ವಾದಿರಾಜರು ಹರಿಪರರಾಗಿರುವ ಹರಕೆ ಹೊತ್ತು ಬಂದಂತೆ ಹೇಳಿದೆ.

2) <u>ಹರಿಸ್ತುತಿ</u>

ಐಹಿಕರಿಗೆ ಪಾರಮಾರ್ಥಿಕ ದೃಷ್ಟಿಯಿತ್ತು, ಹರಿಪರವಾಗಿ ಹಾಡಿದ ವಾದಿರಾಜರು ಮುಮುಕ್ಷುಸ್ವರೂಪರಾಗಿ ಜ್ಞಾನಮಾರ್ಗಿ ಹಯವದನನ ಆರಾಧಕರು. ಮಧು— ಕೈಟಭರಿಂದ

---

407. ಇದರ ಚರಣಾಂತ್ಯಗಳ 'ದಾವುದು' ಪ್ರಯೋಗ ಗಮನಾರ್ಹ.

ವೇದ ಉದ್ಧರಿಸಿ ತಂದ ರೂಪವದು ನಿತ್ಯವೂ ಅಪೂರ್ವ ಅಶ್ವಾಕಾರದಿಂದ ಬಂದು ವಾದಿರಾಜರು ನೈವೇದ್ಯ ಈವಾಗ ತಲೆಯಲ್ಲಿ ಹೊತ್ತು ಹಯಗ್ರೀವ ಮಡ್ಡಿಯನ್ನುಣ್ಣುತ್ತಿತ್ತು. ಆ ದರ್ಶನವಂತೂ ವರ್ಣಿತ —

ಕುದುರೆ ಬಂದಿದೆ ಚೆಲುವ ಕುದುರೆ ಬಂದಿದೆ (ಪ)

ಕುದುರೆ ಬಂದಿದೆ ವಾದಿರಾಜಗೆ ಮುದದಿ ಜ್ಞಾನ ಭಕುತಿ ಕೊಡುವ (ಅ.ಪ.)

ಹಿಂಗಾಲಿಂ ರಕ್ಕಸರ ಒದೆವ ಕುದುರೆ
ಮುಂಗಾಲು ಕೆದರಿ ಬಾಲವ ಬೀಸಿ
ತಗ್ಗಿಸಿ ತಲೆಯ ಅಡಿಗಡಿಗಳಿಗೆ
ಜಿಗಿದು ಹಾರಿ ಹೂಂಕರಿಸುವ (1)

ಗರುವಿ ಮಹಾಲಕ್ಷ್ಮಿ ತನ್ನ
ವರನೆಂದು ಒಲಿದು ಬರುವ
ಉರದಿ ಶ್ರೀವತ್ಸಕೌಸ್ತುಭ
ಧರಿಸಿ ತಾನು ಮೆರೆಯುವಂಥ (2)

ಹಲ್ಲಣವಿಲ್ಲದೆ ನಿಲ್ಲದು ಕುದುರೆ
ಒಲ್ಲದು ಕಡಿವಾಣ ಕುದುರೆ
ಬೆಲ್ಲ ಕಡಲೆ ಮೆಲ್ಲುವ ಕುದುರೆ
ಚೆಲುವ ಹಯವದನನೆಂಬೊ ಕುದುರೆ (3)

ಹರಿಯು ಈ ಸಾಕ್ಷಾತ ಪ್ರತೀಕಕ್ಕೇ ನೈವೇದ್ಯ ನೀಡುತ್ತಿದ್ದಾಗಿನ ಹಾಡಿದು[408] —

ಆವ ಕಡೆಯಿಂದ ಬಂದೆ ವಾಜಿವದನನೆ
ಭಾವಿಸುವ ವಾದಿರಾಜ ಮುನಿಯ ಕಾಣುತ (ಪ)

ನೇವರಿಸಿ ಮೈಯ ತಡವಿ ನೇಹದಿಂದಲಿ, ಮೇಲು
ನೈವೇದ್ಯವನ್ನು ಇತ್ತು ಭಜಿಸುವೆ (ಅ.ಪ.)

ಭಕುತಿ ಕಡಲೆ ಜ್ಞಾನ ವೈರಾಗ್ಯ ಬೆಲ್ಲದ
ಮುಕುತಿ ಆನಂದಸುಖದ ಕ್ಷೀರ ಲಡ್ಡಿಗೆ
ಯುಕುತಿ ಧ್ಯಾನ ಕೊಟ್ಟು ನೀನು ಎಲ್ಲ ಮಾತಲಿ
ಶಕುತಿ ಸಂತೋಷ ಮತಿಯ ತೋರಬಂದೆಯ (1)

---

408. 'ಆರೋಗಣೆಯ ಮಾಡೊ ಆನಂದ ಮೂರುತಿ, ಆರೋಗಣೆಯ ಮಾಡು ಸಾರಸುಖದೊಡೆಯ, ಫಲಹಾರವ ಮಾಡೊ ಪರಮ ಪುರುಷನೆ'. ಇದೇ ವಿಷಯದ ರಚನೆ. ಕೊನೆಯದು ಪಾಠಾಂತರಗಳಿಂದ ಪುರಂದರದಾಸರಲ್ಲೂ ಇದೆ. (ಪೂಜಾತತ್ವ, ಪು.125).

ಹೆತ್ತ ತುಪ್ಪ ಸಕ್ಕರೆಯು ಮುದ್ದಿ ಮುದ್ದೆಯು
ತುತ್ತು ಮಾಡಿ ಕೊಡಲು ಅವನು ಮೆಲುತ ಮೆದ್ದುತ
ಅತ್ಯಂತ ಸಂತೋಷ ನೀನು ಅಟ ತೋರುತ
ಭೃತ್ಯ ವಾದಿರಾಜ ಮುನಿಯು ಸಲಹಬಂದೆಯು (2)

ಫಲವ ಕೊಟ್ಟು ರಕ್ಷಿಸಿದಿ ವಾಜಿವದನನೆ
ನಿಲುವೊ ಜ್ಞಾನ ಭಕ್ತಿಯನ್ನು ನೀಡಬಂದೆಯು
ಸುಲಭ ಸುಮುಖ ಸುಪ್ರಸನ್ನ ಹಯವದನನೆ
ಚೆಲುವ ಚಿನ್ಮಯ ಮುರಾರಿ ನಮ್ಮ ಸಲಹಬಂದೆಯು (3)

ಈ ನೈವೇದ್ಯ ರೂಪಕ ಮುಕ್ತಿಸಾಧಕ; ಹರಿಪ್ರಸಾದಕ್ಕೆ ಭಕ್ತಿಯ ಕೃತಜ್ಞತೆ, ಭಕ್ತನ ಧನ್ಯತೆ ಇಲ್ಲಿ ಸುವ್ಯಕ್ತ. ಹರಿಯು ಈ ವಿಶೇಷ ರೂಪ ಕುರಿತ ಖ್ಯಾತಿ ಸಂಸ್ಕೃತ ಸ್ತೋತ್ರಗಳಂತೆ ಕನ್ನಡದಲ್ಲೂ ಕೆಲವಿವೆ. 'ಇಂದಿರೆಯರಸ ಚಂದ್ರಮಂಡಲ' ಹಯಮುಖ ನಲ್ಲಿ ಸಲ್ಲಿಸಿದ ಕೋರಿಕೆ. 'ಬಂದಾನಲ್ಲ ಭಾಗ್ಯನಿಧಿ' ಸೋದೆಗೈತಂದ ಹಯವದನನ ವರ್ಣನೆ.[409] 'ಜಯ ಜಯ ಶ್ರೀ ಹಯವದನ' ಸಕ್ಕದ ನುಡಿಗಳಲ್ಲೇ ತ್ರಿಪ್ರಾಸಯುಕ್ತ, ರಾಮಕೃಷ್ಣ ವ್ಯಾಸ ವರ್ಣನಾಯುತ (ವೃಂದಾವನಸ್ಥ 4 ರೂಪಗಳಿವು).

'ಮಧ್ಯಾಂತರ್ಗತ ವೇದವ್ಯಾಸ'[410] ಎಂದು ವ್ಯಾಸರನ್ನು ಪ್ರತ್ಯಕ್ಷ ಕೊಂಡಾಡಿದ ಈ ಯತಿಗಳ ಆರಾಧನೆಯ ಇನ್ನೊಂದು ವಿಶೇಷ ರೂಪ ತ್ರಿವಿಕ್ರಮನದು. ಸೂರ್ಯನ ಉದಯ ಮಧ್ಯ ಅಸ್ತಮಾನ ಪಥ ಸೂಚಕ ವ್ಯಾಪ್ತರೂಪದ ತಿರುಕೋಯಿಲೂರ ಪ್ರತಿಮೆ ಬ್ರಹ್ಮಸ್ಥಾಪಿತವಾದಂತೆ, ಬದರಿಯಲ್ಲಿ ಮಧ್ವರು ಅರ್ಜಿಸಿದ್ದ ಪ್ರತಿಮೆ ವಾದಿರಾಜರಿಂದ ಸೋದೆಗೆ ಬಂತು 1582ರಲ್ಲಿ. 'ಲಕ್ಷ್ಮೀಶೋಭಾನೆ'ಯಂಥ ಕೃತಿ ಅವನನ್ನು ಮೊದಲು ಉಲ್ಲೇಖಿಸಿದ್ದರೂ ಸೋದೆಯ ತ್ರಿವಿಕ್ರಮನ ಸ್ತೋತ್ರ–ಕೀರ್ತನೆ ನಂತರ ರಚಿತವಾಗಿವೆ. 'ಉಪ್ಪವಡಿಸಯ್ಯ ತ್ರಿವಿಕ್ರಮ ನಿನ್ನ ಪುರದೊಳಗೆ' ಎಂಬುದು 3 ಅಷ್ಟ ಪದಗಳ ಸುಪ್ರಭಾತವಾದರೆ, 'ಕಾಯಬೇಕು ಶ್ರೀತ್ರಿವಿಕ್ರಮ' 3 ದ್ವಿಪದಿಗಳ ಪ್ರಾರ್ಥನೆ, 'ತ್ರಿವಿಕ್ರಮರಾಯನ ನಂಬಿರೊ' ಎನ್ನುವುದು 'ಸೋದೆಯ ಪುರದಲ್ಲಿ ನಿಂದನ' 9 ನುಡಿಗಳ ನುತಿ. ('ದಯಮಾಡೊ ಕಾಶಿ ಬಿಂದುಮಾಧವ' ಎಂಬುದರ ಪಾಠಾಂತರಗಳಿರುವ

---

409. ಪಾವಂಜೆ ಪ್ರತಿ, ಪು. 12.

410. ನೋ. 'ಮಧ್ವ ಹೃತ್ಯಮುಸಿಸ್ಥಿತಂ' (ಅವತಾರತ್ರಯ ಸ್ತೋತ್ರ).

'ಬಿಂದುಮಾಧವ ಮಾಡದಿರೆನಗೆ ತಂದೆ ಭೇದವ' ಎನ್ನುವುದನ್ನು ಪ್ರತ್ಯೇಕವಿತ್ತು 'ವಾದಿರಾಜರ ಕೃತಿಗಳು' ಇವು ತ್ರಿವಿಕ್ರಮನಿಗೆ ಸಂಬಂಧಿಸಿದ ರಚನೆ ಎಂದು ಟಿಪ್ಪಣಿಸಿದೆ. ಆದರೆ 'ಸ್ವಪ್ನ ವೃಂದಾವನಾಖ್ಯಾನ' 20ನೆಯ ಅಧ್ಯಾಯಾಂತರದಲ್ಲಿ 'ನನ್ನ ವೃಂದಾವನಕ್ಕೆ ಶ್ರೀನಿವಾಸ ಬಿಂದುಮಾಧವರೆಲ್ಲ ಬಂದಿದ್ದಾರೆ' ಎಂದಿರುವ ಕಾರಣ, ಈ ಕನ್ನಡ ಕೃತಿ ಬಿಂದುಮಾಧವನನ್ನೇ ಕುರಿತುದೆನ್ನಬೇಕು.

ತಿರುಪತಿಯ ತಿಮ್ಮಪ್ಪನ ಕುರಿತು 'ಎಂದು ಕಾಂಬೆನು' ಎಂದು ಹಂಬಲಿಸಿದ್ದ ವಾದಿರಾಜರು ಸ್ವಪ್ನದಲ್ಲಿ ಕಂಡ ಶ್ರೀನಿವಾಸನನ್ನು ಸುಂದರವಾಗಿ ಅಪಾದಮಸ್ತಕ ಬಣ್ಣಿಸಿದ ಸುಳಾದಿ ಇದು —

ಅರಳಿದ ಕೆಂದಾವರೆಯ ಇರವ ಧಿಕ್ಕರಿಸುವ
ಗಿರಿಯ ತಿಮ್ಮರಾಯನ ಚರಣಗಳ ಕಂಡೆ ನಾ
ಕರಿಯ ದಂತವ ಪೋಲ್ವ ಜಂಘೆಗಳ ಕಂಡೆನಾ
ಹರಿಯ ಪೀವರ ತೊಡೆಗಳ ಕಂಡೆ ಕನಸಿನಲಿ
ಮೆರೆವ ವೆಂಕಟೇಶನ ಕಟಿಯ ಕಂಡೆನಾ
ಸಿರಿದೇವಿ ಸಿರಿವತ್ಸ ಕೊರಳ ಕೌಸ್ತುಭ ಹಾರ
ಸರದಿಂ ಮಿಂಚುವ ವಿಶಾಲುರಸ್ಥಳವ ಕಂಡೆನಾ
ಕರುಣಿ ವೆಂಕಟೇಶನ ಕಂಧರವ ಕಂಡೆ ನಾ
ಕರಚತುಷ್ಟಯದಲ್ಲಿ ಶಂಖ ಚಕ್ರ ಗದೆ ಪದುಮ
ಸರಸಿಜ ನಯನಗಳಿಂದೆಸೆವ ಸಿರಿಮೊಗವ ಕಂಡೆ ನಾ
ಸಿರಿಯರಸ ಹಯವದನ ಶೇಷಗಿರಿ ಅರಸನ ಕಿರೀಟವ
ಪರಿಪರಿಯ ಸೊಬಗ ನಾ ಕಂಡು ಕೃತಾರ್ಥನಾದೆ (1)

ಇಂದಿನ ದಿನ ಸುದಿನ ಗೋವಿಂದನ ಕಂಡ ಕಾರಣ
ಹಿಂದಿನ ಪಾಪ ವೃಂದವು ಬೆಂದುಹೋಯಿತು ಎನಗೆ
~~ಮುಂದಿನ ಅರಸನ ಸ್ಮರಣೆಯುದ್ಭವನು ಸಂಸಾರಭಂಗವನುತ್ತರಿಸುವ (5)~~
ಮುಂದಿನ ಮುಕುತಿ ದೊರಕಿತು (2)
ಶೇಷಗಿರಿ ಅರಸನ ಸ್ಮರಣೆಯುದ್ಭವನು ಸಂಸಾರಭಂಗವನುತ್ತರಿಸುವ (5)

ಅಂತೆಯೇ ಮುಂದಿನ ನುಡಿಗಳಲ್ಲಿ 'ಕೈವಲ್ಯವನೀವ ಶ್ರೀವಲ್ಲಭನ ಕೈಯಿಂದ ಕ್ಷುದ್ರವ ಬೇಡಿ ಗಾವಿಲನ ಪೋಲದಿರಿ, ಸಾವಿಲ್ಲದ ಮುಕುತಿ ಪಥವ ಬೇಡಿಕೊಳ್ಳಿರೊ, ತಿಮ್ಮರಾಯನ ಹಂಡು ಪುಲ್ಲಿಗೆಯ ಬೇಡುವರೆ?' ಎಂದಿದ್ದಾರೆ (7,9). ಪ್ರತ್ಯಕ್ಷ ತಿರುಪತಿಗೆ ತೆರಳಿದಾಗ

ಬೆಟ್ಟದ ಮೆಟ್ಟಲೂ ಸಾಲಿಗ್ರಾಮವಾಗಿ ಕಂಡು, ಮೊಳಕಾಲಿಂದೇರಿ ಸಂದರ್ಶಿಸಿದ ಸ್ವಾಮಿಗೆ ಸಾಲಿಗ್ರಾಮದ ಮಾಲೆ ಸ್ತುತಿ ಹಾಡಿದರು –

ಸಾರಿದೆನೊ ನಿನ್ನ ವೆಂಕಟರನ್ನ (ಪ)
ನೀರಜ ನಯನನೆ ನಿರ್ಮಲ ಗುಣಪೂರ್ಣ (ಅ·ಪ·)

ಅನಾಥನು ನಾನು ಎನಗೆ ಬಂಧು ನೀನು
ನಿನ್ನವನೆಂದು ನೋಡೊ ನೀನಾಗಿ ದಯಮಾಡೊ (1)

ಎನ್ನ ಕುಂದುಗಳನ್ನು ಎಣಿಸಲಾಗದೊ ದೇವ
ಪನ್ನಗಾದ್ರಿವಾಸ ನೀನ ನಿರ್ದೋಷ (2)

ದೇಶದೇಶದವರ ಪೊರೆವಂತೆ ಪೊರೆ ಎನ್ನ
ಶೇಷಾಚಲ ಧನ್ನ ಶ್ರೀಶ ಹಯವದನ (3)

ವಾದಿರಾಜರ ಈ ಪ್ರಾಸಂಗಿಕ ಪ್ರಾರ್ಥನೆ ನಮಗಿಂದು ಉತ್ತಮ ಗೇಯ ಗುಣದ ಕೀರ್ತನೆ. ಬಹುಶಃ ತಿರುಪತಿಯಲ್ಲಿರುವಾಗಲೇ (ರಾಮನವಮಿಯಂದು) ಹಾಡಿರಬಹುದಾದ ದಾಸ್ಯ ಭಾವದ 'ಸೇವಕನಲೊ ನಾನು' ಎಂಬುದರಲ್ಲಿ ರಾಮ–ಕೃಷ್ಣರನ್ನು 'ಶೇಷಗಿರಿಯಲಿ ನಿಂದ ವೆಂಕಟ'ನಿಗಭಿನ್ನರಾಗಿ ತೋರಿದ್ದಾರೆ. 'ಶ್ರೀಶ ನೀನಹುದೊ ಶೇಷಾಚಲವಾಸ ನೀನಹುದೊ, ನಮ್ಮಗಿರಿಯತಿಮ್ಮಪ್ಪರಬೊಮ್ಮ, ಶರಣು ಶರಣೂ (ಕನ್ನಡ–ಸಕ್ಕದ ಮಿಶ್ರಿತ ಕೃತಿ, ವಾ·ಕೃ· 311) ಎಂಬುವೂ ಅಲ್ಲೇ ರಚಿತವಾಗಿರಬೇಕು. ಇವಲ್ಲದೆ ವೆಂಕಟೇಶನನ್ನು ಕುರಿತ ಇನ್ನೂ ಕೆಲವು ಕೃತಿಗಳಿರಬೇಕೆನಿಸುತ್ತದೆ.[411] 'ಸ್ತ್ರೀಯರೆಲ್ಲರು ಬನ್ನಿರೆ, ಶ್ರೀನಿವಾಸನ ಪಾಡಿರೆ' ಎಂದಾರಂಭಿಸುವ ಶ್ರೀನಿವಾಸ ಕಲ್ಯಾಣದ ಹಾಡೊಂದು ಪ್ರಕಟವಾಗಿದೆ.[412] 'ಅಕ್ಷಿಜ ಮಾಸದಲಿ ಶ್ರೀನಿವಾಸ ಮದುವೆಯಾದನು' ಎಂಬ ಮಂಗಳಗೀತವೊಂದು ಯಾವ ಸಂಗ್ರಹದಲ್ಲೂ ಪ್ರಕಟವಾದಂತಿಲ್ಲ.[413]

---

411· ಉದಾಹರಣೆಗೆ 'ಶ್ರೀನಿವಾಸದೇವರ ಹಾಡು' (ಕನ್ನಡ ಗ್ರಂಥಸೂಚಿ 3, 202)·

412· ಕೆ·ಎಲ್· ಪುಷ್ಪರ ಪ್ರಸಾದರಿಂದ·

413· ಅನುಬಂಧಿತ·

ಶ್ರೀರಂಗಪಟ್ಟಣದ ರಂಗನಾಥನನ್ನು ಸಂದರ್ಶಿಸಿದಾಗ, 'ಇಷ್ಟು ದಿನ ಭೂ ವೈಕುಂಠ ಎಷ್ಟು ದೂರವೆನುತಿದ್ದೆ'[414] ಎಂದುಸುರಿದ ವಾದಿರಾಜರು 'ಜನ್ಮ ಸಫಲವಾಯು' ತೆಂದೂ ಹಾಡಿದ್ದಾರೆ. ಬೇಲೂರಿಗೈತಂದಾಗ ಚೆನ್ನಕೇಶವನನ್ನು ಸ್ತುತಿಸಿ 'ಬೇಗ ಬಾರೋ ಬೇಗ ಬಾರೋ ನೀಲ ಮೇಘವರ್ಣ' ಎಂದು ಹಾಡಲು ರಥ ಚಲಿಸಿದ್ದು ಚರಿತ್ರೋಕ್ತ. 'ಚೆನ್ನಕೇಶವದೇವರಾಯ, ಎನ್ನನುದ್ಧರಿಸಲಾಗದೆ ಚೆನ್ನರಾಯ, ಎನ್ನ ಹುಯಿಲು ಕೇಳಬಾರದೆ' ಎಂಬುವೂ ಬಹುಶಃ ಆಗಲೇ ರಚಿತವಾಗಿರಬೇಕು. (ವೈಕುಂಠದಾಸರೊಡನೆ ಸಮಾಗಮ ಒದಗಿ, ಮಗುವ ತೋರಿದವರನ್ನು 'ದಾಸೋತ್ತಮ ಎನಗೆ ಹರಿಯ ತೋರಿ ಧನ್ಯನ ಮಾಡಿದ' ಎಂದು ಕೊಂಡಾಡಿರಬೇಕು).

ಶ್ರೀರಾಮನ ಸ್ತುತಿ 'ಜಯ ಜಯ, ಪರಮ ಪಾವನ್ನನಾಮ ಧೀರ ಸಂಗರ ಭೀಮ, ಶರಣು ಶರಣು, ಮಂಗಳಂ ಶ್ರೀರಾಮಚಂದ್ರಗೆ' ಮೊದಲಾದ ಕೃತಿಗಳಲ್ಲಿವೆ. 'ವೇಣುನಾದಪ್ರಿಯ' ಸಕ್ಕದ ಶಬ್ದಗಳಿಂದಲೇ ಕೃಷ್ಣನೊಡನೆ ರಾಮನನ್ನೂ ವರ್ಣಿಸಿದೆ.[415] ವಾದಿರಾಜರ ಹರಿಸ್ತುತಿಗಳಲ್ಲಿ ಕೃಷ್ಣನವೇ ವಿಶೇಷವಾಗಿ, ಸಾಮಾನ್ಯ ಹರಿಸ್ತುತಿಯಲ್ಲೂ ಅದರ ಛಾಯೆ ಇಣುಕುವುದಕ್ಕೆ ನಿದರ್ಶನ —

ಕಾಪುದೆಮ್ಮನು ಜಗವ ಕಾವ ಕರುಣಿಯೆ (ಪ)
ಈವುದೆಮಗೆ ಸಕಲ ಸುಖವ ದೇವ ಲಕುಮಿ ನಾರಾಯಣ (ಅ.ಪ.)

ಕಮಲಕರ್ಣಿಕಾ ಮಧ್ಯದಲ್ಲಿ ವಿಮಲ ವಿಹಂಗಪತಿಯ ಶಿರದಿ
ಕಮಲಭವನು ಬಿಡದೆ ಪೂಜಿಪ ಅಮರಕುಲಲಾಮ ವಿಭುವೆ (1)

ಮಧ್ವಮುನಿಯ ಕರಗಳಿಂದೊ ಪದುಮೆಗಳಿಂದ ಪೂಜಿತ ಚರಣ
ಗೆದ್ದು ಕುಜನತತಿಯ ಸುಜನರುದ್ಧರಿಸುವ ಗುಣನಿಧಿಯೆ(2)

ಶಂಖ ಚಕ್ರ ಗದಾಪದುಮ ಅಂಕಗಳಿಂದ ಶೋಭಿತ ಕರ
ಪಂಕಜಾಕ್ಷ ಪಯೋಧಿಶಯನ ಶಂಕೆಯಿಲ್ಲದೆ ಹಯವದನ (3)

---

414. ಹೋ. 'ಇಷ್ಟುದಿನ ಈ ವೈಕುಂಠ ಎಷ್ಟು ದೂರವೊ ಎನ್ನುತಲಿದ್ದೆ' (ಕನಕದಾಸರು).

415. 'ನಾರಾಯಣ ನಾರಾಯಣ, ಹರಿನಾರಾಯಣ' ಎಂಬ ರಚನೆಗಳೂ ಸಕ್ಕದಯುಕ್ತ ಹರಿಸ್ತುತಿ; 'ಗೋವಿಂದ ಗೋಪಾಲ' ಕೃಷ್ಣನನ್ನೂ ಸೇರಿಸಿಕೊಂಡಿದೆ.

ಇಲ್ಲಿ 2ನೆಯ ನುಡಿಯ ಮೊದಲ ಸಾಲು ಮಾತ್ರ ಕೃಷ್ಣನನ್ನು ಧ್ವನಿಸಿದೆ. ಮಧ್ವರಂತೆ ಕೃಷ್ಣನನ್ನಾರಾಧಿಸಿದ ವಾದಿರಾಜರಲ್ಲಿ ಹಲವು ಕನ್ನಡ ಕೃತಿ ಕೃಷ್ಣನನ್ನು ಕುರಿತಿರುವುದರಿಂದ, ಬೇರೊಂದು ಭಾಗವಾಗಿ ಪರಿಶೀಲಿಸಿದೆ.

3) <u>ಕೃಷ್ಣ ದರ್ಶನ</u>

ವಾದಿರಾಜರ ಒಲವಿನ ಕೃಷ್ಣಮೂರ್ತಿ ಅವರ ಅನೇಕ ಕನ್ನಡ ಕೃತಿಗಳಲ್ಲಿ ಚಿತ್ರಿತನಾಗಿರುವುದರಿಂದ, ಆ ಅವತಾರದ ಸಮಗ್ರ ದರ್ಶನ ಒದಗುವಂತಿದೆ. ದಶಾವತಾರ– ಚತುರ್ವಿಂಶತಿ ರೂಪಗಳನ್ನು ಬಣ್ಣಿಸುವಾಗಲೂ ಕೃಷ್ಣಾವತಾರದ ಪ್ರಸ್ತಾಪವಿರುವುದು ವಾದಿರಾಜರ ಒಲವನ್ನೇ ತೋರುವುದು. (ಈ ಅಂಶವನ್ನಾಗಲೇ 'ಕೇಶವನಾಮ'ದಲ್ಲಿ ಗಮನಿಸಿದ್ದೇವೆ). ಬಾಲಕೃಷ್ಣನ ಲೀಲಾ ವಿನೋದ, ಅವನನ್ನು ಕುರಿತ ತಾಯಿಯ ವಾತ್ಸಲ್ಯ, ಗೋಪಿಯರ ಮಧುರ ಭಕ್ತಿ ಮೊದಲಾದನೇಕ ಭಾವತರಂಗ ಹಲವಾರು ಬಿಡಿ ಹಾಡುಗಳಲ್ಲಿ ಕೂಡ ತುಂಬಿ ತುಳುಕಿವೆ.

ವಾದಿರಾಜರ ಪೂಜೆ, ಪ್ರಾರ್ಥನೆ ಪಡೆದ ಉಡುಪಿಯ ಬಾಲಕೃಷ್ಣ ಅವರ ಅಕ್ಕರೆಯ ಮೂರ್ತಿಯಾಗಿ ಮೂಡಿದ್ದಾನೆ ಹಲವು ಕೀರ್ತನೆಗಳಲ್ಲಿ. 'ಈ ಮುದ್ದು ಕೃಷ್ಣನ' ಎಂಬುದು ಅವನನ್ನು ನಖಶಿಖಾಂತ ಬಣ್ಣಿಸಿದೆ (ಶ್ರೀನಿವಾಸ ನಖಾದಿಯಂತೆ). ವೃದ್ಧ ವಿಪ್ರನ ಅನುಕೂಲಕ್ಕೆಂತು 'ಕವಿಕದಂಬ ಕಂಠಭೂಷಾ'ದಂತೆ, ಕನ್ನಡಿಗರಿಗೆ 9 ನುಡಿಗಳ ಸಾರಕಥೆಯೊಂದನ್ನೊದಗಿಸಿದ್ದಾರೆ ವಾದಿರಾಜರು. ಸಕ್ಕದದ 'ಪಾಲಯಾಚ್ಯುತ ಪಾಲಯಾಜಿತ ಪಾಲಯ ಕಮಲಾಲಯ' ಎಂಬ ಕೃಷ್ಣಾಷ್ಟಕದ ಧಾಟಿ, ಆದಿ–ಉಪಾಂತ್ಯ–ಅಂತ್ಯಪ್ರಾಸ ಇಲ್ಲೂ ಇವೆ –

ನೆನೆಮನದಿನ ನೀಲ ನೀರದವರ್ಣನ ಗುಣಾರ್ಣವನ
ಮುನಿಜನಪ್ರಿಯ ಮುದ್ದು ಉಡುಪಿನ ರಂಗನ ರಮಾಪಾಂಗನ (ಪ)

ದೇವಕಿ ಜಠರೋದಯಾಂಬುಧಿಚಂದ್ರನ ಸುಖಸಾಂದ್ರನ
ಗೋವ್ರಜಕೆ ಘನ ಯಮುನೆಯನು ದಾಟಿ ಬಂದನ ಅಲ್ಲಿ ನಿಂದನ
ಮಾವ ಕಳುಹಿದ ಮಾಯು ಶಕಟಿಯ ಕೊಂದನ ಚಿದಾನಂದನ
ದೇವರಿಪು ದೈತ್ಯೇಂದ್ರ ಶಕಟನ ಒದ್ದನ ತೃಪ್ತಿಸಿದ್ದನ ॥(1)

ಮುಂದಿನ ನುಡಿಗಳಲ್ಲಿ ವಸ್ತ್ರಾಪಹರಣ, ಧೇನುಕವಿಘಾತ, ಕಾಳಿಂಗಮರ್ದನ, ಗೋವರ್ಧನೋದ್ಧಾರ, ಸೋಳ ಸಾಸಿರ[416] ಬಾಲೆಯರ ಬಿಡಿಸಿದ್ದು, ಜಲಕ್ರೀಡೆ, ಬಕಾದಿವಧೆ ಮಥುರಾಗಮನ ಕುಬ್ಜಾಹ್ಲಾದ, ವಾರಣನಾಶ, ಧನುರ್ಭಂಗ, ಕಂಸ ಸಂಹಾರ, ತಾಯಿ ತಂದೆಗಳ ಬಿಡಿಸಿದ್ದು, ಉಗ್ರಸೇನ ಪಟ್ಟ, ಉದ್ಧವದೌತ್ಯ, ವಿದ್ಯಾಭ್ಯಾಸ, ಮಾಗಧಜಯ, ದ್ವಾರಕಾ ರಚನೆ, ಖಾಂಡವ ವನ ದಹನ, ಅಷ್ಟಮಹಿಷೀವರಣ, ಪಾರಿಜಾತ ಹರಣ, ಶಿಶುಪಾಲ ನಾಶ, ಪಾಂಡವ ಸಹಾಯ ಸೂಚಿತ. ಕೊನೆಗೆ —

ಸಂತತವೀ ಸಾರಕಥೆಯನು ಕೇಳ್ವರ ನೆರೆ ಬಾಳ್ವರ
ಕಂತುಪಿತ ಕಾರುಣ್ಯದಿಂದಲಿ ಹೊರೆವನು ಸುಖಗರೆವನು
ಇಂತು ಇಳೆಯ ಸುಜನರ ಸಲಹುವ ಕಾಂತನ ಸಿರಿವಂತನ
ಪಂಥವುಳ್ಳ ಪ್ರಸನ್ನ ಹಯವದನ್ನನ ಮುನಿಮಾನ್ಯನ (9)

ಎಂಬ ಫಲಶ್ರುತಿ ಇದೆ. ಕೃಷ್ಣನ ಸಾರಕಥೆಯ ಕೃತಿಯೂ ದಶಮಸ್ಕಂಧ ಪಠಣದ ಫಲ ಕೊಡುವಂಥದು. ಮಲ್ಲಿಕಾಮಾಲೆಯ ಕೃಷ್ಣಾಷ್ಟಕದ ಪ್ರತಿ ಶ್ಲೋಕ 'ರೌಪ್ಯ ಪೀಠ ಕೃತಾಲಯಂ ಹರಿಮಾಲಯಂ' ಎಂದು ಮುಗಿದರೆ, ಈ ಆದಿ ಹ್ರಸ್ವ— ದೀರ್ಘಾಕ್ಷರಗಳ ತರಳ ಮಲ್ಲಿಕಾ ವೃತ್ತಯುತ ಕನ್ನಡ ಕೃತಿ ಉಡುಪಿಯ ಕೃಷ್ಣ, ಗೋಕುಲ ಕೃಷ್ಣ ಇಬ್ಬರನ್ನೂ ಕುರಿತುದು ಬೇಲಿನ ಪಲ್ಲವಿ ನುಡಿಗಳಿಂದ ಸಿದರ್ಶಿತ. ಆದ್ಯಕ್ಷರಾನಂತರದ ಗುರು ಲಘು ಕ್ರಮ, ಮಾತ್ರಾ ಸಂಖ್ಯೆ ಒಂದೇ ಆಗಿರುವ ಅಕರ ವೃತ್ತಗಳಿವು ಮಾತ್ರೆಗಳತ್ತ ಒಲಿದು ಗೇಯವೆನಿಸಿವೆ. 'ವಿಷಯ ಬಾಹುಳ್ಯದಂತೆಯೇ ಇಲ್ಲಿನ ಛಂದೋಲಯ ಮತ್ತು ಪದಲಾಲಿತ್ಯಗಳ ಸೌಂದರ್ಯವೂ ಪರಿಶೀಲನಾರ್ಹ' (ವಾದಿರಾಜರ ಕೃತಿಗಳು, ಪೀಠಿಕೆ; 17).

ಇದೇ ಮಿಶ್ರ ಲಯದ 'ರುಗ್ಮಭೂಷಾ ಪಾಲಿಸೆನ್ನನು' ಎಂಬ ಏಕಾಕರದ ರಚನೆ ಉಡುಪಿಗೆ ಬಂದ ಕೃಷ್ಣನ ಕತೆ ಹೇಳಿದ್ದು, 'ಹಯವದನಾ'ಂಕಿತದ ಬದಲು 'ರಘುತಿಲಕ' ಅಂಕಿತ ಹಾಗೂ ಪಾಠಾಂತರ ಕಂಡ ಕೆಲವರು ಇದು 18ನೆಯ ಶತಕದ ಫಲಿಮಾರು ಮಠೀಯ ರಘುವರ್ಯತೀರ್ಥರದೆನ್ನುವರು.[417] ಆದರೆ 'ಮಧ್ವನಾಮ' (43—47), ಬಾಲಲೀಲೆ (ಉ.506—509)' ಇಲ್ಲ ಇತರ ಕೆಲ ಹಾಡುಗಳಲ್ಲೂ ವಾದಿರಾಜರಿಂದಲೇ ಉಕ್ತ ವಿಷಯ

---

416. ದೇಸೀ ಪ್ರಯೋಗ.

417. 'ತರಂಗ', 20.1.85.

ಅವರ ಕೀರ್ತನೆಯಲ್ಲಿರುವುದು ಸಹಜ. 'ಉದ್ಭವಿಸಯ್ಯ ಉಡುಪಿನ ಕೃಷ್ಣ' ಸುಪ್ರಭಾತವಾಗಿ ಒಳ್ಳೆಯ ಗಾಯಕರಿಗೆ ಕಾದಿದೆ. ಭಾಮಿನಿ ಷಟ್ಪದಿಯ 'ಇಂದ್ರಲೋಕವ ಪೋಲ್ವ' ಹಾಗೂ 'ಉತ್ಸವದಲ್ಯಾಹ್ನಿಕದ' ಎಂಬುವು ನಿತ್ಯಾರ್ಚನ ಕ್ರಮಗಳನ್ನು ವಿವರಿಸಿವೆ. 'ಬಣ್ಣಿಸಲಳವೆ' ಎಂಬ ಸಪ್ತಪದಿಗಳ ಹಾಡು 7 ನುಡಿಗಳಿಂದ 7 ದಿನದ ವೇಷಭೂಷಾ ವರ್ಣಿಸಿದೆ. 'ಕಡು ಮುದ್ದು ಮೋಹನನಾದ ಈ ಸೊಬಗನ' ಎಂಬುದು ಸಾಮಾನ್ಯರಿಗೂ ಸುಲಭಲಭ್ಯನಾದು ದನ್ನೊತ್ತರಿದರೆ, 'ಬಿಡದೆ ಭಜಿಸಿ' ಎಂಬುದರಲ್ಲಿ ತನ್ನಡಿಗಳ ಧೇನಿಪರ[418] ಇಷ್ಟಾಂಕಿತ ಕಡೆದು ಕೊಡುವೆನೆಂದು ಕಡೆಗೋಲು ನೇಣನ ಪಿಡಿದಿಹ, ಕುಜನರ ಶಿಕ್ಷಿಪೆನೆಂದು ಪಾಶದಂಡಧಾರಿಯಾಗಿಪ್ಪ, ಭಕ್ತವತ್ಸಲನ ಸ್ತುತಿಯಿದೆ. 'ಉಡುಪಿನ ಕೃಷ್ಣ, ಉಡುಪಿನ ರಂಗ, ಕೃಷ್ಣ ಭವರೋಗದ ಮದ್ದು, ನೋಡಿದೆ ಶ್ರೀಕೃಷ್ಣನ, ಗಾಡಿಕಾರ ಶ್ರೀಕೃಷ್ಣ, ಭಕುತರ್ಗೆ ಬಂದು ಬಾರದು, ಮಹಿಮೆಯನಾರು ಬಲ್ಲರು' ಎಂಬುವು ಪ್ರಕಟಿತ ಉಡುಪಿ ಕೃಷ್ಣನ ಸ್ತುತಿ. 'ಹಡಗಿನೊಳಗಿಂದ ಬಂದ ಕಡು ಮುದ್ದು ಶ್ರೀಕೃಷ್ಣ' ಎಂಬ ಅರಶಿಪದ ಎಲ್ಲಾ ಪ್ರಕಟಗೊಂಡಂತಿಲ್ಲ.[419]

ಈ ಮುದ್ದುಕೃಷ್ಣನನ್ನು ಕುರಿತ ವಾತ್ಸಲ್ಯಗೀತಗಳಿಗೂ ಕೊರತೆಯಿಲ್ಲ. ಅವನನ್ನು ಉಡಿಯೊಳಿಟ್ಟು ಆಡಿಸುವ ಯಶೋದೆಯ ವಾತ್ಸಲ್ಯ ಹಾಗೂ ಹರಿಯ ಅಪ್ರಮೇಯ ಗುಣಗಳ ವಿರೋಧಾಭಾಸಯುಕ್ತ ಲಾಲನೆ ಪಾಲನೆಯ ವರ್ಣನವಿದು —

ಏನು ಸುಕೃತವ ಮಾಡಿದಳೋ ಯಶೋದೆ
ಶ್ರೀನಿಧಿಯಾದ ಕೃಷ್ಣನ್ನ ಕರೆದು ಮುದ್ದಿಸುವಳಂತೆ (ಪ)

ಗಂಗಾಜನಕನಿಗೆ ಗಡಿಗೆ ನೀರೆರೆವಳಂತೆ
ಮಂಗಳಾಂಗಗೆ ಶೃಂಗರಿಸುವಳಂತೆ
ತುಂಗಭೂಧರನ್ನ ತೊಟ್ಟಿಲೊಳು ತೂಗುವಳಂತೆ
ಕಂಗಳಿಗಗೋಚರನ ಕರೆದಪ್ಪಿಕೊಳ್ಳುವಳಂತೆ (1)

ನಗವನೆತ್ತಿದವನ ಮಗುವೆಂದೆತ್ತುವಳಂತೆ
ನಿಗಮಗೋಚರನ ತಾನಿಟ್ಟಪಳಂತೆ

---

418. ದೇಸೀ ರೂಪ. 'ತೀರ್ಥಪ್ರಬಂಧ' (ಪಶ್ಚಿಮದ ಆದಿಗಿರುವ) 'ನಿರ್ಮಥ್ಯೋಗ್ರ ಭವಾರ್ಣವೇ' ಎಂಬ ಶ್ಲೋಕದ ಭಾವವೂ ಇದೇ.

419. ಇದೇ ಹಾಡು ಪಾಠಾಂತರ ಸಹಿತ 'ಬಾರೈ ನಿನ್ನ ಮುದ್ದು ಮೊಗವನು ತೋರೈ' ಎಂದು ಪ್ರತ್ಯೇಕ ಅಚ್ಚಾಗಿದೆ 'ವಾದಿರಾಜರ ಕೃತಿ'ಗಳಲ್ಲಿ.

ಅಗಣಿತ ಸತ್ವನ್ನ ಹಗ್ಗದಿ ಕಟ್ಟುವಳಂತೆ
ಹಸಿಗೆ ನಿತ್ಯತೃಪ್ತಗೆ ಹಾಲನೆರೆವಳಂತೆ (2)

ಬಹುಮುಖನಿಗೆ ಭಾವೆ ಮುದ್ದು ಕೊಡುವಳಂತೆ
ಅಹಿತಲ್ಪನಿಗೆ ಹಾವ ತರದೀ ಎಂಬಳಂತೆ
ಮಹಾದೈತ್ಯದಲ್ಲಣನಿಗೆ ಬಹುಭಯವ ತೋರುವಳಂತೆ
ಮಹಿಮ ನರಸಿಂಹಗೆ ಗುಮ್ಮನ ತೋರುವಳಂತೆ (3)

ಚತುರ್ಮುಖ ಪಿತನ ಸುತನೆಂದೆತ್ತುವಳಂತೆ
ಶೃತಿವಿನುತಗೆ ಜೋಗುಳ ಹಾಡುವಳಂತೆ
ಶತರವಿತೇಜಗೆ ಆರತಿಯನೆತ್ತುವಳಂತೆ
ಗತಭೀತನಿಗೆ ಭಾವೆ ರಕ್ಷೆ ಇಕ್ಕುವಳಂತೆ (4)

ಇಲ್ಲಿಯೂ ಆದ್ಯಂತ ಪ್ರಾಸ ಗಮನೀಯವಾಗಿದೆ. (ಇಂಥವೇ ವರ್ಣನೆ ಪುರಂದರದಾಸರ 'ಗೋಪಿಯ ಭಾಗ್ಯವಿದು, ಮಗನೆಂದಾಡಿಸುವಳು' ಎಂಬ ಹಾಡುಗಳಲ್ಲಿವೆ). ಇದರಂತೆ ಕೃಷ್ಣನನ್ನು ಕರೆವ ಕೃತಿಗಳಲ್ಲೂ ವಾತ್ಸಲ್ಯ ಹರಿಮಹಿಮೆಗಳೆರಡೂ ಚಿತ್ರಿತವಾಗಿವೆ. 'ಇತ್ತ ಬಾರೋ ಬಾಲ ಇತ್ತ ಬಾರೋ, ಬಾರಯ್ಯ ಯದುಕುಲತಿಲಕ, ಬಾರೋ ಮುರಾರಿ' ಮೊದಲಾದವು ಇದಕ್ಕೆ ನಿದರ್ಶನ; ಕೊನೆಯ ಪುಟ್ಟ ಪದ ಪ್ರಾಸಪೂರ್ಣವಾಗಿ 'ಆಟ ಸಾಕೇಳೊ, ಮೈಯೆಲ್ಲ ಧೂಳೋ, ಊಟ ಮಾಡೇಳೊ, ಕೃಷ್ಣ ಕೃಪಾಳೊ' ಎಂದೆಬ್ಬಿಸುತ್ತಲೇ 'ಅರುಣಾಬ್ಜ ಚರಣ, ಪನ್ನಂಗಶಯನ, ಅರವಿಂದನಯನ, ಸಿರಿಹಯವದನ' ಎನ್ನುವ ಸ್ವಾರಸ್ಯ ಗಮನಾರ್ಹ! ಕೃಷ್ಣ ಬಂದ ಚಿತ್ರದ ಸೊಗಸಿದು —

ಬಂದ ಶ್ರೀಕೃಷ್ಣನರಿಯುತ್ತ ನಸುನಗೆ
ಯಿಂದ ಬೇಗ ಯಶೋದೆಯುದ್ದಗೆ (ಪ)

ಉದಯದೊಳೆದ್ದು ಮೊಸರ ಕಡೆವಾಗ ತನ್ನ
ಅದ್ಭುತ ಬಾಲಲೀಲೆಗಳ ಹಾಡೆ
ಮುದದಿ ನಯನದಿ ಜಲ ತುಳುಕಾಡುತಿರೆ ಕಂಡು
ಮದನನಯ್ಯನು ನಟ್ಟು ಬೆಣ್ಣೆಯ ಬೇಡುತ್ತ. (1)

ಮಕ್ಕಳುಗಳ ಕೂಡಿ ಮನೆ ಮನೆಯೊಳಗಾಡಿ
ಬಿಕ್ಕು ಬೀರಿದ ರಕ್ಕಸರನೀಡಾಡಿ
ಅಕ್ಕರದಿಂದಲಿ ತಾಯ ಮುಖವನೀಕ್ಷಿಸುತಲಿ
ಗಕ್ಕನೆ ಸೆರಗ ಪಿಡಿದು ಮೊಲೆಯ ಕೊಡೆನ್ನುತ (2)

ಕುರುಳು ಕೂದಲು ಅರಳೆಲೆ ಮಾಗಾಯಿ
ಕೊರಳ ಪದಕ ಹಾರ ಎಸೆಯುತಿರೆ
ಚರಣದಂದುಗೆ ಗೆಜ್ಜೆ ಘುಲುಘುಲುಕೆನ್ನುತಲಿ
ಸಿರಿಯರಸ ಹಯವದನನೆನಿಪ ಮೋಹನಾಂಗ (3)

ಈ ಹಾಡು ತೋರುವಂತೆ ವಾತ್ಸಲ್ಯ ಭಾವದ ಕೀರ್ತನೆಗಳೊಡನೆ ಬಾಲಲೀಲೆಯ ಕೃತಿಗಳೂ ಪ್ರಸ್ತುತವಾಗುತ್ತವೆ. 'ಲಾಲಿ ಶ್ರೀ ಹಯವದನ, ಜಯಮಂಗಳಂ ನಿತ್ಯ ಶುಭಮಂಗಳಂ'[420] ಎಂಬುವು ಕೃಷ್ಣನ ಮೇಲಿನ ವಾತ್ಸಲ್ಯದ ಜೊತೆಗೆ ಬಾಲಲೀಲೆಗಳನ್ನೂ ಬಣ್ಣಿಸಿವೆ; 'ವಟಪತ್ರದೆಲೆ ಮ್ಯಾಲೆ' ಮಾತ್ರ ಅಪ್ರಕಟಿತ ಜೋಗುಳ.

ಕೃಷ್ಣನೊಡನೆ ಆವನ ಬಾಲಲೀಲೆಗಳೂ ಬೆಳೆಯುತ್ತವೆ. 'ಗೋಕುಲದ ಸತಿಯರೆಲ್ಲ ಶ್ರೀ ಕೃಷ್ಣನಾಟಗಳ ದೂರುತಲೆ ಪಾಡುವರು ... ಮುಕ್ತಿ ಸುರಗೇಕೆ ಹಯವದನನಂಘ್ರಿಗಳಾಣೆ, ನಿತ್ಯದಲಿ ಇವನ ನೋಡುತಲಿಹುದು ಸಾಕೆಲೆ ಗೋಪಿ'. 'ನೋಡೆ ನೋಡೆ ನೋಡೆ ಗೋಪಿ, ನೋಡೆ ನಿನ್ನ ಮಗನಾಟವ, ಮಧುರೆಯೊಳಗಿರುವೋದೆ ಕಠಿಣವೆ' ಎಂದು ದೂರಿದರೂ ಕೊನೆಗೆ 'ಹರುಷದಿ ಭಕ್ತರನು ಪೊರೆವನೆ' ಎನ್ನಲು ಮರೆಯರು. ತ್ರಿಪದಿ[420] ರೂಪದ ಯಶೋದಾ— ಕೃಷ್ಣರ ಸಂವಾದವೊಂದರಲ್ಲಿ ಗೋಪಿಯರ ದೂರುಗಳನ್ನೆಲ್ಲ ಮಗು ಮುಗ್ಧ ಉತ್ತರಗಳಿಂದ ಮುರಿದು ಹಾಕುವ ರೀತಿ ಜಾಣ್ಮೆಯಿಂದ ಕೂಡಿದೆ. ಹಾಡು ಹೀಗೆ ಮೊದಲಾಗಿದೆ —

ಎನ್ನಾಣೆ ಬ್ಯಾಡ ಬ್ಯಾಡವೊ ರಂಗ ನಿನಗಿನ್ನು
ಬೆನ್ನಗಿತ್ತೀರ ಮನೆ, ಗೋವಿಂದ
ಬೆನ್ನಾಗಿತ್ತೀರ ಮನೆ (ಪ)

ನುಡಿಗಳಲ್ಲಿಯ ಸಂವಾದ ಸ್ವಾರಸ್ಯವಿದು: 'ಗೋಪೇರ ಮನೆಗಳ ಹೊಕ್ಕು ತಾಪವ ಮಾಡುವರೇ — ಕಾಪಟ್ಯ ಸತಿಯರ ಮಾತ ಲಾಲಿಸಿ ಕೋಪಿಸಬೇಡವವ್ವ. ಗೋಪೇರು ಬಂದು ದೂರುತಲೈದಾರೋ — ಕೊಬ್ಬಿಂದ ಅನ್ಯಾಯ ನುಡಿವೋರು. ದಧಿಭಾಂಡ ಒಡೆದು ಗೋಪಿಯರ ಸದರ ಮಾಡುವರೇ — ಗುದಾಂಕ್ರಿ ಮಾರ್ಜಾಲಂಗಳು ಬೀಳೆ

---

420. 'ವಾದಿರಾಜರ ಕೃತಿಗಳು' ಇದನ್ನು ದ್ವಿಪದಿ ರೂಪದ ಪಲ್ಲವಿ, ಚೌಪದ ರೂಪದ ನುಡಿಗಳಾಗಿ ಕೊಟ್ಟಿದೆ.

ಭಾಂಡ ಜಾರಿತವ್ವ. ಬಸವನ ಆಟದಿ ಮಸಿ ಮುಖ ಮೈಯಾದವೊ — ಬಿಸಜಾಕ್ಷಿಯರು ಕೆಲಸದ ಕೈಯ ಒರೆಸಿದರೆ, ಹಸುಗಳನೆಬ್ಬಿಸಿ ಕರುಗಳ ಬಿಟ್ಟು ದುರುಳತನ ಮಾಡೋರೆ — ಶಿಶುಗಳಾಡುವ ಗುಲ್ಲು ಕೇಳಿ ತುರುಕರು ಬೆದರಿತವ್ವ!' ಇಂಥ ಸಂವಾದ ಯಶೋದೆಯೆಡೆಯಲ್ಲಿ ವಾದಿರಾಜರದು ಎತ್ತಿದ ಕೈ' (ಹರಿದಾಸ ಹೃದಯ, 37). ಮುಂದೆ ಮಾತನಾಡಲಾರದ ಮಾತೆ ಮಗುವನ್ನು ಬಿಗಿದಪ್ಪಿದಳು —

ಬಾ ಎನ್ನ ರನ್ನವೆ ಬಾ ಎನ್ನ ಚಿನ್ನವೆ
ಬಾ ಎನ್ನ ಮೋಹದ ಗಿಣಿಯೆ, ಗೋವಿಂದ
ಬಾ ಎನ್ನ ಮೋಹದ ಗಿಣಿಯೆ
ಬಾ ಎಂದು ಯಶೋದೆ ಕರೆದಳು ಬಿಗಿದಪ್ಪಿ
ಬಾ ಎನ್ನ ಹಯವದನ, ಗೋವಿಂದ
ಬಾ ಎನ್ನ ಹಯವದನ (7)

ಕೃಷ್ಣ ಪರಮಾತ್ಮನೆಂದರಿತ ಯಶೋದೆ 'ಅನ್ಯಾಯದ ಮಾತುಗಳಾಡದಿರಿ ನೀವು ಹೆಂಗಳೆಯರ ಕೇಳಿ, ಪುಣ್ಯವಂತರಾದ ಕಾರಣ ಕೃಷ್ಣನ ಕಣ್ಣಿಂದ ನೋಡಿದಿರಿ. ಕ್ಷೀರಸಾಗರಶಾಯಿ ಪಾಲು ಕದ್ದದ್ದು ನಿಜವೆ? ಸ್ವರಮಣ ಮೋರೇರ ಸೆರೆದಾನೇನೆ? ಕರಿರಾಜ ಕರೆದರೆ ಓಡಿ ಬಂದವ ನೀವು ಕರೆಯೆ ಬಾರದಿಪ್ಪನೆ? ಉಣ್ಣಲಿತ್ತ ಎಡೆ ಒಲ್ಲ ನಿತ್ಯ ತೃಪ್ತ ಬೆಣ್ಣೆಯ ಮೆಲುವನೇನೆ? ಪದುಮಾಕ್ಷ ಸಿರಿ ಹಯವದನನ ಭಜಿಸಿ ಮುದದಿಂದ ನೀವು ಬಾಳಿರೆ' ಎಂದಳು. 'ತಂಗಿ ಮಾನಸರ ಸುತ್ತ ಬಲ್ಲಿದ ಮುದ್ದು ರಂಗ ಬೆಣ್ಣೆಯ ಮೆದ್ದ ಬಲ್ಲಿದ' ಎನ್ನುವ ಕೃತಿ 26 ನುಡಿಗಳಿಂದ ಬಾಲಲೀಲೆ ನೀಡಿದೆ, ಆದ್ಯಂತ ಪ್ರಾಸಪೂರ್ಣವಾಗಿ —

ಪುಟ್ಟಿದಾಗಲೆ ಮೂಲರೂಪವ ತೋರಿ
ಅಟ್ಟಿದ ಸುಜನರ ತಾಪವ
ಕೊಟ್ಟ ನಮಗೆ ಜ್ಞಾನದೀಪವ ಕೃಷ್ಣ
ತೊಟ್ಟ ದುರ್ಜನರೊಳು ಕೋಪವ (1)

ಪೂತನಿಯ ಕೊಂದಿತೆಂಬಾಗ ರಕ್ಕಸರಿಗೆ ದಿಬ್ಬಿಗ. ಇಂದಿರೆಯನಪ್ಪಿದ, ತಾಯಿ ಬರಲೋಡಿ ತಪ್ಪಿದ. ಪುಟ್ಟ ಕೃಷ್ಣನ ಕಟ್ಟಬೇಕೆನಲು, ಒರಳನೆಳೆದ, ಮರನ ಕಿತ್ತಿದ. ತಂದೆಯ ಕರೆತಂದ, ಸರ್ಪನ ಏರಿ ನಿಂದ. ಕಣ್ಮೊಳಿಳು ಪಾಲನುಗುಳಿ ಪೋದ, ಬಾಯ್ಗೆ ಇದೆ ವಿನೋದ; ಮಣ್ಣ ಮೆದ್ದುಳವ ತೋರಿದ, ಬಾಯೊಳು ಮುಚ್ಚಿ ಮಗುವಾದ.

'ಕುಸುಮವೆತ್ತ, ಕಡುಗವೆತ್ತ, ಹಸುಗೂಸು ಎತ್ತ ಪರ್ವತವೆತ್ತ? ಗಿರಿಯು ಪೊತ್ತ, ಜನಕೆ ಸುಖವಿತ್ತ, ಕೂಡಿ ತ್ರಿಭಂಗಿಯು ವೇಣುವನೂದಿದ ರಂಗಯ್ಯ. 'ಕಾಲಭೂಷಣ ಕ್ಕೆಗಾದವು, ಗೋಪಾಲಸಂಗಳ್ಕೆ ಮರುಳಾದವು. ಹರಿಯಲ್ಲದೆ, ಅನ್ಯರೂ ಸಲ್ಲದೆ, ಕಾಮಧೇನು ಕೃಷ್ಣನ್ನ ಕರೆದೆನು' ಎಂದೊಬ್ಬ ಗೋಪಿ ಸೇರಿದಳು ಕೃಷ್ಣನ ಪದವನು. ಕಣ್ಣಂಜನ ಬಿಟ್ಟಳು, ಜ್ಞಾನ ಚೆಲುವನಂಜನ ಕೊಂಡಂಬಟ್ಟಳು. ಇಂತು ತೋರಿದ ವಿಷಯಂಗಳ, 'ಶ್ರೀಕಾಂತನ ಕಾವ ಜಗಂಗಳ' ಎಂದೆಲ್ಲರೂ ನಿಶ್ಚಿಂತರಾದರು. ಅಕ್ರೂರ ಬಂದ, ಕೃಷ್ಣ ನಡೆತಂದ, ಮಲ್ಲರ ಸೋಲಿಸಿದ, ಕಂಸನನೊರಸಿದ.[421] ಪ್ರಾಸ ರಚನೆಯೊಡನೆ ಕಥನ ಕೌಶಲ್ಯವೂ ಇಲ್ಲಿ ಗಮನಾರ್ಹ. ಈ ಬಾಲಲೀಲೆಗಳನ್ನು ಬಣ್ಣಿಸುತ್ತ ಗೋಪಿಯರೊಡನೆ ವಾದಿರಾಜರೂ ಧ್ವನಿಗೂಡಿಸಿದ್ದಾರೆ. 'ಕಡಹದ ಮರನೇರಿ ಮಡುವಿನ ನಡುವೆ ಧುಮುಕಿ ಹೆಡೆಯ ಹತ್ತಿ ಕ್ರೀಡಿಸಿ ಮಡದಿಯರ ನುತಿಗೆ ಮೆಚ್ಚಿ ಕೃಪೆ ಮಾಡಿದಯ್ಯ, ಹರಿಯಯ್ಯ ಭಾಗ್ಯ[421] ಕ್ಕೆಯು' ಎಂಬ ಉಗಾಭೋಗದಲ್ಲಿ. 'ಆವ ಕುಲವೋ ರಂಗ ಅರಿಯಬಾರದು' ಎನ್ನುವುದು 'ಗೋಕುಲದಲ್ಲಿ ಪುಟ್ಟಿದನಂತೆ, ಕಳ್ಳತನವ ಮಾಡಿದನಂತೆ, ರಕ್ಕಸರನು ಕೊಂದ ಹಯವದನನಂತೆ' ಎಂಬಂತೆ ಬಾಲಲೀಲೆಗಳನ್ನೊರೆದ ಅಂತೆ ಕಂತೆಗಳ ತಂತ್ರ ಆದ್ಯಂತ ಪ್ರಾಸವುಳ್ಳ ರಚನೆ.

ಕೈಶೋರ ಲೀಲೆಗಳೊಡನೆ ಕೃಷ್ಣನ ತಾರುಣ್ಯದ ಶೃಂಗಾರಲೀಲೆ ಮೊದಲಾಗುತ್ತವೆ. ಹೋಳಿಹಬ್ಬದಂತಿರುವ 'ದಿವ್ಯಸಾಲೆ ರಂಗ ದಿವ್ಯಸಾಲೆ'.[422] ಎಂಬ ಹಾಡು ಆತ ಗೋಪಿಯರೊಡನೆ ಗುಲಾಲು ಚೆಲ್ಲಾಡಿದ್ದನ್ನು ಬಣ್ಣಿಸಿದೆ; 'ಪಂಚಮಹಾವಾದ್ಯದಿ ಅಂಕವತ್ಸಲನ ಹಿಡಿದ ಬಸಿ, ಗಂಧ ಕಸ್ತೂರಿ ಪುನುಗು ಜೊಂದದಿಂದ ಲೇಪ ಮಾಡಿ, ನಂದಗೋಪಸುತನ ಮೇಲೆ ತಂದು ಸೂಸಿ ಭಸ್ಮವ' ಎಂದು ಕ್ರೀಡೋತ್ಸಾಹ ಸೂಚಿಸಿದೆ. ಇಂಥ ಶೃಂಗಾರ ಲೀಲೆ ಮೆಲ್ಲನೆ ಮಧುರ ಭಾವದ ಭಕ್ತಿಗೆಡೆಗೊಡುತ್ತದೆ. ಆಗ ಗೋಪಿಯರಾಡಿಕೊಳ್ಳುವ ನುಡಿಗಳ ಮಾಧುರ್ಯವಿಲ್ಲದೆ —

---

421. ದೇಸೀ ಪ್ರಯೋಗ.

422. 'ವಾದಿರಾಜಗೊಲಿದು ಬಂದು ಸೋದೆ ಪುರದಲ್ಲಿ ನಿಂದ ಮೋದಿ ಹಯವದನ' ಎಂದು ಮುಗಿವ ಪದವಿದು 1582ರ ನಂತರದ್ದು. ಪುರಂದರದಾಸರು 'ಆಡಿದನೋಕುಳಿಯ' ಎಂಬ ರಚನೆಯಿತ್ತರೆ, ಪ್ರಸನ್ನ ವೆಂಕಟರು ವಾಯು ಅವತಾರತ್ರಯದ 'ಡುವ್ವಿಸಾಲೆನ್ನಿ' ಎಂಬ ಹೋಳಿ ಹಾಡಿತ್ತಿದ್ದಾರೆ.

ಮಂಗಳಗೀತೆಗಳಲ್ಲಿ ದಶಾವತಾರವಿರುವುದಕ್ಕೆ ಉದಾಹರಣೆಯಾಗಿ 'ಮಂಗಳಂ ಜಯ ಮಂಗಳಂ; ನಿಗಮವನು ತಂದ ಮತ್ಸ್ಯಗೆ ಮಂಗಳಂ' ಎಂಬಂಥ ಆದಂತ (ಏಕ)ಪ್ರಾಸದ ರಚನೆ ಹಾಗೂ ಆರತಿಯ ಪದಗಳನ್ನೊಯ್ಯಬಹುದು. 'ಆನಂದಮಯಗೆ ಚಿನ್ಮಯಗೆ ಆದಿ ನಾರಾಯಣ ನಾಗಾರಿ ಎತ್ತಿರೆ' ಎನ್ನುವ ಕೃತಿ 'ವೇದವ ತಂದು ಬೆಟ್ಟವ ಹೊತ್ತು' ಎಂಬಂತೆ ಅವತಾರ ಕಾರ್ಯ ಹೇಳಿದರೂ ಹೆಸರು ಹೇಳದೆ 3 ನುಡಿಗಳ ಕೊನೆಗೂ 'ಆರತಿ ಎತ್ತಿರೆ' ಎಂದಿದೆ.[439] 'ಭೂಮಿ ನಿಗಮವ ಕದ್ದ ಘೋರ ದೈತ್ಯನ ಗದ್ದ' ಎಂಬ ತ್ರಿಪದಿ ಧಾಟಿಯ 11 ಚೌಕಗಳ ರಚನೆಯೂ ಪ್ರತಿ ನುಡಿಗೆ 'ಆರತಿಯ ಬೆಳಗಿರೆ' ಎಂಬ ಅಂತ್ಯ ಪಡೆದೋರಿದೆ. 'ಶ್ರೀ ಮಹಾಲಕ್ಷುಮಿ ವಲ್ಲಭಗೆ ... ಮಂಗಳಾರತಿಯ ಎತ್ತಿದರು' ಎಂಬುದು 10 ದ್ವಿಪದಿಗಳಿಂದ ದಶಾವತಾರ ವರ್ಣಿಸಿದ ಕಾವ್ಯಮಯ ಕೃತಿ; ಪ್ರತಿ ನುಡಿಯ ಪ್ರಥಮ ಪದ 'ಬೆಳಕು' ಎಂಬುದರಿಂದ, ದ್ವಿತೀಯ ಪದ 'ಬೆಳಕು ತುಂಬಿತು ದ್ವಾರಾವತಿ' ಎಂಬುದರಿಂದಲೂ ಮುಗಿದ ಕೌಶಲ ತೋರಿದೆ:

ಮತ್ಸ್ಯಾವತಾರ ಶ್ರೀಹರಿಯ ಅಂಗಗಳೊಂದು ಬೆಳಕು
ನಿತ್ಯವೇದವ ತಂದ ಬೆಳಕು ತುಂಬಿತು ದ್ವಾರಾವತಿ (1)

ಕೂರ್ಮಾವತಾರ ಶ್ರೀಹರಿಯ ಹೇಮಗಿರಿಯ ತಂದ ಬೆಳಕು
ಬಲ್ಲಿದ ಕಾಯನ ಬೆಳಕು ತುಂಬಿತು ದ್ವಾರಾವತಿ (2)

ವರಾಹಾವತಾರ ಶ್ರೀಹರಿಯ ಹೊಳೆವ ಕೋರೆದಾಡೆಯ ಬೆಳಕು
ಧಾರುಣಿಯ ನೆಗಪಿದ ಬೆಳಕು ತುಂಬಿತು ದ್ವಾರಾವತಿ (3)

ನರಮೃಗರೂಪ ಶ್ರೀ ಹರಿಯ ಮೊರೆಯ ನಾದ ಬೆಳಕು
ಉರಿಗಣ್ಣ ಜ್ವಾಲೆಯ ಬೆಳಕು ತುಂಬಿತು ದ್ವಾರಾವತಿ (4)

..................................

ದಶರಥ ತನಯ ಶ್ರೀಹರಿಯ ಎಸೆವ ಬಿಲ್ಲು ಬಾಣದ ಬೆಳಕು
ಶಶಿವದನೆಯ ತಂದ ಬೆಳಕು ತುಂಬಿತು ದ್ವಾರಾವತಿ (7)

..................................

ಕಲ್ಕ್ಯವತಾರ ಶ್ರೀಹರಿಯ ಹೊಳೆವಾಭರಣದೊಂದು ಬೆಳಕು
ಗರುಡಹಯವದನನ ಬೆಳಕು ತುಂಬಿತು ದ್ವಾರಾವತಿ (10)

---

439. ಕೊನೆಯಲ್ಲಿರುವ 'ಯಾದವಗಿರಿ ಚೆಲುವನಾರಾಯಣನ' ಎಂಬ ಪಾಠಾಂತರ ಮೇಲುಕೋಟೆಯಲ್ಲಿ ರಚಿತವೆಂದೂ, 'ಬೇಲೂರು ಚೆಲುವನಾರಾಯಣನ' ಎಂಬುದು ಬೇಲೂರಲ್ಲಿ ರಚಿತವೆಂದೂ ಸೂಚಿಸುತ್ತದೆ.

ಜಾರುವ, ಕಠಿಣ ಕರಿಹರದಿ, ಭೂಮಿಯಂತು
ಸೇರುವ, ಕಂಬ ವಿದಾರಣ ಮಾಡುವ,
ಮೀರುವ ಭುವನಕೆ ತೋರುವ ಪರಶುವ,
ವಾರಿಧಿ ಶೋಷಕ, ಚಾರ, ವಸನಹೀನ,
ಧೀರ ಸಮಾಶ್ವವನೇರಿ ಮೆರೆವನ (1)

(ಇಂಥ ಇನ್ನೆರಡು ನುಡಿಗಳಿವೆ ಮುಂದೆ).

'ಈ ಚಮತ್ಕಾರಯುಕ್ತ ಶೈಲಿ ವಾದಿರಾಜರ ವಾಗ್ವಿಲಾಸಕ್ಕೆ ನಿದರ್ಶನವಾಗಿದೆ. 3 ನುಡಿಗಳ ಈ ಕೀರ್ತನೆಯನ್ನು ಒಂದು ಬಾರಿ ಹಾಡುವ ಮೂಲಕ ದಶಾವತಾರಗಳನ್ನು ಆರು ಬಾರಿ ನೆನೆಸಿದ ಪುಣ್ಯ ಪ್ರಾಪ್ತವಾಗುತ್ತದೆ. ಬಹುಶಃ ಈ ಉದ್ದೇಶದಿಂದಲೇ ವಾದಿರಾಜರು ಅತಿ ಕಷ್ಟಸಾಧ್ಯವಾದ ಈ ಪ್ರಯೋಗ ಮಾಡಿರಬಹುದು. ಈ ಸಂಕ್ಷಿಪ್ತ–ಸಂಯುಕ್ತ ಸಂವಿಧಾನದಲ್ಲಿ ವಾದಿರಾಜರು ತುಂಬ ಆಸಕ್ತರಾಗಿದ್ದರೆಂದು ತೋರುತ್ತದೆ' (ಜಿ.ವರದರಾಜರಾವ್, ಲಕ್ಷಾಲಂಕಾರ, 40– 41).

ಹೀಗೆ ಹರಿದಾಸ ಸಾಹಿತ್ಯದಲ್ಲಿ ಸಾಮಾನ್ಯತಃ ಎಲ್ಲರೂ ವರ್ಣಿಸುವ ದಶಾವತಾರಗಳನ್ನು ವಾದಿರಾಜರು ತಮ್ಮ ಅನೇಕ ಕೃತಿಗಳಲ್ಲಿ ವಿವಿಧವಾಗಿ ವಿವರಿಸಿದ್ದು ಅವರ ವೈಶಿಷ್ಟ್ಯವೇ ಸರಿ. 'ವಾದಿರಾಜರಲ್ಲಿ ವ್ಯಕ್ತವಾಗುವ ವಸ್ತು ವೈವಿಧ್ಯ ಪ್ರಯೋಗ ವೈವಿಧ್ಯಗಳಂತೆಯೇ ಒಂದೇ ವಿಷಯವನ್ನು ಪುನಃ ಪುನಃ ನಿರೂಪಿಸುವಲ್ಲಿ ಕಂಡುಬರುವ ಸಂವಿಧಾನ ವೈವಿಧ್ಯತೆ ಪ್ರಶಂಸನೀಯವಾದುದು' (ಲಕ್ಷಾಲಂಕಾರ, 36). ಇಂಥಾ ಕೃತಿಯನ್ನು ಪರಿಶೀಲಿಸಿದರೂ ಹೊಸ ಹೊಸ ರಚನಾಕೌಶಲ ಕಂಡುಬರುತ್ತದೆ. ಒಂದರಂತೆ ಮತ್ತೊಂದಿಲ್ಲ. ಆದ್ಯಂತ ಪ್ರಾಸಗಳ ವ್ಯತ್ಯಾಸ– ಸಂಕ್ಷೇಪಣ– ವಿಸ್ತರಣ– ಪುನರಾವರ್ತನ ಚಾತುರ್ಯಗಳು ಅವರ ಭಾಷಾ ಪ್ರಭುತ್ವಕ್ಕೆ ದ್ಯೋತಕ. 'ಈ ಕೃತಿಗಳ ಹೂರಣ ಒಂದೇ ಎನ್ನಿಸಿದರೂ, ಆ ಸವಿಯು ನಿರೂಪಣಾ ನಾನಾವಿಧವಾಗಿದೆ' (ಲಕ್ಷಾಲಂಕಾರ, 41). ದಶಾವತಾರವನ್ನವರು ಎಷ್ಟು ಕೃತಿಗಳಲ್ಲಿ ಬಣ್ಣಿಸಿದರೂ 'ವಿಶ್ವಂ ಪೊಸತೀ ಅರ್ಥವಂತೋಲ್' ಈ ಸಂಗತಿಗಳಿಂದ ಪ್ರಾಸಾಲಂಕಾರ, ಕೃಷ್ಣಾವತಾರ ಚಿತ್ರಗಳಲ್ಲಿನಂತೆ ದಶಾವತಾರ ಪ್ರತಿಪಾದನದಲ್ಲೂ ವಾದಿರಾಜರಿಗೆ ವಿಶೇಷ ಒಲವು ಆಸಕ್ತಿಗಳಿದ್ದುದು ಸುವಿದಿತ. ಅವರ ಅಶ್ವಧಾಟಿಯ ಸಂಸ್ಕೃತ 'ದಶಾವತಾರ ಸ್ತುತಿ' ಪಂಡಿತಮಾನ್ಯವಾಗಿದ್ದು, ಹಾಗೆ 'ನಾಡನ್ನ' ಪಾಮರಪ್ರಿಯವೆನಿಸಿದರೆ ಅಚ್ಚರಿ ಏನು? ಪ್ರಾಸ ವೈಭವದಂತೆ ಅದಕ್ಕೆ ಎರಡನೆಯದಾಗಿ ದಶಾವತಾರ ಚಿತ್ರಣದಿಂದಲೂ ಇದು ವಾದಿರಾಜರ

ಕೃತಿ ಎಂಬಷ್ಟು ಮಟ್ಟಿಗೆ ವಿಶೇಷವಾಗಿ ಒಡಮೂಡಿವೆ ದಶಾವತಾರ.

5) ಅವತಾರತ್ರಯದ ನಿರೂಪಣ

ವಾಯುಪದಾರ್ಥ ವಾದಿರಾಜರು ವಾಯುವಿನ ಅವತಾರತ್ರಯಗಳನ್ನು ಕುರಿತ 'ಸುವ್ವಾಲಿ ಕೀಚಕವಧೆ' ಎಂಬ ಇದಿರಾದ ಕೃತಿಗಳಂತೆ ಹಲವು ಬಿಡಿ ಹಾಡುಗಳಲ್ಲಿ ನಿರೂಪಿಸಿದ್ದಾರೆ. ಕೆಲವು ಮೂರವತಾರಗಳನ್ನೂ ಒಟ್ಟಾಗಿ, ಕೆಲವು ಒಂದೊಂದವತಾರಗಳನ್ನೂ ಪ್ರತ್ಯೇಕವಾಗಿ ಚಿತ್ರಿಸಿವೆ. (ಶ್ರೀಪಾದರಾಯರ 'ಮಧ್ವನಾಮ'ದಂತೆ ವಾದಿರಾಜರ ಸಂಸ್ಕೃತ 'ಮಧ್ವಾಷ್ಟಕ'ವೂ ಅವತಾರತ್ರಯದ ಪ್ರತಿಪಾದಿಸಿದ್ದನ್ನು ಮರೆಯುವಂತಿಲ್ಲ). ಕೆಲವು ಪಲ್ಲವಿ ಒಂದೇ ಅವತಾರ ಸ್ಮರಿಸಿದರೂ ಕೃತಿ 3 ಅವತಾರ ಚಿತ್ರಿಸುವುದುಂಟು.

'ಮುರಾರಿಯಂಶ ಮಧ್ವ ಮುನಿರನ್ನ' ಎನ್ನುವಲ್ಲಿ ಮಧ್ವರನ್ನಷ್ಟೇ ನೆನೆದರೂ, ಹಾಡಿನ ಒಂದೊಂದು ನುಡಿ ಒಂದೊಂದವತಾರವನ್ನು ಆದಿ ಮಧ್ಯ ಅಂತ್ಯ ಪ್ರಾಸಪೂರ್ವಕ ಕೊಂಡಾಡಿವೆ. 'ಆನಂದತೀರ್ಥರೆಂಬೊ ಅಭಿಧಾನ ಪೆಸರುಳ್ಳ ಗುರು ಮಧ್ವಮುನಿರಾಯ' ಎಂಬುದರಂತ್ಯಭಾಗ ಪ್ರತಿ ನುಡಿಯ 2ನೆಯ, 4ನೆಯ ಸಾಲಿಗಿರುವಂತೆ, 2 ನುಡಿ ಹನುಮನನ್ನೂ, 1 ನುಡಿ ಭೀಮನನ್ನೂ, 2 ನುಡಿ ಮಧ್ವರನ್ನೂ ವರ್ಣಿಸಿದ ಕೃತಿ (ಪ್ರಾಣೇಶದಾಸರಿಗೂ ಪ್ರೇರಣೆಯಿತ್ತ ಪಲ್ಲವಿಯಿದು). 'ಮನ್ನಿಸೋ ನೀ ಎನ್ನ ಮಧ್ವಮುನಿರನ್ನ' ಎನ್ನುವುದೂ ಆದ್ಯಂತ ಪ್ರಾಸಯುಕ್ತ 3 ನುಡಿಗಳಿಂದವತಾರತ್ರಯ ವರ್ಣಿಸಿದೆ. 'ಸುತ್ತಲು ಕಾಣನು ಹಿರಿಯ ನಮ್ಮ ಮುನಿಗೆ ಸರಿಯ' ಮಧ್ಯ ಪ್ರಾಸದಿಂದಲೂ ಕೂಡಿ ಮಧ್ವ–ಹನುಮ–ಭೀಮರ ಬಣ್ಣಿಸಿದೆ. 'ಜಯ ಜಯತು ಶುಭಕಾಯ, ನೆರನಂಬಿ ನಮೊಯೆಂಬೋ ಹಿತವ ಕೊಡುತನೇ ಲೋಕಗುರು ವೇದವಿಖ್ಯಾತ' ಅವತಾರತ್ರಯದ ಪ್ರತಿಪಾದಕವೇ. 'ಅಹುದೆಲೋ ಹನುಮಂತ ಶ್ರೀನಾಮದೊ ಬಲವಂತ' ಹನುಮನ ಪಲ್ಲವಿಯಿದ್ದರೂ 3 ಅವತಾರ ಹಾಡಿದೆ. 'ಹನುಮಂತ ನೀ ಬಲು ಜಯವಂತನಯ್ಯ ಅನುಮಾನವಿಲ್ಲವೋ ಆನಂದತೀರ್ಥಾರ್ಯ' ಎಂಬ ಪಲ್ಲವಿಯುಳ್ಳ ಸವಿಸ್ತರಣಪೂರ್ವಕ ('ಶ್ರೀಮದ್ವಿಷ್ಣುಪಾದದಿಂದ ಜನಿಸಿ ಪವನನು' ಎಂಬ ಲಘು ವಾಯುಸ್ತುತಿಯ 6 ನುಡಿಗಳಲ್ಲೂ ಅವತಾರತ್ರಯದ ವರ್ಣಿತವಾಗಿದೆ.)[439]

---

439. ತ್ರಿವಿಕ್ರಮ ಪಂಡಿತರ ಸಂಸ್ಕೃತ 'ವಾಯುಸ್ತುತಿ' ಧಾಟಿಯಲ್ಲೇ ಇದ್ದು, ಉಪಲಬ್ಧ ಕೃತಿಯ ಪೂರ್ತಿಗೆ ಅನಿಶ್ಚಿತವಿದ್ದರೂ 'ವಾದಿರಾಜ ಕೃತ' ಎಂಬ ನುಡಿಯುಳ್ಳದೊಡನೆ ಗೂಡಿದೆ; ಕೋರಬೀಡಿನವರ ಗ್ರಂಥಾಂಕ್ಯಕವೂ ಉದ್ಧೃತ.

ಪಾದಕಮಲದ್ವಯದೊಳಗಣ ಹತ್ತು ಮುತ್ತುಗಳ ಹಯವದನನಾಳ್ವಿಕೆಯಬಲ್ಲರ್ಕ್ಯವೇ 'ಯದು ಪತಿಯ ತೋರಮ್ಮ' ಅದ್ಯಂತ ಪ್ರಾಸಪೂರಿತವಾಗಿ 'ಅದ್ಯಂತ ಮಧ್ಯ ರಹಿತ, ಸೋದೆಪುರ ವಾಸನ ವಾದಿರಾಜಯತಿಪೋಷನ' ಎಂದು ಮುಗಿದು, ಸೋದೆಯನ್ನುಲ್ಲೇಖಿಸಿ ಕೊನೆಗಾಲದ ಕೃತಿ ಎನಿಸಿದೆ (ಪಾವಂಜೆಯವರ ಸಂಗ್ರಹ, ಪು.79).

ಪಾಂಡು ಅವತಾರಸ್ತುತಿಯ ನಂತರದುವು ಸರಸ್ವತಿ—ಭಾರತಿಯರ ನುತಿ. 'ವಾಣಿ ಪರಮ ಕಲ್ಯಾಣಿ ನಮೋ ನಮೋ ಅಜನ ರಾಣಿ ಪಂಕಜ ಪಾಣಿ' ಎನ್ನುವ 3 ನುಡಿಯ ಹಾಡು ಅದ್ಯಂತ ಪ್ರಾಸಗಳ ಸೊಗಸಾದ ರಚನೆಯಾಗಿ, ವಿಜಯದಾಸರ 'ವಾಣಿ ಪರಮ ಕಲ್ಯಾಣಿ ವಾರಿಜೋದ್ಭವನ ರಾಣಿ ನಾರಿ ಶಿರೋಮಣಿ' ಎಂಬ ಕೃತಿಯನ್ನು ಪ್ರೇರಿಸಿದಂತಿದೆ; ವಾದಿ ರಾಜರ 'ಭಳಿರೆ ಭಳಿರೆ ಅಂಚೆ, ಭಕ್ತಜನಸುಖದಂಚೆ, [illegible]ಕೊಳಕೊಳವ ಮುಖ ಇಳೆಯೊಳಗೆ ಸರಿಗಾಣೆ' ಮೊದಲಾದ ಪ್ರಯೋಗ ವಿಜಯದಾಸರಲ್ಲಿ 'ನಗೆಮೊಗದ ಜಗದಂಬೆ, ಝಗಝಗಿಸುವ ಕರಯುಗಳ, ಕ್ಷೋಣಿಯೊಳಗೆ ಸರಿಗಾಣೆನೆ' ಎಂಬಂತಿವೆ. 'ಭಾರತಿದೇವಿಯೆ ಮಾರುತಿ ರಾಣಿಯೆ' ಎಂಬುದರ ಮೊದಲ ನುಡಿ ಪಾರ್ವತಿ, ಶಚಿ, ಶ್ಯಾಮಲಾ, ಉಷಾ ಎನ್ನುವ 'ಮಂದಿ ನಾಲ್ವರನು ಹೊಂದಿಸಿ ಉದರದಿ ಒಂದೆ ರೂಪದಿ ಜನರಿಗೆ ತೋರುವ ಸತಿ' ದ್ರೌಪದಿಯನ್ನೂ, ಮುಂದಿನ 3 ನುಡಿ ಕ್ರಮಶಃ ಹನುಮ—ಭೀಮ—ಮಧ್ವ ಅವತಾರಿಯ ಸತಿಯರನ್ನೂ, ಕೊನೆಯದು ಹಾಲಿರುವ ಹಯವದನನ ಭಜಿಪ (ಮುಖ್ಯಪ್ರಾಣ)ನ ಸತಿಯರನ್ನೂ ಸ್ಮರಿಸಿದೆ. ಇವನ್ನು ಗುರುಪತ್ನಿಯರ ಸ್ತುತಿ ಎಂದು ಸ್ವೀಕರಿಸಬಹುದು.

ಋಜುಸ್ವರೂಪ ವಾದಿರಾಜರು ತಾರತಮ್ಯದಲ್ಲಿತಮ್ಮ ನಂತರದವರನ್ನು ಕೀರ್ತಿಸಿದ್ದು, ಇವನ್ನೆಲ್ಲ ಅವರ ವೈಯಕ್ತಿಕ ಸ್ತುತಿ ಎನ್ನದೆ, ವ್ಯಕ್ತ್ಯೋಪಾಸಕರಾಗಿ ಅವರು ನಮಗಾಗಿ ಅನುಗ್ರಹಿಸಿದುವೆನ್ನಬೇಕು. ಈ ದೃಷ್ಟಿಯಿಂದವಲೋಕಿಸಿದವರಿಗೆ ಅವರ ಕಾವ್ಯೋದ್ಯಾನದ ಕೆಲವು ಕೃತಿಪುಷ್ಪ ಮನಕ್ಕೆ ಮುದ ನೀಡುವಂಥವು. ಉದಾಹರಣೆಗೆ ಹರಿದಾಸರ ಹರಸ್ತುತಿಮಾಲೆಗೆ[441]

441. 'ಹರಿಹರರು ನಮಗೆಂಬ ಅರಿಯದ ಜ್ಞಾನಿಗಳು ಹರನ ಹೃದಯದೊಳಿರುವ ಹರಿಯ ಕಾಣರಿಯರು' — ಪುರಂದರದಾಸರ ಪದ; ಇನ್ನೊಂದು ಪ್ರಸಿದ್ಧ ರಚನೆ 'ಕೈಲಾಸವಾಸ ಗೌರೀಶ ಈಶ' ಎಂಬ ವಿಜಯದಾಸರ ಕೋರಿಕೆ.

ದ್ರೌಪದಿ, ಹನುಮ ಭೀಮ ಮಧ್ವ, ಸರಸ್ವತಿ, ಬ್ರಹ್ಮ, ಲಕ್ಷ್ಮಿ ಇವರು ಹಯವದನಪ್ರಿಯರೆಂಬ ಉಕ್ತಿಯಿದೆ; ಕಡೆಯ ನುಡಿಗಳೂ ಹರಿ— ದಶಾವತಾರಿಯನ್ನು ಹಯವದನನಿಗೆ ಸಮೀಕರಿಸಿವೆ.

ತ್ರಿಪದಿಯ ಸಾಲನ್ನು ಪುನರಾವರ್ತಿಸಿದ ದಾಟಗಳಲ್ಲಿರುವ 'ಜಯಮಧ್ವವಲ್ಲಭ' ಎಂಬ 15 ನುಡಿಗಳ ಕೃತಿಯೊಂದು ಉಡುಪಿನ ಕೃಷ್ಣ, ಮುಖ್ಯಪ್ರಾಣ, ಹನುಮ ಭೀಮ ಮಧ್ವರನ್ನೂ ಅಷ್ಟಮಠಾಧೀಶರನ್ನೂ ಪದ್ಮನಾಭತೀರ್ಥರನ್ನೂ ನೆನೆದ ಗುರುಸ್ತುತಿ ಎನಿಸಿದೆ.[442] ನಂತರದ ಜಯತೀರ್ಥಸ್ತುತಿಗಳು 'ಭಳಿರೆ ನಿನ್ನಯ ಗುಣವ ವರ್ಣಿಸಲಳವೆ ಅರ್ಜುನ ಕಂಡ ವಿಶ್ವರೂಪದಂದದಿ ಆನಂದತೀರ್ಥರ ಭಾವಗಳ ತಿಳಿಸಿದೆ, ಅದ್ವೈತ ಮತದ ವಿದ್ಯಾರಣ್ಯನ ಮರುಳು ಮಾಡಿದೆ ಹಯವದನ ಪಾದ ಸರಸಿಜ ಭೃಂಗ' ಎಂದೂ, 'ಜಯರಾಯ ಮಧ್ವಸಿದ್ಧಾಂತ ಸ್ಥಾಪಕ' ಎಂದೂ, 'ಹಮ್ಮನುಳಿದು ಜಯಮುನೀಂದ್ರ ಕೃತಿಯ ರಮ್ಯರಸವ ಸವಿದು ದುರ್ಮತಗಳನೆ ಜರಿ — ಸುಖ ಮುನಿ ಸುಕೃತಿ ಶ್ರೌತ ಜಲಧಿ ಕೃಷ್ಣನ ಪಾದ ತೊಳೆಯಲು ಗಿರೀಶ ಮುಖ್ಯರು ಶಿರದಿ ಧರಿಸಿ ಸುಖಿಸಿದ ಕಥೆ ಸ್ಮೃತಿಯೊಳಿರಲು ಭಗೀರಥನ ತೆರದಿ ಗುರು ಕೃತಿ ಗಂಗೆಯ ತುತಿಸಿ ಬುಧರಿಗಿತ್ತ ಭಾಗ್ಯ ನೋಡಿ — ಮಥಿಸಿ ಮಧ್ವಮತಾಬ್ಧಿಯ ಶ್ರುತಿಯಮೃತವ ರಚಿಸಿದ ಕುಡಿದು ನೋಡಿ' ಎಂದೂ (ರೂಪಕಗೊಳಿಸಿ) ಕೊಂಡಾಡಿವೆ. ಹಿರಿಯ ಸಮಕಾಲೀನ ಶ್ರೀಪಾದರಾಯರನ್ನು ಸಂಸ್ಕೃತ ಅಷ್ಟಕದಿಂದಲೂ 'ಶ್ರೀಪಾದ ರಾಯರ ದಿವ್ಯ ಶ್ರೀಪಾದವ ಭಜಿಸುವೆ — ದಾಸರ ನಾಮಗಳಿಂದ ಲೇಸು ಲೇಸೆನಿಸಿಕೊಂಬ' ಎನ್ನುವ ಕೃತಿಯಿಂದಲೂ ಸ್ತುತಿಸಿದ್ದಾರೆ. 'ಆನೆ ಬರುತ್ತಿದೆ ಕೋ' ಎಂಬ ರೂಪಕ ರಚನೆಯ 'ದಾಸರ ಮರಿಯಾನೆ — ಮರಿಯಲು ದುರುಳರ ಗರುವವನೆ' ಎನ್ನುವ ನುಡಿಗಳು ವ್ಯಾಸರಾಯರನ್ನೇ ಕುರಿತುವು.[443] (ವಾ.ಕೃ.696ರಲ್ಲಿ ಚಿತ್ರಿಸಿದಂತೆ ವಾಗೀಶರನ್ನಲ್ಲ); 'ತೀರ್ಥಪ್ರಬಂಧ(ಪೂರ್ವ)ದ 'ರಾಜಧಾನೀ ಜಯತಿ ಸಾಗಜಗಹ್ವರ ಸಂಜ್ಞಾ। ಯತ್ರಭಾಂತಿ ಗಜಾ ಮಧ್ವರಾದ್ಧಾಂತಧರಾಧರಾ: ॥' (ಮಧ್ವಸಿದ್ಧಾಂತಧರಾಧರಗಜಗಳಿದ್ದುವ) ಎನ್ನುವ

---

442. ಗುರು ವಾದಿರಾಜರ ಕೀರ್ತನೆ, ಪು.15.

443. 'ಯೋಗಿವರ ವ್ಯಾಸರಾಯರೆಂಬ ದಿಗ್ಗಜ ಮೇಲ್ಪ ಬಂದಿತಿಕೋ' ಎಂಬ ಕೃತಿ ವಿಜಯೀಂದ್ರರದೆಂದು ಉದಾಹೃತ (ಕ. ಹರಿದಾಸರು, 267). 'ಪುಂಡ ದೊರೆಗಳವರೇನು' ವಾದಿರಾಜರದಲ್ಲ (ಸಂಕೀರ್ಣ, ಮುನ್ನುಡಿ, 17).

ಶ್ಲೋಕವೂ ಇಲ್ಲಿ ಪೋಷಕ. ಹೀಗೆಂದೇ 'ದಾಸೋತ್ತಮ ನೀನೆ, ಎಂಜಲನ್ನ ಬಡಿದೆ' ಎಂಬ ರಚನೆ ವೈಕುಂಠದಾಸರನ್ನು ಕೊಂಡಾಡಿದ್ದು, ಚರಿತ್ರ ಭಾಗದಲ್ಲಿ ಉದಾಹೃತವಾಗಿವೆ. 'ಸ್ವತಃ ಮಹಾಗುಣಸ್ವರೂಪರೂ ಭಾವಿ ಸಮೀರರೂ ಆದ ಶ್ರೀ ವಾದಿರಾಜರ ಈ ಮಾತುಗಳನ್ನು ಮನನ ಮಾಡಿದ್ದೇ ಆದರೆ, ಅವರ ಹೃದಯ ವೈಶಾಲ್ಯ, ಸಜ್ಜನಿಕೆ, ಗುಣಪಕ್ಷಪಾತ, ಇತರರ ಬಗ್ಗೆ ಇರುವ ಗೌರವ ಗಾಂಭೀರ್ಯಗಳನ್ನು ಕಂಡು ಹೆಮ್ಮೆಪಡುವಂತಾಗುತ್ತದೆ' (ವಾ.ಕೃ. ಪೀಠಿಕೆ, 22).

ಅವರು ವ್ಯಾಸೋಪಾಸಕರಾದ್ದರಿಂದಲೂ ನಾವ ಸ್ತುತಿಸಲು ಅನುಗ್ರಹಿಸಬೇಕಾದ್ದರಿಂದಲೂ ದೇವ ಮಹಿಮರಂತೆ ಗೋದಾವರಿ ನದಿಯನ್ನೂ ಕೀರ್ತಿಸಿದ್ದಾರೆ 'ಗೋದೆ ನಮಸ್ತೆ ಭಲದೆ'[444] ಎನ್ನುವ ಕೃತಿಯಿಂದ; ಇದು ನದಿಯ ಉದ್ಭವ ಕಾರಣ — ಉಗಮಸ್ಥಳ — ಹರಿವ ಸ್ಥಳ — ಸ್ನಾನ ಮಹಿಮೆ ಹೇಳಿ 'ವನಜನಾಭನ ಲೋಕಸಾಧನವಾದ ಘನ ಭಕುತಿಯನಿತ್ತು ರಕ್ಷಿಸು ದೇವಿ' ಎನ್ನುವಲ್ಲಿ 'ತೀರ್ಥಪ್ರಬಂಧ'ದ (ಉತ್ತರ, 9—11ರ) ನುಡಿಗಳನ್ನೇ ಕನ್ನಡಿಸಿದೆ.

ಹೀಗೆ ಹತ್ತು ಹಲವು ಬಗೆಯ ಸ್ತುತಿಮಾಲೆ ನೆಯ್ದು ವಾದಿರಾಜರು ವಿವಿಧ ವರ್ಣನ — ಕಥನ — ತತ್ವನಿರೂಪಣಾ ನೀತಿಬೋಧನಪರ ಕೃತಿಗಳನ್ನು ಅನುಗ್ರಹಿಸುವಲ್ಲಿ ತಮ್ಮ ಅದ್ಭುತ ಪ್ರತಿಭೆಯ ದರ್ಶನ ನೀಡಿದ್ದಾರೆ. ಆಯಾ ವಿಷಯಕ ಕೆಲವು ಕೃತಿ ಪರಿಶೀಲಿಸಿದರೂ ಅವರ ಪ್ರತಿಭೆಯ ಸ್ಪರ್ಶ ಒದಗುತ್ತದೆ.

7) <u>ವರ್ಣನಾ ವೈಖರಿ</u>

ಮೇಲಿನ ಸ್ತುತಿಮಾಲೆಯಲ್ಲಿ ಈ ವರ್ಣನೆ ಸೇರಿಕೊಂಡೇ ಇದೆ. ಆದರೂ ವರ್ಣನಾ ಪ್ರಧಾನ ಪದ ಕೆಲವನ್ನು ಪ್ರತ್ಯೇಕ ಪರಿಭಾವಿಸಿದರೆ ವಾದಿರಾಜರ ಈ ವರ್ಣನಾ ವೈಖರಿ ಇನ್ನೂ

---

444. ಜಗನ್ನಾಥ ದಾಸರ 'ವರದೆ ಕಾರುಣ್ಯ ಶರಧೆ' ಎಂಬ ಸೊಲ್ಲಿಗಿದು ಪ್ರೇರಕ, ನುಡಿ ಬೇರೆ. 'ಕರಿಮುಖನ ಮೂಷಕವಾಹನನ ಬಲಗೊಂಡು ಉದಯ ಕಾವೇರಿ ಮಹಿಮೆಯನು ಪೊಗಳುವೆನು' ಎಂದು ಮೊದಲಾಗಿ ಸುಪ್ರಭಾತ ಹೇಳುವ ನಿಡಿದಾದ ರಚನೆ 'ಶ್ರೀಕಾಂತ ಹಯವದನ' ಅಂಕಿತದಲ್ಲಿದ್ದರೂ ಖಚಿತವಾಗಿ ವಾದಿರಾಜರದೆನಿಸುವುದಿಲ್ಲ, ಶಿಥಿಲ ಶೈಲಿಯಿಂದಾಗಿ.

ಮನದಟ್ಟಾಗುವುದು. ಉದಾಹರಣೆಗೆ ಹರಿಯ ಪಾದ ವರ್ಣನೆಗೆ ವಾದಿರಾಜರು ಸಲ್ಲಿಸಿದ ಕೃತಿ ಪುಷ್ಪಗಳ ಕಾಣಿಕೆ. 'ಎದ್ದುರಿಕದ್ದುರಿಕೆ' ಎಂಬಾದ್ಯಂತ ಪ್ರಾಸಭರಿತ ರಚನೆ 'ಅಜನರ್ಚಿಸುವ ಧ್ವಜ ವಜ್ರರೇಖೆಯಿಂದೊಪ್ಪುವ ಗೋಪಿಯರು ಭಜಿಸುವ — ಸುಜನರಿಗುವ — ಸರಸಿಜಾಕ್ಷಿ ಒತ್ತುವ — ಗರುಡನೇರುವ — ಉರಗನ ಮೇಲೊಡ್ಯಾಡಿದ — ಬಲಿನೆಯ ಸ್ಥಾನದಲ್ಲಿ ಕುಣಿದ ಶಿಲೆಯ ಸ್ತ್ರೀ ಮಾಡಿದ' ಪಾದ ವರ್ಣಿಸಿದೆ, ಪೌರಾಣಿಕ ಪ್ರಸಂಗ ಸ್ಮರಿಸಿ. 'ಎಂಥಾ ಪಾವನ ಪಾದವೊ ಕೃಷ್ಣಯ್ಯ' ಎಂಬುದು 'ದೂತವಾಕ್ಯ'ದ 'ಕುರುಪತಿಯ ಉರುಳಿಸಿದ' ಕತೆ ಸೂಚಿಸಿ, ಅಹಲ್ಯೋದ್ಧಾರಣ ಗಂಗಾಜನನ ಕಾಳಿಂಗ ಮರ್ದನಗಳ ಶ್ರೀರಂಗಪಟ್ಟಣದ ಶ್ರೀ ಭೂದೇವಿ ಸೇವಿತ ಬ್ರಹ್ಮಾಂಡದಲ್ಲಿ ಗಯನ ತುಳಿದು ಕ್ಷೇತ್ರಗೈದ ಉದ್ಧರಿಸಿದ್ದು ವಾದಿರಾಜರ ಹೃತ್ಕಮಲಸ್ಥವಾದ ಪಾದ ಬಣ್ಣಿಸಿದೆ. 'ಕುಣಿದಾಡೊ ರಂಗ' ಎಂಬುದು ನಲಿಯ ಮೊದ(ದ) ಶ್ರೀ ಚರಣಾರವಿಂದ ಗತಿಯಿಂದ ಧಿಂಧಿಮಿಕೆನ್ನುತ, ಶಕಟನ ಮುರಿದ ಶ್ರೀಚರಣಾರವಿಂದ ದ್ಧಿಂಕಿಟವೆನ್ನುತ, ಬಲಿಯ ಮೆಟ್ಟಿ ಕಾಳಿಂಗನ ತುಳಿದು ಗೆದ್ದ ಛಲುಛಲುಕೆನ್ನುತ' ಎಂಬಂತೆ 3 ನುಡಿಗಳನ್ನು ಮುಗಿಸಿದೆ. 'ರಂಗನಾಥನೆ ನಿಮ್ಮ ಕಾಣದೆ ಭಂಗಪಟ್ಟೆನೊ ಬಹುದಿನ... ನಿಮ್ಮ ಪಾದವ ತೋರೋ' ಎನ್ನುವಲ್ಲಿ ಪೌರಾಣಿಕ ಭಕ್ತೋದ್ಧಾರದಿಯ ನೆನೆದು 'ಕಾಳಿಯ ಮೇಲಿಟ್ಟ ಮುದ್ದು ಚರಣವ ತೋರೋ... ಇಕ್ಷ್ವಾಕು ಕಾಂತೆಗೆ ಒಲಿದ ಪಾದವ ತೋರೋ... ಸೃಷ್ಟಿ ಸ್ಥಿತಿ ಲಯವನ್ನು ಆಳ್ದೀ ಪುಟ್ಟ ಪಾದವ ಎನ್ನ ಮನದಲ್ಲಿಟ್ಟು ದಯಮಾಡೊ' ಎಂದಿದ್ದಾರೆ. 'ಹಯವದನನ ಪಾದದ್ವಯವ ನೆನೆಯದವ ಜನಿಸುವನೆಂತೋ ಸಂಸ್ಕೃತಿ ಫಲವ?' ಎಂದಿನ್ನೊಂದರಲ್ಲಿ ಕೇಳಿದ್ದಾರೆ. 'ಹರಿಚರಣವ ನೋಡಬರದ' ಎಂದು ಮತ್ತೊಂದರಲ್ಲಿ ಹೇಳಿದ್ದಾರೆ. 'ಹರಿಪದವನನವರಿಗೆ ನರಕದ ಭಯವಿಲ್ಲ' ಎಂದಾರಂಭವಾಗುವ ಸುಳಾದಿ ಹರಿಪಾದ ನಂಬಿ ಬಾಳ್ವ ಸಾಧನ ಹೇಳಿದೆ; ಭಕ್ತೋದ್ಧಾರದಿಯನ್ನು ವರ್ಣಿಸಿ 'ಹಯವದನನ್ನ ಚರಣವೆ ಗತಿಯೆನ್ನ' ಎಂದಿದೆ. 'ಬಿಡೆನೊ ಬಿಡೆನೊ ನಿನ್ನ ಚರಣಕಮಲವ' ಎನ್ನುವಲ್ಲಿ ಗಂಗಾಜನಕ ಅಹಲ್ಯೋದ್ಧಾರಕನ ಪಾದ ಬಣ್ಣಿಸಿ ಅವುಗಳ ಭಜಿಸಲು ಸಲಹುವ ಆಶ್ವಾಸನೆತ್ತಿದ್ದಾರೆ. ವಾದಿರಾಜರ ದೃಢ ಭಕ್ತಿಗಿದು ಕುರುಹು,[445] ನಮ್ಮ ಬಾಳಿಗೊಂದು ನಂದಿಕೆ.

---

445. 'ಸ್ವಪ್ನಪದ' 'ನೆನೆವೆ ನಾರಾಯಣನಪಾದವ' ಎಂದೇ ಮೊದಲಾಗುವುದಿಲ್ಲ ಗಮನಾರ್ಹ.

'ತೇಜಿಯನೇರಿ ಮೆರೆದು ಬಂದ ರಾಜಬೀದಿಯೊಳಗಿಂದ ಕಸ್ತೂರಿ ರಂಗ' ಎನ್ನುವ ಶ್ರೀರಂಗದ ಸ್ವಾಮಿಯ ವೈಹಾಳಿ ವರ್ಣನೆ ಮನಮೋಹಕವಾಗಿದೆ. ಸುತ್ತ ನಾಲು ದೀವಟಿಗೆ ಹಗಲು ಬತ್ತಿ ಭೂಸುರರು. ಪಂಚವಾದ್ಯಗಳಿರಲು ಗಾಳಿಗೋಪುರದ ಮುಂದೆ ಧೂಳೆಬ್ಬಿಸಿ ಬರುವ ಜಾಣನ ಚಿತ್ರವಿದು – ಮುತ್ತಿನ ತುರಾಯಿ ಅಂಗಿ ಮುಂಡಾಸು ಮುತ್ತಿನ ಕುಂಚವ ಬಿಟ್ಟು ಮೋಹಿಸುತ ಬೀದಿಯೊಳು ಹತ್ತಿಳಿವ ವಜ್ರ ಕೆಂಪಿನ ತಾಳಿ ದೌಳಿ ಕತ್ತಿಯ ಉಡಿಯಲ್ಲಿ ಕಟ್ಟಿಕೊಂಡು ತೇಜಿಯ ಹಿಡಿದು (3) ರಂಭೆ ಮೊದಲಾದವರು ಕುಂಭದಾರತಿ ಎತ್ತಿ ಪಾಡಲು, ಶಂಖು ಮುಖ್ಯರು ಪರಾಕೆನುತ, ಅಂಬುಜಭವಾದಿಗಳ ಅರಿದ ಶ್ರೀರಂಗಧಾಮ ಬರುತ್ತ, ವಿಪ್ರರು ಸ್ತುತಿಸಲು, ಸಜ್ಜನರಿಗೆ ಇಷ್ಟಾರ್ಥವಿತ್ತು ಮನ್ನಿಸುವ. ಅವನಿಗೆ ಮಾರ್ಗದಲ್ಲಿ ನಂದ ನೈವೇದ್ಯಗಳಿವು – ಹಚ್ಚನೆ ಹೆಸರು

ಹಚ್ಚನೆ ಹೆಸರು ಬೇಳೆ ಹಾಲು ಕೆನೆಗಳು
ಮುಚ್ಚಿ ತಂದ ಕೆನೆಮೊಸರು ಬೀಸಲು ಬೆಣ್ಣೆಯು
ಸ್ವಾಮಿಗರ್ಪಿತ ಅಚ್ಚ ತುಪ್ಪದಿ ಪಕ್ವವಾದ ಅತಿರಸ ಹುಗ್ಗಿಗಳು
ಮೆಚ್ಚಿ ಉಂಡು ಪಾನಕ ನೀರು ಮಜ್ಜಿಗೆಗಳನೆ ಕುಡಿದು (6)

ಸ್ವಾಮಿಯ ಸವಾರಿ ಹೀಗೆ ದಿವ್ಯವಾದರೂ ಮಾನವೀಯವಾಗಿ ಚಿತ್ರಿಸಿದ ವರ್ಣನೆ ಚಿತ್ತಾಕರ್ಷಕವೆನಿಸಿದೆ. ವಾದಿರಾಜರ ದಿವ್ಯ ಪ್ರತಿಭೆಗೆ ಯಾವ ವರ್ಣನೆಯೂ ಅಸಾಧ್ಯವಲ್ಲ.

8) <u>ಕಥನಕೌಶಲ</u>

ಇಡಿಯ ಕೃತಿಗಳಲ್ಲಿ ವಾದಿರಾಜರ ಪ್ರತಿಭೆ ಪ್ರದರ್ಶಿಸಿದ ಕಥನಕೌಶಲ ಬಿಡಿ ರಚನೆಗಳಲ್ಲೂ ಬಂದಿರುವುದಕ್ಕೆ ಒಂದೆರಡು ಕೃತಿಗಳ ನಿದರ್ಶನ ಸಾಕು. "ಜಯಮಂಗಳಂ ನಿತ್ಯ ಶುಭಮಂಗಳಂ" ಎಂದು ಮೊದಲಾದ 25 ಚರಣಗಳ ಹಾಡೊಂದು (ವಾ.ಕೃ. 474) ಒಳ್ಳೆಯ ಕಥನ ಕವನ. ವೈಕುಂಠದಲ್ಲಿ ಸ್ವಾಮಿ ಪಾದ ಒತ್ತುತ್ತಿದ್ದ ಲಕ್ಷ್ಮಿ ಭಕ್ತರ ನೆನೆದು (ಶ್ರೀರಂಗದ ಬಳಿಯ) ನೆರೆ(ವರ)ಯೂರಿಗೆ ಬಂದು ನೆಲೆಸಿದಳು. ಹರಿ ಸ್ನಾನಕ್ಕೆ ಬಂದ ಋಷಿ "ದಾರಮ್ಮ" ಎನಲು, 'ನಾವು ಪರದೇಸಿ' ಎಂದು ನುಡಿಯೆ, ಧ್ಯಾನದಲಿ ನೋಡಿದನು ತಾಯಿ ಮಹಾಲಕ್ಷ್ಮಿಯನು, 'ಭಾಗ್ಯವನು ಮಾಡಿದೆನು ಮನೆಗೆ ಬನ್ನಿ.' 'ನಿನ್ನ ತಪಸನು ನಂಬ ಬಂದೆ ಮಗಳಾಗಿ ತಂದೆ' 'ಬರಬೇಕು ಆಶ್ರಮಕೆ' ಎಂದು ನಡೆತಂದನು. ವೈಕುಂಠದಾ ಸ್ವಾಮಿ ಲಕ್ಷ್ಮಿಯ ಕಾಣದೆ ಅರಸ ಬಂದ. ಬ್ರಾಹ್ಮಣರೂಪಿಲಿ ಋಷಿಯ ಮನೆಗೆ ಬಂದು ಆರೋಗಣೆ ಮಾಡಿ, ಮಹರ್ಷಿ

ನೀರು ಕೊಡಲು 'ಕೊಡಗೂಸು ಕೊಡಬೇಕು ವ್ರತ'ವೆಂದನು. ಮಗಳು ಗಿಂಡ್ಯಾಗೆ ನೀರು ಕೊಡೆ ಕಂಯ್ಯ ಹಿಡಿದ. ಕೂಗಿ ಶಾಪ ಕೊಡಲ ಬಂದ. ಶಂಖ ಚಕ್ರವ ತೋರಿ ಸ್ವಾಮಿ ಎಂದರಿತು ನಮಸ್ಕರಿಸಿ 'ಇತ್ತ ಬಂದ ಭಾಗ್ಯವೇನು?' 'ನಿನ್ನ ಮಗಳು ಬೇಕಿ ಬಂದೆ' ಎನುತಲೂ 'ಕೊಡುವೆ'ನೆಂದ. ಜೊತೆಗೆ 'ಎನ್ನ ಪಟ್ಟಣದಲ್ಲಿ ಸ್ಥಿರವಾಗಿ ನೆಲೆಸಿ, ನಾಡವ್ಯರು ಗುಡಿ ಎಂದು ಹೆಸರಾಗಿ ಕೊಡುವೆ ಮಗಳ' ಎಂದು ಸೇರಿಸಿದ. 'ಕೊಟ್ಟೆ ನಾ ನಂಬಿಕೆ, ನಿಶ್ಚಿತಾರ್ಥ ಮಾಡುವಮಾವ' ಎನಲು ಮುಹೂರ್ತ ನೋಡಿ ಧಾರೆ ಎರೆದ. ದೇವಕ್ಕಳೆಲ್ಲ ಸ್ಥಳ ಒಳ್ಳೆದೆಂದು ಸ್ಥಿರವಾಗಿ ನೆಲೆಸಿದರು. ಏಕಸಿಂಹಾಸನದಿ ಲಕ್ಷ್ಮೀನಾರಾಯಣರು ಏಕಚಿತ್ತದಿ ನೆಲೆಗೊಂಡಿದ್ದರು. ಸ್ವಾಮಿ ಗರುಡನ್ನೇರಿ ಮೆರೆವಾಗ ನೋಡಿದರೆ ನಾಯುಟ್ಯ ಪದವಿಂಯು ಕೊಡುವ ಪರಿಯಿದು. ಇಲ್ಲಿ ಕಥನಕೌಶಲದೊಂದಿಗೆ ಬೆರೆತ ಸಂವಾದದ ಸೊಗಸೂ ನಮ್ಮ ಗಮನ ಸೆಳೆಯುತ್ತದೆ.

'ಹರಿಹರರಿಬ್ಬರು ಒಂದು ಮಾತಾಡಲು' ಎಂದಾರಂಭವಾಗುವ 22 ನುಡಿಗಳ ಕಥನ ಕವನವು ತ್ರಿಪದಿ ಪಾಳಗೊಂಡ ಛಂದದಲ್ಲಿ ಸುಂದರವಾಗಿ ಬಂದಿದೆ. ಹರಿಯು ಮೋಹಿನಿ ರೂಪ ಕಾಣಲೆಳಸಿ ಹರ ಮರುಳಾದ ಭಾಗವತ 8–11ರ ಕಥೆ (ಮೋಹಿನೀ ವಿಶ್ವನಾಥ) ಇಲ್ಲಿ ವಾದಿರಾಜರ ವರ್ಣನಾ ವಿಲಾಸವನ್ನೂ ಸೂಸಿದೆ —

ತೆಂಗಿನ ತಿಳಿಗೊಳ ನಿಂಬೆ ಕಿತ್ತಲೆ ಬಾಳೆ
ಹೊಂಬಾಳೆ ಅಡಿಕೆ ಬನಗಳು
ಹೊಂಬಾಳೆ ಅಡಿಕೆ ಬನದೊಳಗಾಡುವ
ರಂಭೆಯ ಕಂಡು ಹರ ಮರುಳಾದ (1)

ಹರಿ ಬೇಡವೆಂದರೂ ಕೇಳದ ಹರನಿಗೆ ವನದ ಪರಿಸರದಲ್ಲಿ ತನ್ನ ಮೋಹಿನಿ ರೂಪ ಕಾಣಬಹುದೆಂದ. ಮೋಹಿನಿ ಸುಳಿದಾಡುತ್ತಿದ್ದ ವನದ ಬಗ್ಗೆ 4 ನುಡಿಗಳಲ್ಲಿದೆ. ನಂತರದ 10 ನುಡಿ ಮೋಹಿನಿಯ ರೂಪಾಲಂಕಾರ ವರ್ಣಿಸಿವೆ ಹೀಗೆ —

ನಡು ಬಳುಕಿ ಮುಡಿ ಸಡಿಲ ಉಡಿಗಂಟೆ ಹೊಳೆಯುತ
ಕೊರಳ ಪದಕ ಹಾರ ಒಲೆಯುತ
ಕೊರಳ ಪದಕ ಹಾರ ಒಲೆಯುತ, ಹೆಣ್ಣಿನ
ಇರವ ವರ್ಣಿಸಲಾರಿಗಳವಲ್ಲ (7)

ಕುಂಭಕುಚದ ಮೇಲೆ ಗಂಧವ ಪೂಸಿದಳೆ
ಅಂದಕೆ ಹಿಡಿದಳೆ ಕಮಲವ
ಅಂದಕೆ ಹಿಡಿದಳೆ ಕಮಲವ, ಕಡೆಗಾ
ಚಂದ ಬಂಧ್ಯರನ ಕಂಗೆಡಿಸಿತು (12)

ಅವಳ ಚಂದ, ಚಾಗುಮಾನ, ಥಳುಕು—ಬಳುಕು, ಬೆಡಗು—ಬಿನ್ನಾಣ ಮರುಳುಗೊಳಿಸಿರುವ —

ಅಮ್ಮಾಲೆ ಅಡೋಳು ಒಮ್ಮೊಮ್ಮೆ ನೋಡೋಳು
ತನ್ನೊಳಗೆ ತಾನು ನಗುವೋಳು
ತನ್ನೊಳಗೆ ತಾನು ನಗುವೋಳು, ಬೊಮ್ಮನ
ಮಗನ ಮರುಳು ಮಾಡಿ ನಡೆದಳು (15)

ಮುಕ್ಕಣ್ಣ ಮರುಳಾಗಿ ಅವಳನ್ನು ಹಿಂಬಾಲಿಸಿ ಕಾಡಿ ಬೇಡಿದ. ಕೊನೆಗೆ ಹತಾಶನಾಗಿ —

ಪೀತಾಂಬರದ ಮುಂಡೆರಗನು ಕಾಣುತ್ತ
ನೋಡೆ ಬಾರೆಂದು ಕರೆದನು
ನೋಡೆ ಬಾರೆಂದು ಕರೆದ ಧ್ವನಿಯ ಕೇಳಿ
ಕಾಂತೆ ಬನದೊಳಗೆ ಮರೆಯಾದಳು (18)

ಇಲ್ಲಿಗೆ ಈ ಮಾಯಾ ನಾಟಕದ ದೃಶ್ಯ ಮುಗಿಸಿ ಕವಿ ಹರನಿಗೆ ಹರಿಯ ದರ್ಶನಗೈಸಿದ್ದಾರೆ —

ಮಂಗಳ ಮಹಿಮಗೆ ಅಂಜಿಕೆಯಿಲ್ಲದೆ
ಗಂಗೆ ಪೊತ್ತವನ ತಿರುಗಿಸಿದ
ಗಂಗೆ ಪೊತ್ತವನ ತಿರುಗಿಸಿದ ತನ್ನಯ
ಮುಂದಣ ಅಂದವೆಲ್ಲ ಇಳುಹಿದ (20)

ಆಗ ಹೆಣ್ಣು ಸಾಕ್ಷಾತ ಹರಿ ಎಂದ್ಯರ ತಿಳಿದನು; ಅವನೇ ಉಡುಪಿನ ಕೃಷ್ಣ, ಹಯವದನ. 'ಭಾಗವತದಲ್ಲಿ ಕಥನ ಕುತೂಹಲಕರವಾಗಿದೆಯೂ ಇಲ್ಲಿಯ ದೇಸೀ ಛಂದದ ಪುನರಾವರ್ತನ ಪದ ಪ್ರಯೋಗಗಳ ಸೊಬಗು, ಸರಳ ಸುಂದರ ವರ್ಣನೆಯ ಬೆಡಗು ಇಲ್ಲ. 'ಬಾಲಲೀಲೆ' ಯಲ್ಲಿ ಅಂಶಗಣದ ಭೋಗಷಟ್ಪದಿಯ ಲಯ ಬಳಸಿದ ವಾದಿರಾಜರು ಇಲ್ಲಿ ದೌಕಂಗೊಂಡ ತ್ರಿಪದಿಯ ಲಯ ಬಳಸಿ ಅದೇ ಭಾಗವತದ ಕಥೆ ಹೇಳಿದ್ದು ಅವರ ಪ್ರಯೋಗ ಪ್ರತಿಭೆಗೆ ಸಾಕ್ಷಿ.

## 9) ತತ್ತ್ವ ಪ್ರತಿಪಾದನೆ

ವಾದಿರಾಜರಂಥ ಪ್ರತಿಭಾವಂತರು ತತ್ತ್ವವಾದ ಪ್ರಸಾರಾರ್ಥ ಸಾಹಿತ್ಯ ರಚಿಸಿದರೂ ಅದು ಕೇವಲ ಶುಷ್ಕ ಧಾರ್ಮಿಕ ಶಾಸ್ತ್ರವೆನಿಸದು. ವಾಸ್ತವಿಕವಾಗಿ 'ತತ್ತ್ವವಾದ'ವೆಂಬ ಮಧ್ವಶಾಸ್ತ್ರವನ್ನು

ಕಾವ್ಯಧರ್ಮಯುಕ್ತವಾಗಿ ಪ್ರತಿಪಾದಿಸಿದ್ದೇ ಅವರ ವೈಶಿಷ್ಟ್ಯ. ಅಂತೆಯೇ ಅವರ 'ಕೀರ್ತನೆಗಳು ರಸಭರಿತವಾಗಿವೆ. ಶಾಸ್ತ್ರೀಯ ಯುಕ್ತಿಗಳನ್ನು ಸಾಹಿತ್ಯ ಮುದ್ರೆಯಿಂದ ಮನಸ್ಸಿಗೆ ನಾಟುವಂತೆ ಸರಳವಾದ ಪ್ರೌಢ ಕನ್ನಡ ನುಡಿಯಲ್ಲಿ ಹೇಳಿ ಮುಖ್ಯ ಪ್ರಮೇಯವಾದ ಭಕ್ತಿಯಿಂದ ಶ್ರೀಹರಿಯನ್ನು ಒಲಿಸಿ ಮುಕ್ತಿಯನ್ನು ಪಡೆಯಬೇಕೆಂಬುದನ್ನು ಸಿದ್ಧಾಂತಿಸಿದ್ದಾರೆ' (ಪಂಡಮುಖಿ, ಕ.ಹರಿದಾಸ ಸಾಹಿತ್ಯ, 157). ಎಂಬ ಹೇಳಿಕೆಯನ್ನೊಪ್ಪಬಹುದು; ಆದರೆ 'ಇವರ ಕೃತಿಗಳಿಗೆ ಶಾಸ್ತ್ರ ಸಾಹಿತ್ಯವೆನ್ನಬಹುದು' ಎಂಬ ಮುಂದಿನ ವಾಕ್ಯ ಸಮನ್ವಯ ಕೇವಲ ತಾತ್ತ್ವಿಕ ಕೃತಿಗಳಿಗೆ ಸೀಮಿತವೆಂಬುದನ್ನು ಲಕ್ಷಿಸುವುದಗತ್ಯ. ಇಲ್ಲವಾದರೆ 'ಬಾಲಲೀಲೆ ಕೀಡಕವಧೆ'ಯಂಥ ಇಡಿಯ ಕೃತಿಗಳೂ ಈ ವರೆಗೆ ಪರಿಶೀಲಿಸಿದ ಎಲ್ಲ ಬಿಡಿ ಹಾಡುಗಳೂ ಶಾಸ್ತ್ರ ಸಾಹಿತ್ಯವೆನಿಸಬೇಕಾದೀತು. ತಾತ್ತ್ವಿಕ ಕೀರ್ತನೆಗಳೂ ಕಾವ್ಯರೂಪ ಪಡೆದ ಪರಿಯನ್ನು ಪರಿಕಿಸಿದಲ್ಲಿ ಈ ಮಾತು ಮನವರಿಕೆಯಾಗುವುದು. ಉದಾಹರಣೆಗೆ ('ಜೋ ಜೋ ಕಂದರ್ಪ ಕೋಟಿ ಲಾವಣ್ಯ) ಪ್ರಳಯ ಜಲಧಿಯಲ್ಲಿ ನೀ ಸಾಲದೆಲೆಯ ಮ್ಯಾಲೆ ಎನ್ನುವ ಜೋಗುಳ ಪದ ಸೃಷ್ಟಿ ಕಾರ್ಯವನ್ನು ಸಾರವತ್ತಾಗಿಸಿದೆ —

ಇಪ್ಪತ್ತನಾಲ್ಕು ಅಂಡಾಂಡ[446] ತತ್ವಗಳಿಂದ
ಅಪ್ಪದೆ ಬ್ರಹ್ಮಾಂಡವ ನಿರ್ಮಿಸಿದೆ
ಸರ್ವಶಯನನಾಗಿ ನಾಭಿ ಕಮಲದಿಂದ
ಅಷ್ಟ ಬ್ರಹ್ಮನ ಪ್ರಸವಿಸಿದೆ ನೀನೆಂದು (4)

ಈ ಸೃಷ್ಟಿ—ಸ್ಥಿತಿ — ಸಂಹಾರಕನ ಒಂದೊಂದು ಮಹಿಮೆ ಅನಂತಾದ್ಭುತ. ಲೀಲೆಗಾಗಿ ಬಂದು ಗೋಕುಲದಲ್ಲಿ ಶಿಶುವಾಗಿ ಹುಟ್ಟಿದೆ, ಮನುಜನಂತೆ ತೋರುವುದೇನು ಉಚಿತವೊ' ಹೆತ್ತವರಿಗೆ ಹರುಷವಾಗಿ ದಾನ ಧರ್ಮಗೈವರು, ಜಾತಕರ್ಮ ನಡೆಸಿದರು; 12ನೆಯದಿನ ದೇವತೆಗಳೂ ನೆರೆದು ನಾಮಕರಣ ನಡೆಸಿದರು. ಹಾಡಿನ ಕಡೆಯದು —

ಕ್ಷೀರಾಂಬುಧಿಯನ್ನು ತೊಟ್ಟಿಲು ಮಾಡಿ
ಒರಂತೆ ನಾಲ್ಕು ವೇದಗಳ ನೇಣನೆ ಮಾಡಿ

ಧೀರ ಶೇಷನು ಬಂದು ಹಾಸಿಗೆ ಹಾಸಲು
ನಾರಾಯಣನೆ ಮಲಗಿದೆಯೊ ಹಯವದನ (16)

---

446. ಪಂಚಜ್ಞಾನೇಂದ್ರಿಯ + ಪಂಚ ಕರ್ಮೇಂದ್ರಿಯ + ಮನಸ್ಸು = 11 (ಇದೂ 24 ತತ್ವಗಳಲ್ಲಿ ಸಮಾವಿಷ್ಟ).

ಈ ರೂಪಕದ ಪರತತ್ತ್ವ ಕಲ್ಪನೆ ಮಧ್ವಶಾಸ್ತ್ರ ಸಮ್ಮತವೆಂಬುದು ಸ್ಪಷ್ಟ. 'ವೈಕುಂಠ ವರ್ಣನೆ'ಯ ವಿಷಯ ಇಲ್ಲಿ ಹಾಡಾಗಿ ಹರಿದಿದೆ. ಇದನ್ನೇ 'ಜನುಮಮಯ ಮಾರುತಿ' ಎನ್ನುವ (ಸೃಷ್ಟಿ ಪ್ರಕರಣ) ಸುಳಾದಿಯಲ್ಲೂ ತಿಳಿಸಿದೆ; ವಿಜಯದಾಸರ 'ಆದಿಮಾರುತಿ' ಎಂಬ ಸುಳಾದಿ ವಿಸ್ತರಿಸಿದೆ.

ಮಾಧ್ವ ತತ್ತ್ವದ ಪುನರುತ್ಥಾನಕ್ಕೇ ಅವತರಿಸಿದ ವಾದಿರಾಜರು ಹರಿಸರ್ವೋತ್ತಮತ್ವ ತಾರತಮ್ಯಾದಿಗಳನ್ನು ಜನಸಾಮಾನ್ಯರಿಗಾಗಿ ಇದಿರು ಕೃತಿಗಳಂತೆ ಬಿಡಿ ಹಾಡುಗಳಲ್ಲಿಯೂ ಬಿಡಿಸಿ ತೋರಿದ್ದಾರೆ. 'ನಾರಾಯಣನ ನೆನೆ ವರ್ಣಿಸು ಮನುಜ' ಎನ್ನುವ ಕೃತಿಯಲ್ಲಿ 'ಏಕಮೇವೇಶ್ವರಸ್ಸಾಧ್ಯಗವಾನ ವಿಷ್ಣುರವ್ಯಯ' ಮೊದಲಾದ ಪುರಾಣೋಕ್ತಿಗಳನ್ನು ಧರಿಸಿ 'ಸ್ವೀಕರಿಸು ವೈಷ್ಣವ ಮತವ' ಎಂದುಚ್ಚರಿಸಿದ್ದಾರೆ; ಹರಿಪರನಾಗಿರುತ್ತ, ಎಳ್ಳಷ್ಟು ಭಜಿಸಿದರೂ ಒಲಿವನೆಂಬ ಭರವಸೆ ಇತ್ತಿದ್ದಾರೆ. ಹರಿಯ ಹಿರಿಮೆಗೆ —

ಓದುವ ಅಡಗುವ ದೇವರೆ ಬಲ್ಲರು
ಬಾಡುವ ಬೇಡುವ ಮುನಿಗಳೆ ಬಲ್ಲರು
ನೋಡುವ ಕೂಡುವ ಮುಕುತರೆ ಬಲ್ಲರೊಡನಾಡುವ ರಮೆ ಬಲ್ಲಳು
ಊಡುವ ಪಾಡುವ ಯಶೋದೆ ಬಲ್ಲಳು
ಕಾಡುವ ಖಳರ ಮರ್ದಿಸಿ ಹುರಿಗುಟ್ಟದ
ನಾಡೊಳು ಕೇಡುಗಳೆವ ಕೃಷ್ಣನಿಗೇರೆಂದಾಡದಿರು (7)

ಎನ್ನುವ ನುಡಿ 'ಬಲ್ಲವನೇ ಬಲ್ಲ ಬೆಲ್ಲದ ಸವಿ'ಎಂಬಂತೆ, ಅವನ ಭಕ್ತರು, ಮಡದಿ, ತಾಯಿ ಇವರ ಸ್ವಾನುಭವವೇ ಸಾಕ್ಷಿ ಎಂದಿದೆ. ಕೊನೆಯ ನುಡಿ —

ಸಿರಿದೇವಿ ಅವನಿಗರಸಿ, ಸುರರ ಗುರು
ವಿರಿಂಚಿ ಪವನರು ಅವನ ಕುವರರೆಂಬರು,
ಉರಗಾಧಿಪನಾವನ ಮಂಚ, ವಿಹಗೇಶ್ವರನಾವನ ವಾಹನ,
ಪುರಹರನಾವನುಂಗುಟ ನೀರ ಪೊತ್ತ, ನಿ
ರ್ಜರಪತಿ ಅವನ ಚರಣಸೇವಕನಾದ,
ಸುರರೊಳಗೇ ಹಯವದನಗಿನ್ನಾರು ಸರಿ ಎಂದುಸುರಿರೋ (9)

ಎಂದು ಹರಿಸರ್ವೋತ್ತಮತ್ವದ ನಾದಚಿತ್ರವಿದೆ ಕಾವ್ಯಮಯವಾಗಿ. (ಈ ನುಡಿಗಳ ದೀರ್ಘ ಚರಣಗಳ ಅಂತ್ಯಭಾಗ ಬೇರ್ಪಡಿಸುವಂತೆ ಅಭ್ಯಾಸಕ್ಕೆ ಹೊಂದಿಸಿ 8 ಚರಣ ಮಾಡಬಹುದು ಬೆಂಗಳೂರ ಪ್ರತಿಯಲ್ಲಿರುವಂತೆ).

ಹರಿಯ ಹಿರಿಮೆ ಸಾರುವ 'ಭಕುತಾಪರಾಧದ ಬಗೆಯು' ಪೌರಾಣಿಕ ಪ್ರಸಂಗಗಳನ್ನು ಅಂತ್ಯಪ್ರಾಸ ಸಹಿತ ಕೋದಿದೆ. 'ಕಣ್ಣಿಯಾಗಿ ತುರಗವನೇರಿ' ಎನ್ನುವ ಸುಳಾದಿ ಹರಿಯ ಮಹಿಮೆಗಳನ್ನು ದಶಾವತಾರಾದಿ ಲೀಲೆಗಳಿಂದಲೂ ಅದ್ಭುತ ರಸದನುಭವವನ್ನುಂಟುಮಾಡುತ್ತದೆ. (7ನೆಯ ನುಡಿಯಲ್ಲಿರುವ ಹರಿಯ 'ಒಂದುಪಾದ ವಾದಿರಾಜನ್ನ ದಂಡದ ತಡಿಯಲ್ಲಿರಿಸಿ' ಎಂಬ ಚರಣ ಅವರ ಮುಖ್ಯ ಪದವಿಯನ್ನು ಸೂಚಿಸುವಂತಿದೆ). ಇದೇ ವಿಷಯ ಪ್ರತಿಪಾದಿಸುವ ಇತರ ಸುಳಾದಿಗಳು — 'ಬೊಮ್ಮ ನಿಮ್ಮ ಹೆಮ್ಮೆಗಿಮ್ಮೆ, ಹರಿ ನಿನ್ನ ಜ್ಞಾನಸಿರಿಗೆಣೆಗಾಣೆ, ಹರಿ ಸ್ವತಂತ್ರ ಸರ್ವೇಶ, ಅಂಬಿಕಾಪತಿ ಉಮಾಪತಿ ಎಂದು, ಒಪ್ಪುವ ಮಾನಿಸದೇಹಂಗಳ್'; 'ಮುಂದೆ ನೃಸಿಂಹ ನಮ್ಮ, ವೇದಶಾಸ್ತ್ರ ಪುನಿ' ಎಂಬೆರಡು ಸುಳಾದಿ ಲಂಗಸುಗೂರ 'ಹರಿಕಥಾಮೃತ ಸಾರ'ದಲ್ಲಿವೆ. ಕೀರ್ತನೆಗಳಲ್ಲಿ 'ನಂಬು ನಂಬು ನಾರಾಯಣನ' ಪೌರಾಣಿಕ ಉದಾಹರಣೆಗಳೊಡನೆ ನಂಬಿದವರ ಸದ್ಗತಿ — ನಂಬದವರ ಅವನತಿ ಚಿತ್ರಿಸಿದೆ, 'ಚಿತ್ತಾಭಿಮಾನಿ ನೀನು' ತ್ರಿಪದಿಯ ಛಂದದೊಳಿದೆ, 'ಹುಂಕಾರದಿಂದಲಿ ನಿತ್ಯ ಭೂತಗಳಿಂ' ಕ್ರೋಧದ ಶಂಕರ ನಾರಾಯಣರನ್ನು ಪ್ರತಿ ನುಡಿಗಳಲ್ಲಿ ವರ್ಣಿಸಿಯೂ 'ಹಯವದನನೆ ಬಲ್ಲ ಕೊಡಗಿಯದೇವನ' ಎಂಬಂತೆ ಹಿರಿಮೆಯನ್ನು ಧ್ವನಿಸಿದರೆ, 'ಹರಿ ಪರಮಪುರುಷ' ಎಂಬುದು 'ತೀರ್ಥಪ್ರಬಂಧ' (ಪಶ್ಚಿಮ 62ರ) ಭಾವವನ್ನೇ ಚಿತ್ರಿಸಿದೆ ತರ್ಕಶುದ್ಧವಾಗಿ —

ಒಬ್ಬನಿಂದಲಿ ಸಾಯನೆಂದೊ ರಕ್ಕಸ(ನೊಬ್ಬ)ರೊಬ್ಬರ
ರ್ಧಭಾಗವ ತಾಳಿ ಐತಂದು
ಕೊಬ್ಬ ಮುರಿದವರು ಏಳನ ಹರಿಹರರು ತಾವೀಗ
ಒಬ್ಬನಿಂದಲದನುಜನೆಂತಳಿದನು (2)

ನರಸಿಂಹನಂತೆ ಕೃಷ್ಣನು ತನ್ನ ಲೀಲೆಯಲಿ
ಹರನಂದವ ತಾಳಿ ಗುಹನ ಗೆಲಿದನು ಗಡ
ಪರಿಪರಿ ವೇಷದಲಿ ನಟನಂತೆ ನಲಿವದೇ
ಪರದೇವನಿರವನಾವನು ಬಲ್ಲನು (3)

'ಒಂದು ಮೂರುತಿಯಲ್ಲಿ ಹರಿಹರದೇವರಿಬ್ಬರು' ಎಂಬುದೂ ಹರಿಹರರನ್ನು ಬಣ್ಣಿಸಿ ಹರಿಯ ಹಿರಿಮೆ ಹೇಳಿದೆ.

ಇಂತು ಸರ್ವೋತ್ತಮನಾದ ಹರಿಯ ನಾಮಸ್ಮರಣೆಯೂ ವಾದಿರಾಜರ ಕೃತಿಗಳಲ್ಲಿ

ಪ್ರತಿಫಲಿತವಾಗಿದೆ. 'ನೂರೆಂಟು ನೆನೆದು ಫಲವೇನು—ಈರೇಳು ಜಗದೊಡೆಯ ಹರಿಯ ನೊಮ್ಮೆನೆನೆ ಮನವೆ' ಎಂಬುದು ಆದಿ ಮಧ್ಯಾಂತ ಪ್ರಾಸಯುಕ್ತವಾಗಿ ನಾಮಸ್ಮರಣೆ ಹೇಳಿದೆ. ಅದರಿಂದುದ್ಧೃತರಾದವರ ಉಲ್ಲೇಖ ಹಲವು ಕೃತಿಗಳಲ್ಲಿದೆ. 'ಮಾತು ಮಾತಿಗೆ ಕೇಶವ ನಾರಾಯಣ ಮಾಧವ ಎನಬಾರದೆ' ಪ್ರತಿ ನುಡಿಯಂತ್ಯಕೂ 'ಹೇ ಜಿಹ್ವೆ' ಎನ್ನುವುದು ಪುರಂದರದಾಸರ 'ಆಚಾರವಿಲ್ಲದ ನಾಲಗೆ — ಕೃಷ್ಣಾ ಎನಬಾರದೆ' ಕೃತಿಗಳನ್ನು ಸ್ಮರಣೆಗೆ ತರುತ್ತವೆ. ಅದರಂತೆ ಅವರ 'ಹರಿಸ್ಮರಣೆ ಮಾಡೂ, ಹರಿಕಥಾಶ್ರವಣ ಮಾಡೂ' ಎನ್ನುವ ಹಾಡು ನೆನಪಾಗುತ್ತದೆ ವಾದಿರಾಜರ 'ಹರಿಯ ಭಜನೆ ಮಾಡೂ ನಿರಂತರ' ಎಂಬ ಪಲ್ಲವಿಯ ಕೃತಿ ಕೇಳಿದಾಗ. 'ನಾರಾಯಣನೆಂಬ ನಾಮವೇ ಮೂಲ ಮಂತ್ರ' ಎಂಬುದೂ ಆತ್ಮೋದ್ಧಾರ ಮಾರ್ಗದರ್ಶಕ. ಈ ನಾಮಾಮೃತ ಪಾನದ ಸುಖವನ್ನೊಂದು ಅಮೃತವಾಹಿನಿ ರಾಗದ ಕೃತಿಯಲ್ಲಿ ಸೊಗಸಾಗಿ ಹಾಡಿದ್ದಾರೆ ವಾದಿರಾಜರು —

ಪಾವನ ಮಾಳ್ಪುದು ನಾಮಾಮೃತರಸ
ಪಾವನ ಮಾಡುವುದು (ಪ)

ಪಾವನ ಮಾಳ್ಪುದು ನಾಮಸ್ಮರಣೆಯು
ಭೂವಲಯದೊಳು ಈವುದಿಷ್ಟಾರ್ಥವ (ಅ.ಪ.)

ಶ್ರೀನಿವಾಸನ ನಿಮ್ಮ ನಾಮ ಸುಧಾರಸ
ಏನು ರುಚಿಯೊ ಕಾಣೆ ಜೇನುತುಪ್ಪದಂತಿದೆ (1)

ಸಕ್ಕರೆ ಬೆರೆಸಿದ ಬೊಕ್ಕ ಪಾನಕವನ್ನು
ಮುಕ್ಕು ಮಾಡಿಸುತಿದೆ ರಕ್ಕಸಾರಿಯ ಧ್ಯಾನ (2)

ಕದಳಿ ಖರ್ಜೂರ ದ್ರಾಕ್ಷಿ ಇದಕೂ ಇಮ್ಮಿಗಿಲಾಗಿ
ಮುದ ಕೊಡುವುದು ಜಿಹ್ವೆಗೊದಗಿದ ತಕ್ಷಣ, (3)

ಕಾಸಿದ ಕೆನೆಹಾಲ ದೂಷಿಸುವಂತಿದೆ
ಏನು ರುಚಿಯೊ ಹರಿದಾಸರೆಲ್ಲರಿಗೆ (4)

ಹಯವದನನ ನಿರ್ಭಯದಿಂ ಭಜಿಸಲು
ದಯಮಾಡುವ ಸಾಯುಜ್ಯಪದವನಿತ್ತು (5)

ಮೊದಲ ನುಡಿ ಜೇನುತುಪ್ಪದ ಹೋಲಿಕೆಯಿತ್ತರೂ, ನಂತರದ್ದು ಲೌಕಿಕ ಪದಾರ್ಥಗಳಿಗಿಂತ ಮಿಗಿಲು ಹರಿನಾಮಾಮೃತವೆಂದರುಹಿ ಹರಿದಾಸರ ಸ್ವಾನುಭವ ಸೂಚಿಸಿವೆ; ಇಂಥ ಹರಿಭಕ್ತಿಸುಧಾ ಸೇವನೆಗೆ ಸಾಯುಜ್ಯವೇ ಫಲವಲ್ಲವೇ?

‘ಅನುದಿನ - ಸಾಧನ ಮಾಡು’ ಎಂಬುದರಲ್ಲಿ ‘ ಏನು ಕಠಿಣ ಮಾಡಿದ (-ರೆ) ಮುಕ್ತಿ ಹಿರಿದೆಂದು’ ಎನ್ನುತ್ತ ಸವಾಲು ಹಾಕಿದ ವಾದಿರಾಜರು ಮಾಧ್ವ ತತ್ತ್ವಜ್ಞಾನದ ಆಚಾರ ವಿಚಾರ ಕೆಲವು ಕೃತಿಗಳಲ್ಲಿ ಪರಿಚಯಿಸಿದ್ದು, ‘ಒಂದುಬಾರಿ ಸ್ಮರಣೆ ಸಾಲದೆ ಆನಂದತೀರ್ಥರ’ ಹರಿಪಾದ ಸೇರುವವರಿಗೆ ಗುರುವನ್ನು ತೋರಿಸಿದೆ. ‘ಭಾಗ್ಯವಂತನು ಮಯೂರಾಯ ಭಾಗವತನಲ್ಲದೆ’ ಎನ್ನುವ ಪ್ರಶ್ನೋತ್ತರ ವಿವರಗೊಳ್ಳುವಲ್ಲಿ ಹರಿದಾಸರ ದಾಸನು ಹರಿ–ಗುರುಗಳನು ಭಜಿಸುವ ಲಕ್ಷಣವಿದೆ. ಇಂಥ ದಾಸರ ಸಮಾಗಮದಲ್ಲಿ ‘ದಿನಗಳನು ಕಳೆದ ಜನರೆ ಸುಜನರು’ ಎಂಬುದು ಮಾಧ್ವರ ತಂತ್ರಸಾರೋಕ್ತ ಆದರ್ಶ ದಿನಚರಿಯನ್ನು ಕನ್ನಡಿಸಿದೆ (‘ಬುಧಾತ್ ಬ್ರಾಹ್ಮೇ ಮುಹೂರ್ತೇ’ ಎನ್ನುವ ‘ಸದಾಚಾರ ಸ್ಮೃತಿಸ್ತೋತ್ರ’ ಸಂಗ್ರಹಿಸಿದಂತೆ); ತನು ಮನ ಹರಿಯಾಧೀನ ಮಾಡಿ, ಭಾಗ್ಯ ಬಡತನ ಎಣಿಸದೆ, ಹರಿ ಕೊಟ್ಟುದಲ್ಲದೆ ಅನು ಮಾತ್ರ ಬಾರದೆಂದು ಸಂತುಷ್ಟವಾಗಿರೆಂದಿದೆ. ಇದರಂತೆ ತ್ರಿಪದಿಗಳಲ್ಲಿರುವ ‘ಹೊತ್ತಾರೆ ಎದ್ದು ನಾ ಶ್ರೀಕೃಷ್ಣನ ನೆನೆವೆನು’ ಎಂಬ ಮುನವಾರ್ತೆಯ ಹಾಡು (ಕೆ.ಎಲ್.ಪುಷ್ಪದಪ್ರಸಾದರಿಂದ ಪ್ರಕಟಿತವಾಗಿದ್ದು) ಆದರ್ಶ ಗೃಹಿಣಿಯ ದಿನಚರಿಯಾಗುತ್ತ ಸ್ತ್ರೀಧರ್ಮಸಾರವೆನಿಸಿದೆ (ಜಗನ್ನಾಥ ದಾಸರ ‘ಸಾರಿದ ಡಂಗುರ ಯಮನು’ ಇದನ್ನೇ ನಿಷೇಧಾತ್ಮಕವಾಗಿ ನಿರೂಪಿಸಿದೆ). ‘ಯಾತಕಯ್ಯ ತೀರ್ಥಕ್ಷೇತ್ರ, ವೃಂದಾವನದ ಸೇವೆಯು’ ತುಲಸಿ ಮಹಾತ್ಮೆಯನ್ನು ಹೇಳಿದರೆ, ‘ನಡೆಸಿರೋ ನಾರಾಯಣನಂಘ್ರಿಗೆ’ ನಮಸ್ಕಾರ ಕ್ರಮವನ್ನರುಹಿದೆ. ‘ದೇವರ ದೇವ ಶ್ರೀ ನಾರಾಯಣನಿಗೆ’ (ಪಾವಂಜೆ ಸಂಪಾದಿತ ವಾದಿರಾಜರ ಕೀರ್ತನೆಗಳು, ಪು.101) ಪೂಜಾ ಪದ್ಧತಿಯನ್ನೊರೆದರೆ, ‘ಹಲವು ಜನ್ಮದಲ್ಲಿ ಹರಿಯ ನೆನೆಯಲಿಲ್ಲ’ ಚಾತುರ್ಮಾಸದ ವ್ರತ ವಿವರಿಸಿದೆ. ಸಂಸ್ಕೃತದಲ್ಲಿ ‘ಏಕಾದಶಿ ನಿರ್ಣಯ’ ಮಾಡಿದ ವಾದಿರಾಜರು ‘ಏಕಾದಶಿ ನಿರ್ಣಯ ಮನೆಗೆ ಹೇಳ ಬರಿದ ಗೋವಿಂದ’ ಎನ್ನುವ ಆಕರ್ಷಕ ಪಲ್ಲವಿಯ ಕೃತಿಯಿಂದ ದಶಮಿ–ಏಕಾದಶಿ–ದ್ವಾದಶಿ ತಿಥಿತ್ರಯದ ಆಚರಣೆ ಸೂಚಿಸಿದ್ದಾರೆ. ‘ಒಂದು ಪ್ರಕಾರದ ಸ್ವಾಮಿ ಮಂದಿಯ ರಕ್ಷಿಸುವುದು’ ಎನ್ನುವುದರಲ್ಲಿ ಹರಿಯ ಸರ್ವವ್ಯಾಪ್ತಿ–ಪ್ರೇರಕತ್ವ ಕೊಂಡಾಡಿದ್ದಾರೆ (‘ತತ್ತ್ವಸುವ್ವಾಲಿ’ಯಂತೆ ದೇಹದ್ದಿನ ತಾತ್ತ್ವಿಕ ವಿವರ ನೀಡಿದ್ದಾರೆ). ‘ಗುರು ಹಿರಿಯರನನುಸರಿಸಿ ಹರಿಯ ಮನದೊಳಗಿರಿಸಿ ಪರಗತಿಯ ಬೇಗ ಸಾಧಿಸಿರೊ’ ಎನ್ನುವುದು ದೇಹಾನಿತ್ಯತೆಗೆ ‘ಕಂಬಳಿಯ ಬುತ್ತಿಯಂತೀ ದೇಹದೊಳಗೆ ಸುಖವೆಂಬುದಿಲ್ಲ’ ಎಂಬ ದೃಷ್ಟಾಂತವಿತ್ತಿದೆ; ‘ತಾಯ ಮಾರಿ ತೊತ್ತ ಕೊಂಬ ಪಾಮರನಂತೆ ಹಾಜನರಿಗೆ

ಆಯುಷ್ಯ ಹೋಯಿತೆಂದಿದೆ; 'ಈ ಗಾಳಿ ದೀಪ ಸ್ಥಿರವಲ್ಲ'ವೆಂದೂ ದೃಷ್ಟಾಂತಿಸಿದೆ. 'ಬಾಳ್ಕದ ಭವದ ಬಾಳ್ಕನರ' ಎಂಬ ಉಗಾಭೋಗವೂ ಹರಿದಾಸಸಂಗ— ಹರಿಧ್ಯಾನಾದಿ ಸದಾಚಾರ ಬೋಧಿಸಿದೆ; 'ಶಂಭು ಸ್ವಯಂಭುಗಳ ಹೃದಂಬರದಿಂದು ಬಿಂಬದಂತಿಹ ಕಂಬುಧರನ ನಂಬು ಮನುಜ ಡಂಬ ಮತದ ಹಂಬಲಿಸದೆ' ಎಂಬುದೂ ಅದೇ ವಿಚಾರ ತಿಳಿಸಿದೆ; 'ನಾರಾಯಣ ನಾರಾಯಣ ನಾರಾಯಣ' ಎಂದು ಮೊದಲಾದ (ವಾ.ಕೃ.590) ಕೃತಿಯೂ ಇದೇ ಬಗೆಯದು. ತ್ರಿಪದಿಗಳಲ್ಲಿ ಸುವ್ವಾಲಿ ಹಾಡಿದ 'ಸತ್ಯ ಎಂಬೊ ಕೆಳದಿ ನೀ ಅತ್ತಿತ್ತ ಆಗಲದಿರು' ಎನ್ನುವುದು ಕಣಕ ಕುಟ್ಟುವ ಆತ್ಮಸಾಧನ ರೂಪಕವಾಗಿದ್ದು, ಪ್ರಕಟವಾದಂತಿಲ್ಲ (ಅನುಬಂಧಿತ). ವಾದಿರಾಜರು ಅಂದು ಸ್ವಮತ ಮಂಡಿಸುತ್ತ 'ಆಡಿನ ಮರಿ ಎತ್ತ ಅಂಬುಧಿಯೊಳಾಡುವ ಕರಿ ಎತ್ತ, ಕರೆದು ತನ್ನಿರೊ ಕನ್ನಗಾರನ' ಎಂಬಂಥ ವಿಮತಖಂಡನ ಕೃತಿ ರಚಿಸಿದ್ದೂ ಸಹಜವಾಗಿದೆ.

'ತತ್ತ್ವವಾದ'ವನ್ನೇ ಪ್ರತಿಪಾದಿಸಿದರೂ ವಾದಿರಾಜರ ವಾಗ್ಝರಿ ವೈಭವಗಳಿಂದದು ಬರಿ ಧರ್ಮವೆನಿಸದೆ ಕಾವ್ಯಧರ್ಮಯುಕ್ತವಾಗುವುದಕ್ಕೆ ಮೇಲಣ ವಿವೇಚನೆ ಸಾಕು. 'ಶಾಸ್ತ್ರದ ನಿಶಿತ ಮಾರ್ಗವೂ ಸಾಹಿತ್ಯದ ಸರಸಸರಣಿಯೂ ಸರಿಸಮನಾಗಿ ವಾದಿರಾಜರಿಗೆ ಸ್ವಾಭಾವಿಕವಾಗಿ ಧರಿಸಿದ್ದುವು' (ಹರಿದಾಸ ಹೃದಯ, 21). ಸಂಸ್ಕೃತ ಕೃತಿಗಳಲ್ಲೇ ಶಾಸ್ತ್ರ ವಿಷಯಗಳನ್ನು ಕಾವ್ಯಮಯಗೊಳಿಸಿದ ಅವರು ಸಾಮಾನ್ಯರಿಗೆ ರಚಿಸಿದ ಕನ್ನಡ ಕೃತಿಗಳಲ್ಲಿ ಆ ಸಮನ್ವಯವನ್ನು ಮತ್ತೂ ಹೆಚ್ಚಿಸಿದರು. ಪ್ರಾಸಾಲಂಕಾರದ ಅವರ ಪ್ರೀತಿ ಕನ್ನಡದಿಂದಲೇ ಸಂಸ್ಕೃತಕ್ಕೆ ಸಾಗಿದೆ. ಮಧ್ವರು ಸಂಸ್ಕೃತದಲ್ಲೊರೆದ 'ತತ್ತ್ವವಾದ'ವನ್ನು ಕನ್ನಡಿಸಿ ವಾದಿರಾಜರು ಆಚಾರ್ಯರ ಕಾರ್ಯ ಪೂರೈಸಿದರು. 'ಆಚಾರ್ಯರ ತತ್ತ್ವಗಳ ತಿರುಳನ್ನು ಸ್ವಾನುಭವದಿಂದ ಚೆನ್ನಾಗಿ ಮಥನ ಮಾಡಿರುವುದರಿಂದ ಅವುಗಳನ್ನು ಇಷ್ಟರ ಮಟ್ಟಿಗೆ ತಿಳಿಗನ್ನಡದಲ್ಲಿ ಹೇಳಲು ಅವರಿಗೆ ಸಾಧ್ಯವಾಯಿತೆನ್ನಬಹುದು. ಅವರಲ್ಲಿರುವ ಅಪೂರ್ವವಾದ ರಸಾನುಭವ ಶಕ್ತಿಯಿಂದ ಜಟಿಲವಾದ ಶಾಸ್ತ್ರದ ಪ್ರಮೇಯಗಳೆಲ್ಲವೂ ಅವರಲ್ಲಿ ಪುನರುಜ್ಜೀವನಗೊಂಡು ಪ್ರಸನ್ನತ್ವವನ್ನು ಪಡೆದವೆಂದು ಹೇಳಿದರೂ ಅತ್ಯುಕ್ತಿಯಲ್ಲ' (ವಾದಿರಾಜರ ಕೃತಿಗಳು, ಪೀಠಿಕೆ, 41). ಭಾವಿ ಸಮೀರರಿಗಿದೊಂದು ವಿಶೇಷವಲ್ಲವೆಂದರೆ ಅವರ ವ್ಯಕ್ತಿತ್ವದ ಹಿರಿಮೆಯೇ ವ್ಯಕ್ತವಾದೀತು. ಅವರ ಸಮಕಾಲೀನ ಪುರಂದರದಾಸರು ಕಾವ್ಯಭಾಗವನ್ನೇ ಹೆಚ್ಚಾಗಿ ಪೋಷಿಸಿದರೆ, ವಾದಿರಾಜರು

ಶಾಸ್ತ್ರ ಭಾಗವನ್ನು ಹೆಚ್ಚು ಪೋಷಿಸಿದರೆನ್ನಬಹುದು. 'ಶ್ರೀಪಾದರಾಜ, ವ್ಯಾಸರಾಯರ ಮೇಲ್ಪಂಕ್ತಿಯನ್ನೇ ಅನುಸರಿಸಿ ವಾದಿರಾಜರು ಹರಿದಾಸ ಸಾಹಿತ್ಯ ಸೃಷ್ಟಿಸಿದ್ದರೂ, ಅದು ಅವರ ವ್ಯಕ್ತಿತ್ವವಿಶೇಷದಿಂದ ವಿಪುಲವಾದುದಷ್ಟೇ ಅಲ್ಲದೆ ಶಾಸ್ತ್ರೀಯ ಸಂಗತಿಗಳನ್ನು ಪ್ರಸ್ತಾಪಿಸುವಲ್ಲಿಯೂ ಸಫಲ ಮಾಧ್ಯಮವಾಗಿ ಪರಿಣಮಿಸಿತು. ವಿಜಯದಾಸಾದಿಗಳಿಗೆ ಮಾರ್ಗದರ್ಶಕವಾಯಿತು' (ವಾ.ಕೃ; ಪೀಠಿಕೆ 42). ವಾದಿರಾಜರ ಕನ್ನಡ ಕೃತಿಗಳಿಂದಾಗಿ 'ಹರಿದಾಸ ಸಾಹಿತ್ಯವು ಸಹ ಕೇವಲ ಸುಲಭಗ್ರಾಹ್ಯವಾದ ವಿಷಯ ವಿಧಾನಗಳ ಪರಿಮಿತಿಯಲ್ಲೇ ಉಳಿಯದೆ, ಅದರ ಕ್ಷೇತ್ರ ವಿಸ್ತಾರವಾಯಿತು; ಸಾಹಿತ್ಯದ ಸವಿಯೊಂದಿಗೆ ಶಾಸ್ತ್ರದ ಪ್ರಕ್ರಿಯೆಯೂ ಸೇರಿಕೊಂಡಿತು. ಸ್ವತಃ ಸಂಸ್ಕೃತ ಭಾಷೆಯಲ್ಲಿ ಪಾರಂಗತರಾಗಿದ್ದ ವಾದಿರಾಜರು, ಈ ಸಾಹಿತ್ಯ ಶಾಸ್ತ್ರಗಳ ಸಮನ್ವಯಕ್ಕೆ ಕಾರಣಪುರುಷರಾದರು' (ಹರಿದಾಸ ಹೃದಯ, 44–41). ಈ ದೃಷ್ಟಿಯಿಂದ ಹರಿದಾಸ ಸಾಹಿತ್ಯದಲ್ಲಿ ವಾದಿರಾಜರಿಗೊಂದು ವಿಶಿಷ್ಟ ಸ್ಥಾನವಿದೆ;[447] ಅವರ ಕನ್ನಡ ಕೃತಿಗಳಿಗೆ ತನ್ನದೇ ಆದ ಮಹತ್ವದ ಸ್ಥಾನವಿದೆ. 'ತತ್ವವಾದ'ದೊಡನೆ ತತ ಪ್ರತಿಪಾದನೆಯ ಸೊಬಗು ಹಾಗೂ ಅವುಗಳ ಮೇಲಿನ ಅವರ ಅಧಿಕಾರದ ಮುದ್ರೆ ಅನ್ಯರಲ್ಲಿ ಕಾಣವು. ಅಂತೆಯೇ ಪುರಂದರ ಕನಕದಾಸರ ತರುವಾಯ ದಾಸಕೂಟದ ಪರಂಪರೆಯನ್ನು ಉಜ್ವಲವಾಗಿ ಬೆಳಗಿದವರಲ್ಲಿ ಜಗನ್ನಾಥದಾಸನು ಹಿರಿಯನು' (ರಂ.ಶ್ರೀ.ಮುಗಳಿ, ಕ.ಸಾ.ಚ., 294); 'ಇವರಿಗೆ ಹಿಂಬಲವಾಗಿ ನಿಂತ ಶ್ರೀಪಾದರಾಯ ವ್ಯಾಸರಾಯ ವಾದಿರಾಜರು, ವಿಜಯದಾಸರಂಥ ದ್ವಿತೀಯ ಶ್ರೇಣಿಯ ಕೀರ್ತನಕಾರರನ್ನು ಅಲಕ್ಷಿಸುವಂತಿಲ್ಲ' (ಎಚ್.ಎಸ್.ವೆಂ.ಮೂರ್ತಿ, ಕೀರ್ತನಕಾರರು, 23) ಎಂಬ ಹೇಳಿಕೆಗಳನ್ನು ಒಪ್ಪುವುದು ಕಷ್ಟ.

10) <u>ನೀತಿ ನಿರೂಪಣೆ</u>

'ತತ್ವವಾದ' ಸ್ಥಾಪನೆಯೇ ಅವತಾರೋದ್ದೇಶವಾದರೂ ವಾದಿರಾಜರ ಎಲ್ಲ ಗ್ರಂಥಗಳಲ್ಲಿ ಹಾಗೂ ಕೀರ್ತನೆಗಳಲ್ಲಿ ತರ್ಕಶುದ್ಧವಾಗಿ ಇಲ್ಲವೆ ಸಾಹಿತ್ಯ ರೀತಿಯಲ್ಲಿ ಮಧ್ವಮತದ ತತ್ವಗಳ ಪ್ರತಿಪಾದನೆಯಿರುತ್ತದೆ. 'ಸ್ವೀಕರಿಸು ವೈಷ್ಣವರ ಮತವ, ನಿರಾಕರಿಸು ಅನ್ಯ ಮತವ' ಎಂಬುದೇ ಅವುಗಳ ಆಶಯ" ಎಂದು ಮುಗಳಿಯವರು ಸಾಹಿತ್ಯ ಚರಿತ್ರೆಯಲ್ಲಿ ಸಾರಿದ್ದು (ಪು.294) ಅಷ್ಟು ಸಮರ್ಪಕವೆನಿಸದು. ಮಧ್ವಮತವನ್ನು ಪ್ರತಿಪಾದಿಸಿಯೂ

ಆ ಮಹಿಮರು ಈ ಲೋಕದವರ ಕಲ್ಯಾಣಾರ್ಥ ಕಳಕಳಿಯಿಂದುಸುರಿದ ಸಾರ್ಥಕ ಜೀವನದ ಸದಾಚಾರ ಸಂದೇಶ ಯಾವುದೇ ಕಾಲ, ದೇಶ, ಮತಗಳಿಗೆ ಸೀಮಿತವಾಗಿಲ್ಲ. 'ಅವರು ಮಾಧ್ವರೆಂದಾಗಲಿ ಕನ್ನಡದಲ್ಲಿ ಬರೆದರು ಎಂದಾಗಲಿ ಅವರ ಕೃತಿ ಸಾರ್ವತ್ರಿಕವಾಗಲಾರವು ಎಂದು ಭಾವಿಸಿದರೆ ತಪ್ಪು... ದೇವನಿಷ್ಠೆ, ನಿರಹಂಕಾರ, ಕರ್ತವ್ಯಪ್ರವಣತೆ, ವೈರಾಗ್ಯ, ಸದಾಚಾರ ಬೋಧಿಸುವಾಗ ಸುತ್ತಿನ ಜೀವನದಿಂದ ಸ್ಫೂರ್ತಿ ಪಡೆದಿದ್ದಾರೆ... ಮತೀಯ ಅಭಿಮಾನವಿಲ್ಲದ ಧಾರ್ಮಿಕ ಆಂದೋಲನ ಸ್ವರೂಪ... ಅವರದು ಭಾಗವತ ಮಾನವತಾವಾದ' (ಪ್ರಸಾದಂಯೋಗ, 182-89). ದಾಸ ಸಾಹಿತ್ಯವೆಲ್ಲ ಬರಿ 'ತತ್ವವಾದ'ವಾಗಿದ್ದರೆ ಇಷ್ಟು ಜನಪ್ರಿಯವೆನಿಸದೆ ಕೇವಲ ಒಂದು ಮತದ ಶಾಸ್ತ್ರವಾಗುತ್ತಿತ್ತು. ಆದರೆ ದಾಸರಿಗೆ ಮತ ಪ್ರಚಾರಕ್ಕಿಂತ ನೀತಿಬೋಧೆ ಮುಖ್ಯವಾಗಿತ್ತು. ಇಂಥ ಭಾಗದಲ್ಲಿ ವಾದಿರಾಜರ ವೈದುಷ್ಯ ವಾಗ್ಝರಿಗಳಿಗಿಂತ ಅವರ ಲೋಕೋದ್ಧಾರದ ಕಾಳಜಿ ಎದ್ದುಕಾಣುತ್ತದೆ.

ಇದಕ್ಕೆ ಕೆಲವು ನಿದರ್ಶನ ಇಲ್ಲಿವೆ. 'ಪಾಪಿಯುವ ಕಿವಿಗೂ ವೈಕುಂಠಕೆ ಪಂಥವು ಸಮ್ಮತವಾದರೆ' ಎನ್ನುತ್ತ 'ಮಾತಾಪಿತರು ಎಂದೂ ಭಕ್ತಿ ದತ್ತಾನ್ನವ' ಬುತ್ತಿ ಕಟ್ಟಿರೆಂಬುದೂ 'ಹೂಗಳತೆಗೆ ಕೊಂಡವೊ ಹರಿಯು ಪುರ' ಎಂಬಾಶ್ವಾಸನೆಯೊಡನೆ 'ನಾಗಶಯನನ ನಮ್ಮ ಕಂಡರೆ ಹೋಗಬೇಡಿರೆಂದು ಹುಟ್ಟ ತಡೆವನೊ ... ಪರಮಕರುಣಿಸುರುವ ಮಾನ್ಯವಿತ್ತು ಶರಣರ ಪೊರೆವ' ಎಂದುದೂ ಮನುಜಮಾತ್ರರ ಪರಮ ಪುರುಷಾರ್ಥವಲ್ಲವೇ? ವೈರಾಗ್ಯ ಪ್ರತಿಪಾದಕ 'ಬಿಟ್ಟು ಬನ್ನಿರೋ ಸಂಸಾರದ್ವಂದ್ವ' ಎಂಬುದು 'ಹೆಂಡಿರು ಮಕ್ಕಳ ಕೊಂಡವರಲ್ಲ ಕೊಡುವರಲ್ಲ ಮುಂದಿನ ಗತಿಯನು ಬದುಕು ಎಲ್ಲ ತಿಂಬರು' ಎನ್ನುವ ಎಚ್ಚರವನ್ನು ಮತೀಯವೆಂಬುದು ಮತಿವಂತಿಕೆಯೆ? ಈ ಸಂಸಾರದಲ್ಲಿ ಕಾಮ ಭಾಗವಾದ ಮಮತೆಯು ಮಾಯೆ ಒಂದು ಬಂಧನವಾದರೆ, ಅರ್ಥಪ್ರಾಬಲ್ಯವಾದ ಹಣ ಸರ್ವಸ್ವವಾಗಿ ಎಲ್ಲರನ್ನೂ ಕಾಡಿಸಿ ಹೆಣವಾಗಿಸುವುದಿನ್ನೊಂದು ದುರ್ಗತಿ. ಅಂತೆಯೇ ಪುರುಷಾರ್ಥಗಳ ಸಾಲಿಗೆ ಸೇರಿದ ಹಣವನ್ನು ಕುರಿತು 'ಹಣವೇ ನಿನ್ನಯ ಗುಣವೇನು ಬಣ್ಣಿಪೆನೊ' ಎಂಬುದರಲ್ಲಿ 'ಹಣವಿಲ್ಲದವನೊಬ್ಬ ಹೆಣವೇ ಸರಿ ಕಂಡ್ಯ' ಎಂದಿದ್ದಾರೆ; ಅರ್ಥಪ್ರಾಬಲ್ಯ ತಲೆಕೆಳಗಾದರೆ 'ಬೆಲೆಯಾಗದವರನೆಲ್ಲ ಬೆಲೆಯ ಮಾಡಿಸುವ, ಮಂಗನಾದರೂ ಅನಂಗನೆನಿಸುವ, ಅರಿಯದ ಶುಂಠನ ಅರಿತವನೆನಿಸುವ' ಎಂಬಂಥ ಲೌಕಿಕ ಮಹಿಮೆಗಳೊಡನೆ 'ಸಿರಿ ಹಯವದನ ಸ್ಮರಣೆಯ ಮರೆಸುವ' ಎನ್ನುವ ಪರಮಪುರುಷಾರ್ಥ

ಸೂಚಕ ಅಲೌಕಿಕ ಸೂಕ್ತಿಯನ್ನು ನೀಡಿದ್ದಾರೆ, ಅತ್ಯಂತ ಪ್ರಾಸಯುಕ್ತವಾಗಿ. ಇದು ಎಲ್ಲ ಕಾಲ ದೇಶಗಳ ಶಾಶ್ವತ ಸತ್ಯವಷ್ಟೇ? 'ಯಾಕೆ ಮೈಮರೆದೆ' ಎಂಬುದರಂತ್ಯದಲ್ಲಿ 'ಮರೆದು ಕಳೆ ಕೊಳ್ಳದವನು, ಮಾಡದಿರು ಕೊಟ್ಟವನು, ಗುರುಹಿರಿಯರಾದವರಿಗೆರಗೂ, ಅನಾಥರಿಗೆ ದೀನಾಗಿ ಮರುಗೂ, ಇದೆ ಪರಮಗತಿಯ ಸೇರಗೂ' ಎನ್ನುವ ಮಾತಿನಂಥ ಮಾತಿವೆ ಯಾರಿಗೂ ಅನ್ವಯಿಸುವಂತೆ. 'ಬಹುದೂರ ಮುಕ್ತಿ ಪಥದಿ ನಡೆದು ಹೋಗುದನಳವಡಿಸಿಕೊಳ್ಳಿರೊ' ಎನ್ನುತ್ತ 'ಚಿತ್ತದಿ ಹರಿಯ ಚರಣವನು ಕೂಡಿ ಸತ್ಸುಖವನುಂಬುದ ಕಾಣಿರೊ' ಎಂದಿದ್ದಾರೆ. 'ಕಂಡದ ನುಡಿದೆ' ಎಂಬುದರಲ್ಲಿ 'ಬಾಳೆಯ ತೋರಿ ಬಯಲಾಳನೆ, ಕಳಾಸವ ಕೊಂಡು ಸೂಳೆ ಉಣೆ, ಏನು ಬಂದರೇನ ರೊಳಿರು, ಆಸೆ ಎಂಬ ಪಾಶವ ಬಿಡು, ಹಾನು ಮುಂದವಬಯಸಿ ಹೇಸರುಗತ್ತೆಯಂತೆ ಪರರಿಗೀಶರೀರ ಮಾರಬೇಡ, ದೇಶದೇಶಕೆ ಹಾರಬೇಡ' ಎಂಬಂಥ ಬುದ್ಧಿವಾದವಿದೆ; 'ಗಾಳದ ಮೆಳಲಿನಾಸೆಯ ಮೀನ್ಗಳಂತೆ ಮುಂದುಗಾಣರು' ಎಂಬುದೂ 'ತಾಳದ ಮರನ ನೆಳಲಿಗೆಂದು ಬಂದು ಕುಳಿತರೆ ಬೋಳುತಲೆಯಲಿ ಅದರ ಫಲ ಬಿದ್ದು ನೊಂದನೆ, ಮಾಳಿಗೆಯ ತೋರಿ ಮುರಿದು ಮರಣ ಬಂದೀತೆಂದು ಲೋಲಾಕ್ಷಿಯರ ಸಂಗದ ಮಲಗಿದವ ಬಲ್ಲನೆ?' ಎಂದಿದೆ. ಇವೆಲ್ಲ ಮಾನವ ಮಾತ್ರರಿಗನ್ವಯಿಸುವ ಸೂಕ್ತಿಗಳಲ್ಲವೇ?

'ತಾಳಿದವನು ಬಾಳಿಯಾನು' ಎಂಬ ಅನುಭವಾಮೃತಕ್ಕೆ ತುಂಬ ಅರ್ಥಪೂರ್ಣ ವ್ಯಾಖ್ಯಾನದಂತಿರುವ ಕೃತಿ 'ತಾಳುವಿಕೆಗಿಂತ ತಪವು ಇಲ್ಲ'. ಸ್ವತಃ ತಮ್ಮ ದೀರ್ಘಾಯುಷ್ಯದಲ್ಲಿ 112 ವರ್ಷ ತಪವಿದ್ದು ಎಲ್ಲ ವಿರೋಧ ತಾಳಿದ ವಾದಿರಾಜರು 'ಕೇಳಬಲ್ಲವರಿಗೆ ಹೇಳುವೆನು ಸೊಲ್ಲ' ಎನ್ನುವ ಅನುಪಲ್ಲವಿಯೂ ಧ್ವನಿಪೂರ್ಣ. ಅಂಥ ಕುತೂಹಲಿಗಳಿಗೆ ತಾಳ್ಮೆಯ ತಪದ ರಹಸ್ಯವನ್ನು 3 ನುಡಿಗಳಲ್ಲಿ ಬಿಚ್ಚಿಟ್ಟಿದ್ದಾರೆ, ಅತ್ಯಂತ ಪ್ರಾಸಬದ್ಧ —

ದುಷ್ಟ ಮನುಜರು ಪೇಳ್ವ ನಿಷ್ಠುರದ ನುಡಿ ತಾಳು,
ಕಷ್ಟ ಬಂದರೆ ತಾಳು, ಕಂಗೆಡದೆ ತಾಳು,
ನೆಟ್ಟ ಸಸಿ ಫಲ ಬರುವ ತನಕ ಶಾಂತಿಯ ತಾಳು,
ಕಟ್ಟು ಬುತ್ತಿಯ ಮುಂದೆ ಉಣಬಹುದು ತಾಳು (1)

ಹರಿದು ಹಂಗಿಸುವ ಹಗೆಯ ಮಾತನು ತಾಳು,
ಸುಳಿ ನುಡಿ ಕುಹಕ ಕುಮಂತ್ರವನು ತಾಳು,
ಅಸುಕದಲೆ ಬರುವ ಬಿಂಕದ ನುಡಿಯ ನೀ ತಾಳು,
ಹಲಧರಾನುಜನನ್ನು ಹೃದಯದಿ ತಾಳು (2)

ನಕ್ಕು ನುಡಿವರ ಮುಂದೆ ಮುಕ್ಕರಿಸದೆ ತಾಳು,
ಅಕ್ಕಸವ ಮಾಡುವರ ಅಕ್ಕರದಿ ತಾಳು,
ಉಕ್ಕೊ ಹಾಂಗೆ ನೀರು ಇಕ್ಕುವಂದದಿ ತಾಳು,
ಪಕ್ಷೀಶ ಹಯವದನ ಶರಣೆಂದು ಬಾಳು (3)

ನಾವು ಸಾಮಾನ್ಯತಃ ತಾಳ್ಮೆಗೆಟ್ಟು ಪ್ರತಿಭಟಿಸುವ ಸಂದರ್ಭಗಳನ್ನು ಇಲ್ಲಿ ಸೂಚಿಸಿ ತಾಳ ಬೇಕೆನ್ನುವ ಮಾರ್ಗದರ್ಶನವಿದು ಚಿರಂತನ ಮೌಲ್ಯ. 'ಉಕ್ಕೊ ಹಾಂಗೆ ನೀರನಿಕ್ಕುವಂದದಿ' ಎನ್ನುವ ದೃಷ್ಟಾಂತರೂಪ ತಾಪಗಳಿಂದ ಕುದಿವ ಮನೋಭಾವವನ್ನು ಸಾಕಾರಗೊಳಿಸಿದೆ. ತಾಳು ತಾಳು ಎನ್ನುತ್ತಲೇ ಅದನ್ನು ಸಾಧಿಸಲು 'ಜಲಧರಾನುಜನನ್ನು ಹೃದಯದಲಿ ತಾಳು' ಎಂಬಲ್ಲಿನ ಶ್ಲೇಷವೂ 'ಪಕ್ಷೀಶ ಹಯವದನ ಶರಣೆಂದು ಬಾಳು' ಎಂಬ ದಿವ್ಯ ಸಂದೇಶವೂ ಐಹಿಕಾಮುಷ್ಮಿಕ ಸುಖ ಶಾಂತಿ ಬಯಸುವರಿಗೆಲ್ಲ ಮನೋಹರವೆನಿಸುವಲ್ಲಿ ಸಂದೇಹವಿಲ್ಲ. ಇಂಥ ಕೃತಿಗಳಲ್ಲಿ ಮಧ್ವಮತ ಪ್ರಚಾರಕವೆನ್ನುವಂತಿಲ್ಲ. ಇಹ ಪರಗಳ ಶ್ರೇಯ–ಪ್ರೇಯಗಳ ಪ್ರೇರಕ ಸೂಕ್ತಿಗಳಿವು ಒಂದು ಸೊಗಸಾದ ವಾಕ್ಯಮಾಣಿಕ್ಯ ಕೋಶವನ್ನೇ ನಿರ್ಮಿಸುವಂತಿವೆ. (ವಾದಿರಾಜರು ತಮ್ಮ ಅನೇಕ ಕನ್ನಡ ಕೃತಿಗಳ ಸೂಕ್ತ ಸಂದರ್ಭದಲ್ಲಿ ನಿರ್ಮಿಸಿ ಬಳಸಿದ ಇಂಥ ಸೂಕ್ತಿಗಳನ್ನು ಅನುಬಂಧಿಸಿದೆ). ಮತಾತೀತವಾದ ತತ್ತ್ವ ನೀತಿ ಕಾವ್ಯ ಮೌಲ್ಯಗಳ ಸಾಹಿತ್ಯವೆಂದೂ ಒಂದು ಮತದ ಸೊತ್ತೆನಿಸದು. ಎಲ್ಲರ ಹೃದಯ ಕೋಶ ತುಂಬುವ ಸಾಹಿತ್ಯಭಾಂಡಾರ ನಿಜಕ್ಕೂ ಒಂದು 'ನವನಿಧಿ'ಯಲ್ಲವೇ? ಇಂತಹ ತತ್ತ್ವಗಾಂಭೀರ್ಯ ಸಾಹಿತ್ಯಸೌಂದರ್ಯ ಸಂಗೀತ ಮಾಧುರ್ಯಗಳ ತ್ರಿವೇಣೀ ಸಂಗಮವನ್ನು ಸೇವಿಸದಲ್ಲಿ ನಾವೇ ವಂಚಿತರಷ್ಟೇ?

11) <u>ಶೈಲಿಯ ಸೊಗಸು</u>

ವಾದಿರಾಜರ ಇತರ ಕೃತಿಗಳಂತೆ ಬಿಡಿಯ ಹಾಡುಗಳೂ ಅವರ ವ್ಯಕ್ತಿತ್ವದಿಂದ ಹೊರಹೊಮ್ಮುವ ಕೆಲ ವಿಶಿಷ್ಟ ಗುಣಾಂಶಗಳಿಂದ ಕೂಡಿರುವುದು ಹಿಂದಿನ ಸಮಾಲೋಚನೆಯಿಂದಾಗಲೇ ಸೂಚಿತ. ಮಧ್ವ ಸಿದ್ಧಾಂತ ಸ್ಥಾಪನೆ ಅವರ ಪರಮ ಗುರಿಯಾದ್ದರಿಂದ ಅನೇಕ ಕೃತಿಗಳಲ್ಲಿ 'ತತ್ತ್ವವಾದ'ದ ಧ್ವನಿಯಿರುವುದು ಸಹಜ. ಆದರೆ ಅಂಥ ಮಹೋನ್ನತ ಪುರುಷರಾಗಿಯೂ ಅವರು ಈ ಕನ್ನಡ ಹಾಡುಗಳಲ್ಲಿ ಬಳಸಿದ ದೇಸೀಯ ಭಾಷೆ, ಛಂದಸ್ಸು, ಪ್ರಾಸ ಮೊದಲಾದುವು ನಮ್ಮನ್ನು ಒಮ್ಮೆಲೇ ಆತ್ಮೀಯಗೊಳಿಸಿಕೊಳ್ಳುವಂಥವು.

ಇಡಿಯ ಕೃತಿಗಳಲ್ಲಿರುವಂಥ 'ಉಂಬು ತಿಂಬ್ಯ, ಬಾಹ, ಯಾಕೆ, ಎಂದೋದು, ಥಳಿಗೆ, ಥಳ್ಳನೆ, ಬನೆ, ಥಳಿಸು, ತಂದಿ, ಬಿತ್ರೀಲು, ದಾವ, ಬಾಗ್ಗ, ಅಂಯು, ಏನು, ಹೋಲ್ಕಾಬ್ಯ, ಯಾತಕೆ, ಕಾಂಬ, ಮಾಳ್ರೆ, ನೋಳ್ನಾಸಿರ, ಒರಸಿದ' ಮುಂತಾದ ಸಾಮಾನ್ಯ ಜನರ ಪದಪ್ರಯೋಗ ಇಲ್ಲಿ ಇದ್ದು, ಭಾಷೆ ಜನಮನಕ್ಕೆ ಹತ್ತಿರವಾಗಿದೆ, ವನ್ನು ವೈವಿಧ್ಯ ಪರಿಶೀಲನೆಯಲ್ಲಿ ಸೂಚಿಸಿದಂತೆ ಕೆಲವು ಸಂಸ್ಕೃತಮಯ ಕೃತಿಗಳಿದ್ದರೂ ಅವುಗಳ ಸಂಖ್ಯೆ ಕಡಿಮೆ.

ತರಳವೃತ್ತ ಮಲ್ಲಿಕಾಮಾಲೆಯಂಥ ಮಾತ್ರಾವೃತ್ತ ಕೆಲವನ್ನು ಪ್ರಯೋಗಿಸಿಯೂ ವಾದಿರಾಜರು ಪ್ರಯೋಗಿಸಿದ ದ್ವಿಪದಿ ತ್ರಿಪದಿ ಚೌಪದಿ ಸಾಂಗತ್ಯ ಷಟ್ಪದಿ ಸಪ್ತಪದಿ ಅಷ್ಟಪದಿ ದಶಪದಿ ಮೊದಲಾದ ಛಂದೋ ವೈವಿಧ್ಯ, ಅವುಗಳಲ್ಲಿ ಬಳಸಿದ ಅಂಶಗಣ, ಪ್ರಾಸಾನುಪ್ರಾಸ ಮಾಲೆ ನಿಜಕ್ಕೂ ನಮ್ಮನ್ನು ಬೆರಗುಗೊಳಿಸುವಂತಿವೆ. ಸಂಸ್ಕೃತದಲ್ಲಿ ವಿವಿಧ ವಿಷಯಕ ಸ್ತೋತ್ರ ರಚಿಸಿದ ಅವರು ಕನ್ನಡದಲ್ಲೂ ಬಗೆ ಬಗೆಯ ಕೀರ್ತನ, ಸುಳಾದಿ ಉಗಾಭೋಗ ತತ್ವಪದ, ನೀತಿಪದ್ಯ, ಆರತಿ ಹಾಡು, ಜೋಗುಳ, ಲಾಲಿ ಸುವ್ವಾಲಿ, ಶೋಭಾನೆ[447] ಕೋಲು ಹಾಡು, ಹೋಳಿ ಪದ, ಉರುಟಣೆ ಹಾಡು ಕಟ್ಟಿಕೊಟ್ಟು ಕನ್ನಡಿಗರನ್ನು ಅನುಗ್ರಹಿಸಿರುವುದು ಅಚ್ಚರಿ ಹುಟ್ಟಿಸುವಂಥದು. ಇವುಗಳಲ್ಲಿ ಉಪಮಾ ದೃಷ್ಟಾಂತ—ರೂಪಕ — ಉತ್ಪ್ರೇಕ್ಷಾದ್ಯಲಂಕಾರ ತರುವರಾದರೂ ಪ್ರಾಸಾಲಂಕಾರ ವಾದಿರಾಜರ ವಿಶೇಷಾನುಗ್ರಹ. ಅವರ ದಿವ್ಯವಾಣಿಯಲ್ಲಿ ಕಾಣಿಸಿಕೊಳ್ಳುವ ಒಂದಕ್ಷರದ ಪ್ರಾಸ ಇಡಿಯ ನುಡಿ ಹಾಡುಗಳಲ್ಲಿ (ಆದಿ ಮಧ್ಯ ಉಪಾಂತ್ಯ ಅಂತ್ಯ ಸ್ಥಾನಗಳಲ್ಲಿ) ಕೂಡಿಕೊಳ್ಳುವ ಸಹಜ ಕ್ರಮ ಅವರ ಶೈಲಿಯ ವೈಶಿಷ್ಟ್ಯವೆನ್ನಬೇಕು. ಅನುಪ್ರಾಸವಂತೂ ಇದ್ದೇ ಇರುತ್ತದೆ. ಕನ್ನಡದ ವಿಶೇಷವೆನಿಸಿದ ಪ್ರಾಸವನ್ನವರು ತಮ್ಮ ಸಂಸ್ಕೃತ ಕೃತಿಗಳಲ್ಲೂ ಹೇರಳವಾಗಿ ಬಳಸಿರುವುದು ಕಂಡುಬರುತ್ತದೆ. 'ದಶಾವತಾರ ಸ್ತುತಿ, 'ರುಕ್ಮಿಣೀಶ ವಿಜಯಾದಿಗಳಲ್ಲಿ ಕೂಡ ದ್ವಿತೀಯಾಕ್ಷರದ ಆದಿಪ್ರಾಸವಿರುವುದನ್ನು ನೋಡಿದರೆ, ಇದು ಕನ್ನಡದ ಪ್ರಭಾವವೆಂಬುದು ಸ್ವಯಂವೇದ್ಯ. ಬಹುಶಃ ಅಂಕಿತವಿರದಿದ್ದರೂ ರಗಳೆಯ ರೀತಿಯನ್ನು ನೋಡಿ ಹರಿಹರನ ರಚನೆ

---

447. 'ಶೋಭಾನೆ ಎನ್ನಿರಿ' ಎಂಬ ಅಪ್ರಕಟಿತ ಆರತಿ ಪದ ಅನುಬಂಧಿತ.

ಎನ್ನಬಹುದಾದಂತೆ, ಪ್ರಾಸವೈಭವದಿಂದಲೇ ವಾದಿರಾಜರ ಕೃತಿ ಎಂದು ಗುರುತಿಸುವಂಥ ಶೈಲಿ ಅವರದು. ಕಾರಣ, ಉಪಮೆಗೆ ಕಾಳಿದಾಸನೂ ರೂಪಕಕ್ಕೆ ಕುಮಾರವ್ಯಾಸನೂ ಹೆಸರಾದಂತೆ ಪ್ರಾಸಕ್ಕೆ ಪ್ರಸಿದ್ಧರೆಂದರೆ ವಾದಿರಾಜರೆನ್ನಬೇಕು. ದಶಾವತಾರ ಚಿತ್ರಣದಲ್ಲಿನಂತೆ ಸಹಜ ಪ್ರಾಸ ಪೋಣಿಸುವುದರಲ್ಲಿಯೂ ಅವರು ವಿವಿಧ ಪ್ರಯೋಗ ಮಾಡಿರುವುದು ಹಿಂದಿನ ಸಮಾಲೋಚನೆಯಲ್ಲೇ ಸೂಚಿತವಾಗಿದೆ. ಋಜುಯೋಗಿಯಾದ ಅವರೇ ತಿಳಿಸಿದಂತೆ ಸಾಕ್ಷಾತ ಲಕ್ಷ್ಮಿಯನ್ನು ವಾಗಭಿಮಾನಿಯಾಗಿ ಪಡೆದುದರಿಂದ (ವೃಂದಾವನಾಖ್ಯಾನ 8,62) ವಾಣಿಯು ಮುಖವನ್ನು ಸುವಾಸಿತಗೊಳಿಸುವ (ರು.ವಿ.7) ~ ವಾಗೀಶ್ವರಿ ವದನದಿ ನೆಲಸಿಹಳು (ವೈ.ವ.4,104) ಎಂದಕಾರಣ, ಇಂಥ ಪ್ರಾಸ ಸಂಪತ್ತು ಅವರ ಮಹಾಪ್ರತಿಭೆಗೊದಗಿತು. ಇನ್ನು ಇಂಥ ದಿವ್ಯ ಪ್ರತಿಭಾವಂತರ ನಾಲಗೆಯು ಮೇಲೆ ವಾಗಭಿಮಾನಿ ನಲಿಯುವುದೊಂದ ಚ್ಚರಿಯೇ?

ಈ ಶಬ್ದಾಲಂಕಾರ ವೈಭವ ಸಹಜವಾಗಿಯೇ ಅವರ ಕೃತಿಗಳಿಗೆ ಸಂಗೀತ ಮೋಡಿಯ ನೀಡಿದೆ. ನಮ್ಮ ದೇಶದ ಸಂಗೀತ ಶುದ್ಧವಾಗುಳಿದುದು ಇಂತಹ ಭಕ್ತ ಕವಿಗಳಿಂದ. ಸಂಗೀತ ಮಾಧ್ಯಮದಿಂದ ನೀತಿ ಧರ್ಮ ಬೋಧಿಸಿ ಸಮಾಜ ತಿದ್ದಿದ ಅವರ ಕೊಡುಗೆ ಗಮನಾರ್ಹ. ಮೋಕ್ಷ ಸಾಧಕ ಭಕ್ತಿ ಪ್ರಸಾರಕ್ಕೆ ಸಂಗೀತಜ್ಞರಾದ ಅವರು, ರಾಗ ಸ್ವರೂಪವರಿತು, ಅದರೊಡನೆ ತಾಲ ಹಾಗೂ ಪದಭಾವ ಸೇರಿಸಿ ಹಾಡಿದ್ದರಿಂದ, ಕವಿಗಳೂ ವಾಗ್ಗೇಯಕಾರರೂ ಎನಿಸಿದರು. 'ಕನ್ನಡದಲ್ಲಿ ಮಾತ್ರವಲ್ಲದೆ ತುಳುವಿನಲ್ಲೂ ಕೀರ್ತನೆ ರಚಿಸಿದ 'ಏಕಮಾತ್ರ ವಾಗ್ಗೇಯಕಾರರು ವಾದಿರಾಜರು ... ಸಾಹಿತ್ಯ ಪದಗಳ ಸುಲಲಿತ ಲಾಲಿತ್ಯಪೂರ್ಣ, ಅರ್ಥಭಂಗವಾಗದ ಮಟ್ಟುಗಳಿಗೇ ಹಾಡುವ ರೀತಿಯಲ್ಲಿ ಪ್ರಾಶಸ್ತ್ಯ ಈ ವಿಧಾನವನ್ನುವಾದಿರಾಜರ ಕೀರ್ತನೆ ಚೆನ್ನಾಗಿ ಸಾಧಿಸಿವೆ. ರಾಗಭಾವ ಸಂಪೂರ್ಣವಾಗಿ ಮೂಡುವಂತೆ ಹಾಡುಗಳ ಪಾದಗಳಲ್ಲಿನ ಪದಕೂಟಗಳ ಸಂಯೋಜನೆಯಿಂದ, ವಿವಿಧ ಗತಿಗಳಲ್ಲಿ ಹಾಡಲು ಸಾಧ್ಯವಾಗುತ್ತದೆ. ಅಂತ್ಯ ಪ್ರಾಸ ಹಲವು ಕಡೆ ಮನೋಜ್ಞವಾಗಿವೆ; ವಿಳಂಬ ದ್ರುತ ಗತಿಗಳೆರಡರಲ್ಲೂ ಹಾಡಲು ಸಾಧ್ಯವಾಗುವ ರಚನೆಗಳಿವೆ. ರಚನೆಗಳ ಸಂಖ್ಯಾಬಾಹುಳ್ಯ ಮಾತ್ರ ಪುರಂದರದಾಸರಿಗಿಂತ ಕಡಿಮೆಯಾಗಿದ್ದರೂ ಗುಣಮಟ್ಟದಲ್ಲಿ ವಿಶೇಷ ಸ್ಥಾನ ಗಳಿಸಿವೆ. ವಾದಿರಾಜರು ತಮ್ಮ ಕೀರ್ತನೆಗಳಿಗೆ ರಾಗ, ತಾಳ ನಿರ್ದೇಶನ ಮಾಡಿ ಹಾಡಿದ್ದಾರೆ. ಹಾಗಿಲ್ಲದಿರುತ್ತಿದ್ದರೆ ಅಷ್ಟೊಂದು ಸುಂದರ

ರಾಗ ಚಿತ್ರಣ ಮೂಡುವಂತೆ ಹಾಡಲು ಸಾಧ್ಯವಾಗುತ್ತಿರಲಿಲ್ಲ. ಸಾಹಿತ್ಯ—ಸಂಗೀತಗಳೆರಡನ್ನೂ ಸಾಮರಸ್ಯದಿಂದ ಸಂಯೋಜಿಸಿದ ಅಪ್ರತಿಮ ವಾಗ್ಗೇಯಕಾರ ವಾದಿರಾಜರ ಕೃತಿಗಳನ್ನು ಸಂಪ್ರದಾಯದ ಪೂರ್ವ ಶೈಲಿಯಲ್ಲಿ ಹಾಡಿ ಪ್ರಚಾರಕ್ಕೆ ತರುವುದು ಸಂಗೀತಜ್ಞರ ಕರ್ತವ್ಯ .... ಅವರು ಉಡುಪಿಯ ಶ್ರೀಕೃಷ್ಣ ದೇವಸ್ಥಾನದಲ್ಲಿ ಅರ್ಚನ ವಿಧಾನಗಳನ್ನೆಲ್ಲ ಪರಿಷ್ಕರಿಸುವ ಸಂದರ್ಭದಲ್ಲಿ ಪೂಜಾ ಕಾಲದಲ್ಲಿ ಹಾಡಲು ಅನುಕೂಲಿಸುವ ಹಲವು ಕೀರ್ತನೆಗಳನ್ನು ರಚಿಸಿದ್ದು, ಸಂಕೀರ್ತನೆಗಳೆಂದು ಪ್ರಸಿದ್ಧವಾದ ಈ ಹಾಡುಗಳನ್ನು ಇಂದೂ ಪರಂಪರಾಗತ ಶೈಲಿ, ಧಾಟಿ ಲಯಗಳಲ್ಲಿ ಕೇಳಬಹುದು' (ಶ್ರೀನಿವಾಸ ಉಡುಪ, ಲಕ್ಷಾಲಂಕಾರ). ಸ್ವತಃ ಸಂಗೀತಜ್ಞರಾದ್ದರಿಂದಲೇ ವಾದಿರಾಜರು 'ಲಕ್ಷ್ಮೀಶೋಭಾನೆ'ಯಲ್ಲಿ ಕೊಂಬು ಚೆಂಬು ಕಹಳೆಯ ವಾದ್ಯ ವೈಭವ ಹೇಳಿ 'ವೈಕುಂಠ ವರ್ಣನೆ'ಯ ಸಾಂಗತ್ಯ ಪದಗಳಿಗೂ 'ಮೇಳೈಸಿದ ನಾಟ ರಾಗ' ತಾಳಗಳನ್ನು ಹಾಕುವುದು ಸಾಧ್ಯವಾಯಿತು. 'ಭ್ರಮರಗೀತ'ವಂತೂ ರಾಗ ತಾಳಯುಕ್ತ ಹಾಡುಗಳಿಂದ ಸಂಗೀತರೂಪಕವಾಗಿರುವುದನ್ನು ಆಗಲೇ ಗಮನಿಸಿದ್ದೇವೆ. ಕಾರಣ, ವಾದಿರಾಜರ ಕೃತಿಗಳ ಅಧ್ಯಯನದಲ್ಲಿ ಸಾಹಿತ್ಯ ದೃಷ್ಟಿಯೊಡನೆ ಸಂಗೀತದ ದೃಷ್ಟಿಯೂ ಅಗತ್ಯವೆನ್ನಬೇಕು. ಸರಸ್ವತಿಯ ಸ್ತನದ್ವಯದಂತೆ ಇವೆರಡೂ ಅವರ ಶೈಲಿಯ ಸೊಗಸನ್ನು ಹೆಚ್ಚಿಸಿವೆ.

ಭಕ್ತಿಭಾವನಿರೂಪಣೆ, ವರ್ಣನೆ, ಸಂಭಾಷಣೆ ಮುಂತಾದಂಶ ಹಿಂದಿನ ಸಮಾಲೋಚನೆಯಲ್ಲಿ ಸಮಾವಿಷ್ಟವಾಗಿರುವುದರಿಂದ, ಇಲ್ಲಿ ಮತ್ತೆ ವಿಸ್ತರಿಸದೆ, ಅವೂ ಸಹ ವಾದಿರಾಜರ ಶೈಲಿಯ ಸೊಬಗು ವರ್ಧಿಸಲು ಕಾರಣವಾಗಿರುವುದನ್ನು ಸ್ಮರಿಸಿದರೆ ಸಾಕು. ಕಾವ್ಯದ ಪರಮಾರ್ಥವಾದ ರಸದೃಷ್ಟಿಗೆ ಅವರ ಎಲ್ಲ ಕೃತಿಗಳೂ ಭಕ್ತಿಪೋಷಕವಾಗಿರುವುದನ್ನೂ ಮರೆಯುವಂತಿಲ್ಲ. ಹರಿದಾಸರಾದ ಅವರಲ್ಲಿದು ಅತ್ಯಂತ ಸಮುಚಿತವೇ ಸರಿ.

### 3. ಗದ್ಯ ಕೃತಿ

ಮಹಾಭಾರತ ತಾತ್ಪರ್ಯ ನಿರ್ಣಯ ಟೀಕೆ: ಮಧ್ವರು 2ನೆಯ ಬದರಿಯಾತ್ರೆಯಲ್ಲಿ ವೇದವ್ಯಾಸರಾಜ್ಞಾಪಿಸಿದಂತೆ ರಚಿಸಿದ 'ಭಾರತ ತಾತ್ಪರ್ಯ ನಿರ್ಣಯ' ಅವರ ಸರ್ವಮೂಲ ಗ್ರಂಥಗಳಲ್ಲಿ ಮುಕುಟಮಣಿ. ಸರ್ವಂಕಷ ಪಂಚಮವೇದದ ಸಾರವದ್ವ್ಯಾಖ್ಯಾನವಾದರೂ

ಅದು ಬರಿ ಭಾರತಾರ್ಥ ವಿನಿರ್ಣಯವಲ್ಲ, 'ನಿರ್ಣಯಃ ಸರ್ವಶಾಸ್ತ್ರಾಣಾಂ' ಎಂಬುದರಿಂದ ಎಲ್ಲ ವೇದ ಪುರಾಣ ವಿಷಯಗಳ ಗಣಿ, 'ಪುರಾಣಾನಾಂ ಚೂಡಾಮಣಿಃ' ಅಂತೆಯೇ ಈ ಕೃತಿರತ್ನ ಧರ್ಮಾದಿ ಮೋಕ್ಷಾಂತ ಪುರುಷಾರ್ಥಸಾಧಕವೆಂದು ಸ್ವತಃ ಮಧ್ವರೂ, ಅವರ ಮನ ಮಂದರವು ಇತಿಹಾಸ ಪುರಾಣ ಸಾಗರವನ್ನು ಕಡೆದು ತಂದ ಭಾರತ ತಾತ್ಪರ್ಯಾಮೃತ ಸೇವಿಸದವರಾರೆಂದು 'ಸುಮಧ್ವ ವಿಜಯ'ಕಾರರೂ (15) ನುಡಿದಿದ್ದಾರೆ. 5400 ಶ್ಲೋಕ, 32 ಅಧ್ಯಾಯಗಳ ಕೃತಿಯಲ್ಲಿ, ಮಧ್ವರು 3 ಅಧ್ಯಾಯದಿಂದ ಹರಿಯ ಕರ್ತೃತ್ವಾದಿಗಳನ್ನು ನಿರ್ಣಯಿಸಿ, 6 ಅಧ್ಯಾಯಗಳಲ್ಲಿ ರಾಮಾಯಣ ಚರ್ಚಿಸಿ, 1 ಅಧ್ಯಾಯ ವ್ಯಾಸ ವೃತ್ತಾಂತವಿತ್ತು, ಉಳಿದ 22 ಅಧ್ಯಾಯ ಭಾರತ ತಾತ್ಪರ್ಯ ನಿರ್ಣಯಕ್ಕೆ ವಿನಿಯೋಗಿಸಿದ್ದಾರೆ. 'ಭಾರತ— ಭಾಗವತ, ಹರಿವಂಶಾದಿಗಳಲ್ಲಿ ಬಂದ ವಿಷಯಗಳನ್ನು ವಿರೋಧಾಭಾಸ ಪರಿಹಾರದೊಂದಿಗೆ ಒಂದಕ್ಕೊಂದು ಪೂರಕವಾಗುವಂತೆ ನಿರ್ಣಯಿಸಿರುವ ಕ್ರಮ, ಮತ್ತು ಯಾವುದಾದ ಮೇಲೆ ಯಾವುದು ನಡೆದಿದೆ ಎಂಬ ಕಾಲಾನುಗುಣ ನಿರ್ಣಯ ಕ್ರಮ ಶ್ರೀಮದಾಚಾರ್ಯರಿಂದಲೇ ಸಾಧ್ಯ' (ವಾದಿರಾಜರ 'ಭಾವಪ್ರಕಾಶಿಕಾ'). ಇಂತು ಸಜ್ಜನ ಸಂದೇಹ ನಿವಾರಿಸಿ ಯಥಾರ್ಥ ಜ್ಞಾನ ನೀಡುವ ಈ ಆಚಾರ್ಯ ಕೃತಿಗೆ ಸಂಸ್ಕೃತ ವ್ಯಾಖ್ಯಾನಗಳಿದ್ದರೂ, ಸಕೃದವರಿಯದ (ಸ್ವಸೋದರಿಯಂಥ) ಸಾಮಾನ್ಯರನ್ನು ಅನುಗ್ರಹಿಸಲು ವಾದಿರಾಜರು ಒದಗಿಸಿದ ಕನ್ನಡ ಗದ್ಯ ಟೀಕೆ ಗಮನಾರ್ಹ ಕೃತಿ.

ಹಿಂದಿನ 'ಕನ್ನಡದಲ್ಲಿಷ್ಟು ದೊಡ್ಡ ತಾತ್ವಿಕ ದ್ವೈತ ಗ್ರಂಥ ಬೇರೊಂದಿಲ್ಲ. 1891ರಲ್ಲಿ ಬೆಳಗಾಂ ರಾಮತತ್ವ ಪ್ರಕಾಶನದ ಆಬಾಜಿ ರಾಮಚಂದ್ರ ಸಾವಂತರಿಂದ ಮೊತ್ತ ಮೊದಲು ದೇವನಾಗರಿಯಲ್ಲಿ ಮುದ್ರಿತ. 13" 16" ಆಕಾರದಲ್ಲಿ 347 ಓಲೆ — 694 ಪುಟದಷ್ಟು ದೀರ್ಘವಾಗಿದೆ' (ಕನ್ನಡ ನುಡಿ, 9, 67). 1980—83ರಲ್ಲಿ ಬೆಂಗಳೂರಿನ ತ್ರೈಲೋಕ್ಯಾಚಾರ್ಯ ಸೇವಕ ವೃಂದದಿಂದ 3 ಸಂಪುಟಗಳಲ್ಲಿ 634 ಪುಟಗಳಿಂದ ಕನ್ನಡಲಿಪಿ ಹೊಂದಿ ಬಂದಿದೆ. ಮೊದಲ ಮುದ್ರಣ 4—6 ಪ್ರತಿ ಮೇಲಿನ ಮಾಡಿದ್ದರೆ, ಮುತ್ತಿನದು ಮುತ್ತೆರಡು ಕನ್ನಡ ಹಸ್ತಪ್ರತಿ ಬಳಸಿದೆ. ನನ್ನಲ್ಲಿ ಅಜ್ಜನ ಅಜ್ಜ (ಅಣ್ಣಾಜಿರಾವ ಲೋಕೂರ) 1853—55ರಲ್ಲಿ ಬರೆದ ಒಂದು ಪೂರ್ಣ ಹಾಗೂ ಇನ್ನೊಂದು ಕೆಲ ಅಧ್ಯಾಯಗಳ ಹಸ್ತಪ್ರತಿಯಿವೆ.

ಈ ಕೃತಿಯ ಕರ್ತೃತ್ವದ ಬಗ್ಗೆ ಕೆಲವರಲ್ಲಿ ಭಿನ್ನಾಭಿಪ್ರಾಯವಿದೆ. (1) 'ತಾತ್ಪರ್ಯ ನಿರ್ಣಯವನ್ನು ಕನ್ನಡದಲ್ಲಿ ವ್ಯಾಖ್ಯಾನ ಮಾಡಿದ ವಾದಿರಾಜತೀರ್ಥರು ಇವರೇ ಎಂದು ಪ್ರತೀತಿ. ಕೆಲವರು ಮಾತ್ರ ಆ ವಾದಿರಾಜರು ಬೇರೆ ಯತಿಗಳೆಂದು ಹೇಳುವರು' (ಪಂಚಮುಖಿ, ಕರ್ನಾಟಕದ ಹರಿದಾಸ ಸಾಹಿತ್ಯ, ಪು.63). ಆದರೆ ಆ ಬೇರೆ ವಾದಿರಾಜರು ಯಾರೆಂದು ಎಲ್ಲೂ ಹೇಳಿಲ್ಲ; ಆ ಹೆಸರಿನ ಯತಿಗಳಾರೂ ಕನ್ನಡದಲ್ಲಿ ಬರೆದಂತಿಲ್ಲ. ಸೋದೆಯ ವಾದಿರಾಜರನ್ನುಳಿದು ತಾತ್ಪರ್ಯ ನಿರ್ಣಯ ವ್ಯಾಖ್ಯಾನಿಸುವ ಸಾಮರ್ಥ್ಯ ಬೇರಾರಿಗೂ ಇದ್ದಂತಿಲ್ಲ, ಇದ್ದರೆ ಇದರ ಕರ್ತೃತ್ವದ ಹಕ್ಕು ಸಾಧಿಸದಿರುತ್ತಿರಲಿಲ್ಲ. (2) ಕನ್ನಡದಲ್ಲಿ ಮಹಾಭಾರತ ತಾತ್ಪರ್ಯನಿರ್ಣಯಬರೆದಿದ್ದಾರೆಂದು ಕೆಲವರು ಭಾವಿಸುತ್ತಾರೆ. ಆದರೆ ಹೆಚ್ಚಿನ ವಿದ್ವಾಂಸರು ವಾದಿರಾಜರ ರಚನೆ ಎಂದು ಅಂಗೀಕರಿಸುತ್ತಿಲ್ಲ' (ಪ್ರಭಂಜನ, ವಾದಿರಾಜ ಸ್ತೋತ್ರಮಂಜರಿ, ಮುನ್ನುಡಿ, 6). ಕೃತಿ ಉಲ್ಲೇಖಿಸಿದ ವಾದಿರಾಜರ ಹೆಸರೇ ಅವರು ಬರೆದರೆಂದು ಭಾವಿಸಲು ಕಾರಣ; ಅವರದಲ್ಲವೆನ್ನಲು ಆಧಾರವೇನು? ಈ ವಿಷಯದ ಸಾಹಿತ್ಯ ಪರಿಶೀಲಿಸಿದರೆ ಹೆಚ್ಚಿನವರು ಅವರ ಕರ್ತೃತ್ವ ಅಂಗೀಕರಿಸಿದ್ದು ಸ್ಪಷ್ಟ —

1) ವಾದಿರಾಜ ಗುಣರತ್ನಮಾಲಾ (9,29) — ವಾಸುದೇವಾಚಾರ್ಯ,ನಿಪ್ಪಾಣಿ
2) ಕರ್ನಾಟಕ ಕವಿಚರಿತೆ 2 (303) — ಆರ್.ನರಸಿಂಹಾಚಾರ್ಯ
3) ವಾದಿರಾಜ ಗುರುವರ ಚರಿತ್ರೆ (46) — ಬಿ.ಶ್ರೀನಿವಾಸ ಭಟ್ಟ
4) History of Dwaita School of thought II (200)-B.N.K.Sharma
5) ಕರ್ನಾಟಕ ಭಕ್ತವಿಜಯ (110) — ಬೇಲೂರು ಕೇಶವದಾಸ
6) ಕರ್ನಾಟಕ ಹರಿದಾಸ ಸಾಹಿತ್ಯ (63) — ಪಂಚಮುಖಿ
7) ಕರ್ನಾಟಕದ ಹರಿದಾಸರು (266) — ವೇದವ್ಯಾಸಾಚಾರ
8) ಭಾವಿಸಮೀರ ವಾದಿರಾಜ ಗುರುಸಾರ್ವಭೌಮರು (201) — ಅಡ್ಯ
9) ವಾದಿರಾಜರ ವಿಜಯ (113) — ಎಸ್.ಎಸ್.ಗುರುರಾಜಾಚಾರ್ಯ
10) ವಾದಿರಾಜರ ಕನ್ನಡ ಕೃತಿಗಳು (ಕನ್ನಡನುಡಿ 9,67) — ಕೆ.ವೆಂಕಟರಾಮಾಚಾರ್ಯ
11) ಭಕ್ತ ವಾದಿರಾಜರು (52) — ಹಂಡೆ ದಾಸರು
12) ಭಾವಿ ಸಮೀರ ವಾದಿರಾಜರು (35) — ಜಿ.ಜಿ.ಪುರಾಣಿಕ
13) ಸ್ವಪ್ನವೃಂದಾವನಾಖ್ಯಾನ ಪೀಠಿಕೆ (ಅಂತ್ಯ) — ಎಚ್.ಸುಬ್ಬರಾವ್

14) ಶ್ರೀ ವಾದಿರಾಜರು (405) — ಕೊರಟಿ ಶ್ರೀನಿವಾಸರಾವ್

15) ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (4,2) — ಕೆ.ಟಿ.ಪಾಂಡುರಂಗಿ

16) Sri Vadirajatirtha (59) - C.R.Rao

17) ಶ್ರೀ ವಾದಿರಾಜರು (42) — ಎಂ.ವಿ.ನಾಗರಾಜರಾವ್

ಈ ಕೃತಿ ವಾದಿರಾಜರದಲ್ಲವೆಂಬವರ ಸಂಖ್ಯೆ ತುಂಬ ವಿರಳವಾಗಿದೆ.

(3) 'ತತ್ವವಾದ' 11, 80ರಲ್ಲಿ ಇದರ ಕನ್ನಡ ಲಿಪಿಯ ಪ್ರಥಮ ಸಂಪುಟ ವಿಮರ್ಶಿಸುತ್ತ 'ಇದು ವಾದಿರಾಜೀಯವೇ' ಎನ್ನುವ ಸಗ್ರಿಯವರ ಸಂದೇಹಕ್ಕೆ ಕಾರಣ, ವಿವರಣೆಗಳಿವು:

1) 'ಅವರ ಉಳಿದ ಕೃತಿಗಳಲ್ಲಿರುವ ಹಯಗ್ರೀವ—ಮಧ್ವ ಸ್ಮರಣೆ ಇದರ ಆದಿಗಿಲ್ಲ.' ಇದಕ್ಕಿಂತ ಅಂತ್ಯದಲ್ಲಿ ಹಯವದನಾಂಕಿತವಿಲ್ಲೆಂಬುದು ಆಕ್ಷೇಪಾರ್ಹ. ಆದರೆ 'ಧ್ರುವಗೀತ'ದ 'ನಿಲ್ಲಲಾರೆ ಹರಿಯು ಕಾಣದೆ' ಎಂಬ 6ನೆಯ ಪದವೂ 'ಗುರುವಾದಿರಾಜರ ಕೀರ್ತನೆ'ಗಳಲ್ಲಿನ 'ನೀರೆ ತೋರೆಲೆ, ಹೃದ್ಯ ಬಾರೊ' ಎಂಬ ಹಾಡುಗಳೂ ಕೇವಲ ವಾದಿರಾಜಾಂಕಿತವಾಗಿರುವುದು ಗಮನೀಯ. ಗದ್ಯ ಕೃತಿ, ಅನ್ಯ ಲಿಖಿತವೆಂಬ ಕಾರಣಗಳೂ ಇರಬಹುದು. ಹಯವದನಾಂಕಿತವಿಲ್ಲದಿರಲು ಮಧ್ವರ 'ಮಿಥ್ಯಾತ್ವಾನುಮಾನ ಖಂಡನ'ವೂ ಸಾಂಪ್ರದಾಯಿಕ ಮಂಗಲಾಚರಣ ರಹಿತ. ಆದರೆ ಕನ್ನಡ ತಾತ್ಪರ್ಯ ನಿರ್ಣಯ ಪ್ರಾರಂಭದಲ್ಲಿ 'ಆನಂದತೀರ್ಥರ ಹೃತ್ಕಮಲದಲ್ಲಿ ಅಭಿವ್ಯಕ್ತನಿದ್ದಾನೆ'ಂದು ಹರಿ—ಗುರುಗಳನ್ನು ಸ್ಮರಿಸಿದೆ; ಮಧ್ವರ ಕೃತಿ ರಚನಾ ಸಂದರ್ಭದ ಉಲ್ಲೇಖದಿಂದಲೇ ಟೀಕೆ ಮೊದಲಾಗಿದೆ.

2) 'ಲಕ್ಷ್ಮೀಶೋಭಾನೆ, ಗುಂಡಕ್ರಿಯೆ ಕೀರ್ತನೆಗಳಿಗಿಂತ ಇದರ ಭಾಷೆ ಮಾತ್ರ ಭಿನ್ನ, ಗ್ರಾಮ್ಯ; ಮಾಡಘಾನೆ, ಉಕಾಳ್ತ, ದಾರು, ಬದನು, ಕೊಡೋಣವಿಲ್ಲದಂಥ ಜಾನಪದ ಶೈಲಿ.' ಇದನ್ನು ಗ್ರಾಮ್ಯ—ಜಾನಪದ ಎನ್ನುವುದಕ್ಕಿಂತ ಉತ್ತರ ಕರ್ನಾಟಕದ ದೇಸಿಯ ಭಾಷೆ ಎನ್ನಬೇಕು. 'ಗದ್ಯದಲ್ಲಿನ ಪ್ರಯೋಗ ವೈಚಿತ್ರ್ಯ'ವೆಂಬುದಕ್ಕಿಂತ ಅನ್ಯಲಿಖಿತ ಭಾಷಾ ವಿಶೇಷವೆನ್ನಬಹುದು.

3) 'ವಾದಿರಾಜರ 'ಭಾವಪ್ರಕಾಶ' ವ್ಯಾಖ್ಯಾನಕ್ಕೂ ಇದಕ್ಕೂ ಕೆಲ ವ್ಯತ್ಯಾಸಗಳಿವೆ. ಕೃತಿಯ ಮೊದಲ ಶ್ಲೋಕದ 'ನಮೋ ನಮಃ' ಎಂಬ ದ್ವಿರುಕ್ತಿಯ ಸ್ವಾರಸ್ಯಕರ ವಿವರಣೆ ಸಂಸ್ಕೃತ ವ್ಯಾಖ್ಯಾನದಲ್ಲಿದೆ, ಕನ್ನಡದಲ್ಲಿಲ್ಲ; 'ಪರಿಪೂರ್ಣ ಗುಣಾರ್ಣವಾಯ'ದಂಥ ವಿಶೇಷಣಗಳ ಸಾರ್ಥಕ್ಯ ಸಮರ್ಥಿಸಿಲ್ಲ ಇಲ್ಲಿ; 'ಮುಖ್ಯಾಸುರ ಸಾಖ್ಯ ನಿರಾಕರಣಾಯ'

ಎಂಬಲ್ಲಿನ ತ್ರಿವಿಧ ಜೀವಕ್ಕೆ ಸುಖವೀಯುವ ಅರ್ಥವಿವರ ಇಲ್ಲಲ್ಲ." ನಿಜ, ಪಂಡಿತರಿಗೆ ಬೇಕಾದ ವಿವರ ಪಾಮರರಿಗೇಕೆ? ಪು.36ರಲ್ಲಿ ಬಳಿತ್ಥಾಸೂಕ್ತ ವ್ಯಾಖ್ಯಾನಿಸುತ್ತ 'ದಶಪ್ರಮತಿಂ ಜನಯಂತ ಯೋಷಾಃ' ಎಂದರೆ ಪೂರ್ಣಪ್ರಜ್ಞರನ್ನು ಸ್ತ್ರೀಯರು ಹಡೆದರು ಎಂದಲ್ಲಿ ಬಹುವಚನವೇನು ಕಾರಣ ಬಂತೆಂದಲ್ಲಿ, ಗುರುಗಳ ತಾಯಿ ಎಂಬ ಕಾರಣ ಸ್ತ್ರೀಯರು ಹಡೆದರು ಎಂದು ಶ್ರುತಿ ಹೇಳುತದೆ" ಎಂಬ ಇಲ್ಲಿ ಮಧ್ಯಗೇಹರ ಪತ್ನಿಯೇ ಹಡೆದಳು ಎಂದಿದೆ; ವೇದಾಭಿಮಾನಿ ಶ್ರೀ ಭೂದುರ್ಗೆಯರು ಮಧ್ಯಗೇಹರ ಪತ್ನಿಯಲ್ಲಿದ್ದು ವೇದರಕ್ಷಣೆಗೆ ಆಚಾರ್ಯರನ್ನು ಹುಟ್ಟಿಸಿದರೆಂದು ಭಾವಪ್ರಕಾಶದ ಮತ." ಆದರೆ ಕನ್ನಡ ಕೃತಿಯು ಮುಂದಿನ ವಾಕ್ಯ 'ಅಥವಾ ಶ್ರೀ ಭೂದುರ್ಗಾದೇವೇರು ವಾಯುದೇವರನ್ನು ಹಡೆದಿದ್ದಾರೆ' ಎಂದೇ ಇದ್ದು, ವೈಕುಂಠ ವರ್ಣನೆಯು

ಸಿರಿಭೂಮಿ ದುರ್ಗೆಯರು ಜ್ಞಾನಾಮೃತವ ಕರೆವರೆ
ಗುರುಪೂರ್ಣಪ್ರಜ್ಞರ ಪುಟ್ಟಿಸಿದರು ಗಡ
ನರಲೋಕದ ನಾರಿಗೆ ಇವನ ಹೆರುವ ಭಾಗ್ಯ
ದೊರಕದೆಂದು ಶ್ರುತಿ ಯೋಷಾವೆಂದಿತು (1,9)

ಎಂಬ ಅಭಿಪ್ರಾಯವನ್ನೇ ಸೂಚಿಸುತ್ತದಿಲ್ಲವೇ? "ಅಹಲ್ಯೋದ್ಧಾರದ 'ಸುರೇಶಕಾಂಕ್ಷಯಾ' ಎಂಬಲ್ಲಿ ಇಂದ್ರನ ಪಾಪ ಅಪಯಶಗಳ ಪರಿಹಾರೇಚ್ಛೆಯಿಂದ ಎನ್ನುವ ವಿವರಣೆ ಸಂಸ್ಕೃತದಲ್ಲಿ; ಇಲ್ಲಿ 'ದೇವೇಂದ್ರ ತನ್ನ ನಿಮಿತ್ತ ಕಲ್ಲಾಗಿ ಬಿದ್ದಿಳೆಂದೂ ಈಕೆಗೆ ಉದ್ಧಾರ ಎಂದಾದೀತೆಂದೂ ಅಪೇಕ್ಷ ಉಳ್ಳಾತನಾಗಿ ಕಾಲಪ್ರತೀಕ್ಷ ಮಾಡುತಿದ್ದ' ಎಂದು ಮುಗಿದಿದೆ (ಪು.64). ಇದರಂತೆ ಸೀತಾಸ್ವಯಂವರದಲ್ಲಿ ಲಕ್ಷ್ಮೀ ಸ್ವಯಂವರದ ಉಪಮೆಗಿತ್ತ ಪ್ರಮೇಯ ಇಲ್ಲಿಲ್ಲ (ಪು.65)." 'ಆಚಾರ್ಯರ ಸೂತ್ರ ಭಾಷ್ಯ ಗೀತಾವ್ಯಾಖ್ಯಾನ ಎರಡರಡರಲ್ಲೇ ಭಿನ್ನ ಪ್ರಮೇಯಗಳುಂಟು' ಎಂದಾಗ ಭಿನ್ನ ಭಾಷಾ ವ್ಯಾಖ್ಯಾನಗಳಲ್ಲಿರುವುದೇನಚ್ಚರಿ? "ಪು.95ರಲ್ಲಿ ಕಪಿಗಳು ಸಪ್ತ ಸಮುದ್ರ ಹೇಗೆ ಹಾರಿದರರೆಂಬಾಕ್ಷೇಪಕ್ಕೆ ಕೊಟ್ಟ ನಿರ್ಣಯ 'ಮುಂದಿನ ಕಾರ್ಯಾನುಸಾರದಿಂದ ಕಪಿಗಳಿಗೆ ಆ ಶಕ್ತಿಯು ಸ್ವಾಮಿಯ ಕಡೆಯಿಂದ ಕೊಡಲ್ಪಟ್ಟಿತು' ಭಾವಪ್ರಕಾಶಿಕೆಗೆ ವಿರುದ್ಧ." ನಂತರದ ಟಿಪ್ಪಣಿಕಾರರ ವಾಕ್ಯ ಪ್ರತಿಕಾರರಿಂದ ಪ್ರಕ್ಷೇಪಗೊಂಡಿರುವ ಸಾಧ್ಯತೆ ಇಲ್ಲದಿಲ್ಲ. ಜೊತೆಗೆ "ಕೆಲವೆಡೆ ಭಾವಪ್ರಕಾಶಿಕೆಯೂ ಅನುಸೃತ. ಉದಾ — ಸೀತೆ ಲಂಕೆಯಲ್ಲಿರುವುದನ್ನರಿತೂ ರಾಮ ಕಪಿಗಳನ್ನೆಲ್ಲ ಕಡೆ ಕಳಿಸಿದ್ದೇಕೆಂದರೆ 'ಸ್ವಾಮಿ ವಿಶ್ವವ್ಯಾಪಕ, ಸೀತಾದೇವಿ ಲಂಕಾದಲ್ಲಿದ್ದಾಳೆಂಬೋದು

ಬಲ್ಲರೂ ಸರಿಯೆ, ರಾಜನೀತಿ ತೋರಿಸಬೇಕಾಗಿ, ಸುಗ್ರೀವಗೆ ಅಜ್ಞಾಪಿಸಿದ (ಪು.96). ಗಂಧರ್ವನೇ ಧೃತರಾಷ್ಟ್ರನೆಂಬಂಶ ಸಂಪುಟ 2, ಪು.25ರಲ್ಲಿದೆ; ವಿದಾ ಜ್ಞಾನೆ ಅನ್ಯ ಹೃದಯಂ ಎಂದರೆ ವಿದ್ಯದಲ್ಲಿ ರತಿಯುಳ್ಳವ ವಿದುರನೆಂಬಂಶ 2,28ರಲ್ಲಿದೆ. ಕಾರಣ, ಕೆಲವು ವ್ಯತ್ಯಾಸಗಳಿದ್ದ ಮಾತ್ರಕ್ಕೆ ಏಕಕರ್ತೃಕವಲ್ಲೆನ್ನಬಾರದು. ಇನ್ನಷ್ಟು ತೌಲನಿಕ ಅಧ್ಯಯನ ಈ ನಿಟ್ಟಿನಲ್ಲಿ ನೆರವು ನೀಡುವಂತಿದೆ. ವಾದಿರಾಜರ ಇತರ ಕೃತಿಗಳ ಎಷ್ಟೋ ಭಾವಸಾಮ್ಯ ಇಲ್ಲುಂಟು. ಉದಾ — ಮಾಲ 9— 107ರಂತೆ ಮಿಶ್ರ ಜೀವರಿಗೂ ಸಾಂತಾನಿಕ ಲೋಕವಿದೆ (ಅನ್ಯರೆಂಬಂತೆ ಸ್ವರ್ಗಮಾತ್ರವಲ್ಲ) ಎನ್ನುವುದು 'ವೈಕುಂಠ ವರ್ಣನೆ' 3— 3, 4— 9ರಂತೆ ಕನ್ನಡ ನಿರ್ಣಯ 1— 161ರಲ್ಲೂ ಉಕ್ತ. ಇನ್ನೂ ಕೆಲವನ್ನು ಮುಂದೆ ಟಿಪ್ಪಣಿಸಿದೆ. ಇವುಗಳ ಅಭ್ಯಾಸ 'ಏಕಕರ್ತೃತ್ವಕ್ಕೆ ಪೋಷಕ.

(4) 'ತಾತ್ಪರ್ಯ ನಿರ್ಣಯ ಟೀಕೆ ಖಂಡಿತ ವಾದಿರಾಜರ ಕೃತಿಯಲ್ಲ. ಎಂತಲೇ ಉಡುಪಿಯ ಪರಿಸರದಲ್ಲೆಲ್ಲಿಯೂ ಅದರ ಹಸ್ತಪ್ರತಿ ಇಲ್ಲ, ವಾದಿರಾಜರ ಕೃತಿ ಎಂದು ಪ್ರಥೆಯೂ ಇಲ್ಲ' (ಬನ್ನಂಜೆ ಗೋವಿಂದಾಚಾರ್ಯರ ಪತ್ರಾಭಿಪ್ರಾಯ). ಇದನ್ನಿಷ್ಟು ಖಂಡಿತವೆನ್ನಲಾಗದು. ಏಕೆಂದರೆ ವಾದಿರಾಜರು ಇದನ್ನು ನೋಡದೆಯಲ್ಲದಾಗ ಇತ್ತಣ ಬ್ರಾಹ್ಮಣನಿಂದ ಬರೆಯಿಸಿದಂತಿದೆ. ಅಂತೆಯೇ ಉತ್ತರ ಕರ್ನಾಟಕದ ಭಾಷಾ ಶೈಲಿಯ ಹಸ್ತಪ್ರತಿ ಇತ್ತ ಕಡೆ ಸಿಕ್ಕುತ್ತಿವೆ. ಕೃತಿ ಅವರದೇ ಆದರೂ ಭಾಷೆ ಬೇರೆಯವರದೆಂದು ಮಾತ್ರ ಹೇಳಬಹುದು. ಅವರೇ ಹೇಳಿ ಬರೆಯಿಸಿದ ಕಾರಣ ಅಲ್ಲಲ್ಲಿ ದಕ್ಷಿಣ ಕನ್ನಡದ ಪದಪ್ರಯೋಗಗಳಿವೆ. ಮಾತ್ರವಲ್ಲ, ಕನ್ನಡ ಮುದ್ರಣವಿತ್ತ ಬಿ.ನಾಗರಾಜರು ಹೇಳಿ ಬರೆಯಿಸಿದ ಬಗ್ಗೆ ಸಾಂಪ್ರದಾಯಿಕ ಕಥೆಯುಂಟೆನ್ನುವರು. ವಾದಿರಾಜರು ಮೊದಲು ಮಾಡಿದ ಯುಕ್ತಿಮಲ್ಲಿಕಾ ವ್ಯಾಖ್ಯಾನವನ್ನು ನೋಡದರ ಸಾರೋತ್ತಮತೀರ್ಥರ ಹೆಸರಿನಲ್ಲಿ ಪೂರೈಸಿದ್ದು, ವೃಂದಾವನಸ್ಥರಾದ ಮೇಲೆ ಬ್ರಾಹ್ಮಣ ಸ್ವಪ್ನದಲ್ಲಿ ಹೇಳಿದ ಆಖ್ಯಾನವನ್ನು ವೇದನಿಧಿಗಳ ಮೂಲಕ ರಾಮಚಂದ್ರಾಚಾರ್ಯರಿಂದ ಬರೆಯಿಸಿದ್ದು ಅಸಂಭವವಲ್ಲ. ಅದಕ್ಕೆ ಇತ್ತಣ ಲಿಪಿಕಾರ ಲಭಿಸಿರುವುದೂ ಸಹಜ. ಜಗನ್ನಾಥ ದಾಸರ ಪೂರ್ವಭವದ ಕೊಂಡಪ್ಪ (ಬಂಡಪ್ಪ) ವಾದಿರಾಜರಲ್ಲಿ ಕರಣೀಕನಾಗಿದ್ದು ಕೆಲ ಪ್ರಾಕೃತ ಪದ್ಯಾಂತಗಳಲ್ಲಿ ಫಲಶ್ರುತಿ ರಚಿಸಿದಂತೆ 'ವಾದಿರಾಜ ಗುಣರತ್ನಮಾಲಾ' ಸೂಚಿಸಿದೆ (10,65). ಅಂಥ ಲಿಪಿಕಾರರಿಗೆ ಬಳಕೆ ಮಾತಿನ ಪರಿಚಯವಿದ್ದರೂ ಪ್ರಮಾಣ ಭಾಷೆಯ ಪರಿಜ್ಞಾನವಿಲ್ಲದ್ದರಿಂದ, 'ಮುದ್ರಾಮಂಜೂಷ'ದಂತೆ ವಿಚಿತ್ರ ಪ್ರಯೋಗ ಮಿಶ್ರಣ ಇಲ್ಲಿ ಬಂದಿದೆ. ಆದರೂ ಅದೇ ಕೃತಿಯಂತೆ ಆಕರ್ಷಕವಾಗಿ ಓದಿಸಿಕೊಂಡು ಹೋಗುತ್ತದೆ.

ಮುದ್ರಿತ ಪ್ರತಿ– ಹಸ್ತಪ್ರತಿಗಳಿಗೆ ತುಸು ವ್ಯತ್ಯಾಸವಿರುವುದರಿಂದ ಪ್ರತಿಕಾರರ ಕೈವಾಡ ಸ್ಪಷ್ಟವಾಗಿ ಕಂಡುಬರುತ್ತದೆ. ಉದಾ — 'ತಾತ್ಪರ್ಯ ನಿರ್ಣಯ ಪ್ರಥಮ ಅಧ್ಯಾಯದಲ್ಲಿ ಆನಂದತೀರ್ಥರು ಶ್ರೀವೇದವ್ಯಾಸ ದೇವರ ದರಶನಕೆ ಮಾರನೆ ಅವರ್ತಿ ಬದರಿಕಾಶ್ರಮಕೆ ಹೋಗಿರಲಾಗಿ, ವೇದವ್ಯಾಸ ದೇವರು ಆನಂದತೀರ್ಥರಿಗೆ ಅಜ್ಞಾಪಿಸಿದ್ಧಾರೆ — ವೇದಗಳಲ್ಲಿ ಪುರಾಣಗಳಲ್ಲಿ ಭಾರತ ಶಾಸ್ತ್ರಗಳಲ್ಲಿ ಪಂಚರಾತ್ರಾಗಮದಲ್ಲಿ ಅಸುರಜನಮೋಹನಾರ್ಥವಾಗಿ ಶ್ರುತಿ ಸ್ಮೃತಿಗಳಲ್ಲಿ ಹೇಳಿವೆ. ಪುರುಷ ವ್ಯತ್ಯಾಸ ಕಾಲ ವ್ಯತ್ಯಾಸ ಹೇಳಿವೆ. ಅದ ಕಾರಣ ಅಜ್ಞಾನಿಗಳು ಮೋಹಿತರಾದಿದ್ಧಾರೆ. ಸಕಲ ಸಜ್ಜನರಿಗೆ ದಿವ್ಯಜ್ಞಾನಪ್ರಕಾಶ ಮಾಡಿಕೊಡಬೇಕಾಗಿ ಸಕಲ ಶಾಸ್ತ್ರಸಾರಭೂತ ತೆಗೆದು ನಿರ್ಣಯ ಗ್ರಂಥ ಮಾಡು. ಹೀಗೆಂತಾ ವೇದವ್ಯಾಸ ದೇವರು ಆಜ್ಞಾಪಿಸಲಿಕ್ಕೆ ದೇವರ ಅಜ್ಞಾ ಶಿರಸಾವಹಿಸಿಕೊಂಡು ಆನಂದತೀರ್ಥರು ಬದರಿಕಾಶ್ರಮದಿಂದ ಉಡುಪಿ ಕ್ಷೇತ್ರಕ್ಕೆ ಬಂದು ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ ಗ್ರಂಥಾ ಹೇಳಿದರು' (ಹಸ್ತಪ್ರತಿ). 'ಈ ಪ್ರಥಮಾಧ್ಯಾಯದಲ್ಲಿ ಆನಂದತೀರ್ಥರು ಮಹಾಭಾರತ ತಾತ್ಪರ್ಯ ನಿರ್ಣಯವನ್ನು ರಚಿಸಲು ಕಾರಣವನ್ನು ತಿಳಿಸಿದ್ದಾರೆ. ಅವರು ವೇದವ್ಯಾಸರ ದರ್ಶನಕ್ಕೆ ಮಾರನೆ ಅವರ್ತಿ ಬದರಿಕಾಶ್ರಮಕ್ಕೆ ಹೋಗಿರಲಾಗಿ ವೇದವ್ಯಾಸರು ಆನಂದತೀರ್ಥರಿಗೆ — ವೇದಗಳಲ್ಲಿ, ಭಾರತಾದಿ ಪುರಾಣಗಳಲ್ಲಿ, ರಾಮಾಯಣದಲ್ಲಿ, ಶಾಸ್ತ್ರಗಳಲ್ಲಿ, ಪಂಚರಾತ್ರದಲ್ಲಿ ಅಸುರ ಜನ ಮೋಹನಾರ್ಥವಾಗಿ ಶ್ರುತಿಗಳು, ಸ್ಮೃತಿಗಳು ಪುರುಷ ವ್ಯತ್ಯಾಸ ಕಾಲವ್ಯತ್ಯಾಸಗಳನ್ನು ಹೇಳುತ್ತವೆ. ಇದರಿಂದ ಜ್ಞಾನಿಗಳೂ ಮೋಹಿತರಾಗುತ್ತಾರೆ. ಸಕಲ ಸಜ್ಜನರಿಗೆ ದಿವ್ಯ ಜ್ಞಾನ ಪ್ರಕಾಶ ಮಾಡಿಕೊಡಲು ಸಕಲ ಶಾಸ್ತ್ರ ಸಾರರೂಪವಾದ ನಿರ್ಣಯ ಗ್ರಂಥ ಮಾಡು — ಎಂದು ಆಜ್ಞಾಪಿಸಿದ್ದರಿಂದ ಅವರ ಅಪ್ಪಣೆಯನ್ನು ಶಿರಸಾವಹಿಸಿ ಆನಂದತೀರ್ಥರು ಬದರಿಕಾಶ್ರಮದಿಂದ ಉಡುಪಿ ಕ್ಷೇತ್ರಕ್ಕೆ ಬಂದು ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಮಹಾಭಾರತಾರ್ಥ ಸಾರವನ್ನು ತಿಳಿಸಿರುತ್ತಾರೆ' (ದೇವನಾಗರಿ ಮುದ್ರಣ).

'ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ ಪ್ರಥಮಾಧ್ಯಾಯದಲ್ಲಿ, ಶ್ರೀಮದಾನಂದತೀರ್ಥರು ವೇದವ್ಯಾಸರ ಸಂದರ್ಶನಕ್ಕೆ ಮಾರನೇ ಆವರ್ತಿಯಲಿ ಬದರಿಕಾಶ್ರಮಕ್ಕೆ ಹೋಗಿರಲಾಗಿ, ಶ್ರೀ ವೇದವ್ಯಾಸರು ಆನಂದತೀರ್ಥರಿಗೆ ಅಜ್ಞಾಪಿಸಿದ್ದೇನೆಂದರೆ ವೇದ ಪುರಾಣಗಳಲ್ಲಿ, ರಾಮಾಯಣಗಳಲ್ಲಿ, ಭಾರತ ಶಾಸ್ತ್ರಗಳಲ್ಲಿ, ಪಂಚರಾತ್ರಾಗಮದಲ್ಲಿ, ಶ್ರುತಿ ಸ್ಮೃತಿಗಳಲ್ಲಿ ಅಸುರ

ಜನ ಮೋಹನಾರ್ಥವಾಗಿ ಪುರುಷ ವ್ಯಾಖ್ಯಾನ ಕಾಲವ್ಯಾಖ್ಯಾನ ಹೇಳಿದ. ಆದಕಾರಣ ಜ್ಞಾನಿಗಳು ಮೋಹಿತರಾಗಿದ್ದಾರೆ. ಸಕಲ ಸಜ್ಜನರಿಗೆ ದಿವ್ಯ ಜ್ಞಾನ ಪ್ರಕಾಶ ಮಾಡಿಕೊಡಬೇಕಾಗಿ, ಸಕಲ ಶಾಸ್ತ್ರ ಸಾರ ತೆಗೆದು ನಿರ್ಣಯ ಗ್ರಂಥ ಮಾಡು — ಹೀಗೆಂತ ವೇದವ್ಯಾಸದೇವರು ಅಜ್ಞಾಪಿಸಲಿಕ್ಕೆ ದೇವರಾಜ್ಞೆ ಶಿರಸಾವಹಿಸಿಕೊಂಡು, ಆನಂದತೀರ್ಥರು ಬದರಿಕಾಶ್ರಮದಿಂದ ಉಡುಪಿ ಕ್ಷೇತ್ರಕ್ಕೆ ಬಂದು, ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ ಗ್ರಂಥ ರಚಿಸಿ ಅದರಲ್ಲಿ ಮಹಾಭಾರತಾರ್ಥ ಹೇಳಿದ್ದಾರೆ"(ಕನ್ನಡ ಮುದ್ರಣ).

ಈ ಮೂರು ಉದ್ಧರಣಗಳಿಂದ ಮುಖ್ಯ ವಿಷಯ ಒಂದೇ ಆದರೂ ಭಾಷಾಪ್ರಯೋಗ ವ್ಯತ್ಯಾಸಗೊಂಡಿರುವುದು ಪ್ರತಿಕಾರರಿಂದ ಎನ್ನುವುದು ಸ್ವಯಂ ವೇದ್ಯ. ವಾದಿರಾಜರು ಹೇಳಿದ್ದನ್ನು ಲಿಪಿಕಾರರು ಬರೆದುಕೊಳ್ಳುವಲ್ಲಿ ಹೀಗೆಯೇ ವ್ಯತ್ಯಾಸಗಳಾಗಿರುವುದು ಸಾಧ್ಯ. ಆದ್ದರಿಂದ ಈ ಪ್ರಯೋಗ ವೈಚಿತ್ರ್ಯವಿಸಂಗತಿಗಳನ್ನು ವಾದಿರಾಜರವೆನ್ನುವಂತಿಲ್ಲ. ಆದರೆ ಉತ್ತರ ಕರ್ನಾಟಕದ ಆಡುನುಡಿಯಲ್ಲಿ 'ಎಂತ' ಎಂಬಂಥ ಪ್ರಯೋಗ ಬಾರವಾಗಿ ಅವು ವಾದಿರಾಜರ ವಾಣಿಯ ಅವಶೇಷಗಳೆನ್ನಬೇಕು. 'ವೈಕುಂಠ ವರ್ಣನೆ'ಯ 4 ಮೋಕ್ಷ ರೂಪ 12ನೆಯ ಪುಟದಲ್ಲಿ ಉಕ್ತ. 17ನೆಯ ಪುಟದ 32 ಲಕ್ಷಣಗಳ ಗುರುವಿನ ವರ್ಣನೆ ವಾದಿರಾಜರದೇ ಎನ್ನುವಂತಿದೆ. ಅಧ್ಯಾಯಾಂತ ವಾಕ್ಯಗಳೂ ಪ್ರತಿಯಿಂದ ಪ್ರತಿಗೆ ಅಂತರದೋರುತ್ತವೆ.

2ನೆಯ ಅಧ್ಯಾಯದಲ್ಲಿ ನಾರಾಯಣ ಸರ್ವೋತ್ತಮನೆಂದು ಭಾರತಾದಿ ಸುವಾಕ್ಯ ಹೇಳಿದ್ದಾರೆ; ಅಷ್ಟೇ ನಿಶ್ಚಯಾರ್ಥ ಸ್ವಸ್ವರೂಪವನ್ನೂ ಹೇಳಿದ್ದಾರೆ —

ಪ್ರಥಮೋ ಹನುಮನ್ನಾಮ ದ್ವಿತೀಯೋ ಭೀಮ ಏವ ಚ
ಪೂರ್ಣಪ್ರಜ್ಞ: ತೃತೀಯಸ್ತು ಭಗವತ್ಕಾರ್ಯ ಸಾಧಕ: ॥ 127 ॥

3ನೆಯ ಅಧ್ಯಾಯ ಸೃಷ್ಟಿಪ್ರಕಾರ ವಿಸ್ತರಿಸಿದೆ. ದಶಾವತಾರಗಳಲ್ಲಿನ ವಾಮನಾವತಾರದ 'ಸ್ವಾಮಿಯ ಪಾದ ಕಮಲ ಮೃದುವಾದ ಕಾರಣ, ಭೂ ದೇವತಿ ಸುಪ್ಪತ್ತಿಗೋಪಾದಿ ಮಾರ್ದವ ಉಳ್ಳಾಕಿ ಆಗಿ ತಗ್ಗು ಬೀಳುತಿಹೋಳು' ಎಂಬಂಥ ಚೆಲುವಾದ ವರ್ಣನೆಯೊಡನೆ

ಬಲಿ– ವಾಮನರಲ್ಲಿ ನಡೆಯುವ ದೇಸಿ ನುಡಿಯ ಸಂವಾದ ಸ್ವಾರಸ್ಯಕರ. ಈ 3 ಅಧ್ಯಾಯ ಶಾಸ್ತ್ರ ನಿರ್ಣಾಯಕವಾಗಿವೆ.

4ರಿಂದ 9ರ ವರೆಗೆ ರಾಮಾಯಣ ಹೇಳುತ್ತಾರೆ. 4ರಲ್ಲಿ ಬಾಲಕಾಂಡದ ರಾಮ ಜನನ – ಯಜ್ಞ ಸಂರಕ್ಷಣ, ಅಹಲ್ಯೋದ್ಧಾರ, ಸೀತಾ ಸ್ವಯಂವರ – ಪರಶುರಾಮ ಪ್ರಸಂಗ ನಿರ್ಣಯಿಸಿ ಅಯೋಧ್ಯಾ ಪ್ರವೇಶಗೊಳಿಸಿದ್ದಾರೆ.

5ರಲ್ಲಿ ಅಯೋಧ್ಯಾ ಕಾಂಡದ ಬಳಿಕ ವನಗಮನದಿಂದ ಅರಣ್ಯಕಾಂಡ ಆರಂಭಿಸಿ ಹನುಮದ್ದರ್ಶನ ತಾತ್ಪರ್ಯ ನಿರೂಪಿಸಿದ್ದಾರೆ. ಜಗದ್ವಿಡಂಬನ ದುಷ್ಟ ಮೋಹನಾರ್ಥ ದೇವತೆಗಳೂ ಮನುಷ್ಯರೂ ಆಪತ್ತು ಅನುಭೋಗಿಸುತ್ತಾರೆಂದು ಲಕ್ಷ್ಮೀನಾರಾಯಣರು ಅಣಕವಾಡಿದ್ದಾರೆಂಬಲ್ಲಿ ಮೂಲ ರಾಮಾಯಣದ ವೃತ್ತಾಂತ ವಿವೃತ – ರಾವಣ ಬರಲಾಗಿ ಸೀತಾದೇವಿ ಅದೃಶ್ಯಳಾದಳು, ತನ್ನ ಪ್ರತಿಕೃತಿ ಮಾಡಿ ಇಟ್ಟು ಕೈಲಾಸಕ್ಕೆ ಹೋಗಿಹಾಳೆ. (ಈ ಪ್ರತಿಕೃತಿಯೇ ಅಗ್ನಿಯಿಂದ ಬಂದ ವೇದವತಿ, ಪದ್ಮಾವತಿಯಾಗಿ ಮುಂದೆ ಶ್ರೀನಿವಾಸನ ವರಿಸಿದಳು). ಸುಗ್ರೀವ ಪರಿಗ್ರಹಣ ವಾಲೀಸಂಹಾರ ಏನು ಕಾರಣ, ಎಂದರೆ, ಮುಖ್ಯಪ್ರಾಣ ದಾರನ್ನು ಪರಿಗ್ರಹಣ ಮಾಡುತ್ತಾರ ಅದೇ ಪ್ರಕಾರ ಮಾಡುವೋಣ;[448] ವಾಲಿ ಇಂದ್ರಾವತಾರನಾಗಿ ಅರ್ಜುನನಾದಾಗ ಭೀಮಸೇನ ವಹಿಸಿಕೊಂಡ ಕಾರಣ ಕೃಷ್ಣ ಸಾರಥಿಯಾದ; ಸುಗ್ರೀವ ಅಣ್ಣನ ಕೊಲ್ಲಿಸಿದನಾಗಿ ಸೂರ್ಯಾವತಾರಿ ಕರ್ಣನಾದಾಗ ಪಾಂಡವ ದ್ರೋಹ ಮಾಡ್ಯಾನೆ (ಸಂಪುಟ 2, ಪು.31).

6ರಲ್ಲಿ ಕಿಷ್ಕಿಂಧಾ ಕಾಂಡ ಹೇಳುತ್ತಾರೆ. ರಾಮಬಾಣ 7 ತಾಳವೃಕ್ಷ ಕೆಡಹಬೇಕಲ್ಲದೆ ದೈತ್ಯರನ್ನು ಏನು ಕಾರಣ ಕೊಲ್ಲಬೇಕೆಂದಲ್ಲಿ, ದೀವಿಗೆಯನ್ನು ಒಂದು ಪದಾರ್ಥ ನೋಡಲು ತಂದರೆ ಸಕಲ ಪದಾರ್ಥ ತೋರಿಸಿ ಕೊಡುತ್ತದೆ. 'ವಾಲಿ ನನ್ನ ಭಕ್ತ, ಪಾದ

---

448. ಹನುಮನ ಮತವೆ ಹರಿಯ ಮತ, ಹರಿಯ ಮತವೆ ಹನುಮನ ಮತ, ಹನುಮನ ನಂಬಿದ ಸುಗ್ರೀವ ಗೆದ್ದ, ಹನುಮನ ನಂಬದ ವಾಲಿಯು ಬಿದ್ದ; ಹನುಮನು ಪುರಂದರವಿಠಲನ ದಾಸ, ಹನುಮನೊಳಗ್ರ ಪುರಂದರ ವಿಠಲನಾವಾಸ.'

ಹಿಡಿದಾನು, ಶರಣಾಗತನ ಕೊಲ್ಲೋಣ ಪ್ರಶಸ್ತವಲ್ಲ; ಅದರಿಂದ ಉಭಯರ ಸಂರಕ್ಷಣಾರ್ಥ ಅದೃಶ್ಯನಾದ, ಭೀತಿಯಿಂದಲ್ಲ. ರಾಮ 'ಇಷ್ಟ ಇದ್ದರೆ ಬದುಕಿಸೇನು' ಎಂದರೆ ವಾಲಿ 'ನಿನ್ನ ಎದುರು ಮರಣಸುಖ ಬಿಟ್ಟು ಬದುಕಿ ಏನು ಪ್ರಯೋಜನ?' ಎಂದು ಸ್ವಾಮಿಯಾಮುಖ ಜಲ್ಮಿ ನೋಡುತ ದೇಹ ತ್ಯಾಗ ಮಾಡಿದ.

7ರಲ್ಲಿ ಸುಂದರ ಕಾಂಡ. ಹನುಮ ರಾಮದೇವರನುಜ್ಞೆಯಿಂದ ಸಮುದ್ರ ಹಾರಿ ಸೀತಾ ಪ್ರತಿಕೃತಿಗೆ ಉಂಗುರ ಕೊಡೋಣ — ಚೂಡಾಮಣಿ ತೆಗೆದುಕೊಂಬೋಣ — ಲಂಕಾದಹನ ಮಾಡಿ ಒಂದೇ ಹಾರಿಕೀಲೆ ಹಾರಿ ಬಂದನು; ರಾಮದೇವರು[449] ಅಪ್ಪಿಕೊಂಡು ತನ್ನನ್ನೇ ಕೊಟ್ಟನು.

8ರಲ್ಲಿ ಯುದ್ಧ ಕಾಂಡ. ರಾಮದೇವರು ಉದಯಾಸ್ತಾನಿಂದಿರಲಿಕ್ಕೆ ರಾವಣನೆಂಬ ಗಾಢಾಂಧಕಾರ ಪರಿಹಾರವಾಯಿತು. ಸೀತಾ ಪ್ರತಿಕೃತಿಯನ್ನು ವಿಭೀಷಣ ಕೊಂಡುಬಂದ. ಮೂಲ ಸೀತಾ ಒಂದು ರೂಪದಲ್ಲಿ ದೇವರ ಸಮೀಪದಲ್ಲಿದ್ದಳು. ಪ್ರತಿಕೃತಿ ಅಗ್ನಿಪ್ರವೇಶ ಮಾಡಲಿಕ್ಕೆ ಕೈಲಾಸದೊಳಗಿದ್ದ ಸೀತಾದೇವಿ ಹೊರಟುಬಂದಳು. ರುದ್ರನಲ್ಲಿದ್ದ ಸೀತಾ ಎಂತ ತಿಳಿದು ರಘುನಾಥ ಸಂತೋಷಪಟ್ಟನು, ಅಯೋಧ್ಯಾ ರಾಜ್ಯಾಭಿಷೇಕ ಮಾಡಿಸಿಕೊಂಡನು. ಹನುಮಂತಗೆ ಬ್ರಹ್ಮಪದವಿಯಲ್ಲಿದ್ದಂಥ ಸಹಭೋಗ ಕೊಟ್ಟು ಅಪ್ಪಿಕೊಂಡನು.

9ನೆಯದು ಉತ್ತರ ಕಾಂಡ. ಲಕ್ಷ್ಮೀ — ನಾರಾಯಣರ ವಿಯೋಗ ತಿಳಿಯದ ಪರಿಯಂತರ ಪಾಪದಿಂದ ರವದಿಂದ ಹುಟ್ಟಿದ ಸುರಾಣಕ ಅಸುರರನ್ನು ಸೀತಾದೇವಿ ದುರ್ಗಾ ರೂಪಳಾಗಿ ಮೋಹಿಸಿದಳು. ಮಿಥ್ಯಾ ಜ್ಞಾನದಿಂದವರು 'ಅಪಹೃತ ಜಾನಕಿಯನ್ನು ಆಳತಾನೆ' ಅಂದರು. ರಾಮ ಸೀತಾದೇವಿಯಿಂದ ವಿಯುಕ್ತನಾಗಿದ್ದರೂ ಹೊರಗೆ ಹಾಕಿದ ಹಾಂಗಾದನು. ವಿಯೋಗ ತಿಳಿದು ಅಸುರರು ತಮಸ್ಸು ಐದಿದರು. ಸೀತಾದೇವಿ ಯಮ್ಮಾ ಭೂಮಿಯು ಅಗ್ನಿಕುಂಡದೊಳಗೆ ಬೀಳಲಿಕ್ಕೆ ಭೂಮಿ ಒಳಕೊಂಡಳೋ ಎಂಬ ಪ್ರಕಾರ ಅದೃಶ್ಯಳಾಗಿ ರಾಮದೇವರ ಸಮೀಪದಲ್ಲೇವೆ ಇದ್ದಳು. ಏಕಾಂತ ಸಮಯದಲ್ಲಿ ಪರೀಕ್ಷಿಸಬಹುದ

---

449. 'ರಾಮರು' ಪ್ರಯುಕ್ತವಾಗಿದೆ ಹನುಮ ಸುಮಾಲಿ, ಕೀರ್ತನಗಳಲ್ಲಿ.

ದುರ್ವಾಸನನ್ನು ಒಳಗೆ ಬಿಟ್ಟು ಲಕ್ಷ್ಮಣನನ್ನು ಹೊರಗೆ ಹಾಕೋಣವೇ ಕೊಲ್ಲೋಣವೆಂದು 'ನಿನ್ನ ಲೋಕಕ್ಕೆ ಹೋಗು' ಎಂದ ರಾಮ. ಸ್ವಾಮಿ ಹಾಸಿಗೆ ಮುಂದಾಗಿ ಹೋಗಬೇಕು,[450] ಲಕ್ಷ್ಮಣ ಶೇಷರೂಪ ಹಿಡಿದನು. ರಾಮ ಹನುಮಗೆ 'ಕಪಿ ದೇಹದಿಂದಲೇ ವೈಕುಂಠಕ್ಕೆ ಬರುತಾ ಬಾ' ಎಂದು ಸಮಸ್ತ ಪ್ರಾಣಿಗಳೊಡನೆ ಭೂಮ್ಯಂತರಿಕ್ಷ ನಡೆದು ಅಲೌಕಿಕ ಶರೀರಿಯಾದ ಅವರಿಗೆ ಸಾಂತಾನಿಕ ಲೋಕವಿತ್ತ.[451]

ಮೊದಲಧ್ಯಾಯಗಳಲ್ಲಿ ದಶಾವತಾರ, ನಂತರ ರಾಮಾವತಾರ ವಿಚಾರ ನಿರ್ಣಯಿಸಿ, ಕೃಷ್ಣಾವತಾರಕ್ಕೆ ಮುನ್ನ 10ನೆಯ ಅಧ್ಯಾಯದಿಂದ ವ್ಯಾಸಾವತಾರ ವಿವರಿಸಿದೆ. ಕಲಿ ಸ್ವರೂಪವಾದ ಕಾಲಕೂಟವನ್ನು ವಾಯು ಸ್ವಲ್ಪ ತೆಗೆದುಕೊಂಡು ಮರ್ದಿಸಿ ರುದ್ರಗಿತ್ತು. ಮಿಕ್ಕುದನ್ನು ತಾ ಕುಡಿದಾಗ ಜಗಳ[452] ಬಿದ್ದಂತೆ ಕಲಿಯಾಗಿ ಪ್ರವರ್ತಿಸಿ ಶಾಸ್ತ್ರ ಕೆಡಿಸಿದ. ಸಜ್ಜನರ ಅಜ್ಞಾನ ಪರಿಹಾರಾರ್ಥ ಹರಿ ಸತ್ಯವತಿಯಲ್ಲಿ ಗರ್ಭಾದಿ ರಹಿತನಾಗಿ ವ್ಯಕ್ತನಾದ; ನರಸಿಂಹನಂತೆ ಸ್ತಂಭ ಸ್ಥಾನೀಯಳಲ್ಲಿ ಆವಿರ್ಭೂತನಾದ.[453] ವೇದನಿರ್ಣಯಿಸಿ ಬ್ರಹ್ಮಸೂತ್ರ, ಭಾರತ, ಭಾಗವತ ಮಾಡಿದ. ರುದ್ರಾಂಶ ಸುತ ಶುಕನಲ್ಲಿ ವಾಯು ಪ್ರವೇಶಿಸಲು ವೇದ, ಭಾರತ ಸಹಿತವಾದ ಭಾಗವತ ಬೋಧಿಸಿದ. ಶೂದ್ರಲುಬ್ಧಕನ ಪುನರ್ಜನ್ಮದ ಕ್ರಿಮಿಯಿಂದ ರಾಜ್ಯವಾಳಿಸಿ ಬ್ರಾಹ್ಮಣನಾಗಿ ಮುಕ್ತಿ ಐದುವಂತೆ ಮಾಡಿದ. ವೈಶಂಪಾಯನಗೆ ಭಾರತ ಹೇಳಿಂದು, ತನ್ನ ಆನಂದೋದ್ರೇಕ ರೋಮದಿಂದ ರೋಮ ಹರ್ಷಣನ ಹುಟ್ಟಿಸಿ ಸಕಲ ಶಾಸ್ತ್ರ ಹೇಳಿಂದ. 18 ಪುರಾಣ ಮಾಡಿ ವೇದವ್ಯಾಸ ಸೂರ್ಯ ಅಜ್ಞಾನಾಂಧಕಾರ ಪರಿಹರಿಸಿದ, ಮೇರು ಪರ್ವತದ ಹಿರೇಬದರಿಯಲ್ಲಿ ವಾಸಿಸಿದ.

---

450. ಮೂಲ 59ರಲ್ಲಿರದ ಈ ಭಾವ ರು.ವಿ. 1,26ರದು. ಈ ಕೃತಿಗಳ ಏಕಕರ್ತೃತ್ವಕ್ಕಿದು ಪೋಷಕಾಂಶ.

451. ವೈ.ಮ.3—3, 4—9ರಲ್ಲಿದು ಮಧ್ವರಂತೆ ಉಕ್ತ, ಅನ್ಯರಲ್ಲಿಲ್ಲ; ಇದು ಏಕಕರ್ತೃತ್ವಕ್ಕೆ ಪೂರಕ.

452. ಬಾಲಲೀಲೆ ಉ.151.

453. ರು.ವಿ. 1, 53; ಬಾಲಲೀಲೆ ಪೂ.65; ಲಕ್ಷ್ಮೀಶೋಭಾನೆ 62— ಮೊದಲಾದಲ್ಲಿದೇ ಭಾವವಿದೆ.

11ನೆಯ ಅಧ್ಯಾಯವು ಕೃಷ್ಣಾವತಾರ ಆರಂಭಿಸಿ ದೇವತೆಗಳ ಕುರು ಪಾಂಡವರ ಅಂಶಾವತರಣ— ವಂಶಾವಳಿ ಹೇಳಿದೆ, ಭಾರತ— ಹರಿವಂಶ ಮಿಶ್ರವಾಗಿ. ಕೃಷ್ಣಾವತಾರಕ್ಕೆ ಪ್ರಾರ್ಥಿಸುತ್ತ ದೇವತೆಗಳೆಂದರು — ಕಾಲನೇಮಿ ಕಂಸ, ವಿಪ್ರಚಿತ್ತಿ ಜರಾಸಂಧ, ಮಧುಕೈಟಭರು ಹಂಸಡಿಭಕರು, ರಾವಣ ಕುಂಭಕರ್ಣರು, ಶಿಶುಪಾಲದಂತವಕ್ತ್ರರು, ಬಲಿಪುತ್ರ ಬಾಣಾಸುರ ಕೀಚಕ ಆಗಿ ಹುಟ್ಟ್ಯಾರೆ; ಅವತರಿಸಿ ದೇವಕಾರ್ಯ ಸಾಧಿಸಿಕೊಡು. 'ಕಶ್ಯಪ ಅದಿತಿಯರು ಮಾತು ಕೇಳಿ ಮಗ ವರುಣನಲ್ಲಿ ಕಳವು ಹಾಕಿಸಿ ಆಕಳು ತರಿಸಿ ಗೋಜೀವನದ ಶಾಪವಾಗಿ ಶೂರನಲ್ಲಿ ವಸುದೇವನಾದ, ಅದಿತಿ ದೇವಕಿಯಾದಳು; ದ್ರೋಣ ವಸು ನಂದಗೋಪ, ಧರಾದೇವಿ, ಯಶೋದೆ; ನಾರಾಯಣಾ ಮಗನಾಗಬೇಕೆಂದ ತಪಸ್ಸಿಗೆ ವರವಿತ್ತುದನ್ನು ನಿಜಗೊಳಿಸು' ಎಂದ ಬ್ರಹ್ಮ. ಸ್ವಾಮಿ ಒಪ್ಪಲು ದೇವತೆಗಳು ಯಾದವರಾದರು. ಕೌರವ ಪಕ್ಷದವರು ಹರಿ— ಪಾಂಡುಗಳಲ್ಲಿ ದ್ವೇಷಿಗಳಾದರು.

12ರಲ್ಲಿ ಕೃಷ್ಣಾವತರಣ — ಪಾಂಡವೋತ್ಪತ್ತಿ. ಮೂಲ ಕಲಿ ದುರ್ಯೋಧನ, ಇಂದ್ರಜಿತನೇ ದುಶ್ಶಾಸನ; ಹೀಂಗೆ ಎಷ್ಟು ಹೇಳುವ,[454] 100 ಮಂದಿ ಹುಟ್ಟಿದರು. 'ಒಬ್ಬ ಮಗ ಮಗನಲ್ಲ, ಒಂದು ಕಣ್ಣು ಕಣ್ಣಲ್ಲ'[455] ಎಂದು ಪಾಂಡು ಆಜ್ಞಾಪಿಸಲಿಕ್ಕೆ, ಕುಂತಿ ಪಾಂಡುದೇವರನ್ನು ಕರೆದಳು. ಭೀಮಸೇನ ದೈತ್ಯರ 'ಹಲ್ಲು ಮುರಿದು ಕೈಲಿ ಕೊಡುವಂಥಾತ'.[456] ದೇವಕೀರೂಪದ ಕಂಭದಲ್ಲಿ ವ್ಯಕ್ತನಾದ ಸ್ವಾಮಿ. ನಂದಗೋಪನ ಮನಿಗೆ ಒಯ್ಯುವಾಗ ತುಂತುರು ಹನಿ ಬೀಳತದೆ, ಶೇಷ ಸ್ವಾಮಿ ಮ್ಯಾಲೆ ಬೀಳದ ಹಾಂಗ ಹೆಡೆಯಿಂದ ಛತ್ರಿ ಹಿಡಿದಿಹ.[457] ಯಮುನಾ 2 ಥಂಡ ಸೂಸಿ ಹರೀತಿ ಹೋಳು. ರಾಮಾವತಾರದಲ್ಲಿ ಗಂಡಗೆ ಕ್ಲೇಶಾವಸ್ಥ ಆಗೇದೆ.[458] ಪರದೇವತಿ ಬಂದನೆಂದು ಮಾರ್ಗ ಕೊಟ್ಟಳು. ವಸುದೇವ ಹುಣ್ಣುಮಗಳನ್ನು ಕೊಂಡುಬಂದ, ಕಂಸನ ಕೈಯಿಂದ ಜಗಳ

---

454. ದ.ಕ.ರೂಪ.

455. ಇಂಥ ನಾಣ್ಣುಡಿ— ದೇಸಿನುಡಿ ಅಮೂಲವಾದವು.

456. ರು.ಬಿ., 1,61; ಬಾಲಲೀಲೆ ಪು.100. (ಮೂಲದಲ್ಲಿಲ್ಲ).

457. " 1,63.

~~458.~~ " ~~4,6.~~

ಹೋಯಿತು: ಸ್ವಾಮಿ ಪೂತನಿ— ಶಕಟಾಸುರನ್ನ ಕೊಂದುಬಿಟ್ಟನು. ನವನೀತಚೋರನೆಂದು ಲೀಲ ತೋರಿಸಿದನು. ಹರಿವಂಶ ಕಥ ನಿಂದರಿಸಿ ಆದಿಪರ್ವ ಕಥ ಹೇಳತಾರೆ. ಮಾದ್ರಿಗೆ ಅವಳಿ ಜವಳಿ ಹುಟ್ಟಿದರು.

13ರಲ್ಲಿ ಕಂಸವಧ. ಸ್ವಾಮಿ ದಾವ ಜಾತಿಯಲ್ಲಿ ಅವತಾರ ಮಾಡತಾನೆ ಆ ಜಾತಿ ಸ್ವಭಾವ ತೋರಸ್ತಾನೆ, ಅವರವರ ಕಾಲಾನುಸಾರ ಲೀಲೆ ತೋರಸ್ತಾನೆ. ಚಿಕ್ಕವಗೆ ದುಷ್ಟತನ ಯಾಕೆ ಉರುಟಿಂದು ಕೈಲಿ ಕಟ್ಟಿಗಿ ತೆಗೆದುಕೊಂಡು ಬಡಿಯಲಿಕ್ಕೆ ಹೋಗತಾಳೆ.[458] ತಾಯಿಯು ಶ್ರಮ ಕಂಡು ಭಕ್ತವತ್ಸಲ ಕೈಗೆ ಸಿಕ್ಕನು. ಕಾಳಿಯ ಮ್ಯಾಲೆ ಕಾಲ ಕೊಟ್ಟು ನರ್ತನ ಮಾಡಲಿಕ್ಕೆ ಬ್ರಹ್ಮ ಮದ್ದಲೀ ಬಾರಿಸಿದ, ರುದ್ರ ವೀಣೆ ಬಾರಿಸಿದ, ಹನುಮಂತ ಗಾಯನ ಮಾಡಿದ.[459] ನಾಗಪತ್ನೇರು ಸ್ತೋತ್ರ ಮಾಡಲು 'ರಮಣಕಕ್ಕೆ ಹೋಗು, ಗರುಡನ ಅಂಜಿಕಿ ಇಲ್ಲ, ನನ್ನ ಪಾದಲಾಂಛನ ನಿನ್ನ ತಲೀಮ್ಯಾಲೆ ಅದ'[460] ಎಂದ ಸ್ವಾಮಿ. ಪೂರ್ಣ ಕಾಮ ಗೋಪಿಕಾಸ್ತ್ರೀಯರ ಕೂಡ ಕ್ರೀಡಿ ಮಾಡ್ಯಾನೆ. ಕಂಸ ಅಕ್ರೂರನ ಕಳುಹಿದ, ಗೋಪಿಕಾಸ್ತ್ರೀಯರು ದುಃಖಪಡಹತ್ಯರು — 'ಇವ ಕ್ರೂರನಿದ್ದಾನ'[461] ಎಂದು. ಅಕ್ರೂರ ವಿಶ್ವರೂಪ ಕಂಡು ಬರಲು 'ಏನು ಆಶ್ಚರ್ಯ ಕಂಡಿ'[462] ಎಂದ ಕೃಷ್ಣ. 'ನಿನ್ನ ಕಂಡಮ್ಯಾಲೆ ಸಕಲವೂ ಕಂಡ ಹಾಂಗೆ' ಎನುತ್ತ ಮಥುರಾ ಪಟ್ಟಣಕ್ಕೆ ಬಂದ ಅಕ್ರೂರ ಮನಿಗೆ ಕರೆಯಲು 'ಕಂಸನ ಕೊಂದು ಬಂದೇನು'[463] ಎಂದು ಸಮಾಧಾನ ಮಾಡಿದ. ಕಾಬ್ಜ ಗಂಧ ಒಯ್ಯುತಿದ್ದಳು. 'ಎಲ್ಲಿಗೆ' ಎನಲು 'ಕಂಸನ ನಿಮಿತ್ತ' ಎಂದಳು; 'ನನಗೆ ಕೊಟ್ಟೀಯು' ಎನಲು 'ಅವಶ್ಯ ಕೊಟ್ಟೇನು'[464] ಎಂದು ಕೊಡಲು, ತತ್ಕಾಲಕ್ಕೇ ಫಲ ತೋರಿಸಬೇಕಾಗಿ ಮೈಮ್ಯಾಲೆ ಕೈ ಹಾಕಿ ಬಗಿಯಲಿಕ್ಕೆ ಸರಳದೇಹವುಳ್ಳಾಕಿ

---

458. ರು.ವಿ. 4,6.

459. ರು.ವಿ. 4,68; ಬಾಲಲೀಲೆ ಪು. 478 (ಅಮಾಲ)

460. " 71; " 488 ( " )

461. ರು.ವಿ. 10,39; ಬಾಲಲೀಲೆ 770 (ಅಮಾಲ)

462. ಬಾಲಲೀಲೆ, 788 — 90 (ಅಮಾಲ)

463. " 815 (ಅಮಾಲ)

464. " 809— 14 (ಅಮಾಲ)



ಂತೂದಳು. ನೆರಗು ಜಗ್ಗಲು 'ಕಂಸನ ಕೊಂದು ಬಂದೇನು' ಎಂದು ಹೋದ. ಬಿಲ್ಲು ಮುರಿದು ಆನೆ ಹಲ್ಲು ಕೊಂಡು ಬರಲು ಚಾಣೂರ ಮುಷ್ಟಿಕರು 'ಮಲ್ಲಯುದ್ಧ ಮಾಡಿ ಅರಸನ ಪ್ರೀತಿ ಸಂಪಾದಿಸುವ' ಎನಲು 'ನಾವು ಬಾಲಕರು ಮಲ್ಲಯುದ್ಧ ಅರಿತವರಲ್ಲ'[465] ಎಂದು ಒರಸಿಬಿಟ್ಟನು. ಕಂಸ ಸೇನ ಸಿಂಹಗೆ ನರಿಗಳ ಹಿಂದು ಮುತ್ತಿದಂತೆ ಮುತ್ತಿತು. ಕಂಸನನ್ನ ಮಂಚದಿಂದ ಎಳತಂದು ಕೆಡಹಾಕಿ ಕೊಂದ. ದೇವತೆಗಳು ಮಂದಾರ ಹೂವಿನ ಮಳೆಗರೆದರು.[466]

14 — ಜರಾಸಂಧ ಪರಾಭವ. ಯಯಾತಿ ಸಂತಾನಕ್ಕೆ ಆಳಬ್ಯಾಡೆಂದು ಶಾಪವಾಗಿ, ಉಗ್ರಸೇನಗೆ ಅಭಿಷೇಕ ಮಾಡಿದ. ಜರಾಸಂಧ ಈಡ್ಯಾಡಿದ ಗದಾ ಮಥುರೆಗೆ ಹೋಗಿ ಬೀಳದೆ ತಾಂಬು ಸತ್ತಳು. ಮಥುರಾ ಸುತ್ತುಗಟ್ಟಿದ. ಆವನ ದೇಹದೊಳಗೆ ಬಾಣ ಪೋಣಿಸಿದನು. ಭೀಮನ ಕೈಯಿಂದ ಕೊಲ್ಲಸಬೇಕಾಗೇದೆ, ಕಾರಣ ಹಿಡಿದು ಪುನಃ ಬಿಟ್ಟರು. ಜರಾಸಂಧ 18 ಸಾರಿ ಸೋತು ಸೋತು ಹೋದ.

15 — ದ್ರೋಣನಿಂದ ಪಾಂಡವರ ಅಸ್ತ್ರವಿದ್ಯೆ, ಕರ್ಣ ಏಕಲವ್ಯರ ವೃತ್ತಾಂತ.

16 — ಗೋಮಂತ ಪರ್ವತದಲ್ಲಿ ಜರಾಸಂಧ ಭಂಗ. ಬಲಿಷ್ಠರ ಸಂಗಡ ಅಲ್ಪಸೇನ ಉಳ್ಳವರಿಗೆ ವಿರೋಧ ಪ್ರಾಪ್ತವಾದರೆ ಸ್ಥಳಾಂತರ ಹೋಗಬೇಕೆಂದು ನೀತಿ ತೋರಿಸಬೇಕಾಗಿ ದ್ವಾರಕೆಗೆ ಹೋಗುವಂಥಾತನಾದ. ಬಲಿ ಕದ್ದ ನಾರಾಯಣನ ಕಿರೀಟ ಗರುಡ ತಕೊಂಡು ಹೋಗುತ ಕೃಷ್ಣನ ಶಿರಸ್ಸಿನಲ್ಲಿಡಲು ಹವಣಿಸುತ್ತು; ಮೂಲ ರೂಪಕ್ಕೂ ಅವತಾರಕ್ಕೂ ಭೇದ ತಿಳಿಯಬಾರದು. ವಾರುಣಿ ರೇವತಿಯಾಗಿ ಬಲರಾಮನ ವರಿಸಿದಾಳೆ. ಜರಾಸಂಧ ಪರ್ವತಕ್ಕೆ ಬೆಂಕಿ ಹಚ್ಚಿಸಿದ, ಸ್ವಾಮಿ ಬಲನೊಡನೆ ಹಾರಲಕ್ಕೆ ಉದಕ ಚಿಮ್ಮಿ ಅಗ್ನಿ ಶಾಂತವಾಯಿತು; ಜರಾಸಂಧ ಹೊಡಿಸಿಕೊಂಡು ಹೋದ. ಸ್ವಾಮಿ ದಮಘೋಷನ ಕೂಡಿ ಕರವೀರಕ್ಕೆ ಬರಲು, ಸೃಗಾಲ ವಾಸುದೇವನ ಕಡಿದು ಅವನ ಮಗನಿಗಭಿಷೇಕ ಮಾಡಿದ;

---

465. ಬಾಲಲೀಲೆ, 860 (ಅಮೂಲ).

466. ಬಾಲಲೀಲೆಯ ಕಥಾಂತರ ಪಲ್ಲ.

ಮಣಿಭದ್ರನೇ ದಮಘೋಷನ ಮಗ ಶಕ್ರನಾಗಿದ್ದಾನೆ.[467]

17 — ಕೃಷ್ಣ ದಿಗ್ವಿಜಯ. ರುಕ್ಮಿ ರುಕ್ಮಿಣೀನ್ನ ದಮಘೋಷನ ಇನ್ನೊಬ್ಬ ಮಗ ಶಿಶುಪಾಲಗೆ ಕೊಡಬೇಕೆಂದು ಸ್ವಯಂವರ ಆರಂಭಿಸಿದ. ಸ್ವಾಮಿ ಭೀಷ್ಮಕನ ಎದುರಿಸಿ ವಿಶ್ವರೂಪದೋರಿದ. ಸಾಲ್ವ ಕಾಲಯವನನ ಕರೆತಂದ. ಯವನ ಮುಚುಕುಂದನಿಂದ ಭಸ್ಮ ಆದ. ರುಕ್ಮಿಣಿ 'ಸಿಂಹನ ಆಹಾರಕ್ಕೆ ನರಿ ಸುತ್ತುಗಟ್ಟೀವೆ,[468] ಅಂಬಿಕಾ ಗುಡಿಗೆ ಬರತೀನಿ, ಕೊಂಡು ಹೋಗಬೇಕು' ಎಂದು ಬರೆದು ವಿಪ್ರನ ಕೈಯ್ಯ ಕಳಿಸಲಿಕ್ಕೆ, ಸ್ವಾಮಿ ರಥ ಏರಿ ಬಂದು ಕೊಂಡು ಹೋಗಿ ಲಗ್ನ ಮಾಡಿಕೊಂಡ. ಜಾಂಬವತಿ ಸತ್ಯಭಾಮಾನ್ನ ಮದುವಿ ಮಾಡಿಕೊಂಡ. ರುಕ್ಮಿಣಿ ಸತ್ಯಭಾಮೇರು ಶ್ರೀಭೂ ಅವತಾರರು. ಸಾಲ್ವನ ಮಕ್ಕಳು ಹಂಸಡಿಭಕರು ರಾಜಸೂಯ ಕಪ್ಪ ಕೇಳಲು, ಯುದ್ಧ ಕಪ್ಪ ಕೊಡತೇನೆಂತ ಹೇಳಿದ; ಹಂಸ ಓಡಿ ಯಮುನಾದೊಳಗೆ ಬಿದ್ದ, ಡಿಭಕ ನಾಲಿಗಿ ಕಿತ್ತುಕೊಂಡು ಸತ್ತ.[469]

18 — ಪಾಂಡವ ದಿಗ್ವಿಜಯ. ಭೀಮ ಬುದ್ಧಿ ಬಲದಿಂದ ಸಕಲಾ ತಿಳಿಯುವಂಥಾತನಾಗಿ ಅಸ್ತ್ರವಿದ್ಯಾ ಉಪಾಸನಿ– ಕಾಮ್ಯಕರ್ಮ– ವಿದ್ಯೋಪಜೀವನ ಮಾಡಲಿಲ್ಲ; ಅದಕ್ಕಾಗಿ ನಹುಷ, ಯಕ್ಷರ ಪ್ರಶ್ನಕ್ಕೆ ಉತ್ತರ ಹೇಳಲಿಲ್ಲ; ಧರ್ಮಾದಿಗಳ ಮರ್ಯಾದಿ ಸ್ಥಾಪನ ಮಾಡಬೇಕಾಗಿ ಅವರಲ್ಲಿದ್ದ ಭಗವಂತನಿಗೆ ವಂದನ ಮಾಡಿದ ಅರ್ಜುನ ಭಕ್ತ, ಶುದ್ಧ ಭಾಗವತ ಧರ್ಮದ ವಾಯು ದೇವರು (ವೈಷ್ಣವ ಅಧ್ಯಾಯ 21ರ ಆದಿ); ಅವರ ಪಕ್ಷ ವಹಿಸಿದರು ದೇವ– ದೇವತೆಗಳು. ಬ್ರಹ್ಮನೆದುರು ವಿಲಾಸದೋರಿ ಶಾಪವಾದ ಶಚೀ ಶ್ಯಾಮಲಾ ಉಷಾ ಪಾರ್ವತಿ ಇವರು ಭಾರತೀ ದೇವಿಯನ್ನು ಕೂಡಿ ವಿಪ್ರಕನ್ಯಾ– ನಳನಂದಿನಿ– ಇಂದ್ರಸೇನಾ ಎಂಬ 3 ಜನ್ಮವೆತ್ತಿದರು. ಭಾರತೀ ಶಿವಾಂತರ್ಯಾಮಿ ನಾರಾಯಣನನ್ನು ಮಿಕ್ಕವರು ಶಿವನನ್ನು ಕುರಿತು ತಪ ಮಾಡಿ 'ನಿಮ್ಮ ನಿಮ್ಮ ಪತಿ ಪ್ರಾಪ್ತನಾಗಲಿ' ಎಂಬ ವರ ಪಡೆದರು. ಆದರೆ 5 ಮಂದಿ ಎಂಬ

---

467. ಈ ಅಧ್ಯಾಯದ ಕಥೆ ಬಾಲಲೀಲೆ ಉ.41–60ರಲ್ಲಿದೆ.

468. ಇದು ಭಾಗವತ, ಬಾಲಲೀಲೆ ಉ.143ರ ದೃಷ್ಟಾಂತ.

469. ಈ ಅಧ್ಯಾಯದ ಕಥೆ ಬಾಲಲೀಲೆ ಉ.57–205, 324–25, 429ರಲ್ಲಿದೆ.

ಪರಿಜ್ಞಾನವಿಲ್ಲದೆ ಒಬ್ಬಳಿಗೆ 5 ಮಂದಿ ಗಂಡರೆಂದು ತಿಳಕೊಂಡರು. ಇಂದ್ರ ಶಿವನನ್ನು ದುರ್ಮತಿ ಎನ್ನಲು 'ನೀನು ಈಕೆ ಗಂಡನಾಗು, ನನ್ನ ದ್ರೋಹ ದೆಸೆಯಿಂದ ಬಂದ ದೇವತೆಗಳು ಈ ಪರ್ವತದ ಅಧೋಭಾಗದಲ್ಲಿದ್ದಾರೆ' ಎಂತ ಆಡಿಸಿಕೊಂಡು ಪರ್ವತ ಕಿತ್ತಿದ, ಪಾಂಡುವು ಮೊದಲಾದವರು ಅವತಾರ ಆಲೋಚನೆ ಮಾಡುತ್ತಿದ್ದರು. ದ್ರೋಹ ಮಾಡಿದ್ದಾರೆಂದು ಹುಸಿ ಆಡಿ, ಬ್ರಹ್ಮನ ವಿಚಾರಿಸದೆ ಪತಿ ಸಂಬಂಧವಾಗಲು ಪರವಿತ್ತನಾಗಿ 'ನರನಿಂದ ಪರಾಭವ ಐದು, ನಿನ್ನ ಸ್ತ್ರೀಯಂತುವನ್ನು ಐದಬಾಕ್ಕಡ' ಎಂದು ಶಪಿತನಾದ ಶಿವ ಅಶ್ವತ್ಥಾಮನಾದ. ಧರ್ಮರಾಜನಾದ, ಭೀಮ ಯುವರಾಜನಾದ.

19— ದ್ರೌಪದೀ ಸ್ವಯಂವರ.[470] ಹಿಡಿಂಬಿ ಇಂದ್ರಲೋಕದ ಶ್ರೀದೇವಿ, ವಿಲಾಸ ದೋರಿ ಶಚೀ ಭಾರತೀ ಶಾಪ ಉಶ್ಶಾಪ ಹೊಂದಿ ರಾಕ್ಷಸಿಯಾದರೂ ವೇದವ್ಯಾಸರಾಜ್ಞೆಯಿಂದ ಭೀಮ ಕೈ ಹಿಡಿದ; ನೈರುತ್ಯಾಧಿಪ ರುದ್ರಾವೇಶದಿಂದ ಘಟೋತ್ಕಚನಾದ (ಕೂದಲು ಬೆಳೆದ ಕಾರಣ). ಏಕಚಕ್ರದ ಬ್ರಾಹ್ಮಣನಲ್ಲಿಯ ಪ್ರಲಾಪ:[471] 'ದೇಶಾಂತರ ಹೋಗುವ ಎಂದರೂ ನೀನು ಕೇಳಲಿಲ್ಲ, ನಾನೇ ಬಂಡಿ ಹೊಡಕೊಂಡು ಹೋದೇನು.' ಗಂಡ ಇರಲಿಕ್ಕೆ ಮೃತಿ ಐದೋಣ ಮಹಾಪುಣ್ಯ, ನಾನೇ ಹೋದೇನು.' 'ನಾನು ಕನ್ಯೆ, ಹೆಣ್ಣುಹುಡುಗರು ಉದಾಸೀನ ಮಾಡತಾರೆ, ವಿವಾಹ ಮಾಡಲಾಗಿ ಬದುಕು ತೊಳಕೊಂಡು ಹೋಗತದೆ, ಮುಂ ಕೂಡೋ ಸರಿಯಂತ ಪರಾಧೀನಳಾಗಿರಬೇಕು, ನನ್ನ ಕಳುಹಿಕೊಡು.' 'ಕನ್ಯಾದಾನದಿಂದ ಉಭಯ ಕುಲಕ್ಕೂ ಕೀರ್ತಿ, ನಿನ್ನ ಕೊಡೋ ಹಾಂಗೆ ಇಲ್ಲ.' 'ಏನು ಕಾರಣ ಅಳತಿದ್ದೀರಿ? ಈ ಕಡೆಯಿಂದ ರಾಕ್ಷಸನ್ನ ಕೊಲ್ಲುತೀನಿ' ಎಂದ ಕಂದ. ಕುಂತಿ '5 ಮಕ್ಕಳಿದ್ದಾರೆ, ಒಬ್ಬನ್ನ ಕೊಡ್ತೀನು' ಎನಲು 'ಬ್ರಹ್ಮಹತ್ಯಕಾರನೆನಿಸಿಕೊಳ್ಳುವಲ್ಲೆ' ಎಂದ. 'ಮಗನ ಸಾಮರ್ಥ್ಯ ನಾ ಬಲ್ಲೆ' ಎಂದು ಭೀಮಗೆ ಹೇಳಲು, ಮುಖ ಅರಳಿಸಿಕೊಂಡು ಒಯ್ಯು ಅನ್ನ ತಾ ಉಣ ಹೊಕ್ಕ, ತೋಡಿ ಮರಿ ಮಾಡಿಕೊಂಡು. ಅನಂತರ ಪರ್ವತ — ವೃಕ್ಷಾದ್ಯಗಳು ಎಡಗೈ ಒಡ್ಡಿಕೊಂಡು ಸಾವಕಾಶ ಉಂಡು, ಬಕನ ಸೀಳಿ ಬಿಟ್ಟನು. ದ್ರೌಪದೀ ಕೂಡಿಕೊಂಡು

---

470. ಬಾಲಲೀಲೆ ಉ.210— 248.

471. ಈ ದೇಸೀಯ ಸಂವಾದ ಕಥನದ ಕೆಲ ಭಾಗ ಮೂಲದಲ್ಲಿಲ್ಲ.

'ಅಮ್ಮಾ ಭಿಕ್ಷಾ ತಂದೇವು' ಎನಲು 5 ಭಾಗ ಮಾಡಿಕೊಂಡು ಉಣ್ಣಿರಿ' ಎಂದಳು. ದ್ರುಪದ 5 ಮಂದಿ ಗಂಡಂದಿರೆಂದು ಚಿಂತಿಸಲಿಕ್ಕೆ ವೇದವ್ಯಾಸ ಪ್ರತ್ಯಕ್ಷನಾಗಿ ದಿವ್ಯಚಕ್ಷು ಕೊಟ್ಟನು; ಧರ್ಮ ಶ್ಯಾಮಲಾ, ಭೀಮ– ಭಾರತೀ, ಅರ್ಜುನ– ಶಚೀ, ನಕುಲ ಸಹದೇವ– ಉಷಾ ಪಾರ್ವತೀ ಪ್ರತ್ಯೇಕ ಕಂಡು ಮದುವೆ ಮಾಡಿದ. ಮುಖ್ಯಪ್ರಾಣನಾವೇಶ ಧರ್ಮಾದಿಗಳಲ್ಲಿ– ಹೋದು; ಒಂದೇ ದೇಹ ಇದ್ದರೂ ಭೋಗ ಪ್ರತ್ಯೇಕ ಮಾಡೋಣ, ದೇವರ ಸ್ಮರಣ ಇಹೋಣ ಇವಲ್ಲ ದೇವತಾಕರ್ತವ್ಯ; ದೇವಭೋಗಕ್ಕೆ ಮನುಷ್ಯ ದೃಷ್ಟಾಂತ ಬಾರದು. ಪಾಂಡವರು ಇಂದ್ರಪ್ರಸ್ಥಕ್ಕೈದಲು, ದುರ್ಯೋಧನ– ದುಶ್ಶಾಸನ ಹಸ್ತಿನಾಪತಿಗೆ ರಾಜ– ಯುವರಾಜರೆನಿಸಿದರು.

20 — ಪಾರಿಜಾತ ಸುಭದ್ರಾಹರಣ, ಖಾಂಡವದಹನ. ಶತಧನ್ವನ ಕೊಂದು ಸ್ಯಮಂತಕ ಅಕ್ರೂರಗಿತ್ತು, ಅಷ್ಟ ಮಹಿಷಿಯರ ವರಿಸಿದ ಕೃಷ್ಣ, ಪಾರಿಜಾತ ತರುವಾಗ ನರಕದಲ್ಲಿದ್ದ 16,100 ಕನ್ನಿಕೆಯರನ್ನ ಮದುವೆ ಆಗಿ, ಸಕಲರಿಗೂ ಭೋಗ ಕೊಟ್ಟ. ನಾರದ ನೋಡ ಬಂದು ಕೃಷ್ಣನ ಒಂದೊಂದು ರೂಪ ಕಂಡು ಆಶ್ಚರ್ಯಪಟ್ಟ, ಪಾಂಡವರಿಗೆ 'ವರ್ಷ ಒಬ್ಬರು ಭೋಗ ಮಾಡಿರಿ, ವರ್ಷದೊಳಗೆ ಭೋಗ ಕಂಡರೆ ತೀರ್ಥಯಾತ್ರಿ ಬನ್ನಿ' ಎಂದ. ಅರ್ಜುನ ಧರ್ಮಸ್ತ್ರೀಯುಕ್ತ ಗೃಹದಲ್ಲಿಯ ಖಡ್ಗ ಕೊಂಡು ಆಕಳ ಬಿಡಿಸಿಕೊಂಡು ಬಂದು, ಯಾತ್ರಿಗೆ ಹೋಗಿ ಸುಭದ್ರಾನ್ನ ಕೊಂಡು ಹೋದ. ಕೃಷ್ಣಾರ್ಜುನರು ಖಾಂಡವಕ್ಕೆ ಹೋದಾಗ ಜೀರ್ಣ ಉಪದ್ರವದ ಅಗ್ನಿ ಬಂದು ದಹಿಸಿದ.[472]

21 — ಸಭಾಪರ್ವ (ಪಾಂಡವರ ವನಗಮನ). ಗ್ರಹಣಾರ್ಥ ಕುರುಕ್ಷೇತ್ರದಲ್ಲಿ ವಸುದೇವನಿಂದ ಯಜ್ಞ ಮಾಡಿಸಿ, ಕೃಷ್ಣಅಶ್ವಮೇಧ ಮಾಡುವಲ್ಲಿ ಅರ್ಜುನ– ಬ್ರಾಹ್ಮಣನನ್ನು ರಥದಲ್ಲಿ ಕೂಡ್ರಿಸಿಕೊಂಡು ಅನಂತಾಸನಕ್ಕೆ ಹೋಗಿ ಪ್ರಾರಬ್ಧಕರ್ಮದಿಂದ ಅದೃಶ್ಯರಾಗಿದ್ದ ಬ್ರಾಹ್ಮಣನ ಮಕ್ಕಳನ್ನು ಕೊಂಡು ಬಂದ. ಅವಭೃತಕ್ಕೆ ಪ್ರಭಾಸಕ್ಕೆ ಹೋಗಿ ಬರುತ್ತ ದಂತವಕ್ರನ ಸಂಹರಿಸಿದ. ನಾರದನು 'ಪಾಂಡು ಯಮಲೋಕದಲ್ಲಿದ್ದಾನೆ, ರಾಜಸೂಯ ಮಾಡು' ಎನಲು ಧರ್ಮ ಕೃಷ್ಣನ್ನ ಕರೆಸಿದ. 'ಇದರಿಂದ ಋಜುಗಣದವರಿಗೆ ಬ್ರಹ್ಮಪದವಿ ಬರತದೆ' ಎಂದ ಕೃಷ್ಣ.

---

472. ಬಾಲಲೀಲೆ, ಉ.206–378ರಲ್ಲಿ ಈ ಅಧ್ಯಾಯದ ಭಾಗವಿದೆ.

ಆ ಶೋಧನ ಭೀಮ ಮಾಡಬೇಕಾಗಿ 'ಜರಾಸಂಧ ಬದುಕಿರೋಪರ್ಯಂತ ಯಾಗ ಮಾಡಲಾರಿ, ಅವನ ಕೊಲ್ಲೋಣ ವೈಷ್ಣವೋತ್ತಮನ ವ್ಯತಿರಿಕ್ತ ಆಗದು. ನನ್ನ ಭಕ್ತಾಗ್ರೇಸರ ಭೀಮನ ಕೈಯಿಂದ ಕೊಲ್ಲಿಸಬೇಕು' ಎಂದು ಭೀಮಾರ್ಜುನರ ಕೂಡಿ ಹೋದ. ಲಿಂಗಾಕಾರ ಪರ್ವತ ಕೋಟೆ– ಭೇರಿ ಒಡದು, ಅಂಗಡಿ ಮುಂಗಡಿ[473] ಲೂಟಿ ಮಾಡಿ, ಪುರುಷ ಪಶು ಮಾಡಲಿದ್ದವನ ಕರೆದು ಭೀಮ ಸೀಳಿಬಿಟ್ಟನು. ಭಾವಿಬ್ರಹ್ಮನಾಗಿ ಅಸಾಧಾರಣ ಫಲಪಾತ್ರನಾದ, ಬ್ರಹ್ಮನಂತೆ 'ಸರ್ವಜಿತು' ಎಂತ ಆದ. ವೇದವ್ಯಾಸ–ಪರಶುರಾಮ ಯಜ್ಞ ಮಾಡಿಸಿದರು. ಅಗ್ರಪೂಜಿ ಯಲ್ಲಿ ಶಿಶುಪಾಲನ ಶಿರಚ್ಛೇದವಾಗಲು, ಅಸುರ ತಮ್ಮನ್ನು ಐತಿ, ಜಯ ಸ್ವಾಮಿಯನ್ನು ಹೊಕ್ಕ. ಆಹ್ವಾನಕ್ಕೆ ಧರ್ಮ ಹಸ್ತಿನಾವತಿಗೆ ಹೋದ, ಸಮಸ್ತರ ಭೆಟ್ಟಿ[473] ಕೊಂಡ, ಸಕಲವನ್ನೂ ಪಣಕ್ಕೆ ಇಟ್ಟು ಸೋತ. ಪಾಂಡವರು ವನಕ್ಕೆ ತೆರಳಿದರೂ ಭಕ್ತಿ ಬಿಡದಿದ್ದರು.

22 — ಅರಣ್ಯಪರ್ವ, ಅರಣೀಪ್ರಾಪ್ತಿ. ದುರ್ಯೋಧನ ತೊಡಿ ಚಪ್ಪರಿಸಿ 'ಭೀಮ ತೊಡಿ ಸೀಳಲಿ' ಎಂದು ಶಪಿತನಾದ. ಭೀಮ ಅಣ್ಣನಿಗೆ 'ದೊಂಬ ಏಕಾಂತದಲ್ಲಿ ಆಡಿದರೆ ಏನು ಕೊಡತಾರೆ, ರಾಜರಲ್ಲಿ ಆಡಿದರೆ ಫಲವಾಗತದೆ; ಹಾಂಗೆ ಕರ್ಮ ಸ್ವಾಮಿಗೆ ಅರ್ಪಿಸಿದರೆ ಸುಖ ವೃದ್ಧಿ ಆಗತದೆ. ಜೂಜಿನಲ್ಲಿ ಕೊಟ್ಟದ್ದು ಬಾಯಿ ಮ್ಯಾಲೆ ಹೊಡದು ಕಸಗೋಬಹುದು. ವೈರಿಗಳ ತಲೀಮ್ಯಾಲೆ ಕಾಲು ಕೊಟ್ಟು ಸಾಮ್ರಾಜ್ಯ ಆಳಿ ಸಜ್ಜನರಿಗೆ ಸುಖ ಕೊಡು'[474] ಎಂದ. ಅರ್ಜುನ ಪಾಶುಪತಾಸ್ತ್ರ–ಊರ್ವಶೀ ಶಾಪ ಪಡೆದ. ಕೃಷ್ಣ ಲೋಕ ಮೋಹನಾರ್ಥ ಕೈಲಾಸಕ್ಕೆ ಹೋಗಿ ತಪ ಮಾಡಿ ಮಹದೇವನ ವರದಿಂದ ಪ್ರದ್ಯುಮ್ನನನ್ನ ಪಡದನು.[475] ವೈದರ್ಭೀ ಕೂಡ ಪ್ರೇಮಕಲಹಮಾಡಿದನು.[476] ಬಲರಾಮ ಸಾಂಬನ್ನ ಬಿಡು ಎನಲಿಕ್ಕೆ ದುರ್ಯೋಧನ 'ಪಾದರಕ್ಷಿ ತಲೀಮ್ಯಾಲೆ ಏರಿಧಾಂಗಾಯಿತು'[473] ಎಂದ; ನೇಗಿಲಿನಿಂದ ಎಳೆಯಲು ಲಕ್ಷಣಾ ಮದುವಿ ಮಾಡಿಕೊಟ್ಟ. ಉಷಾ ಅನಿರುದ್ಧನ್ನ ಭೋಗ ಮಾಡಲಿಕ್ಕೆ ಬಾಣಾಸುರ ಸೆರೆಮನಿಯೊಳಗೆ

---

473. ಪ್ರಾಸ ಗಮನೀಯ.

474. ಅಮೂಲ್ಯ ದೃಷ್ಟಾಂತ, ದೇಸಿ ನುಡಿ ಗಮನೀಯ.

475. ಹರಿಸರ್ವೋತ್ತಮಸಾರ 14.

476. ಬಾಲಲೀಲೆ ಉ.352–67.

ಹಾಕಿದ. ಬಲರಾಮನ ಮಾತ್ಕಲೆ ಬೆಂಬಟು ಬೆಂಬಟಿ ಬೆಲ್ಲಲಿಕ್ಕೆ ಜ್ವರ ಬಂದು ಸ್ವಾಮಿಯ ಸ್ಪರ್ಶವಾಗಲಿಕ್ಕೆ ಸ್ವಸ್ಥನಾದ. ಭೃತ್ಯ 'ನಾವೆಲ್ಲ ಮೂಗು ಪೋಣಿಸಿದ ಎತ್ತಿನಂತೆ[474] ಸ್ವಾಮಿಯ ಅಧೀನ' ಎಂದು ಸ್ವಾಮಿಯ ಬಾಣನ ಸೋಲಿಸಿ ಉಷಾನಿರುದ್ಧರನ್ನು ಕೂಡಿ ಬಂದ. ಧರ್ಮಾದಿಗಳು ತೀರ್ಥಯಾತ್ರೆ ಮಾಡಿ ಪ್ರಭಾಸಕ್ಕೆ ಬಂದು ಫಲ ಕೃಷ್ಣಾರ್ಪಿಸಿದರು. ಗಂಧಮಾದನದಲ್ಲಿ ಭೀಮ ಸೌಗಂಧಿಕಾ ಪುಷ್ಪ ತರುವಲ್ಲಿ ಹನುಮಂತ ಬಾಲ ಹಾಕಿ ಕುಳಿತಾನೆ. ಋಷಿಗಳಿಗೆ ಮೂಲಶಕ್ತಿ ಬರತದೆ; ಆದರೂ ಸ್ವರೂಪ ಪ್ರಕಟ ಮಾಡದೆ, ಯುಗಾನುಸಾರ ಜ್ಞಾನ ಕೊರತಿ ಮಾಡಿಕೊಂಡು ವರ್ತಿಸುತಾರೆ. ಹನುಮಂತ ಅರ್ಜುನ ಧ್ವಜಸ್ತಂಭದಲ್ಲಿರಬೇಕೆಂದು ಅಪ್ಪಣಿ ಕೊಂಡ. ನಹುಷ ಅಜಗರನಾಗಿ ಭೀಮನನ್ನು ಹಿಡದ. ಆತ ವಿದ್ಯೋಪಜೀವನ ಮಾಡಿ, ಅಣ್ಣ ಬಂದು ಉತ್ತರಿಸಲು ನಹುಷ ಉದ್ಧಾರ ಹೊಂದಿದ. ಪರ್ಣಶಾಲೆಯೊಳಗೆ ಮುಖಕಾಂತಿಯಿಂದ ದಿಕ್ಕುಗಳ ಬೆಳಕು ಮಾಡುತ ನಿಂತ[474] ದ್ರೌಪದಿಯನ್ನೊಯ್ದು ಜಯದ್ರಥನೂ ಪಂಚಚೂಡನಾದ. ದುರ್ಯೋಧನನ್ನು ಚಿತ್ರಸೇನ ಹಿಡಕೊಂಡು ಹೋಗಲು ಪಾಂಡವರೇ ಬಿಡಿಸಿ ತಂದರು. ಅರಣಿ ತರಹೋದ ತಮ್ಮಂದಿರು ಮೂರ್ಛಿತರಾಗಿರಲು, ಧರ್ಮ ಯಕ್ಷಪ್ರಶ್ನೆಗುತ್ತರಿಸಿ ಎಬ್ಬಿಸಿ ತಂದ.

23 — ವಿರಾಟ ಪರ್ವ (ಅಜ್ಞಾತವಾಸ). ಜೀಮೂತಮಲ್ಲ ಬಲ್ಲವನ ಪೆಟ್ಟಿಗೆ ಸತ್ತುಬಿದ್ದ. ಭೀಮ ಕೀಚಕರ ಕೊಂದು ಕೃಷ್ಣಾರ್ಪಣ ಮಾಡಿದ. ದಕ್ಷಿಣೋತ್ತರ ಗೋಗ್ರಹಣ ಗೆದ್ದು ಅಜ್ಞಾತ ಮುಗಿಯಿತು. ವಿಜಯದಶಮಿಯ ಶಮೀವೃಕ್ಷದಲ್ಲಿ ವಿಜಯಾಂಕುರವಾಗಿ ಧರ್ಮ ಸಿಂಹಾಸನವೇರಿ, ಉತ್ತರಾಭಿಮನ್ಯು ವಿವಾಹ ನೆರವೇರಿತು.

24 — ಉದ್ಯೋಗ ನಿರ್ಣಯ. ದ್ರುಪದ ಪುರೋಹಿತನ ಕಳಿಸಿದರೂ ದುರ್ಯೋಧನ ಲಕ್ಷಿಸಲಿಲ್ಲ. ಅವನೂ ಅರ್ಜುನನೂ ಕೃಷ್ಣನಲ್ಲಿ ಸಹಾಯ ಬೇಡಿದರು. ಸಾತ್ಯಕಿ 'ಗಾರ್ದಭಕ್ಕೆ ದೊಣ್ಣೆ ಹೊಡದರೆ ಮಾರ್ಗಕ್ಕೆ ಬರತದೆ',[477] ದುರ್ಯೋಧನ ಗಾರ್ದಭ' ಎಂದ. ಬಲರಾಮ ಯಾತ್ರಿಗೆ ಹೋದ. ಮೂಲ ಪುರುಷನೆಂದು ಧೃತರಾಷ್ಟ್ರನ ಪಕ್ಷದಲ್ಲಿದ್ದರು ಭೀಷ್ಮಾದಿಗಳು. ಸಂಜಯನಿಗೆ 'ಪಾಪಿಗಳ ಕೊಂದದ್ದು ಧರ್ಮಸಾಧನವಾಗತಾನೆ'[477] ಎಂದ ಧರ್ಮ. ಧೃತರಾಷ್ಟ್ರ ಜ್ಞಾನ ಕೇಳಲು 'ದೋಷ ಮಾಡಿ ಜ್ಞಾನದಿಂದ ಪರಿಹರಿಸಲಿಕ್ಕೆ ವಶವಲ್ಲ'[477] ಎಂದ ವಿದುರ.

---

477. ಅಮೂಲ ಸೂಕ್ತಿ.

ದುರಾತ್ಮರು ಬರಿದಾಂಗೆ ಸಂಧಾನಕ್ಕೆ ಹೋದ ಕೃಷ್ಣ. 'ಬ್ರಹ್ಮಾಂಡ ಹೋಳು ಮಾಡಿ ತಾಳಬಾರನೇನು'[477] ಎಂದ ಭೀಮ. ವಿಶ್ವರೂಪ ತೋರಿದಾತ ಸಂಧಾನ ತಿದ್ದಲಾರನೇ? ಪಾಪಿಗಳ ತಪಸ್ಸಿಗೆ ಹಾಕಬೇಕಾಗಿ ಬಾಹ್ಯ ಬುದ್ಧಿ ಹೇಳೋನು, ಅಂತರಂಗ ಪ್ರೇರಿಸತಿದ್ದಿಲ್ಲ.

25 — ಭೀಷ್ಮಪರ್ವ. ಮಾಲಿನ 17 ಶ್ಲೋಕಗಳ ಗೀತೋಪದೇಶ — 'ದುಷ್ಟರ ಕೊಲ್ಲೋದೆ ನರಧರ್ಮ, ಕ್ಷತ್ರಿಯ ತನ್ನ ಕರ್ಮ ಮಾಡದಿದ್ದರೆ ಅಧೋಗತಿ.' ಅರ್ಜುನ ಯುದ್ಧಕ್ಕೆ ನಿಂತ. ಭೀಷ್ಮ ಚಕ್ರ ಹಿಡಿಸಿ ಶರಪಂಜರ ಹಿಡಿದ.

26 — ದ್ರೋಣಪರ್ವ. 'ಜಯದ್ರಥನ ಕೊಂದೇನು' ಎಂತ ಅರ್ಜುನ ಪ್ರತಿಜ್ಞೆ ಮಾಡಿದ. ಘಟೋತ್ಕಚ ಸತ್ತ, ಪಾರ್ಥ ಕೇಳಿ ಕೇಶವ ಕುಣಿದಾಡತಿಹ; 'ಯಾಕೆ' ಎಂದಲ್ಲ 'ಸಕಲ ಲಾಭದೊಳಗೆ ಬದುಕೋಣವೇ ದೊಡ್ಡ ಲಾಭ,[477] ನೀ ಬದುಕಿದೆಂದು ನಾ ಕುಣೀನಿ' ಅಂದ. 'ಅಶ್ವತ್ಥಾಮನು ಸತ್ತದ್ದು ಖರೇವೆ?' ಎಂದು ದ್ರೋಣ ಕೇಳಲು 'ಕುಂಜರ' ಎಂದು ಕೊಂದ ಧರ್ಮ. ಧೃಷ್ಟದ್ಯುಮ್ನ ಶಿರಚ್ಛೇದನ ಮಾಡಿದ.

27 — ಕರ್ಣಪರ್ವ. ನರನಾರಾಯಣರು ಬರಲು ಧರ್ಮ 'ಕರ್ಣನ ಕೊಂದಿಲ್ಲವೇ, ಗಾಂಡೀವ ಬಿಸುಡು' ಎಂದ. ಅರ್ಜುನ ಹರಿದು ಹೋಗಲು, ಕೃಷ್ಣ 'ಸಜ್ಜನರಿಗೆ ಹಿತವಾಗೋಂಥ ಪ್ರತಿಜ್ಞೆ ಮಾಡಬೇಕು, ಸತ್ಯವಾಡಬೇಕು, ಧರ್ಮ ಮಾಡಬೇಕು. ಹಿರೇರ ನಿಂದಾ ಮಾಡಿದರೆ ವಧಾಫಲ; ಆತ್ಮಪ್ರಶಂಸೆಗೆ ಆತ್ಮಘಾತ ಬರತದೆ — ಎರಡೂ ಅನರ್ಥ ಸಾಧನ; ದೇಹ ನಾಶ ಮಹಾಪಾಪ' ಎಂದ.[478] ಧರ್ಮ ಹೊಗಳಿದ. ಭೀಮ ದುಶ್ಶಾಸನನ ರಕ್ತ ಬೊಗಸೀಲಿ ತುಟಿಗೆ ತೋರಿಸಿ ಚೆಲ್ಲಿತ ಕುಡಿದನೆಂಬೋ ಹಾಂಗೆ ತೋರಿಸ್ತಿಹ; ಯುದ್ಧಾಗ್ನಿಗವನ ಪಶು ಮಾಡಿ ಗದೀಪೆಟ್ಟಿನ ನಾಶ, ರಕ್ತವೆಂಬೋ ನೋವರನ ಮಾಡಿ ನರಸಿಂಹಗರ್ಜಿಸಿದ.[479] ಕರ್ಣಾರ್ಜುನ ಕಾಳಗದಲ್ಲಿ

---

478. ಮಾಲ 119,20,28,30.

479. ಮಾಲ 141; 'ರಕ್ತ ರಕ್ತವದನಂ — ಅಕ್ಲಿಷ್ಟಂ' ಎಂಬ ರನ್ನನ ನುಡಿಗಿದು ಭಿನ್ನ; 'ಭೀಮರಾಯನ ನಂಬಿ' ಪದವೂ 'ಕುಡಿದಂತೆ ತೋರ್ದ' ಎಂದಿದೆ. (ಗೋಪಾಲದಾಸರೂ 'ಕುಡಿದಂತೆ ತೋರಿಸಿ' ಎಂದಿದ್ದಾರೆ).

'ಸುಮ್ಮಗೆ ನೋಡಿ, ವಿವಾದ ಮಾಡಬ್ಯಾಡಿ' ಎಂದ ಬ್ರಹ್ಮ. ಭೂಮಿ ಕರ್ಣನ ರಥದ ಗಾಲಿ ನುಂಗಲು ಕರ್ಣನ ಕೊಂದ ಅರ್ಜುನ ಅಹಂಕರಿಸಿದ; ಕೃಷ್ಣ 'ನಾಗಬಾಣ ಬಾಹಾಗ ರಥ ತಗ್ಗಿಸಿದ ಕಾರಣ ಉಳಿದಿ, ಕುಂತಿ ಬೇಡಿದ್ದಳು, ಇಂದ್ರ ಕವಚ ಕುಂಡಲ ಒಯ್ದ, ಪರಶುರಾಮ ಶಾಪವಿತ್ತ'[480] ಎಂದು ತಿಳಿಸಿದ.

28ನೆಯ ಅಧ್ಯಾಯದಲ್ಲಿ ಶಲ್ಯ—ಗದಾ—ಸೌಪ್ತಿಕ—ಸ್ತ್ರೀ—ಐಷಿಕ ಪರ್ವ ಸಂಗ್ರಹಿತ. ದುರ್ಯೋಧನ ದೂರ್ವಾಸ ಕೊಟ್ಟ ಮಂತ್ರ ಜಪಿಸಲು ದ್ವೈಪಾಯನ ಸರಕ್ಕೆ ಹೋದ. ಧರ್ಮನ ಮರ್ಮವಚನ ತಾಳದೆ ಹೊರಬಂದು ಭೀಮನ ಎದುರು. ಹೊಕ್ಕಳ ಕೆಳಗೆ ಹೊಡೆಯಬಾರದು. 'ದುರ್ಯೋಧನ ಕಪಟತನದಿಂದ ತಲಿ ಕೆಳಗೆ ಮಾಡಿದಾಗ ಕೊಂದು ಬಿಟ್ಯಾನು, ಪ್ರತಿಜ್ಞೆ ಮಾಡಿದ್ದಕ್ಕೆ ತೊಡಿ ಸೀಳ್ಯಾನು' ಎಂದ ಕೃಷ್ಣ; ಅದರ ನಂತರ 'ಪಾಪಿಗಳ ಧರ್ಮದಿಂದ ಕೊಂದರೆ ಪಾಪವಿಲ್ಲ'[481] ಎಂದ. 'ಕಪಟದಿಂದ ಗೆದ್ದಿರಿ' ಎಂದ ದುರ್ಯೋಧನನ ಮಾತು ಯಥಾರ್ಥವೆಂಬಂತೆ ತೋರಿಸಿ ತಮಸ್ಸಿಗೆ ಹಾಕಬೇಕಾಗಿ ದೇವತೆಗಳು ಪುಷ್ಪವೃಷ್ಟಿಗೈದರು. 'ಪಾಂಡವ ನಿರ್ನಾಮ ಮಾಡು, ಕೌರವ ಸಂತತಿ ನಡೆಯೋ ಹಾಂಗೆ ಮಾಡು' ಎಂದ ದುರ್ಯೋಧನ; ಅಶ್ವತ್ಥಾಮ ಪ್ರತಿವಿಂಧ್ಯಾದಿಗಳ ತಲೀ ತೋರಿಸಲು ಪ್ರಾಣ ಬಿಟ್ಟ. ಅಶ್ವತ್ಥಾಮ ಬ್ರಹ್ಮಾಸ್ತ್ರ ಬಿಡಲು 'ಬ್ರಾಹ್ಮಣನಂತ ನಂಬಬ್ಯಾಡಿ, ನನ್ನ ಅಸ್ತ್ರ ಬೇಡಿ ಪಾಪ್ಯಮನಸ್ಸಿನಲ್ಲಿ ವ್ಯಭಿಚಾರ ಮಾಡ್ಯಾನೆ, ಉಪಸಂಹಾರಕ್ಕೆ ಶಕ್ತನಲ್ಲ' ಎಂದು ಕೃಷ್ಣ ಅರ್ಜುನ ಸಂದ ಪ್ರತಿಬ್ರಹ್ಮಾಸ್ತ್ರ ಬಿಡಿಸಿದ. ವ್ಯಾಸಾಜ್ಞೆಯಂತೆ ಅರ್ಜುನ ಉಪಸಂಹರಿಸಿದ, ಅಶ್ವತ್ಥಾಮ ಶಕ್ತನಾಗಲಿಲ್ಲ. ಪ್ರಾಯಶ್ಚಿತ್ತಾರ್ಥ ತಲೀ ರತ್ನ ಭೀಮಗಿತ್ತ, 'ಬ್ರಹ್ಮಾಸ್ತ್ರ ಬಾಧೆ ಕೊಡದಿರಲಿ' ಎಂದರೂ 'ಉತ್ತರಾಗರ್ಭನಾಶಕ್ಕೆ ಬಿಡಸ್ತೀನಿ' ಅನಲಿಕ್ಕೆ ಕೃಷ್ಣ 'ನಾ ಕೆಡಸ್ತೀನಿ, ಪಾಂಡವ ಸಂತಾನ ಇರೋತನಕ ಅಡವಿ ಮಡವಿ ತಿರುಗು' ಅಂದ. ಧೃತರಾಷ್ಟ್ರ ಉಕ್ಕಿನ ಭೀಮನ ಅಪ್ಪಿ ಪುಡಿ ಆಗಲು ಕೃಷ್ಣ 'ಪಾಪ ಜಯಸೋದಿಲ್ಲ,[480] ದುಷ್ಕರ್ಮ ಇರಲಿಕ್ಕೆ ಕೋಪ ನಿರರ್ಥಕ' ಎಂದ. ಗಾಂಧಾರಿಗೆ ಭೀಮ 'ಕಪಟದಿಂದಲೇ ಕಪಟಿಗಳನ್ನ ಕೊಲ್ಲಬೇಕು, ಮುಯ್ಯ ಬರತದ'[482] ಎಂದ. ಅವಳ ತಪೋಹಾನಿಗೆ ಸ್ವಾಮಿ ದಿವ್ಯ ಚಕ್ಷು ಕೊಟ್ಟ; ಮಕ್ಕಳ ಪ್ರೇತದೇಹ ಕಂಡು 'ಯಾದವ ಕುಲ ಅನ್ಯೋನ್ಯ ಯುದ್ಧದಿಂದ

---

480. ಅಮೂಲ.
481. ಮೂಲ 89.
482. ಮೂಲ 216 (ಶೃಂಗಿ ಶ್ರುತಿ).

ನಾಶವಾಗಲಿ' ಎಂದಳು. ಯಾದವರಿಂದ ಪಶು ಕಲೀ ವ್ಯಾಪಾರ ನಡೆದಾಗಿ ಶಾಪ ಬರಿಸಿದ. ಕುಂತಿ 'ಕರ್ಣನ ಹಡದೀನಿ, ಪಿಂಡಪ್ರದಾನ ಮಾಡರಿ' ಅನಲಿಕ್ಕೆ ಧರ್ಮ 'ಸ್ತ್ರೀಯರಿಗೆ ಗೌಪ್ಯ ನಿಂದರಬ್ಯಾಡ' ಎಂದ.[483]

29 — ಶಾಂತಿಪರ್ವ (ಧರ್ಮನಿರ್ಣಯ). ಧರ್ಮ ಬಾಂಧವರ ಕೊಂದೆವೆಂದು ಸಮಾಧಾನ ಆಗ. ಕೃಷ್ಣ ಭೀಷ್ಮನಲ್ಲಿ ನಿಂತು ನೀತಿ ಹೇಳಿಸಿದ. ರಾಜಧರ್ಮ— ದಾನಧರ್ಮ— ಆಪದ್ಧರ್ಮ— ಮೋಕ್ಷಧರ್ಮ ಹೇಳತಾನೆ. ವರ್ಣಾಶ್ರಮ ಧರ್ಮಗಳಲ್ಲಿ ವೈಶ್ಯವೃತ್ತಿ ಗೋರಕ್ಷಣೆ— ಕೃಷಿ ಬಡ್ಡಿ ವ್ಯವಹಾರ ಮಾಡಬೇಕು, 1 ವರಹ[484] 85 ಪಾಲು ಮಾಡಿದರೆ 1 ಪಾಲು ತಿಂಗಳ ಬಡ್ಡಿ ಕೊಟಬೇಕು. ಅಸಜ್ಜನರ ಕೊಂದದ್ದರಿಂದ ನಿನಗೆ ಪುಣ್ಯ ಬಂತು, ಪಾಪ ಲೇಪವಿಲ್ಲ. 'ಧರ್ಮಾರ್ಥ ಕಾಮಗಳಲ್ಲಿ ದಾವದು ದೊಡ್ಡದೆ'ನ್ನಲು ವಿದುರ ಹೇಳಿದ 'ಧರ್ಮ ದೊಡ್ಡದು, ಅರ್ಥ ಮಧ್ಯಮ, ಕಾಮ ನೀಚ,' ಧರ್ಮ ಹೇಳಿದ 'ಮೋಕ್ಷ ದೊಡ್ಡದು'.

30 — ಅಶ್ವಮೇಧಿಕ. ಭೀಮ ಯುವರಾಜನಾಗಿ, ಕಲಿಯುಗ ಕೃತಕಿಂತ ಹೆಚ್ಚಾಗಿ ಹೋದದು.[485] ಧರ್ಮ ಇಳೆಗೆ 'ಪಾಂಡವ ಸಂತಾನ ಕ್ಷೇಮಕನ ಪರ್ಯಂತ ಕಲಿಯುಗದಲ್ಲಿ ಕಲೀವ್ಯಾಪಾರ ಬ್ಯಾಡ' ಎಂದ. ಕೃಷ್ಣ ಶಿಷ್ಯಬಂದ ಉದಂಕಗೆ ವಿಶ್ವರೂಪ ತೋರಿ ಇಂದ್ರನಿಂದ ಅಮೃತ ಕಳಿಸಿದ; ಚಂಡಾಲವೇಷದಲ್ಲಿ ಮೂತ್ರ ಕೊಂಡು ಬಂದನಾಗಿ ದಕ್ಕದೆ, ಕೃಷ್ಣನಿಂದ ನೀರು ಭೂಮಿಯಲ್ಲಿ ಕುಡಿಯಬೇಕೆಂದಾಗ ಮುಗಿಲದ ವರ ಪಡೆದ.[486] ಅಶ್ವತ್ಥಾಮನ ಬ್ರಹ್ಮಾಸ್ತ್ರ ಬಡದು ಬಿದ್ದ ಪರೀಕ್ಷಿತನ ಬದುಕಿಸಿದ ಕೃಷ್ಣ; ಉಲೂಪಿ ಸ್ವರ್ಗಕ್ಕೆ ಹೋಗಿ 'ಅರ್ಜುನ ಪರವೀರರ ಕೈಯ ಸೋಲಲಿ' ಎಂದ ದೇವತೆಗಳಿಗೆ 'ಮಗನಿಂದ ಸೋಲೋ ಹಾಂಗಾಗಲೆಂ'ದು ಬೇಡಿದಳು. ಅಶ್ವಮೇಧ ಯಜ್ಞದೊಳಗೆ ಅರಸು, ಜೀವರೊಳಗೆ ಭೀಮ ದೊಡ್ಡಾತ; ಭಾವಿ ಬ್ರಹ್ಮನ ಯಜ್ಞ ಸದೃಶದಾವದಿಲ್ಲ.

---

483. ಮಾಲ 238, ಗುಹ್ಯಂ ಹೃದಿ ನ ತಿಷ್ಠತು.

484. ಅಮೂಲ ವಾಕ್ಯ. ನಿಷ್ಕ— ವರಾಹ ಚಿನ್ನದ ನಾಣ್ಯ ಶಾತವಾಹನರಿಂದ ಮೈಸೂರು ಅರಸರ ವರೆಗೆ (1610) ಇದ್ದುದರಿಂದ ಈ ಕೃತಿ ವಾದಿರಾಜರ ಕಾಲದ್ದು. 4 ರೂಪಾಯಿಗೆ ಸಮನಾದ 26 ಗುಂಜಿ ತೂಕದ ವರಾಹ ಅರಸಪ್ಪನ ಶಾಸನದಲ್ಲೂ ಇದೆ. ನಿಷ್ಕ ವೃಂದಾವನಾಖ್ಯಾನೋಕ್ತ (8— 4, 13— 95, 20— 74, 21— 78). ಆದರೆ ವಾ.ಗು.ಚ.(2— 37) ರೂಪಾಯಿ ಉಲ್ಲೇಖಿಸಿದೆ (1645ರಲ್ಲಿ).

485. 3— 116ರ ವರ್ಣನೆ ವೈಕುಂಠ ವರ್ಣನೋಕ್ತ (4,35— 40)ರ ಕೃತಯುಗದ ಆದರ್ಶ ವರ್ಣನದಂತಿದೆ.

486. ಬಾಲಲೀಲೆ ಉ. 427— 28.

31 — ಧೃತರಾಷ್ಟ್ರ ಸ್ವರ್ಗಾರೋಹಣ. ಭೀಮ ರಾತ್ರಿ ದಾನ ಕೊಟ್ಟು 'ಅಂತುಮಿಷ್ಟು ನಿಶ್ಚಯವಲ್ಲ, ಧರ್ಮಕ್ಕೆ ತ್ವರಿತ ಇರಬೇಕೆಂ'ದ ಧರ್ಮಗ;[487] 'ನನ್ನ ದ್ವೇಷ ತಮಸ್ಸಾಧನ' ಎಂದು ಧೃತರಾಷ್ಟ್ರಗೆ ವೈರಾಗ್ಯದಿಂದ ವನಕ್ಕೆ ಹೋಗುವಂತೆ ಮಾಡಿದ; ಪಾಪಿಗೆ ದಿವ್ಯಗತಿ ಆಗಬಾರದೆಂದು ದ್ರವ್ಯ ಕೊಡಲಿಲ್ಲ. ಆತ 'ಜೀವೋತ್ತಮನ ಮಾತ್ಕೆ ಕೇಳಲಿಲ್ಲ, ವೈರಾಗ್ಯ ಕೊಟ್ಟಾನೆ;'[488] ಎಂದು ತಪ ಮಾಡಿ ದೇಹ ಬಿಟ್ಟ, ಗಾಂಧಾರಿ — ಕುಂತಿ ಮೂಲ ರೂಪ ಕೂಡಿದರು, ವಿದುರ ಧರ್ಮನ ಹೊಕ್ಕ, ಸಂಜಯ ಗಂಧರ್ವಲೋಕ ಐದಿದ. ಪಾಂಡವರು ಧೃತರಾಷ್ಟ್ರನಿರುವನಕ 18 ವರ್ಷ, ನಂತರ 18 ವರ್ಷ ಹರಿಪರವಾಗಿ ಆಳಿದರು.

32 — ಮುಸಲ, ಮಹಾಪ್ರಸ್ಥಾನಿಕ ಪರ್ವ ನಿರ್ಣಯ. ಕೃಷ್ಣ ಕುರುಕ್ಷೇತ್ರದಲ್ಲಿ 12 ವರ್ಷ ಯಜ್ಞ ಮಾಡಿದ. ಹೆಣ್ಣುವೇಷದ ಸಾಂಬ ಮುನಿಗಳಿಂದಂತೆ ಒನಕೆ ಹಡದು, ಅದರ ತುದಿಯ ಉಕ್ಕು ಮೀನಿನ ಮೂಲಕ ಜರಾವ್ಯಾಧನ ಧನುಸ್ಸಿಗೆ ಹೋಯಿತು. 107 ವರ್ಷ ಭೂ ವೈಕುಂಠ ಆಳಿದ ಕೃಷ್ಣ, ಕಲೀ ವ್ಯಾಪಾರ ನಡೆಗೊಡರೆಂದು, ಯಾದವರೊಡನೆ ಪ್ರಭಾಸಕ್ಕೆ ಹೋಗಲು, ಮೈರೇಯ ಕುಡಿದು, ಸಮುದ್ರತೀರದ ಅಪು ಕಿತ್ತು, ಹೊಡದಾಡಿ ಸತ್ತರು. ಬಲರಾಮ ಯೋಗಧ್ಯಾನದಿಂದ ಮೂಲರೂಪ ಐದಿದ. ಅಜ್ಞಾನದಲ್ಲಿ ಒದ್ದ ಭೃಗು ಜರಾವ್ಯಾಧ ಸ್ವಾಮಿಪಾದದಲ್ಲಿ ಬಾಣ ಎಚ್ಚದ್ದು. ರುಕ್ಮಿಣಿ ಅಗ್ನಿ ಬಿದ್ದ ಹಾಂಗೆ, ಸತ್ಯಭಾಮಾ ವನದೊಳಗೆ ಅದೃಶ್ಯಳಾದ ಹಾಂಗೆ ತೋರಿಸಿದರು. ಕೃಷ್ಣ ಪತ್ನೀರನ್ನ ಅಭೀರ (ಮ್ಲೆಂಛ)ರು ಹಿಡಕೊಂಡು ಹೋದ ಕಾರಣ ದೇಹಬಿಟ್ಟರು. ಪರೀಕ್ಷಿತಗೆ ಪಟ್ಟಮಾಡಿ ಪಾಂಡವರು ಗಂಧಮಾದನಕ್ಕೆ ಬಂದರು. ದ್ರೌಪದಿ, ನಾಲ್ವರು ತಮ್ಮಂದಿರು ದೇಹಬಿಟ್ಟರು; ಧರ್ಮ ನಾಯಿರೂಪದ ಯಮನೊಡನೆ ಕೌರವರಿದ್ದ ವೀರಸ್ವರ್ಗ ತಮ್ಮಂದಿರಿದ್ದ ಮಿಥ್ಯಾನರಕ ಕಂಡ — ಅಶ್ವತ್ಥಾಮ ಸತ್ತನೆಂದ ದೇವವಚನ ನಂಬದ ಕಾರಣ. ನಿಜ ಕಂಡು ಭ್ರಾಂತಿ — ವಾಸನೆ ನೀಗಿ ಯಮನೊಳಗೆ ಐಕ್ಯವಾದ, ಮಿಕ್ಕವರೂ ಐಕ್ಯವಾದರು. ದೈತ್ಯರು ಶುದ್ಧ ಸಂಪ್ರದಾಯ ಹೊಕ್ಕಾಗ ಬುದ್ಧ ಮೋಹಿಸಿದ್ದ, ಅದ್ವೈತ ಬಂತಾಗ ಮಧ್ವರು ಸುಖಶಾಸ್ತ್ರ ಮಾಡಿದರು.

---

487. ಧರ್ಮೇತ್ವರಾಮಾನಥ ಸಂಭಭೂಪ.

488. ಅಮೂಲ.

(ಕಲಿಯುಗಾವಸಾನದಲ್ಲಿ ತಾಮ್ರಪರ್ಣಿ ತೀರದ ಶಂಭಲ ವಿಷ್ಣುಯಶನಲ್ಲಿ ಕಲ್ಕ್ಯವತಾರ ವ್ಯಾಖ್ಯಾನ). ಬ್ರಹ್ಮಸೂತ್ರ ಕಾಮಚಾರ—ಏಳದತ್ತು ಬಾಹೋ ಗ್ರಂಥ; ಇಲ್ಲಿ ಸಕಲ ಶಾಸ್ತ್ರ ಸಂಗ್ರಹಿಸಿ ನಿರ್ಣಯಿಸಿದ್ದಾರೆ.

ಗ್ರಂಥಾಂತ್ಯಕ್ಕೆ 'ಈ ಗ್ರಂಥ ಹೇಳಿ ಕೇಳಿದವರಿಗೆ ಸ್ವಾಮಿ ಪ್ರೀತನಾಗಲಿ ಎಂದು ಸಜ್ಜನರಿಗಾಗಿ ಟೀಕಾಕಾರರು ಬೇಡಿಕೊಂಡಾರೆ ಎಂಬಲ್ಲಿಗೆ ಶ್ರೀಮದಾಚಾರ್ಯರು ಹೇಳಿದ ನಿರ್ಣಯವನ್ನು ಪ್ರಾಕೃತದಿಂದ ವಿವರಿಸುವ 32ನೆಯ ಅಧ್ಯಾಯ ಸಂಪೂರ್ಣ' ಎಂದಿದೆ. ಇದೇ ಭಾಗ ದೇವನಾಗರಿ ಪ್ರತಿಯಲ್ಲಿ ತುಸು ವ್ಯತ್ಯಾಸಗಳಿಂದ ಕೂಡಿದ್ದು 'ವಾದಿರಾಜ ಸ್ವಾಮಿಗಳು ಕನ್ನಡ ಟೀಕಾ ಮಾಡಿದ್ದಾರೆ' ಎಂದಿದೆ; ಉಳಿಕೆ ವಾಕ್ಯಗಳು ಪ್ರತಿಕಾರರಿಂದ ಭಿನ್ನವಾದಂತಿವೆ. ಕನ್ನಡ ಮುದ್ರಣ ಎರಡರಲ್ಲೂ ವಾದಿರಾಜರ ಹೆಸರು ಕಾಣಿಸಿಲ್ಲ. ದೇವನಾಗರಿ ಮುದ್ರಣ ಆದ್ಯಂತ ಟೀಕಾಕಾರರ ಹೆಸರು ಹೇಳಿದ್ದು, ಪ್ರತಿ ಅಧ್ಯಾಯಾಂತಕ್ಕೂ 'ವಾದಿರಾಜ ಯತಿವರ್ಯ ವಿರಚಿತಾಯಾಂ ಕರ್ನಾಟಕ ಟೀಕಾಯಾಂ' ಎಂದಿದೆ. ನನ್ನಲ್ಲಿರುವ ಹಸ್ತಪ್ರತಿಯ ಅಧ್ಯಾಯಾಂತಕ್ಕೆ ಸಂಸ್ಕೃತ ವಾಕ್ಯ—ವಾದಿರಾಜರ ಹೆಸರುಗಳಿಲ್ಲವಾಗಿ, ದೇವನಾಗರಿ ಪ್ರತಿಯ ಅಧ್ಯಾಯಾಂತ ವಾಕ್ಯ ಪಂಡಿತ ಪ್ರತಿಕಾರರ ಕೈವಾಡವೆಂಬುದು ಸ್ಪಷ್ಟ. ಅಲ್ಲದೆ ಹಸ್ತಪ್ರತಿಯ ಆದಿಗೂ 'ಆಚಾರ್ಯರು ತಾತ್ಪರ್ಯ ನಿರ್ಣಯ ಗ್ರಂಥ ಹೇಳಿದ್ದಕ್ಕೆ, ವಾದಿರಾಜ ಸ್ವಾಮಿಗಳು ಟೀಕಾ ಮಾಡಬೇಕಾಗಿ ದೇವರಿಗೆ ಶರಣು ಹೋಗುತಾರೆ' ಎಂಬಂಥ ತೃತೀಯ ಪುರುಷದ ಪ್ರಯೋಗ ಲಿಪಿಕಾರರದೆಂದು ಸೂಚಿತ. ಲಿಪಿಕಾರರ ಭಾಷೆಯಂತೂ ಅಪ್ಪಟ ಉತ್ತರ ಕರ್ನಾಟಕದ ದೇಸಿ,[489] ಬ್ರಾಹ್ಮಣರ ಆಗಿನ ಮನೆಮಾತು ಎಂಬುದು ಉದ್ದಕ್ಕೂ ಸುವಿದಿತ. ಆದರೆ ನಡುನಡುವೆ ಬರುವ 'ಎಂತ, ಸುಮ್ಮಗಾದನು, ಹೇಳುವ' ಎಂಬಂಥ[490] ಪ್ರಯೋಗಾವಶೇಷ

---

489. ಚಪ್ಪನು, ಈಡ್ಯಾಡಿದ, ಎದ್ದತಿಹ, ಉಂಬೋಹಾಂಗೆ, 2 ಥಂಡ, ಥೋಡ, ಫಲೋ, ಪಾಳಿ, ಜಬರಿಸಿ, ಮೋರಿ, ಹರದು ಬರತಾನೆ, ಒದರ ಹೊಕ್ಕ, ಛಟ್ಟುಮುಟ್ಟ, ಬ್ಯಾನರಿಕೆ, ಕಣ್ಣು ಬಿಂಮಟಿದಳು, ಅಬಡ, ಮುತ್ತ್ಯಾ, ಖರೆ, ಭಿಡೆ, ಖ್ಯಾತಿಗೆ, ಬಡಿಗ್ಯ, ಹಚ್ಚಿಕೊಟ್ಟ, ಬೆಂಕಿಹಚ್ಚಿ, ಬ್ಯಾರೆ, ಬ್ಯಾಗ, ಕರದು, ತಿರುಗತ, ಸಂಪನಿ, ಮೂಜಿ, ಅಂಗೋಟ ಚಿಲ್ಕಿ, ಪಾರ್ಕಿ, ಒಬ್ಬು, ದಾರು, ದಾಮ, ಛೇದಿಸಿದನು, ಹುಬ್ಬುಮುಗಳು, ಅವಳಿಜವಳಿ.

490. ಎತಲಾನಿಕೆ (= ಪಕ್ಷದಲ್ಲಿ), ಮುಂಬಗ, ತಲುಪಾರ (ತಳವಾರ), ಅಮು, ಕೊಳ್ಳಬೇಕು, ಯಮಾಕೆ ಉಂಟೆಂದು, ಎಲೆ ಅಮ್ಮ, ಬನ್ನಿ, ಎತ್ತ ಹೋಗಿದ್ದು, ಹಾಕವೆ, ಮಾಡಿ, ಬ್ಯಾಡಿ, ಆಗುವುದಿಲ್ಲ, ಕೊಲ್ಲುವುದಿಲ್ಲ, ಸತ್ತರೆ, ರಾಮದೇವರು, ಬಾಹೋರು, ಕೈಯ, ಪರಿಯಂತರ, ಜಗಳ (ಕೆಲವು ಬಾಲರೇಲೆ—ಸುಮಾರಗಳಲ್ಲಿವೆ).

ದಕ್ಷಿಣ ಕನ್ನಡದ ವಾದಿರಾಜರವೆಂಬುದೂ ನಿಸ್ಸಂಶಯ. (ಭ್ರಮರಗೀತೆ, ನಾರದ ಕೊರವಂಜಿಯ ಗದ್ಯ ವಾದಿರಾಜರದೇ ಆಗಿ ಕಾವ್ಯಮಯ). ಮೇಲಿನ ವಸ್ತು ಪರಿಶೀಲನೆಯಲ್ಲಿ ಟಿಪ್ಪಣಿಸಿದಂತೆ ವಾದಿರಾಜರ ಇತರ ಕೃತಿಗಳಿಗೂ ಇದಕ್ಕೂ ಹಲವಾರು ಸಾಮ್ಯದೋರುವ ಅಂಶಗಳಿವೆ. ಆದ್ದರಿಂದ ಅವರ ಅನೇಕ ಕೃತಿ ಭಾವ ಪದಪ್ರಯೋಗವುಳ್ಳ ಇದನ್ನು ಅವರೇ ಇತ್ತ ಬಂದಿದ್ದ ಶತಮಾನಾಂತ್ಯದಲ್ಲಿ, ಇತ್ತಣ ವಿಪ್ರರೊಬ್ಬರಿಂದ ಹೇಳಿ ಬರೆಯಿಸಿರಬೇಕೆಂದು ಊಹಿಸಬೇಕಿದೆ. 'ಯುಕ್ತಿಮಲ್ಲಿಕಾ ವ್ಯಾಖ್ಯಾನ, ಸ್ವಪ್ನವೃಂದಾವನಾಖ್ಯಾನ' ರಚನೆ ಇದಕ್ಕೆ ಪೋಷಕ ಆಧಾರ.

ಒಟ್ಟಿನ ಮೇಲೆ "ಆಚಾರ್ಯರ ಅಭಿಪ್ರಾಯ ಮಂಡನವಲ್ಲಿ ಸಂದೇಹವಿಲ್ಲ. 'ಪೂರ್ವಪಕ್ಷ ಬೆಳೆಸುತಾರೆ, ಇದಕ್ಕೆ ಸಮ್ಮತಿ ಹೇಳುತಾರೆ' ಎಂಬಂಥ ವ್ಯಾಖ್ಯಾನ ಗುಣವಿದ್ದರೂ ಸ್ವತಂತ್ರ ಕೃತಿಯಂತೆ ಓದಿಸಿಕೊಂಡು ಹೋಗುವುದು. ನಿರ್ಣಯವನ್ನು ಮಾತ್ರವೇ ಮುಂದಿಡದೆ ಅವಶ್ಯ ಕಥಾಭಾಗ ಸ್ವಾರಸ್ಯಕರವಾಗಿ ನಿರೂಪಿತ; ಉದಾ-- ಬ್ರಹ್ಮಾದಿಗಳೂ ಭಗವದಧೀನವೆನ್ನಲು ದುರ್ವಾಸ, ಅಂಬರೀಷರ ಪ್ರಕರಣ (1,7). ಕೆಲವೆಡೆ ತಮ್ಮವೇ ಆದ ಉದಾಹರಣೆಗಳಿವೆ; ಸಮುದ್ರ ಮಥನದಲ್ಲಿ ವೈರಿಗಳಾದರೂ ರಕ್ಕಸರೊಡನೆ ಕಾರ್ಯಸಾಧನೆಗೆ ಸ್ನೇಹ ಬೆಳೆಸಬೇಕೆಂದು ಭಗವಂತ ದೇವತೆಗಳಿಗೆ ಹೇಳಿದಾಗ ಹಾವು ಇಲಿಯ ಗೆಳೆತನದ ನಿದರ್ಶನವಿದೆ (1,170). ಹೀಗೆ ಆಕರ್ಷಕ ಶೈಲಿಯಲ್ಲಿ, ಪುಟ್ಟ ವಾಕ್ಯಗಳಿಂದ ನಿರ್ಣಯದ ತಾತ್ಪರ್ಯ ತಿಳಿಸುವ ಕನ್ನಡ ಕೃತಿ"[491] ಇದು. ಹಿಂದಿನ ಕನ್ನಡದ ವಿರಳ ಗದ್ಯಕ್ಷೇತ್ರಕ್ಕಂತೂ ಇಷ್ಟು ಬೃಹದ್ಗ್ರಂಥದ ಸತ್ವಪೂರ್ಣ ಕೃತಿ ಮಹತ್ತರ ಕೊಡುಗೆ ಎನಿಸಿದೆ. ಮುಂದೆ 'ಮುದ್ರಾರಾಕ್ಷಸ' ನಾಟಕವು ಗದ್ಯದಲ್ಲಿ 'ಮುದ್ರಾಮಂಜೂಷ'ವಾದಂತೆ, 'ಭಾರತ ತಾತ್ಪರ್ಯ ನಿರ್ಣಯ'ದ 5400 ಶ್ಲೋಕ ಕನ್ನಡ ಗದ್ಯರೂಪ ಧರಿಸಿದ್ದು ಗಮನಾರ್ಹ ಸಂಗತಿ. ಈ ಕೃತಿಗಳ ದೇಸೀ ಶೈಲಿ ವಿಚಿತ್ರ ಕಲಸುಮೇಲೋಗರವಾದರೂ ಪಂಡಿತರ ಸಕ್ಕದ ಕೃತಿಗಳನ್ನು ಕನ್ನಡಿಗರಿಗೆ ಮುಟ್ಟಿಸುವಲ್ಲಿ ಸಾರ್ಥಕವೆನಿಸಿದೆ. ಈ ನಿಟ್ಟಿನಲ್ಲೂ ವಾದಿರಾಜರು ಮಹತ್ತರ ಕಾರ್ಯ ಪೂರೈಸಿದ್ದಾರೆ. ಇದರದೇ ಸ್ವತಂತ್ರ ತೌಲನಿಕ ಅಧ್ಯಯನದಿಂದ ಇನ್ನಷ್ಟು ಸಂಗತಿ ಬೆಳಕಿಗೆ ಬರುವ ಸಂಭವ ಉಂಟು. ಕೇವಲ ಧಾರ್ಮಿಕ ಶಾಸ್ತ್ರಕೃತಿ ಎಂದುಪೇಕ್ಷಿಸಿದರೆ ನಷ್ಟ ನಮ್ಮದು, ಅಷ್ಟೆ.

---

491. ಸಗ್ರಿ ಹಯಗ್ರೀವಾಚಾರ್ಯ, ತತ್ವವಾದ, 11, 80.

## 5. ಸಂಸ್ಕೃತ — ಕನ್ನಡ ಕೃತಿಗಳ ಸಹ ಸಮಾಲೋಚನೆ

ವಾದಿರಾಜರು ಸಂಸ್ಕೃತ— ಕನ್ನಡ ಭಾಷೆಗಳಲ್ಲಿ ಹಲವು ಕೃತಿಗೈದ ಕಾರಣ, ಅವುಗಳಲ್ಲಿ ಪರಸ್ಪರ ಆಂತರಿಕ ಪ್ರಭಾವದ ಸಮಾನಾಂಶ ಕೆಲವಿರುವುದು ಸಹಜ. ಅಂಥ ಕೆಲವನ್ನಾದರೂ ಈಗ ತಾಲನಿಕವಾಗಿ ಪರಿಶೀಲಿಸಿದರೆ ಈ ಅಧ್ಯಯನಕ್ಕೆ ಪುಷ್ಟಿಯೊದಗದಿರದು.

### ಶಾಸ್ತ್ರ ಕೃತಿಗಳ ಪ್ರತಿಬಿಂಬ

ವಾದಿರಾಜರ ಸಾಹಿತ್ಯ ಸೃಷ್ಟಿಯು ಗುರಿ ತರ್ಕಶುದ್ಧವಾಗಿ ಕಾವ್ಯ— ಸಂಗೀತ ಮಾಧ್ಯಮಗಳ ಮೂಲಕ ಮಧ್ವ ಮತವನ್ನು ಮಧ್ಯಮ ಹಾಗೂ ಕೆಳವರ್ಗದ ಜನಸಾಮಾನ್ಯರಿಗೆ ಮುಟ್ಟಿಸುವುದಾಗಿತ್ತೆಂದು ಹಿಂದಿನ ಸಮಾಲೋಚನೆಗಳಿಂದ ಸ್ಪಷ್ಟ. ಅಂತೆಯೇ ಬ್ರಹ್ಮಸೂತ್ರಗಳನ್ನಾಧರಿಸಿದ 'ಯುಕ್ತಿಮಲ್ಲಿಕೆ' ಪಾಂಡಿತ್ಯಪೂರ್ಣ 'ಸುಧಾ— ವಾಗ್ವಜ್ರ— ಚಂದ್ರಿಕಾ 'ಗಳಿಗಿಂತ ಹಗುರವಾಗಿದ್ದು, ಕಬ್ಬಿಣದ ಕಡಲೆಯಾಗದೆ ನೆಲಗಡಲೆ ಎನಿಸಿದೆ. ಅದು ಆತ್ಮತತ್ತ್ವವನ್ನಲ್ಲಗಳೆವ ಚಾರ್ವಾಕನನ್ನು ಖಂಡಿಸುತ್ತ ಪ್ರತ್ಯೇಕ ಪಂಚಭೂತಗಳಲ್ಲಿರದ ಚೈತನ್ಯ (ಎಲೆ— ಅಡಿಕೆ— ಸುಣ್ಣಗಳಿಂದೊದಗುವ ಬಣ್ಣದಂತೆ) ದೇಹಸ್ಥವಾಗುವುದೆಂದು, ಸತ್ತಾಗ ಅಳುವುದನ್ನು ಪ್ರಶ್ನಿಸಿದೆ —

ನ ಚೇದೇವಂ ಅಸಂಬದ್ಧಂ ವದತೋ ಮರಣೇ ಕಥಂ
ವಿಷೀತ ಪತ್ನಿ ಮಹಿಷೀ ಸೋರಸ್ತಾಡನಪೂರ್ವಕಂ ॥

ಇಲ್ಲಿ ಹೆಂಡತಿ ಅಳುವುದೇಕೆಂದಿದ್ದರೆ 'ಗುಂಡಕ್ರಿಯೆ' 'ಮೋಹದ ಹೆಂಡತಿ ಸಾಯುವೇತಕೆ ಅಳುವೆ' ಎಂದಿದೆ (2). ಕೃಷ್ಣಾಜಿನ ಬಳಕೆ ಹಿಂಸಾತ್ಮಕವೆಂದ ಜೈನರಿಗೆ ನವಿಲುಗರಿ ಏಕೆಂದಿದೆ 'ಯುಕ್ತಿಮಲ್ಲಿಕೆ'; ನಮ್ಮ ಪ್ರಮೇಯಕ್ಕೂ ಸಾಕ್ಷ್ಯದೆಂಬವರು ವಾದಿಪರಂತೆಂದಿದೆ 'ಗುಂಡಕ್ರಿಯೆ'(4). ಅದ್ವೈತದ ನಿರ್ಗುಣತ್ವ ತಿಳಿದರೆ ಜ್ಞೇಯ, ತಿಳಿಯದಲ್ಲಿ ನೈರ್ಗುಣ್ಯದಿಲ್ಲ; ಮಾಯೆಯು ಅಜ್ಞಾನಾಶ್ರಿತ ಸರ್ವಜ್ಞ ಬ್ರಹ್ಮನೆಂದರೆ, ನಾನು ಮೂಕನೆಂದಂತೆ (ಯುಕ್ತಿಮಲ್ಲಿಕೆ); ಜಗವು ಮಸಿ ಎಂದು ತನ್ನ ನಾಲಗೆ ಕತ್ತರಿಸಿಕೊಂಡವ ಇನ್ನೇನು ನುಡಿವನೊ, ಆ ದೇವನೊಪ್ಪದವಗೆ ತಾ ಉಡಿಸಿ ತಾಂಬಿಲ್ಲ ಎಂಬ ಗಾದೆ ಬಹುದು (ಗುಂಡಕ್ರಿಯೆ, 14,31). ಲೋಕವಿಲ್ಲೆಂಬಾಗ ಲೋಕಾಂತರ್ಗತನ ಮಾತು ತಾನೇ ಹೋಗದಿಹುದೇ? ಮಿಥ್ಯಾವಾದ ಸುಳ್ಳಾದರೆ ಸತ್ಯವಾದ ತಾನೇ ಸಿದ್ಧ (ವೈಕುಂಠ ವರ್ಣನೆ, 3— 13). ರುಕ್ಮಿಣಿಗೆಳಸಿದ ಶಿಶುಪಾಲನಂತೆ (ರು.ವಿ.15— 8)

ಶಿವೋಹಂ ಎಂಬವರೆಲ್ಲ ಮಾತ್ಯಗಾಮಿ (ಗುಂ·ಕ್ರಿ·18)· ಸದ್ಗುಣಾಭಾವದಿಂದ ನಿರ್ಗುಣ ಬ್ರಹ್ಮನಿಗೇ ಬೈಗುಳು — ನೀಚೈಕ್ಯ ಸಂಧಾನ (ಯುಕ್ತಿ·ಮಲ್ಲಿಕೆ); ಗುಣಶೂನ್ಯನೆಂಬುವುದು ಮಾನವರಿಗೆ ಬೈಗುಳಾದರೆ ಹಯವದನಗೆ ಗುಣವಿಲ್ಲವೆಂಬೋದೇನು ಬೈಗುಳೋ (ಗುಂ·ಕ್ರಿ·22)· ಶ್ರುತಿ ಯುಕ್ತಿ ಸತ್ಯಪ್ರತಿಪಾದಕ, ಮಿಥ್ಯೆ ಬಿಟ್ಟು ಭಕ್ತಿ ಮುಕ್ತಿ ಹೊಂದು (ಯು·ಮ·4); ಹರಿಯು ಸೇವೆಯು ಮಾಡು, ಭಕ್ತಿಯು ಬೇಡು, ಅವನ ಕರುಣದಿಂದಲಿ ಪರಗತಿಯಪ್ಪುದು, ನಿರುತ ಸುಖ ತಪ್ಪದು (ಗುಂ·ಕ್ರಿ·23)· ಶ್ರವಣ ಮನನ ಧ್ಯಾನ ಸಾಕ್ಷಾತ್ಕಾರ ಭಕ್ತಿ ಪ್ರಸಾದ ಮುಕ್ತಿಯು ಸಾಧನ, ಅಪರೋಕ್ಷಾನಂತರ ಉತ್ಕ್ರಮಣ ಅರ್ಚಿರಾದಿ ಕ್ರಮಣ ಬ್ರಹ್ಮ ಲೋಕನಾಥನ ವಿರಜಾಸ್ನಾನ ಲಿಂಗಭಂಗ ಮುಕ್ತಿ (ಯು·ಮ·5); ಶ್ರೀನಾಥ ವಿರಜಾ ನದಿಯಲ್ಲಿ ಜ್ಞಾನಿಗಳ ಮುಳುಗಿಸಿ ಮುಕ್ತರ ಮಾಡಿ ತನ್ನ ಜಗದೊಳಗಿಟ್ಟುಕೊಂಬ (ವ್ಯ·ವ· 4—83)· ವಾಯು ಗುರು ಹರಿ ಪರಮನೆಂದು ಮುಕ್ತನಾಗು (ಯು·ಮು); ಈ ತತ್ತ್ವ ನಿಶ್ಚಯವು ಮಧ್ವ ಗುರುಗಳಿಂದರಿವುದು (ಗುಂ·ಕ್ರಿ·35)· ಒಂದು ಸಿದ್ಧಾಂತದಭಿಮಾನ ಇನ್ನೊಂದರ ದ್ವೇಷದಿಂದಲ್ಲದೆ ಯುಕ್ತಿ ಸಿದ್ಧಾಂತಕ್ಕೆ ಮಾರುಹೋಗಿ ರಚಿಸಿದು (ಯು·ಮ); ಪಕ್ಷಪಾತದ ನುಡಿಯುಲ್ಲೆಂಬೋದು ಬುಧರು ವಿಚಾರಿಸಲಿ (ವ್ಯ·ವ·4— 65)· ಕಾಲ ನಿಯಾಮಕ ಶಿಂಶುಮಾರಹರಿಯು ನಿತ್ಯ ಮುತ್ತೈದೆಯಾಗಿ ಋತಾಯುಗಳನೊಲ್ಲ (ಲ·ಶೋಭಾನೆ 24); ಯತಶ್ಚ ಬ್ರಹ್ಮರುದ್ರಾದ್ಯಾಃ ಕಲ್ಪಾಂತ ಪರಮಾಯುಷಃ । ತತಃ ಸೌಮಂಗಲ್ಯ ಭಂಗ ಭೀತ್ಯಾತ್ಯಕ್ತಾ ಇಮೇ ಮಯಾ (ಸರಸಭಾರತೀವಿಲಾಸ)· ಕೆಸರೊಳು ಮುಳುಗಿದವ ಪರರ ಬಾಧಿಪ ಕೆಸರ ಬಿಡಿಸೋನೆ (ಲ·ಶೋ·32); ಅನುತ್ತೀರ್ಣಃ ಸ್ವಯಂಪಂಕಾತ ಕಿಮನ್ಯಾತ್ತಾರಕೋ ಭವೇತ (ಯು·ಮ·2)· ರಮೆಯನಪ್ಪಿಕೊಂಡಿಪ್ಪುದು ರಮೆಯರಸಗೆ ರತಿ, ವೀರ್ಯ ಚಲಿಸುವುದೆಂದರೆ ಪ್ರಳಯದಲಿ ಕುಮಾರರೇಕೆ ಜನಿಸರು (ಲ·ಶೋ·36); ತನ್ನರಸಿಯೊಡನೆ ಮಲಗಿದಲ್ಲಿ ತತ್ತ್ವದ ಒಂದೊಂದಂಶ ರೇತವ ಮಾಡಿ ಚಿನ್ನದ ಜಾಂಡ ನಿರ್ಮಿಸಿದ; ಕುಕ್ಷೌ ನಿಕ್ಷಿಪ್ತ ತತ್ತ್ವಾನಾಂ ಅಂಶಾನ ವೀರ್ಯಾತ್ಮನಾ ಪ್ರಭುಃ, ಅಜಾಂಡಂ ನಿರ್ಮಮೇ ಹ್ಯೇವಂ ನ ತು ವಿಷ್ಣುಃ ಸ್ವರೇತಸಾ (ಸರಸಭಾರತೀವಿಲಾಸ)·

'ಯುಕ್ತಿ ಮಲ್ಲಿಕೆ'ಯು ಅನುರೂಪದಂತಿರುವ 'ನ್ಯಾಯ ರತ್ನಾವಳಿ' ಅದ್ವೈತದ ದುಃಖ ಕಲ್ಪನೆ ಆತ್ಮನದೆಂದಲ್ಲಿ ಬ್ರಹ್ಮನದೆಂದು ಸಮಾಕರಿಸಿ ನಿರುತ್ತರಗೊಳಿಸಿದೆ· 'ಶ್ರುತಿ

ತತ್ವಪ್ರಕಾಶಿಕೆ'ಯ 'ನೇಹ ನಾನಾಸ್ತಿ ಕಿಂಚನ ಏಕಮೇವಾದ್ವಿತೀಯಂ ಬ್ರಹ್ಮ' ಇತ್ಯಾದಿಗಳ ಭೇದ ವಿವರಣೆ 'ಹರಿಯ ಗುಣ ರೂಪಗಳಿಗೆ ಭೇದವಿಲ್ಲ ಪ್ರಳಯದಲ್ಲಿ ಅವನೊಬ್ಬನೇ ಇದ್ದ' (ಗುಂ·ಕ್ರಿ·15), 'ಧಾರಕತ್ವಾತ ಧರ್ಮವೆನಿಪ ರೂಪಕ್ಕೂ ಜೀವರಿಗೈಕ್ಯವೇ? ಏಕಮೇವಂ ಅದ್ವಿತೀಯಂ ಎಂಬ ಶ್ರುತಿಯೇ ಐಕ್ಯವ ಖಂಡಿಸಿತು' (ವೈ·ವ·3–11) ಮೊದಲಾದಲ್ಲಿದೆ· 'ಧ್ಯಾನಪರ್ಣಾ'ದಿ ವಿವರಣೆ 'ಸ್ವಪ್ನಪಾದ' 17, 'ಗುಂಡಕ್ರಿಯೆ' 16ರಲ್ಲಿದೆ· ವಿಶ್ವ ಜೀವರಿಗೆ ಸ್ವರ್ಗಮಾತ್ರವಲ್ಲದೆ ಸಾಂತಾನಿಕ ಲೋಕ ಉಂಟೆಂಬ 'ತಾತ್ಪರ್ಯ ನಿರ್ಣಯ' (1–161) ಮತ 'ವೈಕುಂಠ ವರ್ಣನೆ'ಯ 3–3, 4–9 ರಲ್ಲಿದೆ; ಅದರಂತೆ ಸಹಭೋಗದ ಉಕ್ತಿ ನಿರ್ಣಯ 1–143ರಲ್ಲೂ, ವೈ·ವ· 3–75ರಲ್ಲೂ ಉಂಟು· 'ಚಕ್ರಸ್ತುತಿ' 1–6ರ ಭಾವ ನಿಂಬಾರ್ಕಾದಿಗಳೂ ಚಕ್ರ ಧರಿಸುವರೆಂದು ವೈ·ವ·4–7ರಲ್ಲಿದೆ· 'ಯುಕ್ತಿ ಮಲ್ಲಿಕೆ' 'ಗುಂಡಕ್ರಿಯೆ'ಗಳಲ್ಲಿನ ಸ್ಯಾದ್ವಾದ ಖಂಡನೆ 'ಪಾಷಂಡ ಮತಖಂಡನ ಕಲ್ಪಲತಾ'ಗಳಲ್ಲೂ ಇದ್ದು, 'ಹರಿಭಕ್ತಿಲತಾ–ಸರಸಭಾರತೀವಿಲಾಸ'ಗಳ ತತ್ವವಾದ ಇತರ ಕೃತಿಗಳಲ್ಲೆಲ್ಲ ಪ್ರತಿಧ್ವನಿತ· 'ಏಕಾದಶೀ ನಿರ್ಣಯ'ದ ತೀರ್ಮಾನ 'ಏಕಾದಶಿ ನಿರ್ಣಯ ಮನೆಗೆ ಹೇಳ ಬಂದ ಗೋವಿಂದ' ಎಂಬ ಹಾಡಿನಲ್ಲಿ ಪಡಿಮೂಡಿದೆ· 'ಭಾರತ–ಭಾಗವತ ತಾತ್ಪರ್ಯನಿರ್ಣಯ'ಗಳ ಭೂಗೋಳ–ಖಗೋಳ ವಿಚಾರ 'ಭೂಗೋಳ ವಿವರಣ'ದಲ್ಲಿದ್ದಂತೆ ಕನ್ನಡ 'ಭಾರತ ತಾತ್ಪರ್ಯ ನಿರ್ಣಯ' (2ನೆಯ ಅಧ್ಯಾಯ)ದಲ್ಲೂ ಬಂದಿದೆ:

ನಾನಾ ಪಕ್ಷಿ ಫಲೋಪೇತೈರ್ವಿಚಿತ್ರಿತಂ ವಿಶ್ವಮೋದ್ಯಶಂ
ಸಂಕರ್ಷಣಾಗ್ನಿನಾ ಪಕ್ವಮುಂಡಾಖ್ಯೇ ಹ್ಯಮುಭಾಜನೇ ॥ 355 ॥
ಸ್ವಯಂ ಪಾನೀಯಮಾನ್ಯಗಪಾಕ್ಷ್ಯಹಾಕಾಯೋ ಜನಾರ್ದನಃ
ಭುಕ್ತ್ವಾ ಪುನಃ ಕೀರ್ತಿಕಾಮ ಇವನಾವರ್ಣ ಭಸ್ಮ ಚ ॥ 356 ॥
ಅಂಡದಾಹ ಸಮುದ್ಭೂತಂ ಸ್ವಾಂತಸ್ಥೇನ ಮಹಾಗ್ನಿನಾ
ಪುನಃ ಪುನಶ್ಚ ಕ್ವಥಿತಂ ಬಹಿರಾವರಣೋದಕಂ ॥ 357 ॥
ಸ್ವೀಕೃತ್ಯ ಭಾರ್ಯಯಾ ಲಕ್ಷ್ಮ್ಯಾ ಸಹ ತದ್ರೂಪ ವಾರಿಧೌ
ವಟಪತ್ರಪುಟೇ ಶೇತೇ ನಿದ್ರಾಲುರಿವ ಲೀಲಯಾ ॥ 358 ॥

ಎಂಬ 'ಭೂಗೋಳ ವಿವರಣ'ದ ಶ್ಲೋಕಗಳನ್ನೇ ಪ್ರತಿಧ್ವನಿಸಿದ 'ವೈಕುಂಠ ವರ್ಣನೆ'ಯ ಭಾವ ಚಿತ್ರ ಇಲ್ಲಿದೆ –

ಆದಿ ಪುರುಷನಿಂತು ತನ್ನ ಭೋಜನಕೆ
ಸಾಧನವಾದ ದ್ರವ್ಯಗಳ
ಶ್ರೀದೇವಿಯರ್ ಸ್ವಯಂಪಾಕಿಯಾಗಿರಲು
ಐದೆಕಿಚ್ಚಿನ ಜ್ವಾಲೆಯಲ್ಲಿ (2— 19)

ಲವಣೇಕ್ಷು ಮದ್ಯಸರ್ಪಿರ್ದಧಿಕ್ಷೀರ
ಸವ ಕೂಡಿ ಹೇಮಾಂಡವೆಂಬ
ತವೆಯದ ಭಾಂಡದೊಳಿಟ್ಟು ಪಾಕವ ಮಾಡಿ
ತವಕದಿಂದೊಂದೆ ತುತ್ತಿನಲಿ (20)

ಭುವನವ್ಯಾಪ್ತವಾದ ಸ್ಥೂಲದೇಹದ ಬಾಯ
ವಿವರದಿ ತೆರೆದು ಭುಂಜಿಸಿದ
ಪವನ ತನ್ನಯ್ಯನುಂಬ ಸಂಭ್ರಮಕೆ ದೇಹ
ಬೆವರದಂತೆ ಅಡಿಗಡಿಗೆ ಬೀಸೆ (21)

ನವನಿಧಾನ್ಯದ ಜಾಲವೆಂಬ ಪಾನೀ
ಯವನು ಕೊಂಡಾಚಮನ ಮಾಡಿ
ಇದು ಜೀರ್ಣವಪ್ಪಂತೆ ಸ್ವರ್ಣದ ಭಾಂಡವನೆ
ಭಸ್ಮ ಮಾಡಿ ಮತ್ತೆ ಸೇವಿಸಿದ (22)

ಕುದಿವ ಬಾಹ್ಯೋದಕವೆಂಬ ಕಷಾಯವ
ಮುದದಿಂದ ಕೊಂಡು ತೇಗುತಲಿ
ಪದುಮೆಯೊಡನೆ ಇನ್ನು ಪವಡಿಸಬೇಕೆಂದು
ಬುಧಜನಬಂಧು ಬಯಸಿದ (23)

ಮಧ್ವರ 'ಭಾರತ ತಾತ್ಪರ್ಯ ನಿರ್ಣಯ'ಕ್ಕೆ ಸಂಸ್ಕೃತದಲ್ಲಿ ರಚಿಸಿದ 'ಭಾವಪ್ರಕಾಶಿಕೆ'ಗೂ ಕನ್ನಡದಲ್ಲಿ ಹೇಳಿ ಬರೆಸಿದ ಗದ್ಯ ಟೀಕೆಗೂ ಕೆಲ ಸಮಾನಾಂಶಗಳಿವೆ. 'ದಶಪ್ರಮತಿಂ ಜನಯಂತ ಯೋಷಿಃ' ಎಂಬ ಬಳಿತ್ಥಾಸೂಕ್ತದ ಚರಣವನ್ನು 'ಭಾವಪ್ರಕಾಶ' ಶ್ರೀಪಾದರ್ಯರು ಮಧ್ಯಗೇಹರ ಮಡದಿಯಲ್ಲಿದ್ದು ಹುಟ್ಟಿಸಿದರೆಂದರೆ, ಕನ್ನಡ ಟೀಕೆ 'ಹಡೆದರು ಎಂದಲ್ಲಿ ಗುರುಗಳ ತಾಯಿ ಎಂಬ ಕಾರಣ ಗೌರವಾರ್ಥಕ ಬಹುವಚನ, ಅಥವಾ ಶ್ರೀಪಾದರಾಗದೇವೇರು ಹಡೆದಿದ್ದಾರೆ' ಎಂದಿದೆ. ಇದೇ ಅಭಿಪ್ರಾಯ 'ವೈಕುಂಠ ವರ್ಣನೆ'ಯಲ್ಲಿದೆ —

ಸಿರಿಭೂವಿದುರ್ಗೆಯರು ಜ್ಞಾನಾಮೃತವ ಕರೆವರೆ
ಗುರು ಪೂರ್ಣಪ್ರಜ್ಞರ ಪುಟ್ಟಿಸಿದರು ಗಡ
ನರಲೋಕದ ನಾರಿಗೆ ಇವನ ಹೆರುವ ಭಾಗ್ಯ
ದೊರಕದೆಂದು ಶ್ರುತಿ ಘೋಷವೆಂದಿತು (1,9).

ಇದರಂತೆ ಸೀತೆ ಲಂಕೆಯಲ್ಲಿರುವುದನ್ನರಿತೂ ರಾಜನೀತಿ ತೋರಿಸಲು ಅನ್ವೇಷಣೆಗಾಜ್ಞಾಪಿಸಿದ ರಾಮನ ರೀತಿ, ಧೃತರಾಷ್ಟ್ರ ಗಂಧರ್ವಾಂಶನೆಂಬ ಉಕ್ತಿ, ವಿದ್ಯೆಯಲ್ಲಿ ರತಿಯುಳ್ಳವ ವಿದುರ ಎಂಬ ನಿಷ್ಪತ್ತಿ 'ಭಾವಪ್ರಕಾಶಿಕೆ– ಕನ್ನಡ ಟೀಕೆ'ಗಳಿಗೆ ಸಾಮಾನ್ಯ. ವಾದಿರಾಜರ ಇತರ ಕೃತಿಭಾವಗಳೂ ಕನ್ನಡ ಟೀಕೆಯಲ್ಲಿವೆ. 'ರುಕ್ಮಿಣೀಶ ವಿಜಯ' (1,26) ರಾಜರು ಮುಂದೆ ಹಾಸಿಗೆ ಕಳಿಸುವಂತೆ ಶೇಷನಾಗವತರಿಸೆಂದ ಕೃಷ್ಣನನ್ನು ಚಿತ್ರಿಸಿದರೆ, ಬಾಲಲೀಲೆ 'ಹಾಸಿಗೆಯಾಗಿರುವ ಶೇಷದೇವರನ್ನು ಕರೆದು ಜ್ಯೇಷ್ಠನಾಗಿ ಮುಂದ್ಯವತರಿಸು ಎಂದನು' ಎಂಬ ನುಡಿದೋರಿದೆ (ಪು.18); ರಾಮಾವತಾರ ಮುಗಿವಲ್ಲಿ 'ಸ್ವಾಮಿ ಹಾಸಿಗೆ ಮುಂದಾಗಿ ಹೋಗಬೇಕಾಗಿ ಲಕ್ಷ್ಮಣನನ್ನು ಮುಂದೆ ಹೋಗೆ'ಂದ ಅಮೂಲ ಭಾವವಿದೆ (1,155). ಇದರಂತೆ ಕಾಳಿಂಗನ ಮೇಲೆ ಕೃಷ್ಣ ಕುಣಿಯಲು 'ಸಿದ್ಧ ಗಂಧರ್ವ ವಿದ್ಯಾಧರರು ವಾದ್ಯ ಬಾರಿಸುತ್ತ ಗಾಯನ ನರ್ತನಗೈದರೆಂ'ಬ ಭಾಗವತ ಸಂದರ್ಭ 'ರುಕ್ಮಿಣೀಶ ವಿಜಯ'ದಲ್ಲಿ 'ಬ್ರಹ್ಮ ಮೃದಂಗ ಬಾರಿಸಿದ ಹನುಮ ಹಾಡಿದ ಶಿವ ತಾಳ ಹಿಡಿದನೆ'ಂದಾಗಿ (4,68) 'ಬಾಲಲೀಲೆ' 'ತಾಳ ಮದ್ದಳೆ ಧಿಮಿಕೆಂದವು' (ಪು.478) ಎಂದರೆ, 'ಭ್ರಮರಗೀತೆ' 'ಹನುಮಂತ ಪಾಡಲಾದು' (25) ಎಂದಿದೆ, 'ಕನ್ನಡ ನಿರ್ಣಯ' 'ಬ್ರಹ್ಮಮದ್ದಳೀ ಬಾರಿಸಿದ, ರುದ್ರ ವೀಣೆ ಬಾರಿಸಿದ, ಹನುಮಂತ ಗಾಯನ ಮಾಡಿದ' (2,60) ಎಂದಿದೆ. (ಈ ಅಂಶ ಕನಕದಾಸರಲ್ಲೂ ಹೊಳಲುಗೊಂಡುದನ್ನು ಹಿಂದೆ ನೋಡಿದ್ದೇವೆ).

<u>ಕಾವ್ಯಭಾವ ಪ್ರತಿಧ್ವನಿ</u>

ವಾದಿರಾಜರು ತೀರ್ಥಾಟನದಲ್ಲಿ ರಚಿಸಿದ ಶ್ಲೋಕ ಶತಕಾಂತ್ಯದಲ್ಲಿ ಪ್ರಬಂಧಿತವಾಗಿ 'ತೀರ್ಥಪ್ರಬಂಧ' ತ್ರಿವಿಕ್ರಮ ವರ್ಣನೆದೋರಿದೆ (ಪ.75– 76); ಹಾಗೆಯೇ 'ರುಕ್ಮಿಣೀಶ ವಿಜಯ'ದ ಕಾಳಿಂದಿ ವರ್ಣನೆ (7,35) ಉತ್ತರ ಪ್ರಬಂಧದಲ್ಲಿ ಪುನರಾವರ್ತಿತ (12). ಇದಕ್ಕೆ ಮುಂಚಿನ ಗೋದಾ ವರ್ಣನೆ ಕನ್ನಡ ಹಾಡಾಗಿರುವುದು ಹೀಗೆ — ಕ್ಷಾಮದಲ್ಲೂ ಸಮೃದ್ಧಿಗೌತಮಾಶ್ರಮಕೆ ಮೇಯಬಂದ ಹಸು ಹತ್ಯೆ ಹೊಂದಿ ತಪಕೊಲಿದು ಬಂದು'

ಕುಶದಿಂದಾವರ್ತಿತಳಾಗಿ ಗೋವನುಜ್ಜೀವಿಸಿದ ಗೋದಾವೃತ್ತ 9ನೆಯ ಶ್ಲೋಕ, ಹಾಡಿನ ಮೊದಲ ನುಡಿಗಳಲ್ಲಿದೆ.

ಅಂಹಾಂಸಿ ಹಂತಿ ಸತತಂ ಕಿಲರಾಸಿ ಪುಣ್ಯಂ
ಸಿಂಹಸ್ಥಿತೇ ಸುರಗುರೌ ನ ತದಂಬುಯಾದೇ ।
ಗೋದೇ ಸಮಸ್ತ ಫಲದೇ ದಿಶ ಕೃಷ್ಣಪಾದೇ
ಭಕ್ತಿಂ ವಿರಕ್ತಿಮಿತರತ್ರ ಪರತ್ರ ಮುಕ್ತಿಂ ॥ 10 ॥

ಆದೌ ಧವಲ ಗಂಗಾಖ್ಯ ಗಂಗಾದ್ವಾರಾಥದಾಂತರೇ
ಪಶ್ಚಾತ್ತ್ಯಕಾವರ್ತಪದಾ ಗೋದಾವರೋದಾಯು ಸಾನದಾ ॥ 11 ॥

ಗೋದೆ ಸಮಸ್ತ ಫಲದೆ ಸ್ನಾನ ಒದಗಿ ಮಾ
ಡಿದರೊಮ್ಮೆ ವೈಕುಂಠ ಪದವೀವೆ (ಪ)
ಸಿಂಹರಾಸಿಯಲಿ ಸುರಗುರು ಬಂದುದ ಕೇಳಿ
ಅಂಹಂ ರಾಸಿಗಳು ಸಂಹಾರಕಾಗಿ
ಬಂಹ್ಮಾಂಡಯಾನದಿ ಬಂದು ನಿಮ್ಮನು ಕಂಡೆ
ಅಂಹಂಗಳ ಪರಿಹರಿಸಿ ಮುಕುತಿಯ ಕೊಡು ದೇವಿ (4)
ಘನ ಭಕುತಿಯನಿತ್ತು ರಕ್ಷಿಸು ದೇವಿ (5)

ಸಂಸ್ಕೃತ ಶ್ಲೋಕಗಳ 'ಪಾಪಹಾರಿಣಿ, ಗುರು ಸಿಂಹರಾಶಿಗಿರಲು ಪುಣ್ಯದಾಯಿನಿ, ಸಮಸ್ತ ಫಲದೆ, ಭಕ್ತಿ ಮುಕ್ತಿದೋರು' ಎಂಬ ಭಾವ ಕನ್ನಡ ಹಾಡಿನಲ್ಲೂ ಇದ್ದು, ಅನುಪ್ರಾಸಪೂರ್ಣ ಶಬ್ದಪೂರ್ಣ ಶಬ್ದ ಸಾಮ್ಯ ಉಭಯತ್ರ ಸ್ಪಷ್ಟವಾಗಿವೆ. 'ತೀರ್ಥಪ್ರಬಂಧ' ಆರಂಭವಾಗಿನ

ನಿರ್ಮಗ್ನೋಗ್ರ ಭವಾರ್ಣವೇ ನಿಜಮನೋಭೀಷ್ಟಂ ದಿಶಾಮಿತಿ ಯ:
ಸಮ್ಯಗ್ ಜ್ಞಾಪಯಿತುಂ ಕರೇಣ ವಿಲಸನ ಮಂಥಾನಮನ್ಯೇನ ಚ ।
ರಮ್ಯಂ ದಾಮ ದಧನ ಮಹೇಶ ರಜತ ಗ್ರಾಮಶ್ರಿಯೋಲಂಕೃತಿ:
ಕರ್ಮಂದೀಶ್ವರ ಭಕ್ತಿ ಬಂಧನ ವಶ: ಪ್ರೀತೋಸ್ತು ಕೃಷ್ಣಪ್ರಭು: ॥

ಎನ್ನುವ ಅನ್ನಬ್ರಹ್ಮನ ವರ್ಣನೆ, ನಂತರ ಬರುವ 'ನನ್ನನೆ ಸಂಸಾರ ಸಾಗರ ಸೊಂಟದಷ್ಟಾಗುವುದೆಂದು ಸನ್ನೆಯಿಂದ ಸೂಚಿಸುವ' ನಾದಬ್ರಹ್ಮನ ವರ್ಣನೆ, ಹಾಗೂ 'ಬಲಗೈಯಿಂದ ಪಾದ ತೋರಿ ಪಾದಭಜಕರಿಗೆ ಭವಸಾಗರ. ಕಟಿ ಪ್ರಮಾಣವೆಂದು ಎಡಗೈ ಕಟಿಯಲ್ಲಿರಿಸಿದ' ಕಾಂಚನ ಬ್ರಹ್ಮನ ವರ್ಣನೆ ಸಮಾನ ಕಲ್ಪನೆ ಇತ್ತಿವೆ; 'ರುಕ್ಮಿಣೀಶ ವಿಜಯ' 17, 14ರಲ್ಲೂ ಇಂಥದೇ ಉಡುಪಿ ಕೃಷ್ಣನ ವರ್ಣನೆ ಇದ್ದು — 'ಬಿಡದೆ ಭಜಿಸಿ .. ಉಡುಪಿಯ ಕೃಷ್ಣನ' ಎಂಬ ಹಾಡಿನ ನುಡಿಗಳಲ್ಲಿದು ಪ್ರತಿಧ್ವನಿತ —

ಪೊಡವಿಯೊಳಗೆ ತನ್ನಡಿಗಳ ಧೇನಿಪ
ರಡಿಗಡಿಗವರ ವಾಂಛಿತ ವಸ್ತುವ
ಕಡೆದು ಕೊಡುವೆನೆಂದು ಕಡೆಗೋಲು ನೇಣನೆ
ಪಿಡಿದಿಹ ಸಿರಿಯುದಾ ದೃಢಕೆ ವೆಗ್ಗಳದನ (1)

ಹರಿ ಸರ್ವೋತ್ತಮನೆಂಬೊ ಪರಮ ಸಿದ್ಧಾಂತಕ್ಕೆ ಮು
ಚ್ಚರಿಸುವ ಕುಮತದ ಕುಜನರ
ಭರದಿ ಬಂಧಿಸಿ ಬನ್ನಂಬಡಿದು ಶಿಕ್ಷಿಪೆನೆಂದು
ವರಪಾಶದಂಡಧಾರಿಯಾಗಿ ತೋರಿಪ್ಪನ (2)

ಭಕ್ತವತ್ಸಲನೆಂಬೊ ಸುಲಭೋಕ್ತಿಯನು ಬುಧ
ನಿಕರಕ್ಕೆ ಪೇಳಲು ದ್ವಾರಕಾಪುರಿಯ
ಸುಖತೀರ್ಥ ಮುನಿಗೆ ಸುಖಕರನಾಗಿ ಬಂದ
ಅಕುಟಿಲ ಕೃಷ್ಣ ಹಯವದನರಾಯ (3)

ಪಶ್ಚಿಮ ಪ್ರಬಂಧದಲ್ಲಿ ವರ್ಣಿಸಿದ (52) ಕ್ರೋಡದ ಶಂಕರನಾರಾಯಣನನ್ನು 'ಹುಂಕಾರ ದಿಂದಲಿ ನಿತ್ಯ ಭೂತಗಳಟ್ಟ ಕಿಂಕರರನು ಸಲಹುತಲಿ, ಪಂಕಜಾಕ್ಷನ ಪಾಡಿ ಪೊಗಳುವ ಕೋಡಿಯ ಶಂಕರನಾರಾಯಣರ' ಎಂಬ ಹಾಡು ಕೊಂಡಾಡಿದೆ; ಹರಿಹರ ಕ್ಷೇತ್ರದ 'ಯುದೇಕೇನ ನ ವಧ್ಯೋರಿ:' ಇತ್ಯಾದಿ ಲಿಂಗವರ್ಣನೆ (61) 'ಹರಿ ಪರಮಪುರುಷ' ಎಂಬ ಹಾಡಿನ 'ಒಬ್ಬನಿಂದಲಿ ಸಾಯನೆಂಬೊ ರಕ್ಕಸನೊಬ್ಬರೊಬ್ಬರರ್ಧ ಭಾಗವತಾಳಿ ಐತಂದು, ಕೊಬ್ಬ ಮುರಿವರು ಖಳನ ಹರಿಹರರು ತಾವೀಗ, ಒಬ್ಬನಿಂದಲಿ ದನುಜನೆಂತಳಿದನು' ಎಂಬ ಅನುಡಿಯಾಗಿದೆ (2). ಇದರಂತೆ ದಕ್ಷಿಣ ಪ್ರಬಂಧಾದಿಯ 'ಕಲ್ಪಾಂತೇ ಸುರಭೂಸುರಾಸುರ' ಇತ್ಯಾದಿ ಶ್ಲೋಕಗಳ 'ಎಲ್ಲರ ಸಂಹರಿಸುವ ರಾಮ ಪಾಪ ಪರಿಹಾರಕ್ಕೆ ಯಾವ ರುದ್ರನ ಪೂಜಿಸಿದ, ತನ್ನನ್ನೇ ಧ್ಯಾನಿಸುತ್ತ ತಾರಕ ಬ್ರಹ್ಮಮಂತ್ರ ಜಪಿಸುವ ರುದ್ರನ ಪೂಜಿಸುವ ಅವಶ್ಯಕತೆ ರಾಮನಿಗೇನಿದೆ?' ಎಂಬ ಭಾವ 'ಹರಿಸರ್ವೋತ್ತಮ ಸಾರದ 'ರಾವಣನ ಕೊಂದ ಪಾಪವ ಕಳೆಯಬೇಕೆಂದು ರಘುಪತಿ ಶಿವನ ಪೂಜಿಸಿದ ಗಡ! ವಿಧಿಯ ತಲೆ ಕಡಿದ ಮಾತ್ರದಲಿ ಕರದ ಕಪಾಲವ ಕಾಣನೆ? ಸ್ವಾಮಿ ಆಲಯದಿ ಬೊಮ್ಮನ ಕೊಲಿಸನೆ? ಸೇತುವೆಯ ಕಂಡ ನರಗೆ ಬ್ರಹ್ಮಹತ್ಯ ಕೆಡುವು ದೆಂದು ಶ್ರುತಿ ಮನ್ನಿಸಲು ಸೇತು ಮುಖದಿಂದವನ ಪ್ರತಿಷ್ಠಿಸಿದ! ರಾವಣನ ವಧೆಯ ಮಾಡಿದ ಸೇತು ಪತಿತ ಪಾವನವೆನಲು, ಅವನ ಕೊಂದವನ ಪತಿತ ಪಾವನನೆಂಬುದೇ ಉಚಿತ ಯುಕುತಿ!' (2—5) ಎನ್ನುವಲ್ಲದೆ.

'ರುಕ್ಮಿಣೀಶ ವಿಜಯ'ದ ಕೃಷ್ಣಾವತಾರಿ ತಾಯಿ ತಂದೆಗೆ ಮೂಲರೂಪದೋರಿದಾಗ 'ಚತುರ್ಭುಜ— ಪೀತಾಂಬರ ಹೇಗೆ ಬಂದುವು? ಕಂಬ ಒಡೆದು ಮೂಡಿದವನೇ ಈತ' (1,52—54) ಎನ್ನುವುದು, 'ಲಕ್ಷ್ಮೀಶೋಭಾನೆ'ಯ 'ಚತುರ್ಭುಜ ಪೀತಾಂಬರ ಕಿರೀಟದ ಶ್ರೀ ವಿಠ್ಠಲನನ್ನು ಪುಟ್ಟಿದನೆನಬಹುದೇ' (62—63) ಎಂಬುದರ ಪ್ರತಿಧ್ವನಿ; ಇದನ್ನೇ 'ಬಾಲಲೀಲೆ'

ಶುಕ್ಲ ಶೋಣಿತ ಸಂಬಂಧ ಪ್ರಸಕ್ತಿ ತನಗಿಲ್ಲವೆಂದು
ಶಂಖ ಚಕ್ರ ಚತುರ್ಭುಜದಲವತರಿಸಿದನು (ಪು·65)

ಎಂದಿದೆ; 'ಭ್ರಮರಗೀತೆ' 'ಮರ್ತ್ಯರೊಳಗೆ ಎಣಿಸಲಾಗದು, ಕೃಷ್ಣನವಳ ಉದರದಿ ಬಂದುದಿಲ್ಲ ಸತ್ಯಸಂಕಲ್ಪನಿವನೆಲೆ' ಎಂದಿದೆ (22,15); 'ಸ್ವಪ್ನಪದ' 'ದೇವಕಿಯು ಬಸುರಿಂ ನಾನೇ ಬಂದ ಬಗೆಯ ಮೂಲ ರೂಪವನು ಕೋವಿದರು ಬೋಧಿಸಲೆ— ಶ್ರೀವತ್ಸವನು ಧರಿಸಿದ' (27) ಎಂದಿದೆ; ಕನ್ನಡ ನಿರ್ಣಯ 'ಸ್ತಂಭಸ್ಥಾನೀಯಳಾದ ಸತ್ಯವತಿಯಲ್ಲಿ ಆವಿರ್ಭೂತನಾದ, ದೇವಕೀರೂಪದ ಕಂಭದಲ್ಲಿ ವ್ಯಕ್ತನಾದ' ಎಂದಿದೆ (1—178, 2—47). ಕೃಷ್ಣನ ಗೋಕುಲಕ್ಕೆ ಕೊಂಡೊಯ್ಯುವಾಗ ಶೇಷ ಕೊಡೆಹಿಡಿದು, ಯಮುನೆ ಪತಿಯನ್ನೆ ನೆನೆದು ದಾರಿ ಬಿಟ್ಟುದು ರುಕ್ಮಿಣೀಶ ವಿಜಯ (1,61—63), ಬಾಲಲೀಲೆ (ಪು·100), ಕನ್ನಡ ನಿರ್ಣಯ (2,48)ಗಳಲ್ಲಿ ಸಮಾನೋಕ್ತ. ತತ್ವವಾದಾನುಸಾರ ಮಾತನ್ಯಾದಿಗಳ ಜೀವದ್ವಯಕ್ಕೆ ಮುಕ್ತಿ— ತಮಸ್ಸಾಗುವುದು ರುಕ್ಮಿಣೀಶ ವಿಜಯದ 2—41, 11—62 ಹಾಗೂ ಕನ್ನಡ ನಿರ್ಣಯದ 2—49 ರಲ್ಲಿದೆ. ಯಶೋದೆ ಕಟ್ಟಿಗೆಯಿಂದ ಕೃಷ್ಣನ ಹೊಡೆಯ ಹೋದದ್ದು ರು·ವಿ· 4—6, ಕ·ನಿರ್ಣಯ 2—49ರಲ್ಲಿದೆ. ಕಾಳೀಯ ಮರ್ದನ ನೃತ್ಯಕ್ಕೆ ಬ್ರಹ್ಮಾದಿ ಶಿವ ಹಿಮ್ಮೇಳ ಒದಗಿಸಿದ್ದು ವಾದಿರಾಜರ ಕೃತಿಗಳಲ್ಲುಕ್ತ; ಕೃಷ್ಣ ಪಾದಾಂಕಿತ ಕಾಳೀಯನಿಗೆ ಗರುಡನ ಭಯವಿಲ್ಲೆಂದಿದೆ ರು·ವಿ· (4—71), ಬಾಲಲೀಲೆ (ಪು·488), ಕನ್ನಡ ನಿರ್ಣಯ (2—61); ಗೋಪಿಯರಿಗೆ ಅಕ್ರೂರ ಕ್ರೂರನೆನಿಸಿದ್ದು ರು·ವಿ·(10—39), ಬಾಲಲೀಲೆ (ಪು·770), ಕ·ನಿರ್ಣಯ (2—67)ದಲ್ಲಿದೆ. ರು·ವಿ·(17,15—24)ರಂತೆ ಬಾಲಲೀಲೆಯೂ ದಶಾವತಾರವಿತ್ತಿದೆ (3,24—49); ನಿರ್ಣಯವೂ ವರ್ಣಿಸಿದೆ (3). ಕೃಷ್ಣನ ಅಷ್ಟಮಹಿಷಿಯರನ್ನು ಕುರಿತ ಸ್ತೋತ್ರವಲ್ಲದೆ ರು·ವಿ· (19—12), ಬಾಲಲೀಲೆ (ಉ·206—9) ಈ ಪ್ರಸ್ತಾಪವೂ ಗಮನಾರ್ಹ. ಬಹುಶಃ ವಾದಿರಾಜರ ಇವೆರಡೂ ಭಾಗವತ ಮೂಲಕ ಕೃತಿಗೆ ಮಧ್ವರ ಭಾಗವತ— ಭಾರತ ತಾತ್ಪರ್ಯ ನಿರ್ಣಯಗಳ ಪ್ರಭಾವದ ಮಲಯವಿರುವುದರಿಂದ ಕನ್ನಡ ನಿರ್ಣಯದ ಕಥೆಯೂ ಇವುಗಳಿಗೆ

ಬಹಳಷ್ಟು ಸಮಾನಾಂತರವಾಗಿದೆ. ಉದಾ — ಕಂಸವಧೆಯ ವರೆಗಿನ ಬಾಲಲೀಲೆಗಳು; ನಂತರದ ಗೋಮಂತದಲ್ಲಿಯ ಜರಾಸಂಧ ಭಂಗ, ಕೃಷ್ಣನ ದಿಗ್ವಿಜಯ, ದ್ರೌಪದೀ ಸ್ವಯಂವರ, ಪಾರಿಜಾತ ಹರಣ, ಸುಭದ್ರಾಹರಣ, ಖಾಂಡವದಹನ, ಕೃಷ್ಣ ರುಕ್ಮಿಣೀ ಪ್ರೇಮ ಕಲಹ, ಉದಂಕ ವೃತ್ತಾಂತ ಮುಂತಾದ ಪ್ರೌಢ ಲೀಲೆಗಳು ಮೂರೂ ಕೃತಿಗೆ ಸಮಾನ. ಆದರೆ ಹಾಗೆಂದು ಅಂತರವಿಲ್ಲೆಂದಲ್ಲ. ಉದಾ — ರಾಮಕೃಷ್ಣರ ತೊಟ್ಟಿಲಿಕ್ಕುವುದು, ಅಕ್ರೂರನಿಗೆ ಊಟೋಪಚಾರಗೈವುದು 'ಬಾಲಲೀಲೆ'ಯ ವಿಶೇಷ; 'ರುಕ್ಮಿಣೀಶ ವಿಜಯ' ರಾಸಕ್ರೀಡೆಯನ್ನು 4 ಸರ್ಗ ವಿಸ್ತರಿಸಿದೆ, 'ಬಾಲಲೀಲೆ' ಗೋಪಿಯರಿಗೆ ವಸ್ತ್ರವಿತ್ತುದನ್ನು ಭಾಗವತದಂತೆ ಚಿತ್ರಿಸಿದೆ; ರುಕ್ಮಿಣೀ ಹರಣ— ಕಲ್ಯಾಣಗಳೇ ಮುಖ್ಯ ವಸ್ತುವಾಗಿ ಸಕ್ಕದ ಕಾವ್ಯದ ಕೊನೆಯ 6 ಸರ್ಗ — 330 ಶ್ಲೋಕಗಳಿಗೆ ಹರಡಿದರೆ, ಕನ್ನಡ ಕಾವ್ಯದ 100 ನುಡಿಗಳಲ್ಲಿ ಅಡಕವಾಗಿವೆ. 'ರುಕ್ಮಿಣೀಶ ವಿಜಯ'ದಂತೆ 'ಲಕ್ಷ್ಮೀಶೋಭಾನೆ'ಯೂ ಯಮುನ ಅಂಜಿಸುವಂಥದು ಹರಿನಾಮ ಎಂದಿದೆ (4— 6,27); ಇವೆರಡರ ಸ್ವಯಂವರ ಸಂದರ್ಭ ಹರಿಸರ್ವೋತ್ತಮತ್ವ ಸೂಚಿಸಿವೆ; ಆಗ ಶೇಷನಿಗೆ 'ಅದೃಶ್ಯಾಂಘ್ರಿ' ಎಂದಿವೆ ಎರಡೂ ಕೃತಿ (16— 39, 20). 'ರುಕ್ಮಿಣೀಶ ವಿಜಯ'ದ 8— 29, 17— 12 ನೆಯ ಶ್ಲೋಕಗಳಲ್ಲಿ ಗೋಪಿಯರು ಲಕ್ಷ್ಮೀಪತಿಯನ್ನು ಸರ್ವೋತ್ತಮನೆಂದುದೂ, ಮುನಿಗಳು ತ್ರಿವಿಧ ಜೀವರಿಗೆ ಯೋಗ್ಯ ಫಲದೀವ ಹರಿಯನ್ನು ನುತಿಸಿದ್ದೂ, ಬಾಲಕರ ಬುದ್ಧಿ ವೈಶದ್ಯಾರ್ಥ ಸಂಸ್ಕೃತ ಗದ್ಯ ರೂಪದ 'ಉಪನ್ಯಾಸ ರತ್ನ'ಗಳಲ್ಲಿ ನಿರೂಪಿತ; ಕನ್ನಡ ನಿರ್ಣಯವೂ ಶ್ರೀ— ಸ್ತ್ರೀಸಾಮಾನ್ಯರನ್ನು ಕುರಿತು ಪ್ರತಿಪಾದಿತ.

ವಾದಿರಾಜರು 'ಸ್ವಪ್ನ ವೃಂದಾವನಾಖ್ಯಾನ' ಹೇಳಿ ಬರೆಯಿಸುವಾಗಲೇ (ಸು. 1540) ಧ್ವಜಸ್ತಂಭ ನಿಲ್ಲಿಸಿದ್ದೂ ಕೃತಿಯುಲ್ಲೇಖ (11,82). ಉದಯನ ಕನಸು ಕಾಣುತ್ತಿದ್ದಂತೆ ವಾಸ್ತವತಃ ವಾಸವದತ್ತೆ ಸಂಪಾದಿಸಿದಂತೆ ಸಂವಿಧಾನಿಸಿದ ಭಾಸ ಬರಿ ಕಲ್ಪಿಸಿದ. ಆದರಿಲ್ಲಿ ಸ್ತಂಭ ನಿಂತ ಬಹಿರ್ಘಟನೆ, ಅದನ್ನು ಭುಜಸ್ತಂಭದಿಂದ ಧರಿಸಿದೆನೆಂಬ ಒಳ ಉಲ್ಲೇಖಗಳ ಸಂವಾದ ಸ್ವಪ್ನ ಸತ್ಯವಲ್ಲ — ಲೌಕಿಕ ಸತ್ಯ. ಕೃತಿ 10— 74ರಲ್ಲಿ ಸೂಚಿಸಿದಂತೆ 'ಅಣು ವೃಂದಾವನಾಖ್ಯಾನ'ವೂ ಶಾಸನಸ್ಥವಾಗಿದೆ (ಸು. 1542). ಅನತಿ ಕಾಲದಲ್ಲಿ (ಸು. 1545) ಮೂಲಾಖ್ಯಾನ ಬರೆದುಕೊಂಡ ರಾಮಚಂದ್ರಾಚಾರ್ಯರೇ 'ವಾದಿರಾಜ ಗುರುಚರಿತಾಮೃತ'ದಲ್ಲಿ ಶಿಲಾಖ್ಯಾನವನ್ನೂ ಉಲ್ಲೇಖಿಸಿದ್ದಾರೆ (7— 17, 23). ಇಂಥ ಅಪೂರ್ವ ಕೃತಿಯ ಮೂಲಕ ನಿಜಸ್ವರೂಪ

ಸಾರಿದ ವಾದಿರಾಜರಿಗೆ ತಾವಿದ್ದಾಗಲೇ 'ಭಾರತ ತಾತ್ಪರ್ಯ ನಿರ್ಣಯ'ವನ್ನು ಕನ್ನಡದಲ್ಲಿ ವ್ಯಾಖ್ಯಾನಿಸಿ ಬರೆಯಿಸುವುದೊಂದಚ್ಚರಿಯೇ? ಅದರ ಕಾವ್ಯರೂಪದ ಉಕ್ತ ಲೇಖನವೆನಿಸುವ ಆಖ್ಯಾನದ ಪ್ರಾಸಮಯ ಶೈಲಿ, ಇನ್ನೋರ್ವರೇ ಬರೆದ ಗದ್ಯ ವ್ಯಾಖ್ಯಾನದಲ್ಲಿಷ್ಟು ಬರಲವಕಾಶವಾಗಿಲ್ಲ. 'ಲಕ್ಷ್ಮೀಶೋಭಾನೆ'ಯಲ್ಲಿ 'ಲಕ್ಷ್ಮೀಕಾಂತನ ಕಂದ' ಎಂದು ಹೇಳಿಕೊಂಡುದು (109), ಸ್ವಪ್ನಾಖ್ಯಾನದ 'ವೇದವ್ಯಾಸರು ಮಗನೆಂದು ನನ್ನ ಲಕ್ಷ್ಮಿಗಿತ್ತರು' (4,14) ಎಂಬುದಕ್ಕೆ ಸಂವಾದಿ ಎನಿಸಿದೆ; 'ದಯಮಾಡೊ ಬಿಂದುಮಾಧವ' ಎನ್ನುವ ಹಾಡಿಗೆ 'ಶ್ರೀನಿವಾಸ ಬಿಂದುಮಾಧವರಲ್ಲ ವೃಂದಾವನಕ್ಕೆ ಬಂದಿಹ್ಯಾರೆ' ಎಂಬ ಸ್ವಪ್ನೋಕ್ತಿ (20,91) ಸಂವಾದಿಯಾಗಿದೆ. 'ಬಾಲಲೀಲೆ'ಯಂತೆ 'ಆಖ್ಯಾನ'ದಲ್ಲೂ ದಶಾವತಾರ, ಪುನರಾವರ್ತನೆಗಳಿವೆ.

## ಸ್ತೋತ್ರ ಕೀರ್ತನ ಸಾಮ್ಯ

ವಾದಿರಾಜರ ಸಂಸ್ಕೃತ ಸ್ತೋತ್ರಗಳೂ ಕನ್ನಡ ಕೃತಿಗಳೊಡನೆ ಸಾಮ್ಯದೋರಿವೆ. 'ಯದಿ ದಿಶಿ ಸಮಯನ ಪಟುತಾಂ' ಎಂಬ 'ಕೃಷ್ಣಸ್ತುತಿ', 'ಆರ್ಯಾವೃತ್ತಂ' ಎಂಬ ಲಘ್ವಾರ್ಯಾ ವೃತ್ತಗಳಂತೆ 'ವೈಕುಂಠ ವರ್ಣನೆ'ಯ 'ಕಣ್ಣುಕಾಣದ ಬಲು ಜೀರ್ಣ ದೇಹದವನ ತಿದ್ದಿ' ಎಂಬ ಉಕ್ತಿ (4–106), 'ಈಗಲೋ ಇನ್ನಾವಾಗಲೋ ಈ ತನುವು ಪೋಗದಿರದು, ವೃದ್ಧನಾದೆನು ಪಲ್ಗಳೆಲ್ಲ ಬಿದ್ದಿಹ ಕಣ್ಣುಕಾಣಬಾರದು ಎದ್ದು ನಿಲ್ಲಲಾರೆನಯ್ಯ', 'ಎನಗೆ ನೀನೇ ಬಂಧು, ಎನಗಿರ್ದ ಆಪದ್ದೋಷವ ರಕ್ಷಿಸಿಕೊಡು' ಎನ್ನುವ ಹಾಡಿನ ನುಡಿ ವಾದಿರಾಜರ ವೃದ್ಧಾಪ್ಯ ದೈನ್ಯವನ್ನು ನಿವೇದಿಸಿವೆ. 'ದಶಾವತಾರ ಸ್ತುತಿ–ಸ್ತೋತ್ರ' ಹಾಗೂ 'ಶ್ರೀ ಬ್ರಹ್ಮ ರುದ್ರ ಗರುಡೇಂದ್ರ' ಎಂಬ 'ಕೃಷ್ಣಸ್ತೋತ್ರ'ದ 7ನೆಯ ಶ್ಲೋಕಗಳಂತೆ, ಕನ್ನಡದ ಹಲವು ಹಿರಿಯ– ಕಿರಿಯ ಕೃತಿಗಳಲ್ಲಿ ವೈವಿಧ್ಯಪೂರ್ಣ ದಶಾವತಾರ ಚಿತ್ರಣವಿರುವುದನ್ನಾಗಲೇ ಪರಿಶೀಲಿಸಿದ್ದೇವೆ (ಸಕ್ಕದದ ಕೆಲವು ಕಿರಿಯ ಕೃತಿಗಳೂ ಇದಕ್ಕೆ ಹೊರತಲ್ಲವೆನ್ನಲು 'ರುಕ್ಮಿಣೀಶ ವಿಜಯ ವೃಂದಾವನಾಖ್ಯಾನ' ನಿದರ್ಶಿತ). 'ಅಂಗುಲ್ಯಾ: ಕಃ ಕವಾಟಂ ಪ್ರಹರತಿ' ಎಂಬ ರಮಾ – ರಮೇಶ ಸ್ತುತಿಯನ್ನುತ್ತರಿಸಿದಂತಿರುವ ಬಾಗಿಲು ತಟ್ಟಿದ ಹಾಡು 'ನಾಗಶಯನನು ನಿನಗಾಗಿಯೆ ಬಂದಿದೆ ಬಾಗಿಲು ತೆರೆಯೆ ಭಾಮೆ'; ಎರಡೂ ನಿಂದಾಸ್ತುತಿಯ ದಶಾವತಾರ ಸ್ತೋತ್ರಗಳೇ. ಕೇಶವಾದಿ 24 ಮೂರ್ತಿಭೇದ ವರ್ಣನ ಸ್ತುತಿಯಂತೆ ಕನ್ನಡದಲ್ಲಿ 4 ಕೇಶವನಾಮಗಳಿವೆ. ಮಲ್ಲಿಕಾಮಾಲೆಯ 'ರೌಪ್ಯಪೀಠ ಕೃಷ್ಣಾಷ್ಟಕ'ದಂತೆಯೇ ತರಳ

ಮಲ್ಲಿಕಾ ಮಾಲೆಯಲ್ಲಿ 'ನೆನೆವೆನನುದಿನ' ಎಂಬ ಕೃಷ್ಣನ ಸಾರ ಕತೆ ಕೊಟ್ಟಿದ್ದಾರೆ. ದ್ವಿಪ್ರಾಸ ಬಿಟ್ಟು. ಸಕ್ಕದದ 'ಕವಿ ಕದಂಬ ಕಂಠಭೂಷಾ' ಕೂಡ ಕೃಷ್ಣನ ಕತೆಯನ್ನೇ ಸಂಗ್ರಹಿಸಿ ತುದಿಗೆ ರಾಮಚರಿತದ ಶ್ಲೋಕ ಹೊಂದಿದೆ. ಉಡುಪಿ ಕೃಷ್ಣನ ಬಣ್ಣಿಸಿದ ಕೃತಿ ಹಲವು ಸಕ್ಕದ ಕನ್ನಡದಲ್ಲುಂಟು. 'ಹಿತಂ ನ ಜಾನಾಮಿ' ಎಂಬ ಕೃಷ್ಣಸ್ತವದಂತೆ 'ಅನುದಿನಾ ಶ್ರವಣ ಮನನಾದಿ ಸಾಧನ ಮಾಡು' ಎಂಬ ಹಾಡೂ ಹರಿಸರ್ವೋತ್ತಮತ್ವ ಸಾರಿದೆ. 'ಅಷ್ಟಮಹಿಷೀ ಸ್ತೋತ್ರ' ವಿಷಯ ರುಕ್ಮಿಣೀಶ ವಿಜಯ (19– 12), ಬಾಲಲೀಲೆ (ಉ.206– 9)ರಲ್ಲಿ ಪ್ರಸ್ತುತ. ವಿಶೇಷ ರೂಪಗಳಾದ ವೇದವ್ಯಾಸ, ತ್ರಿವಿಕ್ರಮ, ಹಯಗ್ರೀವರನ್ನು ಕುರಿತ ಸ್ತೋತ್ರ– ಹಾಡುಗಳೂ ಹಲವಿವೆ; 'ಮಧ್ವ ಹೃತ್ಕಮಲಸ್ಥಿತಂ' ಎಂಬಂತೆಯೇ 'ಮಧ್ವಾಂತರ್ಗತ ವೇದವ್ಯಾಸ' ಎಂಬ ಆರಂಭ ಲಕ್ಷಿಸುವಂತಿದೆ. ರಾಮನನ್ನೇ ಕುರಿತ ಕೆಲವು ಹಾಡು– ಸ್ತೋತ್ರಗಳಂತೆ ರಾಮ– ಕೃಷ್ಣ, ಹಯಗ್ರೀವವರಾಹಾದಿ ರೂಪಗಳೆಲ್ಲವ ಸ್ತುತಿಸಿದ ಕೃತಿಗಳೂ ಸಕ್ಕದದಲ್ಲಿ ಪ್ರಯುಕ್ತ; ಉದಾ – 'ಮಂಗಳಂ ಶ್ರೀರಾಮಚಂದ್ರಗೆ, ಹೇ ರಾಮ ಜಲದಶ್ಯಾಮ, ವೇಣುನಾದ ಪ್ರಿಯ' ಹಯಗ್ರೀವ ವರಾಹ ಸ್ತುತಿ, ವರಾಹ ಹಯಗ್ರೀವ ಸ್ತೋತ್ರ. ಲಕ್ಷ್ಮಿಯನ್ನು ಸ್ತುತಿಸಿದ ತುಲನಾರ್ಹ ಶ್ಲೋಕಗಳಿವು –

> <u>ಅಂಬಾಂ</u> ಪೀತಾಂಬರಶ್ರೋಣೀಂ <u>ಲಂಬಾಲಕ</u> ಲಸ<u>ನ್ಮುಖೀಂ</u>
> ಬಿಂಬಾಧರೋಷ್ಠೀಂ ಕಸ್ತೂರೀಜಂಬಾಲ ತಿಲಕಾಂ ಭಜೇ ॥ 10 ॥
> (ಶ್ರೀಶಗುಣದರ್ಪಣ ಸ್ತೋತ್ರ)

> ಸಿಂಜನ್ನೂಪುರ ಶೋಭಿಪಾದಕಮಲಾಂ ಮಂದಸ್ಮಿತೋದ್<u>ಯನ್ಮುಖೀಂ</u>
> ಕಂಜಾಕ್ಷೀಂ ಕುಚಭಾರಭೀರುವಿಲಸನ್ಮಧ್ಯಾಂ ಲಸತ್ಕಂಕಣಾಂ
> ಶಂಭ್ವಾದ್ಯೈಃ ಪರಿಸೇವಿತಾಂ ಸುವಸನಾಂ ಜಾಂಬೂನದಾಲಂಕೃತಾ
> <u>ಮಂಬಾಂ</u> ತಾಂ ಪ್ರಣತೋಸ್ಮಿ ಕೃಷ್ಣರಮಣೀಂ <u>ಲಂಬಾಲಕಾಂ</u> ರುಕ್ಮಿಣೀಂ
> ॥ 1,4 ॥(ರು.ವಿ.)

ಆದಿ ಪ್ರಾಸದ ಶ್ಲೋಕಗಳಿವು ವಾದಿರಾಜರ ವಿಶಿಷ್ಟ ಶೈಲಿಗೂ ಉತ್ತಮ ಉದಾಹರಣೆ; ಕನ್ನಡದ 'ಇಂದಿರೆ ಮಂದಿರದೊಳು ನಿಂದಿರೆ, ನಮ್ಮನ್ನೇ ಏಮುಲೆ ಕೋಪಮುಲೆ ರಮಾದೇವಿ' ಎಂಬ ಹಾಡೂ ಇದೇ ಶೈಲಿಯವು. ಸಂಸ್ಕೃತದ 'ಮಧ್ವಾಷ್ಟಕ– ವಾಯುಸ್ತುತಿ'ಗಳಂತೆ ಕನ್ನಡದ ಅನೇಕ

ಹಾಡು— ಸುಮಾರ ವಾಯು ಅವತಾರತ್ರಯ ಚಿತ್ರಿಸಿದ್ದನ್ನು ಆಗಲೇ ಗಮನಿಸಿದ್ದೇವೆ; ದುರ್ಗಾದಿ ಸ್ತೋತ್ರಗಳಂತೆ ಕನ್ನಡ ಹಾಡೂ ಕೆಲವು ಸರಸ್ವತೀ, ಭಾರತೀ, ಗೌರೀ ಇತ್ಯಾದಿ ಇತರ ದೇವತಾ ಸ್ತುತಿಯಾಗಿರುವುದನ್ನು ಕೂಡ ನೋಡಿದ್ದೇವೆ. ಇತರ ಸ್ತೋತ್ರಗಳಲ್ಲಿ 'ಸದಾಚಾರ ಸ್ಮೃತಿ' ಇದ್ದಂತೆ 'ದಿನಗಳನು ಕಳೆವ ಜನರ' ಎಂಬ ದಿನಚರಿಯ ಹಾಡಿದೆ, 'ನೈವೇದ್ಯ ಪ್ರಕಾರ ಸ್ತೋತ್ರ'ದಂತೆ 'ಆರೋಗಣೆಯ ಮಾಡು' ಎಂಬಂಥ ಪದಗಳಿವೆ. 'ಪಾಷಂಡ ಮತಖಂಡನ' 129 ಶ್ಲೋಕಗಳ ಸಮಗ್ರ ಕೃತಿಯೂ ಹೌದು, 30 ಶ್ಲೋಕಗಳ ಇನ್ನೊಂದು ಸ್ತೋತ್ರವೂ ಹೌದು; ದ್ವಿಮತಖಂಡನ ಇದು 'ಗುಂಡಕ್ರಿಯೆ'ಯಲ್ಲುಂಟು. ಇದರಂತೆ ಚಕ್ರಾಂಕನಾದ ಬಗ್ಗೆ 76 ಶ್ಲೋಕಗಳ 'ಚಕ್ರಸ್ತುತಿ'ಯ ಸುದರ್ಶನ ಚಕ್ರದ ಬಗ್ಗೆ 13 ಶ್ಲೋಕಗಳ 'ಸಹಸ್ರಾರ ಸ್ತುತಿ'ಗಳಿದ್ದು, 'ವೈಕುಂಠವರ್ಣನೆ' 4—7ರಲ್ಲಿ ನಿಂಬಾರ್ಕಾದಿಗಳೂ ಚಕ್ರ ಧರಿಸುವ 'ಚಕ್ರಸ್ತುತಿ'ಯ ಆರಂಭದ ವಿಚಾರವೇ ಪ್ರಸ್ತುತವಾಗಿದೆ. 'ದಶಾವತಾರ ಸ್ತುತಿ'ಯಂತೆ ಅಶ್ವಧಾಟಿಯಲ್ಲಿ ತ್ರಿಪ್ರಾಸಯುಕ್ತ ಶ್ರೀಪಾದ ರಾಜಾಷ್ಟಕವಿರುವಂತೆ, ಕನ್ನಡ ಹಾಡುಗಳೂ ಜಯರಾಯರನ್ನು ಕೊಂಡಾಡಿವೆ. (ಕನ್ನಡ ಕೃತಿ ಶ್ರೀಪಾದರಾಯ— ವ್ಯಾಸರಾಯರನ್ನೂ ಕುರಿತಿವೆ). ಸಕದದಲ್ಲಿ ಜ್ಯೋತಿಷ್ಯ ವಿಷಯಕ 'ಮುಹೂರ್ತ ರಾಜ' ಇರುವಂತೆ ಕನ್ನಡದಲ್ಲಿ 'ಶಕುನ ಮಾಲಾ (ಪ್ರಶ್ನೋತ್ತರಾವಳಿ)' (ಅನುಬಂಧಿತವಾಗಿ) ಇದೆ. ವಿವಿಧ ಛಂದೋಬಂಧಗಳಲ್ಲಿ ಪ್ರಾಸ— ಲಯಬದ್ಧವಾಗಿರುವ ಇವೆಲ್ಲ ವಾದಿರಾಜೀಯ ಶೈಲಿಯಲ್ಲಿದ್ದು, ಕೊನೆಗೆ ಅವರ ನಾಮ ಅಂಕಿತದ ಮುದ್ರೆ ಒತ್ತಿವೆ.

## ಕನ್ನಡ ಕೃತಿಗಳ ಪಡಿನೆರಳು

ಸಂಸ್ಕೃತ—ಕನ್ನಡ ಕೃತಿ ಸಾಮ್ಯದಂತೆ ಕನ್ನಡ ಕೃತಿಗಳಲ್ಲೇ ಪರಸ್ಪರ ಸಾಮ್ಯ ಕೆಲವೆಡೆಯಿದ್ದು ಏಕಕರ್ತೃತ್ವ ಪೋಷಕವೆನಿಸಿವೆ. 'ಈಗ ಉಂಟು, ಬ್ರಹ್ಮೈಕ್ಯದಲ್ಲಿ ಪೋಗುವುದು ಜಗವೆಂಬ ನುಡಿಸಲ್ಲ; ಇರದ ಅದು ಇರುವಂತೆ ತೋರುವುದೆಂಬುವ ಅಗಮವರಿಯ' (ಸ್ವಪ್ನಪದ 41); 'ತನ್ನ ನಾಲಗೆ ಕತ್ತರಿಸುವವ 'ಏನು ನುಡಿವನೋ — ಕೊಡಲಿಯ ಮೊನೆ ಮುರಿದವ ತರು ಕಡಿವನೇ? ವೇದಾಂತ ಮುನ್ನಿನದೆ ಪುಸಿ ಎಂಬವನೆ ಜಗವ ಯಾತರಿಂದ ಕಡಿಸುವೆ, ನಿನ್ನರ್ಥವ ಎಂತು ಸಾಧಿಪೆ?' (ಗುಂಡಕ್ರಿಯೆ 14); 'ಎಲ್ಲ ಇಲ್ಲವೆಂಬವನ ನಾಲಗೆ ಇಲ್ಲವಾಯಿತಲ್ಲ? ಇನ್ನೆಂತು ನುಡಿವ?' (ವೈಕುಂಠ ವರ್ಣನ, 1,17). 'ನೀ ನಾಯಿ ಎಂದರೇಕೆ ಕೋಪ? ಹೀನೈಕ್ಯ

ಬೈಗಳಾದರೆ ಹಂಸವದನಗೆ ಗುಣವಿಲ್ಲೆಂಬೋದು ಬೈಗಳಲ್ಲವೆಲೊ' (ಗುಂ·ಕ್ರಿ·22); 'ಕಾಲಿಲ್ಲ ಎನಲು ಷೋಡಶ ಮಾನವ, ಶ್ರೀ ಲೋಲನ ನಿರಾಕಾರನೆನುವರೆ? ಗುಣವಿಲ್ಲೆಂಬುದು ನಿನಗೆ ಹೀನವಾದರೆ ಅನಂತಗುಣಾಗ್ರ ಮಾತನೆನಬಹುದೇ?' (ವೈ·ವ·1,24—25); 'ಭೃಗುಮುನಿಯಿಂತುದೆ ಕ್ರೋಧ ಮಾಡಿ ವಿಧಿರುದ್ರರಾಧಿಕ್ಯವಾದುದಿಲ್ಲ, ಶ್ರೀಧವನೆಂತುನೊದಾಗಲೇ ಸರ್ವೋತ್ತಮನಾದ ಕಾರಣ ಕೋಪಿಸದೆ ಹೆದ್ದೈವನಾದ' (ಗುಂ·ಕ್ರಿ·24); 'ಭೃಗು ವಕ್ಷ ನೊದೆಂತುಲು ಆವನ ಕುಂದ ನೋಡದೆ ಇಂದಿರೇಶ ತನ್ನ ಸರ್ವೇಶ್ವರತ್ವ ರಕ್ಷಿಸಿದ' (ವೈ·ವ·1,23)· ಕೆಳಗಿನ ನುಡಿಗಳೆರಡು ತುಲನಾರ್ಹವೆನಿಸಿವೆ —

ನೆನೆವೆ ನಾರಾಯಣನ ಪಾದವ
ನೆನೆವೆ ನಾರಾಯಣಿಯ ಚರಣವ
ನೆನೆವೆ ಪ್ರಾಣನ ಪದವ ಭಾರತಿದೇವಿಯಂಘ್ರಿಯನು (ಸ್ವ·ಪದ 1)

ನೆನೆವೆ ನಾರಾಯಣನ, ನೆನೆವೆ ನಾರಾಯಣಿಯ,
ನೆನೆವೆ ನಾರಾಯಣ ಕುವರರ
ನೆನೆವೆ ಹರಿವಾಹನನ, ನೆನೆವೆ ಹರಿಮಂಚವ
ನೆನೆವೆನು ಹರಿಮುಖ್ಯಸುರರ (ವೈ·ವ·4,97)·

ಇದರಂತೆಯೇ 'ಕಾಲ ತೊಳೆದವನೊಬ್ಬ ತೊಳೆಸಿಕೊಂಡವನೊಬ್ಬ' ಎಂಬ ಹರಿಸರ್ವೋತ್ತಮತ್ವದ ಸಾರದ ನುಡಿ (1), 'ಪೂಜ್ಯನು ಕೇಶನೊಬ್ಬ ಪೂಜ್ಯನಾದನೊಬ್ಬ' ಎಂಬ ಗುಂಡಕ್ರಿಯೆಯ ನುಡಿ' (20) ಸಾಮ್ಯದೋರಿವೆ· ವಿಷ್ಣುವಿಗೆ 'ಬ್ರಹ್ಮ ಮಗ— ರುದ್ರ ಮೊಮ್ಮಗ' ಎಂದಿವೆ ಲಕ್ಷ್ಮೀಶೋಭಾನೆ 26, ಸ್ವಪ್ನಪದ 21· ಲಕ್ಷ್ಮೀಶೋಭಾನೆ 'ಗೋಕುಲ ಕನ್ಯೆಯರ ಸತ್ಯಸಂಕಲ್ಪ ಬೆರೆಸಿದ' (48) ಎಂದರೆ, ವೈಕುಂಠ ವರ್ಣನೆ 'ಅಂಗನಾಜನಕೆ ಆಲಿಂಗನವೀವ ಶುಭಾಂಗ' (1,34) ಎಂದಿದೆ· ಅವರಲ್ಲಿ 'ಹತ್ತು ಹತ್ತುರಂತೆ ಪುತ್ರರ ಸೃಷ್ಟಿಸಿದ' (ಶೋಭಾನೆ 49); 'ಒಬ್ಬೊಬ್ಬರಿಂದ ಹತ್ತು ಮಕ್ಕಳ ಪಡೆದ' (ಬಾಲಲೀಲೆ ಉ·323); ಒಬ್ಬೊಬ್ಬರಿಗೂ ಹತ್ತುಹತ್ತು ಗಂಡುಮಕ್ಕಳು' (ಕ·ನಿರ್ಣಯ 2,187)· 'ವೈಕುಂಠದ ವಾಸಿ ಕೂಪ ಮನೆ ಗೋಪುರಗಳಾಗಿ ರವಿ ನಲ್ಲನ ಚಿತ್ರವ ಚಲಸಬೇಕೆಂದಿಹಳು' (ವೈ·ವ·1,54); 'ಆಲವಲೆ ಛತ್ರ ಚಾಮರ ಬಹುರೂಪವಾಗಿ ಶ್ರೀಧರನ ಸೇವಿಸುವಳು (ಬಾ·ಲೀ·ಉ·437)· ಬಾಲಲೀಲೆ ಪೂ·67—80 ರಲ್ಲಿ ಕೃಷ್ಣ ಅವತರಿಸಲು 'ಬೆಳಕು ತುಂಬಿತು' ಎಂದಿರುವುದು

'ಶ್ರೀ ಮಹಾಲಕ್ಷ್ಮಿವಲ್ಲಭಗೆ' ಹಾಡಿನ 'ಬೆಳಕು ತುಂಬಿತು ದ್ವಾರಾವತಿಗೆ' ಎಂಬಲ್ಲಿ ಅನುರಣಿತ· ಬಾಲಲೀಲೆ ದಶಾವತಾರ ಚಿತ್ರಿಸುತ್ತ 'ಇಳಿಬಿಟ್ಟ ಬೆನ್ನಿಲೆತ್ತಿದ ಕೂರ್ಮ' ಎನ್ನುವುದು (241) ಗಜೇಂದ್ರಮೋಕ್ಷದಲ್ಲಿ 'ಭರದಿ ಮಂದರಗಿರಿಯು ಇಳಿಯುತಿರೆ ಬಂದು ಗಿರಿಯನೆತ್ತಿದ ಕೂರ್ಮ' ಎಂದು (25) ವಿಸ್ತೃತ; ಗಜೇಂದ್ರಮೋಕ್ಷದ 'ತ್ರಿಪುರ ಸತಿಯರ ವ್ರತವ ಅಪಹರಿಸಿದವನೆ' (32) ಎಂಬುದು ಹನುಮ ಸುವ್ವಾಲಿಗೆ ಮುನ್ನ 'ತ್ರಿಪುರರ ಸತಿಯರ ಅಪಹರಿಸಿ ವ್ರತಗಳನ್ನು ನಿಪುಣನಾಗಿ ಗೆಲಿದು ಬಂದ ಚಪಲನಲ್ಲವೇ' (12) ಎಂದಾಗಿದೆ· ಈ ನುಡಿಗಳನ್ನು ಹೋಲಿಸಿ ನೋಡಿ —

ಹತ್ತು ಎಂಟು ಸಾವಿರ ವರುಷ ಕಷ್ಟಪಟ್ಟು ತಪಸು ಮಾಡಿ
ಚಿಕ್ಕವಗೆ ಸನ್ಯಾಸ ಬೇಡವೆಂದಳು (ಮಧ್ವ ಸುವ್ವಾಲಿ, 32)
ಹತ್ತೆಂಟು ಸಾವಿರ್ವರುಷ ಕಷ್ಟಪಟ್ಟು ತಪವ ಮಾಡೆ
ಸರ್ಪಗಿಂದಿತ್ತನು ಮಗನ ಎಂದಳು (ಬಾಲಲೀಲೆ, ಪು·458)

(ಸುವ್ವಾಲಿಯ ಸಾಲಿನಲ್ಲೇ 'ತಪವ' ಎಂಬ ಪಾಠ ಸ್ವೀಕಾರ್ಯ, ಮಿಕ್ಕ ಪಾಠ ಸರಿ ಎನಿಸುತ್ತದೆ)·

ಹಿಡಿಂಬನ ಕೊಂದು ಹಿಡಿಂಬೆಯ ಮದುವೆಯಾದ
ವ್ಯಾಸರಾಯರಾಜ್ಞೆಯಿಂದ ಭೀಮ ಮಗನ ಪಡೆದನು (ಭೀಮ ಸುವ್ವಾಲಿ, 9)
ಹಿಡಿಂಬಾನ ಕೊಂದು ಹಿಡಿಂಬೆಯ ಮದುವ್ಯಾಗಿ
ವ್ಯಾಸರಾಯನಾಜ್ಞೆಯಿಂದ ಭೀಮ ಮಗನ ಪಡೆದನು (ಬಾಲಲೀಲೆ, ಉ·211)

(ಇಲ್ಲಿಯೂ ಸುವ್ವಾಲಿಯ ಪಾಠಗಳೇ ಶುದ್ಧವೆನಿಸುತ್ತದೆ)·

ವಾಯು ದೇವರ ಮೂರವತಾರ ಮಹಿಮೆ ಹೇಳಿ ಕೇಳಿದವರಿಗೆ
ಸಾಯುಜ್ಯ ಮುಕ್ತಿ ಕೊಡುವ ಹಯವದನನು (ಮಧ್ವಸುವ್ವಾಲಿ, 77)
ಆಲೈಸಿ ಈ ಕಥೆಯ ಹೇಳಿದವಗೆ ಕೇಳಿದವಗೆ
ಸಾಯುಜ್ಯ ಪದವಿ ಕೊಡುವ ಶ್ರೀನಿವಾಸನು (ಬಾ·ಲೀ· ಪು·907)
ವಾದಿರಾಜರು ಮಾಡಿದ ಬಾಲಲೀಲೆ ಹೇಳಿದರೆ
ಸಾಯುಜ್ಯ ಪದವಿ ಕೊಡುವ ಹಯವದನನು (ಬಾ·ಲೀ·ಪು·908)
ವಾದಿರಾಜರು ಮಾಡಿದಂಥ ಬಾಲಲೀಲೆ ಹೇಳಿದವರಿಗೆ
ಸಾಯುಜ್ಯ ಮುಕ್ತಿ ಕೊಡುವ ಶ್ರೀ ಹಯವದನನು (ಬಾ·ಲೀ·ಉ·511)

(ಈ ಸಾಯುಜ್ಯ ಮುಕ್ತಿಯನ್ನು ಗಜೇಂದ್ರ ಮೋಕ್ಷದಂತ್ಯ ಹಾಗೂ ಕೆಲವು ಹಾಡುಗಳಲ್ಲಿ

ಅಲ್ಲದೆ, ವ್ಯ.ವ. ಬಾಲಲೀಲೆಗಳ ಒಡಲಲ್ಲಿ ಕೂಡ ಉಲ್ಲೇಖಿಸಿದ್ದಾರೆ ವಾದಿರಾಜರು; ಕಾರಣ, ಆದರ ಮೇಲವರಿಗೆ ವಿಶೇಷ ಒಲವಿದ್ದಂತಿದೆ). ವಿಶ್ವರೂಪ ಕಂಡ ಅಕ್ರೂರ— ಕೃಷ್ಣ ಕುಬ್ಜಾ ಸಂವಾದ, ಕೃಷ್ಣ— ಚಾಣೂರ ಸಂವಾದ ಸಾಮ್ಯ ಬಾಲಲೀಲೆ— ನಿರ್ಣಯ ಟೀಕೆಗಳಲ್ಲಿದೆ. ಬಾಲಲೀಲೆಯ ಪೂರ್ವಾರ್ಧ 844 ಪೂತನಿ ತೃಣಾವರ್ತ ಕೇಶಿಯನ್ನು ಕೊಲ್ಲುವಾಗ ಯೂತರಾಯಿತುಪವಿತ್ರ ಈತಗೆಂದರು ' ಎಂದಂತೆ, ಭ್ರಮರಗೀತೆ 22— 32 'ಗೋಕುಲದಿ ಪೂತನಾದ್ಯನೇಕರ ಕೊಂದ ಕೃಷ್ಣಗೆ ಅನ್ಯರಾಶ್ರಯ ಆಯುಧ ಬೇಕೆ? ' ಎಂದಿದೆ; ಬಾಲಲೀಲೆ ಪೂ.881 'ಕೃಷ್ಣ ಉಗ್ರಸೇನಗೆ ಪಟ್ಟ ಕಟ್ಟಿದ ' ಎಂದಂತೆ, ಭ್ರಮರಗೀತೆ 22— 34 'ಪಟ್ಟವನುಗ್ರಸೇನಗೆ ಕಟ್ಟಿಸಿದ ' ಎಂದಿದೆ. ಜರಾಸಂಧನ ಕೊಲಿಸುವಾಗ ಕೃಷ್ಣ ಟೊಂಗೆ ಮುರಿದು ತೋರಿದನೆಂದಿದೆ ಭಾಗವತ (80— 40), 'ತೃಣದ ಕೊನೆ ತಿರುಗಿ ಮುರಿ ' ಎಂದಿದೆ ಬಾಲಲೀಲೆ ಉ.403,'ಕಡ್ಡಿ ಮುರಿದು ' ಎಂದಿದೆ ನಿರ್ಣಯ ಟೀಕೆ 2— 200. (ವಾಕ್ಯಾವಳಿ) ಪ್ರಯೋಗ ಸಾಮ್ಯ ಹಲವಿವೆ. — ಉದಾ — ದ್ರೌಪದಿಯನ್ನು ಸ್ವಯಂವರದಲ್ಲಿ ಗೆದ್ದ ಅರ್ಜುನ ವಿದುರಾಳಿಗಳಲ್ಲಿ ಕರ್ಣನನ್ನು ಹೊಡೆದಾಗ ಬಾಲಲೀಲೆಯಲ್ಲಿ ಅವನು 'ದಾರಯ್ಯ ನಿನ್ನ ಸ್ವರೂಪ ತೋರಿಸು ' ಎನ್ನಲು 'ದಾರಾದರೇನು ನಿನಗೆ ಧೀರ ಉದಾರ ನಿಲ್ಲು ' ಎಂದರೆ (ಉ.228), ನಿರ್ಣಯ ಟೀಕೆಯಲ್ಲಿ 'ಎಲೋ ನೀ ದಾರು? ಸತ್ಯಂಥ ಅರ್ಜುನ ಬದುಕಿ ಬಂದೀಯಾ? ನಿನ್ನ ಸ್ವರೂಪವೇನು? ' ಎನಲಿಕ್ಕೆ 'ನನ್ನ ಕೊಂಡು ಏನು ಮಾಡತಿ? ಧೀರನಾಗು, ಶೂರತ್ವ ಇಲ್ಲದಿದ್ದರೆ ಹೋಗು ' ಎಂದಿರುವುದು (2,145— 6) ಗಮನಾರ್ಹ. 'ರಾಮರ ' ಎಂಬುದು ಸ್ವಪ್ನಪದ 7, ಬಾಲಲೀಲೆ ಪೂ.376— 443ರಲ್ಲೂ ಕೆಲ ಹಾಡುಗಳಲ್ಲೂ ಇದ್ದರೆ, 'ರಾಮದೇವರು ' ನಿರ್ಣಯ ಟೀಕೆಯಲ್ಲಿ ಹಲವೆಡೆ ಇದೆ. ದಾರು, ಬಾಹೋದು ಉಂಬುವ, ಕೊಂಬುವ, ಖರೆ ಮೊದಲಾದವು ಸ್ವಪ್ನಪದ 29, ಶೋಭಾನೆ 32— 10— 34, ಭ್ರಮರಗೀತೆ 19,1 ಮಾತ್ರವಲ್ಲದೆ ನಿರ್ಣಯ ಟೀಕೆ ಹಾಗೂ ಹಾಡುಗಳಲ್ಲಿರುವುದೂ ಗಮನೀಯ.

ಇಂತು ವಾದಿರಾಜರ ಕೃತಿಗಳನ್ನು ಸಹ ಸಮಾಲೋಚಿಸಿದರೆ, ಹಲವಾರು ಹೊಸ ಅಂಶ ಬೆಳಕಿಗೆ ಬರುತ್ತವೆ. ವಿಸ್ತಾರ ಭಯದಿಂದ ಮೇರೆ ದಿಕ ಪ್ರದರ್ಶನಾರ್ಥ ಕೆಲವನ್ನಷ್ಟೇ ಲಕ್ಷಿಸಿದೆ. ಅವರ 'ರುಕ್ಮಿಣೀಶ ವಿಜಯ, ಯುಕ್ತಿಮಲ್ಲಿಕಾ ' ದಂಥ ಒಂದೊಂದು ಕೃತಿಯೂ ಅಧ್ಯಯನಾರ್ಹವಾಗಿರುತ್ತ, ಎಲ್ಲ ಕೃತಿಗಳ ತೌಲನಿಕ ಅಧ್ಯಯನಕ್ಕೆ ಒದಗುವಷ್ಟು ಸಾಮಗ್ರಿ ಅವರಲ್ಲಿರುವುದು ಅಚ್ಚರಿಯಲ್ಲ.

# 6. ಪ್ರಭಾವಗಳ ಹಿನ್ನೋಟ – ಮುನ್ನೋಟ

ಹಿಂದಿನ ಸಹಸಮಾಲೋಚನೆ ವಾದಿರಾಜರ ಕೃತಿಗಳೊಳಗಿನ ತೌಲನಿಕ ಸಮೀಕ್ಷೆ. ಅವರ ಹಾಗೂ ಇತರರ ಕೃತಿಗಳ ಪರಸ್ಪರ ಪ್ರಭಾವ ಸಮಾಲೋಚನೆ ಹೊರ ಪ್ರಭಾವಗಳ ಹಿನ್ನೋಟ– ಮುನ್ನೋಟ ಬೀರುವಂಥದು. ಅದರಿಂದ ವಾದಿರಾಜರ ಕನ್ನಡ ಕೃತಿಗಳ ಮೇಲೆ ಮುಂಚಿನ ಕೃತಿಗಳ ಪ್ರಭಾವ, ಹಾಗೂ ಮುಂದಿನ ಕೃತಿಗಳ ಮೇಲೆ ವಾದಿರಾಜರ ಕೃತಿಗಳ ಪ್ರಭಾವ ಇಲ್ಲಿ ಪ್ರಸ್ತುತ.

## ಹಿನ್ನೋಟ

ದಾಸವಾಣಿಯು ತತ್ತ್ವ— ಕಥೆ— ನೀತಿಗಳ ಮುಪ್ಪುರಿ ಕ್ರಮಶಃ ತತ್ತ್ವವಾದ, ಪುರಾಣ, ಸಾಮಾನ್ಯ ನೀತಿಗಳಿಂದ ಪ್ರಭಾವಿತ. ಮಧ್ವರು ಶಾಸ್ತ್ರವೆಂದು ಮನ್ನಿಸಿದ ಗ್ರಂಥಗಳ ಪ್ರಭಾವ ದಾಸರ ಕೃತಿಗಳಲ್ಲಿರುವುದು ಸಹಜ. ಮಧ್ವರು 'ಯುಗಾದ್ಯ' ಎಂದ ಶಾಸ್ತ್ರ ಗ್ರಂಥಗಳಲ್ಲಿ ಉಪನಿಷತ್ತು, ಬ್ರಹ್ಮಸೂತ್ರ (ಭಾಷ್ಯ, ಟೀಕೆ, ಟಿಪ್ಪಣಿಗಳು) ಸಮಾವಿಷ್ಟ; 'ಪಂಚರಾತ್ರ, ಭಾಗವತ, ಭಾರತ, ರಾಮಾಯಣ, ಪುರಾಣಗಳೊಡನೆ ಮಧ್ವರ ನಿರ್ಣಯ— ವಿಷ್ಣು ರಹಸ್ಯಾದಿ ಕಥನಾತ್ಮಕ ಸಾಹಿತ್ಯವೇ ಪಂಡಿತರ ಶಾಸ್ತ್ರವನ್ನು ಪಾಮರರಿಗೆ ಸುಗಮಗೊಳಿಸಿತ್ತು. ಇವೆರಡನ್ನೂ ದಾಸರು ಹವಣಾಗಿ ಕನ್ನಡಿಸಿದರು. ಜ್ಞಾನಪೂರ್ವಕ ಭಕ್ತಿ— ವೈರಾಗ್ಯ ಬೋಧಿಸಿದರೂ ಅವರ ದೃಷ್ಟಿ ನಿವೃತ್ತಿಪರವಾಗಿರದೆ ತತ್ತ್ವವಾದದಂತೆ ಪ್ರವೃತ್ತಿಪರವಾಗಿತ್ತು; ಅಹಂಭಾವ ಬಿಟ್ಟು 'ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮಚಾಖಿಲಂ' ಎಂಬ ದಿವ್ಯ ದೃಷ್ಟಿಯಿಂದ ಜ್ಞಾನ— ಭಕ್ತಿ— ಕರ್ಮ ಸಮನ್ವಯಿಸಿ ಹರಿಪ್ರಸಾದಪಾತ್ರರಾಗಿ ಪರಮ ಪುರುಷಾರ್ಥ ಸಾಧಿಸುವುದವರ ಗುರಿಯಾಗಿತ್ತು. ಈ ದೃಷ್ಟಿಯಂತೆ ಅವರ ಸಾಹಿತ್ಯ ಸೃಷ್ಟಿಯಾಯಿತು. ಆದರೆ 'ಯಾವುದೇ ಒಂದು ಕೃತಿಯನ್ನೋ ನುಡಿಯನ್ನೋ ತೆಗೆದುಕೊಂಡು ಸಂಸ್ಕೃತದ ಇಂಥ ಗ್ರಂಥ(ವಚನ)ದ ಪ್ರಭಾವ ಇಲ್ಲಿದೆ ಎಂದು ನಿರ್ದೇಶಿಸಿ ಹೇಳಲು ಬರುವುದಿಲ್ಲ. ಅಲ್ಲಿರುವ ಪ್ರಮೇಯ— ಕಥೆ— ನಿದರ್ಶನಗಳನ್ನು ಹೃದ್ಗತ ಮಾಡಿಕೊಂಡ ದಾಸರು ಭಕ್ತ್ಯುದ್ರೇಕದಿಂದ ದೇವರನಾಮ ರಚಿಸತೊಡಗಿದರೆ ಪ್ರಮೇಯಗಳೆಲ್ಲ ಪುಂಖಾನುಪುಂಖವಾಗಿ ಮೂಡಿಬರುವುವು. ಕೆಲವೊಮ್ಮೆ ಆ ಶ್ರುತಿ— ಸ್ಮೃತಿ ವಚನಗಳೇ ಉಕ್ಕಿ ಬರುವುವು. ಸಂಸ್ಕೃತ ಸುವರ್ಣಪಾತ್ರದ ಆಧ್ಯಾತ್ಮ ಪಂಚಾಮೃತವನ್ನು ಕನ್ನಡದ ಕರಂಡಕದಲ್ಲಿ ಸುರುವಿದಂತಿರುತ್ತದೆ. ಆ ಪಾತ್ರ

ಬರಿದಾಗದ ಉಕ್ತಿ, ಇದು ತುಂಬುತ್ತದೆ, ಇದು ಉಕ್ತಿ ಸಜ್ಜನರ ಹೃದಯವು ತುಂಬುತ್ತದೆ' (ಕೆ.ಟಿ. ಪಾಂಡುರಂಗಿ, ವೇದಾಂತ ಗ್ರಂಥಗಳ ಪ್ರಭಾವ, ಹರಿದಾಸ ಸಾಹಿತ್ಯ ಸಮೀಕ್ಷೆ, 64).

ವಾದಿರಾಜರಿಗೆ ಹಿಂದಣ ಮಾಧ್ವ ಕೃತಿಕಾರರೆಂದರೆ ಮುಖ್ಯವಾಗಿ ಮಧ್ವ– ಜಯತೀರ್ಥ, ಶ್ರೀಪಾದರಾಯ– ವ್ಯಾಸರಾಯರು. ಮಧ್ವ ಸಿದ್ಧಾಂತ ಕನ್ನಡಿಸಿದ ವಾದಿರಾಜರ ಕೃತಿಗಳಲ್ಲಿ ಮೊದಲ ಇಬ್ಬರ ಕೃತಿ ಪ್ರಭಾವ ಅನುಸ್ಯೂತವೆಂದು ಬೇರೆ ಹೇಳಬೇಕಿಲ್ಲ; ಅವರನ್ನೂ ಅವರ ಕೃತಿಗಳನ್ನೂ ವಾದಿರಾಜರು ಅಲ್ಲಲ್ಲಿ ಕೊಂಡಾಡಿಯೂ ಇದ್ದಾರೆ. ಉಳಿದಿಬ್ಬರನ್ನು ಕೂಡ ಕೆಲ ಕೃತಿ ಕೊಂಡಾಡಿದ್ದರೂ ಅವರ ಸಕ್ಕದ– ಕನ್ನಡ ಕೃತಿಗಳ ನೇರ ಪ್ರಭಾವ ವಾದಿರಾಜರಲ್ಲಿಲ್ಲ. ವಸ್ತುತ: 'ನ್ಯಾಯಸುಧಾ, ವಾಗ್ವಜ್ರ, ಚಂದ್ರಿಕಾ'ದಿಗಳ ವಿಷಯವನ್ನು ಹಗುರಗೊಳಿಸಿ ಹೇಳಿದವರು ವಾದಿರಾಜರು ಸಕ್ಕದದಲ್ಲಿ. ಕನ್ನಡ ಭ್ರಮರಗೀತೆಗಳೂ ಮಧ್ವನಾಮ ಅವತಾರ ತ್ರಯಗಳ ಸುಳಾದಿಗಳೂ ಹೇಗೆ ಭಿನ್ನವೆಂದಾಗಲೇ ಗಮನಿಸಿದ್ದೇವೆ. 'ವಾಸುದೇವ ನಿನ್ನ ಮತ್ಸ್ಯಕೂರ್ಮಂಗಳ ದೇಶ ದೇಶದಲ್ಲಿ ಪ್ರಕಟಿಸಲೋ, ಹೇಳಲೋ ರಂಗಯ್ಯ, ಇನ್ನಿವನು ಬರೆದಕೆ ಬಗೆ ಏನು – ಇಷ್ಟು ದಯವುಳ್ಳವನ ಯಾಕೆ ಬರಬೇಡೆಂದಿ' ಎಂಬ ಶ್ರೀಪಾದರಾಯ– ವಾದಿರಾಜರ ಹಾಡುಗಳಲ್ಲಿ ಹಾಗೂ 'ಕಾಣದೆ ನಿಲ್ಲಲಾರೆ ನಿನಗೇನು ಬೇಕದನೀವೆ' ಎಂಬ ಕೃತಿ ಭಾಗಗಳಲ್ಲಲ್ಲದೆ 3 ನುಡಿಗಳಲ್ಲಿ ದಶಾವತಾರಚಿತ್ರ ವ್ಯಾಸ, ವಾದಿರಾಜರ ಹಾಡುಗಳಲ್ಲಿ ತುಸು ಪ್ರಭಾವ– ಪ್ರೇರಣೆ ಇವೆ ಎಂದರೂ, ಮಿಕ್ಕಂತೆ ಅವು ಸ್ವತಂತ್ರ ಕೃತಿ ಎನಿಸುತ್ತವೆ, ಪ್ರತಿಭಾವಂತರ ರಚನೆಗಳಾಗಿವೆ. ಅದರಂತೆ ಅವರ ಸಾಮಾನ್ಯ ಪ್ರೇರಣೆ ಪಡೆದು ವ್ಯಾಸ– ದಾಸಕೂಟ ಎರಡರಲ್ಲೂ ವಾದಿರಾಜರು ಇನ್ನಷ್ಟು ಕೃತಿ ರಚಿಸಿದರು, ಸಾಹಿತ್ಯಕ್ಕೆ ತಮ್ಮ ಕಾಣಿಕೆಯನ್ನು ವಿಸ್ತರಿಸಿದರು. ಅವರ ಸಂಸ್ಕೃತ ಕೃತಿಗಳಾಗಲಿ, ಕನ್ನಡದ ಇಡಿ– ಬಿಡಿ ಕೃತಿಗಳಾಗಲಿ 'ಎಲ್ಲವುಗಳ ಮೇಲೆಯೂ ವೇದಾಂತ ಗ್ರಂಥಗಳ ಪ್ರಭಾವ ವಿಪುಲವಾಗಿದೆ' ಎಂಬ ಕೆ.ಟಿ.ಪಾಂಡುರಂಗಿಯವರ ಹೇಳಿಕೆ ಮಾತ್ರ ದಿಟ (ಅದೇ, ಪು.67).

ಈ ದೃಷ್ಟಿಯಿಂದ ವಾದಿರಾಜರ ಶಾಸ್ತ್ರ ಕೃತಿಗಳು ಹೆಚ್ಚು ತಾತ್ವಿಕ ಪ್ರಭಾವ ತೋರುವುದು ಸ್ವಾಭಾವಿಕ. 'ಲಕ್ಷ್ಮೀಶೋಭಾನೆ' ಅಮೃತಮಥನದ ಕಥೆಯಿಂದ ದ್ವೈತ ಸಿದ್ಧಾಂತದಲ್ಲಿರುವ ಲಕ್ಷ್ಮಿಯ ಸ್ಥಾನ ಹೇಳಿ, ಹರಿಯನ್ನು ವರಿಸಿದಂತೆ ವರ್ಣಿಸಿ ಹರಿಸರ್ವೋತ್ತಮತ್ವ

ಸಾಧಿಸಿದಲ್ಲಿ, ಕೃತಿಯ ತಂತ್ರ ತತ್ವನಿರೂಪಣೆಯನ್ನೇ ವರಿಸಿದೆ. 'ಸ್ವಪ್ನಪದ' ಸ್ವಪ್ನತಂತ್ರದ ಮೂಲಕ ದೃಷ್ಟವಾದ ಹರಿಸರ್ವೋತ್ತಮತ್ವ ಹೇಳಿದೆ; 'ಏಷ ಸರ್ವೇಶಾ'ದಿ ಮಂತ್ರ ಉಲ್ಲೇಖಿಸಿ (15) 'ದ್ವಾಸುಪರ್ಣಾ' ಭೇದಶ್ರುತಿಯನ್ನು ವಿವರಿಸಿದೆ (17). 'ಹರಿಸರ್ವೋತ್ತಮಸಾರ' ರಾಮ– ಕೃಷ್ಣ– ಶಿವ ಕಥಾನಕ ಬಳಸಿ ಚತುರ ಯುಕ್ತಿಗಳಿಂದನ್ವರ್ಥಕವೆನಿಸುವಂತೆ ತತ್ವ ಸಾಧಿಸಿದೆ. 'ಒಂದು ಪ್ರಕಾರವೆ ಸ್ವಾಮಿ ಮಂದಿಯ ರಕ್ಷಿಸುವುದು' ಎಂಬ ಕೀರ್ತನದಂತೆ 'ತತ್ವಸುವ್ವಾಲಿ' ನಮ್ಮ ದೇಹಾಭಿಮಾನಿ ದೇವತೆಗಳನ್ನು ಹೇಳಿ ಹರಿಸರ್ವೋತ್ತಮತ್ವ ಸಾರಿದೆ; 'ಬಿರುದಿನ ಸುವ್ವಾಲಿ' ಅದ್ವೈತವನ್ನೂ ಖಂಡಿಸಿದೆ. 'ಗುಂಡಕ್ರಿಯೆ' ಕೂಡ ವಿಮತ ಖಂಡನೆ ತತ್ವವಾದ ಮಂಡಿಸಿದೆ. 'ವೈಕುಂಠ ವರ್ಣನೆ' ತತ್ವಸಾರ ಎನ್ನುವ ನಾಮಾಂತರವನ್ನೇ ಇರಿಸಿ ಕೊಂಡಿದೆ; ಶ್ರುತಿ ಪುರಾಣಗಳ ಮಥಿಸಿ ದ್ವೈತ ಸಿದ್ಧಾಂತಾನುಸಾರ ಮೋಕ್ಷ, ಲಯ, ಸೃಷ್ಟಿ ಸ್ಥಿತಿಗಳನ್ನು ಬಣ್ಣಿಸಿದೆ; ಸಕ್ಕದ ಕೃತಿ ವಿಷಯಗಳನ್ನಿಂತು 'ಕ್ರೋಢೀಕರಿಸಿ ನಿರೂಪಿಸಿರುವುದು ಸಂಸ್ಕೃತ ವಿದ್ವಾಂಸರಿಗೂ ತುಂಬ ಸಹಾಯಕವಾಗಿದೆ' (ಕೆ.ಟಿ.ಪಾಂಡುರಂಗಿ, ಅದೇ, ಪು.68). ಇದರ ಆದಿಯಲ್ಲಿ ಅವತಾರತ್ರಯ ಸಾಧಿಸಿ, ಭೇದ ಶ್ರುತಿಯ ತತ್ವ ವಿವರಿಸಿ, ಅದ್ವೈತ ಖಂಡಿಸಿ ತತ್ವವಾದ ಸಾಧಿಪಿಸಿದುದನ್ನು ನೋಡಿದರೆ, ದ್ವೈತ ಸಿದ್ಧಾಂತವನ್ನು ಸರ್ವಸಂಗ್ರಾಹಕವಾಗಿ ತಿಳಿಸಿದ ಮೊದಲ ಕನ್ನಡ ಕೃತಿ ಎನಿಸುತ್ತದೆ 'ವೈಕುಂಠ ವರ್ಣನೆ'. ಸಹಜವಾಗಿ ಮಧ್ವ ಭಾಷ್ಯ ಕೇಳಿದ ಫಲವನ್ನು ಪ್ರಶ್ನಿಸಿದಾಗ 'ಮಧ್ವ ವಿಜಯ' 11ರಲ್ಲಿ ಶೇಷನು ವೈಕುಂಠ ವರ್ಣಿಸಿದ್ದರ ಪ್ರಭಾವ ಇಲ್ಲಿರುವಂತೆ, ಹರಿ 'ತತ್ವಸಾರ'ದ ಸೊಬಗು ಜಗನ್ನಾಥದಾಸರ 'ಹರಿಕಥಾಮೃತಸಾರ'ದ ಮೇಲೆ ಪ್ರಭಾವ ಬೀರಿದ್ದರೆ ಆಶ್ಚರ್ಯವಿಲ್ಲ. (ಇವೆರಡರ ಪ್ರಮೇಯಗಳೂ ಒಂದೇ, ಜಗನ್ನಾಥದಾಸರಲ್ಲಷ್ಟು ಇನ್ನೂ ವಿಸ್ತೃತ). ಇಡಿಯ ಕೃತಿಯಂತೆ ಬಿಡಿ ರಚನೆಗಳಲ್ಲೂ ಇದರ ಪ್ರಭಾವವಿಲ್ಲದಿಲ್ಲ. ಉದಾ – ಕನಕದಾಸರ 'ಬಂಟನಾಗಿ ಬಾಗಿಲ ಕಾಯ್ವ' 'ವೈಕುಂಠ ವರ್ಣನೆ'ಯ 'ಚಿತ್ರದ ಬಾಪಟಿ'ಯನ್ನುಲ್ಲೇಖಿಸಿದೆ; ವಿಜಯದಾಸರೂ ಹರಿ 'ಸಾಸಿರ ವರ್ಷ ಮಲಗಿರುವನೆ'ಂದು ಹಾಡಿದ್ದಾರೆ; ಗುರು ಪುರಂದರರ ಮುಕ್ತಿಪ್ರಕಾರಗಳನ್ನೊರೆವ ಹಾಡೂ, ಜಗನ್ನಾಥದಾಸರ 'ಎಂಥಾದೋ ವೈಕುಂಠವೆಂಥಾದೋ' ಎಂಬ ಹಾಡೂ ಇಲ್ಲಿ ಸ್ಮರಣೀಯ. ಮಧ್ವರ 'ಭಾರತ ತಾತ್ಪರ್ಯ ನಿರ್ಣಯ' ಮಹತ್ವದ ಶಾಸ್ತ್ರಗ್ರಂಥವಾಗಿ ತತ್ವವಾದದ ಬೆಳಕಿನಲ್ಲಿ ವಿವೃತವಾದ್ದರಿಂದಲೇ ವಾದಿರಾಜರು ಕನ್ನಡಿಸಿಕೊಟ್ಟುದು, ಸಾಮಾನ್ಯರ ಗದ್ಯ ಟೀಕೆಯ ರೂಪದಲ್ಲಿ. ಈ ಶಾಸ್ತ್ರ ಗ್ರಂಥಗಳು ತಾತ್ವಿಕ ಪ್ರಭಾವಕ್ಕೆಂದು ಹೊರತಾದಾವು?

ಆದರೆ ಕಾಂತಾಸಮ್ಮಿತಿ ಹೆಚ್ಚುವ ಈ ಸಮಗ್ರ ಕಾವ್ಯಗಳಲ್ಲಿ ತಾತ್ವಿಕ ಪ್ರಭಾವ ತಗ್ಗುವುದೂ ಅಷ್ಟೇ ಸಹಜ, ಕಥನಾತ್ಮಕ ಪ್ರಭಾವ ಹಿಗ್ಗುವುದೂ ಅಷ್ಟೇ ನಿಜ. 'ಸುಮಧ್ವ ವಿಜಯ'ದ ಹೆಸರಿನ ಪ್ರಭಾವದ 'ರುಕ್ಮಿಣೀಶ ವಿಜಯ'ದಂಶಗಳನ್ನೊಳಗೊಂಡ 'ಶ್ರೀಕೃಷ್ಣ ಬಾಲಲೀಲೆ' ಭಾಗವತ ದಶಮಸ್ಕಂಧ ಪ್ರಭಾವದಿಂದಲೇ ಪೂರ್ವಾರ್ಧ–ಉತ್ತರಾರ್ಧಗಳಾಗಿ, ಮಧ್ವರ ತಾತ್ಪರ್ಯ ನಿರ್ಣಯಗಳ ಕಥೆ, ತತ್ವ ಮೇಳವಿಸಿಕೊಂಡು ಬಂದ ಸುಂದರ ಖಂಡಕಾವ್ಯವೆಂದಾಗಲೇ ಕಂಡಿದ್ದೇವೆ. ಭಾಗವತ ದ್ವಿತೀಯ ಸ್ಕಂಧದ ಕೆಲ ನುಡಿ ಉಪಲಬ್ಧ (ಅನುಬಂಧಿತ)ವಾಗಿ ವಾದಿರಾಜರು ಇತರ ಸ್ಕಂಧಗಳನ್ನೂ ಕನ್ನಡಿಸಿದ್ದರೋ ಏನೋ? ಇವರಂತೆ ಭಾಗವತ ಕನ್ನಡಿಸಿದ ಪ್ರಸನ್ನ ವೆಂಕಟದಾಸರ ಪೂರ್ವಾರ್ಧ ದಶಮಸ್ಕಂಧ ಮಾತ್ರ ಉಪಲಬ್ಧವಿದ್ದು, ವಾದಿರಾಜರ 'ಭ್ರಮರಗೀತೆ'ಯಂತೆ ಹಾಡಿನ ರೂಪ ದೋರಿದೆ; ಆದರೆ 'ಬಾಲಲೀಲೆ'ಯ ಪ್ರಭಾವವಿಲ್ಲ. ಭಾಗವತಮೂಲದ ಕಥನಾತ್ಮಕ ಪ್ರಭಾವವಿದೆ. ಹಾಗೇ ಶ್ರೀಪಾದರಾಯ–ವಾದಿರಾಜರ 'ಭ್ರಮರಗೀತ' ಭಿನ್ನವಾದರೂ ಏಕಾಕರದ ಕಥನಾತ್ಮಕ ಪ್ರಭಾವ ಸಮ. ಆ 'ಮಧ್ವನಾಮ ಅವತಾರತ್ರಯ ಸುಳಾದಿ' ಕೂಡ ಭಿನ್ನವಾಗಿದ್ದು, 'ರಾಮಾಯಣ ಭಾರತ ಮಧ್ವವಿಜಯ' ಮೂಲಗಳಿಂದಾಗಿ ಪ್ರಭಾವಿತ; ಜೊತೆಗೆ ಕಥನಾತ್ಮಕವಾದ ಕೆಲ ಚಿಕ್ಕಪುಟ್ಟ ನಾಮಗಳಿದ್ದು, ಅವು ಶ್ರೀಪಾದರಾಯರ ಕೃತಿ ಪ್ರಭಾವವೆನಿಸುವಂತಿಲ್ಲ. ಹೀಗೆಯೇ 'ಗಜೇಂದ್ರಮೋಕ್ಷ' ಭಾಗವತ ಪ್ರಭಾವವನ್ನೂ, 'ಕೀಚಕವಧೆ' ಭಾರತ ಪ್ರಭಾವವನ್ನೂ ತೋರುತ್ತವೆ, ಕಥೆಯ ದೃಷ್ಟಿಯಿಂದ. ವಾದಿರಾಜರು ಶ್ರೀನಿವಾಸ ಕೊರವಂಜಿಯಾದ ಕಥಾಪ್ರೇರಣೆಯಿಂದ ತೆಲುಗಿನ ಕೊರವಂಜಿ ಪದಗಳ ಪ್ರಭಾವದಲ್ಲಿ 'ನಾರದ ಕೊರವಂಜಿ' ರಚಿಸಿದಂತೆ, ಪ್ರಸನ್ನವೆಂಕಟದಾಸರೂ ರಚಿಸಿದಲ್ಲಿ, ವಾದಿರಾಜರ ಪ್ರೇರಣೆ ಇರಬಹುದು, 'ದುಂಡಿ–ಸಿಂಗ' ಎಂಬಂತಹ ಒಂದೆರಡು ತೆಲುಗು ಪ್ರಯೋಗ ನಾಮಕ್ಕೆ ಬಿಟ್ಟರೆ, ಪ್ರಭಾವ ವಿಶೇಷವಿಲ್ಲ. (ಇದರಂತೆ ವಾದಿರಾಜರ 'ದಿಮ್ಮಿಸಾಲೆ ರಂಗದಿಮ್ಮಿಸಾಲೆ' ಎಂಬ ಹೋಳಿ ಪದ ಕೃಷ್ಣನ ಕುರಿತುದು, ಪ್ರಸನ್ನವೆಂಕಟರ 'ಡುಮ್ಮಿಸಾಲೆನ್ನಿ' ಅವತಾರತ್ರಯ ಕುರಿತುದು). ಆದರೆ ವಾದಿರಾಜರ 'ಕೇಶವ ಜಗದೀಶ ಸಾಸಿರ ಭಾನುರ ಕೋಟಿ ಸಂಕಾಶ' ಎಂಬ ಕೇಶವನಾಮ ಮಾತ್ರ, ಕನಕದಾಸರ 'ಈಶ ನಿನ್ನ ಚರಣ ಭಜನೆ ಆಸೆಯಿಂದ ಮಾಡುವೆನು' ಎಂಬ ಕೇಶವ ನಾಮದ ಮೇಲೆ ವಸ್ತು–ಛಂದಸ್ಸು–ಪ್ರಯೋಗ ದೃಷ್ಟಿಯಿಂದ ಪ್ರಭಾವ ಬೀರಿದೆ ಎಂಬುದು, 257ನೆಯ ಪುಟದಲ್ಲಿ ಉದ್ಧರಿಸಿದ ಅವುಗಳ ನುಡಿ ಭಾಗಗಳಿಂದ ಸ್ಪಷ್ಟ.

ವಾದಿರಾಜರು ಸ್ವಯಂ ಶ್ರೇಷ್ಠ ಪ್ರತಿಭಾವಂತರಾದ್ದರಿಂದಲೂ, ಮಧ್ವ ಸಿದ್ಧಾಂತ ಸ್ಥಾಪನೆಗೆ ಅವತರಿಸಿದ್ದರಿಂದಲೂ, ಅವರ ಶಾಸ್ತ್ರ ಕೃತಿಗಳಲ್ಲಿ ಹಿಂದಣ ಗ್ರಂಥಗಳ ತಾತ್ವಿಕ ಪ್ರಭಾವವಿದ್ದರೂ, ಕಾವ್ಯ ಕೃತಿಗಳಲ್ಲಿ ಕಥನಾತ್ಮಕವಲ್ಲದ ಬೇರೆ ಪ್ರಭಾವವಿಲ್ಲ. ತತ್ವವಾದ ಕನ್ನಡಿಸಿದವರಲ್ಲಿ 'ವಾದಿರಾಜರ ಕೊಡುಗೆಯೇ ವಿಸ್ತಾರವಾದುದು. ಸಂಸ್ಕೃತದಲ್ಲಿಯ ಸಮಸ್ತ ಆಧ್ಯಾತ್ಮ ವಾಙ್ಮಯದ ಸಾರವನ್ನೇ ಕನ್ನಡದಲ್ಲಿ ಒದಗಿಸಿದ್ದಾರೆ. ಉಭಯ ಭಾಷೆಯಲ್ಲಿಯೂ ಇಷ್ಟೊಂದು ವಿಸ್ತಾರವಾಗಿಯೂ ಹೃದಯಂಗಮವಾಗಿಯೂ ಬರೆದವರು ವಿರಳ. ಉನ್ನತ ಮಟ್ಟದ ವಾದಿಗಳೂ, ಉಭಯಭಾಷಾ ಕವಿಗಳೂ, ಅನೇಕ ಧಾರ್ಮಿಕ ಸುಧಾರಣೆ ಮಾಡಿದ ಮುಂದಾಳುಗಳೂ ಆದ ಇವರು ಹರಿದಾಸ ವಾಙ್ಮಯಕ್ಕೆ ಮಾಡಿದ ಉಪಕಾರ ಅಪೂರ್ವವಾದುದು' (ಕೆ.ಟಿ.ಪಾಂಡುರಂಗಿ, ಅದೇ, ಪು.68). ತತ್ವವಾದ ಕನ್ನಡಿಸಿದ ಕೃತಿಗಳೆಷ್ಟೋ ಕಡೆ ಮೂಲದ ಸಂದೇಹವನ್ನು ನಿವಾರಿಸುವಂತಿರುವ ಹಿರಿಮೆ ಇವರ ಪ್ರತಿಭೆಯದು. 'ವಾದಿರಾಜರ ಸಮಗ್ರ ಕೃತಿಗಳು ಒಂದೂ ಮೂಲ ಸಂಸ್ಕೃತ ಕಥಾ ಅಥವಾ ತತ್ವಭಾಗದ ಕಾವ್ಯಾವತಾರಗಳಾಗಿವೆ, ಕಾವ್ಯಸೌಂದರ್ಯ ಶಾಸ್ತ್ರಚಾಕಚಕ್ಯ ಎರಡನ್ನೂ ಪಡೆದು ಮೆರೆಯುತ್ತವೆ' (ಕೆ.ಟಿ.ಪಾಂಡುರಂಗಿ, ಅದೇ, ಪು.81).

ಬಿಡಿಯಾದ ಹಾಡುಗಳಲ್ಲಿ ಮಾತ್ರ ಕಥೆ–ತತ್ವಗಳೊಡನೆ ನೀತಿಯ ಪ್ರಭಾವ ಪ್ರವಾಹವೂ ಸೇರಿ ತ್ರಿವೇಣೀ ಸಂಗಮವಾಗಿದೆ. ಕಥಾಭಾಗದಲ್ಲಿ ಹರಿ ಗುರು ಮಹಿಮೆಯು ರಾಮಾಯಣ–ಭಾರತ–ಭಾಗವತ ಪ್ರಭಾವ ವಿಶೇಷ, ಇತರ ಪುರಾಣ ಪ್ರಭಾವ ಸಾಮಾನ್ಯ. ಹರಿಯ ಅವತಾರ–ಮಹಿಮೆ–ಭಕ್ತರ ವೃತ್ತಾಂತ ಚಿತ್ರಿಸಿದ ಭಾಗ ಪಾಮರಪ್ರಿಯವಾದಂತೆ, ತತ್ವಪ್ರತಿಪಾದಕ ಭಾಗ ಪಂಡಿತಪ್ರಿಯವಾದವು. ವೇದಾಂತ ತತ್ವ ಸಾರ್ಥಕವೆನಿಸಲು ಜನಸಾಮಾನ್ಯರನ್ನು ಮುಟ್ಟಬೇಕಲ್ಲವೇ? ಅಂತೆಯೆ ಇತಿಹಾಸ–ಪುರಾಣ ಕನ್ನಡಿಸಿದಾಗ ಅವು ಮೂಲ ಕೃತಿಗಳನ್ನು ಜನಪ್ರಿಯಗೊಳಿಸಿ, ರಸಾನುಭವದೊಡನೆ ತತ್ವ–ನೀತಿಗಳನ್ನು ಒದಗಿಸಿದವು. ಸಕ್ಕದ ಸುಭಾಷಿತ–ದೃಷ್ಟಾಂತ–ನೀತಿವಾಕ್ಯಗಳೆಷ್ಟೋ ಕನ್ನಡ ಸಾರಗಳಲ್ಲಿಳಿದವು; ಶ್ರೀಸಾಮಾನ್ಯರಂತೆ ಸ್ತ್ರೀಸಾಮಾನ್ಯರನ್ನು ಉದ್ಧರಿಸಿ ಕೃತಾರ್ಥವಾದವು. ದಾಸ ಸಾಹಿತ್ಯದ 'ತಾತ್ವಿಕ ಘನತೆ–ಕಥಾನಿರೂಪಣೆಯ ಚಾತುರ್ಯಗಳಿಗಿಂತ ಮಿಗಿಲಾಗಿ ಜನತೆಯನ್ನಾಕರ್ಷಿಸುವುದು ನೀತಿ ಭಾಗ' (ಕೆ.ಟಿ.ಪಾಂಡುರಂಗಿ, ಅದೇ, ಪು.81). ಜನತೆಯ ಉದ್ಧಾರಕ್ಕೆ ನೈತಿಕ ಮೌಲ್ಯಗಳನ್ನು ಜನವಾಣಿಯಲ್ಲಿ ಬಿತ್ತರಿಸಿದ ದಾಸವಾಣಿ ದೇವವಾಣಿಯ ಮಾರ್ದನಿಯೇ ಆಗಿದೆ.

ಕಥನಾತ್ಮಕ ಪ್ರಭಾವದಲ್ಲಿ ರಾಮಾಯಣದ ರಾಮಜನ್ಮ– ಶಿವಧನುರ್ಭಂಗ– ಸೀತಾ ಸ್ವಯಂವರ– ಅಹಲ್ಯೋದ್ಧಾರಾದಿ ಬಾಲಕಾಂಡ ಪ್ರಸಂಗ, ದಶಾವತಾರ ಚಿತ್ರಿಸುವ ಕೃತಿಗಳಲ್ಲಿವೆ. ಅದರಂತೆ ಅಯೋಧ್ಯಾ ಕಾಂಡದ ವನಗಮನ 'ಬಾಲನೀನೆ ನಿನ್ನ ಮಗನು' ಎಂಬುದರ 'ವಲ್ಕಲ ವನುಟ್ಟು ಅಡವಿ ಅಲೆಯುವ ತಿರುಗಿದ' ಎನ್ನುವಲ್ಲಿ ಸಂದರ್ಭಿತ. ಅರಣ್ಯ ಕಾಂಡದ ಶೂರ್ಪನಖಾ ಪ್ರಸಂಗ, ಖರದೂಷಣ ಸಂಹಾರ, ಸೀತಾಹರಣ, ಶಬರಿಯ ಸಂದರ್ಶನಗಳು ಉಕ್ತ. ಕಿಷ್ಕಿಂಧಾ ಕಾಂಡದ ವಾಲೀವಧೆ ಪರನಾರೀ ವ್ಯಾಮೋಹ, ಹರಿದ್ವೇಷಗಳಿಗೆ ನಿದರ್ಶಿತ. ಸುಂದರಕಾಂಡದ ಹನುಮ ವೃತ್ತ 'ಹನುಮ ಸುಮ್ಮಲೆ'ಯಂತೆ' ಎಷ್ಟು ಸಾಹಸವಂತ' ಎಂಬುದರಲ್ಲೂ ಸುಂದರವಾಗಿ ಸಂಗ್ರಹಿತ. ಯುದ್ಧ ಕಾಂಡದ ಸೇತುಬಂಧ, ರಾವಣವಧೆ, ವಿಭೀಷಣಾಭಿಷೇಕಗಳು ದಶಾವತಾರಾದಿ ಕೃತಿಗಳಲ್ಲಿ ಉಲ್ಲೇಖಿತ

ಭಾರತ ಆದಿಪರ್ವದ ಭೀಮ ಜನನ, ಪರಾಕ್ರಮ, ಸಭಾಪರ್ವದ ಜರಾಸಂಧವಧೆ– ಅಗ್ರಪೂಜೆ– ದ್ಯೂತ– ವಸ್ತ್ರಾಪಹಾರ ಕನ್ನಡ ಕೃತಿಗಳಲ್ಲಿದಿವೆ. ಉದಾ – 'ಈತನೇ ಲೋಕಗುರು' ಎಂಬುದರಲ್ಲಿ 'ಮಹಾಜಗವ ಮೆಚ್ಚಲು ಮುನ್ನ ಮಾಗಧನ ಸೀಳಿದ ಸಜ್ಜನಪ್ರಿಯ ಭೀಮಸೇನ ನೆಂಬಾತ' ಎಂಬ ಸಾಲಿವೆ. ಅರಣ್ಯ ಪರ್ವದ ಸೌಗಂಧಿಕಾ ಹರಣವು ಭೀಮನ ಸಾಹಸಸೂಚಕ. ವಿರಾಟಪರ್ವದ ಕೀಚಕವಧೆ ನೀತಿಬೋಧಕವು ಹೌದು – 'ಪರದಾರರ ಮೋಹಿಪ ಕ್ರೂರಗೆ ಈ (ಭೀಮ) ರೂಪ ಘೋರವಾಗಿಹುದು.' ಉದ್ಯೋಗಪರ್ವದ ಕೃಷ್ಣದೌತ್ಯ, ದ್ರೋಣಪರ್ವದ ಅಭಿಮನ್ಯು ವಧೆ, ಕರ್ಣಪರ್ವದ ದುಶ್ಶಾಸನವಧೆಗಳು ಕೀರ್ತನೋಕ್ತ; ದುಶ್ಶಾಸನನ ರಕ್ತ ಕುಡಿದಂತೆ ತೋರಿಸುವ ಅಂಶ ಮಾತ್ರ ತಾತ್ಪರ್ಯ ನಿರ್ಣಯದಂತೆ ಕೀರ್ತನೆಗಳಲ್ಲೂ ಉಕ್ತವಾಗಿರುವುದು ಮಧ್ವರ ಪ್ರಭಾವಸೂಚಕ. ಶಲ್ಯ– ಸೌಪ್ತಿಕ ಪರ್ವದ ಕೌರವನಾಶವು ಭೀಮನ ಸಾಹಸಕ್ಕೆ ಪ್ರತೀಕ. ಶಾಂತಿ ಪರ್ವದ ಪಾಂಡವ ಪ್ರತಿಷ್ಠಾನ, ಆಶ್ವಮೇಧಿಕದ ಉತ್ತರಾಗರ್ಭ ರಕ್ಷಣೆ ಹರಿಯನುಗ್ರಹದ ಉದಾಹರಣೆ – 'ಲೋಕಭರಿತನೋ'ದಲ್ಲಿ 'ಉತ್ತರೆಯ ಗರ್ಭದಲ್ಲಿ ಸುತ್ತ ಮುತ್ತಿದಸ್ತ್ರವನ್ನು ಒತ್ತಿ ಚಕ್ರದಿಂದ ನಿಜ ಭಕ್ತ ಪರೀಕ್ಷಿತನ ಕಾಯ್ದ.'

ಕಥನಾತ್ಮಕ ತತ್ವ– ನೀತಿ ಬೋಧನದ ಪ್ರಭಾವಶಾಲಿ ಪರಿಣಾಮಕ್ಕಾಗಿ ಭಾಗವತ ಉಪಯುಕ್ತ ಮಾಧ್ಯಮ. ಭಗವಂತನು ಧ್ರುವ– ಅಜಾಮಿಳ– ಪ್ರಹ್ಲಾದ– ಬಲಿ– ಅಂಬರೀಷ –

ಕುಚೇಲ— ಗಜೇಂದ್ರರಿಗೊಲಿದ ಅಂಶ ಅನೇಕ ಕೃತಿಗಳಲ್ಲಿವೆ. ಇದಕ್ಕೆ 'ಗಜೇಂದ್ರಮೋಕ್ಷ'ವೇ ಉತ್ತಮ ಉದಾಹರಣೆ. ಹರಿಸರ್ವೋತ್ತಮತ್ವ ಸಮರ್ಥಿಸುವಲ್ಲೂ ಈ ಪ್ರಸಂಗಗಳುಕ್ತ; ದಶಾವತಾರ— ಪ್ರಾರ್ಥನ— ವಾತ್ಸಲ್ಯ— ನಿಂದಾಸ್ತುತಿ— ಸಂಪ್ರದಾಯ ಹಾಗೂ ಮಂಗಳಗೀತಗಳಲ್ಲೂ ಸಂದರ್ಭತಃ 'ಏನೆಂದು ಸ್ತುತಿಸಲಿ, ಗೊಲ್ಲತಿಯರ ಕಣ್ಣದೃಷ್ಟಿ ಮಗಗಾಯಿತಮ್ಮ, ಹ್ಯಾಂಗೆ ಕೊಟ್ಟನು ಹಾಲ್ಸಾಗರನು, ಲಕುಮಿ ರಮಣಗೆ ಮಾಡಿದಳು ಉರುಟಣಿ, ಮಂಗಳಂ ಜಯ ಮಂಗಳಂ' ಮೊದಲಾದವು ಉದಾಹರಣೆ. ಕೃಷ್ಣಾವತಾರದ ಪೂತನಾದಿ ಸಂಹಾರ, ಕಾಳಿಂಗಮರ್ದನ, ಗೋವರ್ಧನೋದ್ಧಾರ ಹರಿಯ ಮಹಿಮೆ ಹೇಳುವಲ್ಲಿವೆ — 'ರಂಗ ಬಾರೋ' ಎನ್ನುವ ಕೇಶನಾಮದ ನುಡಿ 4 ಗೋವರ್ಧನೋದ್ಧಾರಗೈದ 'ಗೋವಿಂದ ನಮ್ಮ ಮನೆಗೈದ' ಎಂದು ಹಾಡಿದೆ; ನುಡಿ 5ರಲ್ಲಿ ಕಂಸನಾಶ, 16ರಲ್ಲಿ ಕುಬ್ಜಾ ಉದ್ಧಾರ ಹೇಳಿದೆ.

ಹೀಗೆ ನಮ್ಮ ಜನಮನದಲ್ಲಿ ಸಿದ್ಧವಾಗಿದ್ದ ಸಕ್ಕದ ಮಹಾಕಾವ್ಯ— ಪುರಾಣ ಕಥನಗಳನ್ನುದ್ಧರಿಸಿ ಕೃತಿಗೈದ ಹರಿದಾಸರು ತತ್ತ್ವವಾದದಂತೆ ಹರಿ— ಗುರುಗಳ ಪಾತ್ರ ಎತ್ತರಿಸಿ ಕೊಟ್ಟರು. ಕಥೆ— ತತ್ತ್ವ— ನೀತಿಗಳ ತ್ರಿವೇಣೀ ಸಂಗಮವಿದು ಭಾರತೀಯ ಸಂಸ್ಕೃತಿಯ ಸಂಪನ್ಮೌಲ್ಯವನ್ನು ಕನ್ನಡಿಗರ ತವನಿಧಿಯಾಗುವಂತೆ ಮಾಡಿತು. ದಾಸಸಾಹಿತ್ಯ ಹಿಂದಿನ ಸಾಹಿತ್ಯದ ಪ್ರಭಾವದಲ್ಲೇ ಬೆಳೆದು ಮುಂದಿನ ಸಾಹಿತ್ಯದ ಮೇಲೂ ಪ್ರಭಾವ ಬೀರುವಷ್ಟು ಸತ್ತ್ವಶಾಲೀ ಸಾಹಿತ್ಯವೆನಿಸಿತು ವಾದಿರಾಜರಂಥ ಪ್ರತಿಭಾವಂತರಿಂದ.

## ಮುನ್ನೋಟ

ಕನ್ನಡಿಗರ ಮೇಲೆ ಅಂತಹ ಯತಿವರ ಹರಿದಾಸರು ಅನುಗ್ರಹಿಸಿ, ಕೊಡಮಾಡಿದ ಕೃತಿಗಳಿಗಿಂತ ಅವರ ವ್ಯಕ್ತಿ ಮಹತ್ತ್ವ— ಔನ್ನತ್ಯಗಳು ತುಂಬ ಪ್ರಭಾವ ಬೀರಿವೆ. ಅಂತೆಯೇ ಅವರನ್ನು ಮುಜುಂತೋಗಿ— ಕೃತಿಕಾರ ಎಂದು ಕೊಂಡಾಡಿದ ಕೃತಿ — ಕೃತಿಕಾರರನ್ನು ವ್ಯಕ್ತಿ ಮಹತ್ತ್ವದ ವಿಭಾಗದಲ್ಲಿ ಗಮನಿಸಲಾಗಿದೆ. ಇಲ್ಲಿ ಕೃತಿಗಳ ಪ್ರಭಾವ ಮಾತ್ರ ಪರಿಶೀಲಿಸಬಹುದು, ಮುಂದಣ ಕೃತಿಕಾರ— ಕೃತಿಗಳ ಮೇಲೆ.

ವಾದಿರಾಜರ ಕಾಲದಲ್ಲೇ ಅವರ ಪ್ರಭಾವಲಯದಲ್ಲಿದ್ದ ರಘುನಾಥಾಚಾರ್ಯರು ಅವರ ವೃತ್ತರತ್ನ ಸಂಗ್ರಹಿಸುತ್ತ ಕೆಲವು ಕೃತಿಗಳನ್ನುಲ್ಲೇಖಿಸಿದ್ದಾರೆ. ಮಧ್ವಾಷ್ಟಕ – ತೀರ್ಥಪ್ರಬಂಧ, ರುಕ್ಮಿಣೀಶ ವಿಜಯ, ಯುಕ್ತಿಮಲ್ಲಿಕಾ (ವ್ಯಾಖ್ಯಾನ)ಗಳಲ್ಲದೆ ಇತರನೇಕ ಸೊಗಸಾದ ಕೃತಿ ರಚಿಸಿದರೆಂದಿದ್ದಾರೆ –

ಸುಶ್ರಾವ್ಯ ಕಾವ್ಯಸ್ತುತಿ ಯುಕ್ತಿಸಾರಂ
ಗಾಥಾಶ್ಚ ನಾನಾವಿಧ ಶಬ್ದ ಹೃದ್ಯಾಃ
ಜ್ಞಾನಾದಿದಾಶ್ಚ ಪ್ರಣಿಮಾಃ ಕವೀಂದ್ರಃ
ಶ್ರೀ ವಾದಿರಾಜೋ ವ್ಯತನೋದಸಂಖ್ಯಾಃ ॥ 3,31 ॥

ಅವರ ಸೋದರ ಸುರೋತ್ತಮತೀರ್ಥರು ಆರಂಭಿಸಿದ 'ಯುಕ್ತಿಮಲ್ಲಿಕಾ ವ್ಯಾಖ್ಯಾನ'ವನ್ನು ವಾದಿರಾಜರೇ ಪೂರೈಸಿದರೂ, ಪಾಷಂಡ ಮತಖಂಡನ ವ್ಯಾಖ್ಯಾನ ಸುರೋತ್ತಮರದೇ ಆಗಿದೆ. ವಾದಿರಾಜರ ಸಾಕ್ಷಾತ್ ಶಿಷ್ಯರಲ್ಲಿದ್ದ ನಾರಾಯಣಾಚಾರ್ಯರು 'ರುಕ್ಮಿಣೀಶ ವಿಜಯ – ತೀರ್ಥ ಪ್ರಬಂಧ ವ್ಯಾಖ್ಯಾನಿಸಿದ್ದಾರೆ. ಇನ್ನೋರ್ವ ನಾರಾಯಣಾಚಾರ್ಯರ 'ವಾದಿರಾಜ ಕವಚ,' ವೇದವೇದ್ಯ ವೇದನಿಧಿಗಳ ಸ್ತುತಿ, ವಿಶ್ವನಾಥ ನಾರಾಯಣಾಚಾರ್ಯರ ನುತಿಗಳೂ ಇಲ್ಲಿ ಗಮನೀಯ. ಅವರ ಸಮೀಪ ಕಾಲದ ರಾಮಚಂದ್ರಾಚಾರ್ಯರು ತೀರ್ಥಪ್ರಬಂಧ, ಲಕ್ಷ್ಮೀಶೋಭಾನೆ, ರುಕ್ಮಿಣೀಶ ವಿಜಯ, ಲಕ್ಷಾಲಂಕಾರ, ಮಧ್ವಾಷ್ಟಕ, ಯುಕ್ತಿಮಲ್ಲಿಕೆ, ಕೋಲು ಬೇಗ ಕಳ್ಳರ, ಪಾಲಗಡಲೊಡನೆಯ ಬಾರೋ, ಬೇಗ ಬಾರೋ (ನಾರಾಯಣ ನಾರಾಯಣ) ಅಷ್ಟೋತ್ತರ ಕೀರ್ತನ ಸ್ವಪ್ನ ಕೃತಿಗಳನ್ನುಲ್ಲೇಖಿಸಿದ್ದಾರೆ 'ವಾದಿರಾಜ ಗುರು ಚರಿತಾಮೃತ'ದಲ್ಲಿ (ಸು. 1645). ಸುಧೀಂದ್ರ, ವಾದಿವಂದ್ಯ, ಸತ್ಯಧರ್ಮ, ವಾಸುದೇವ, ಗೋಡಗೆರೆ ವಾಸುದೇವಾಚಾರ್ಯರ ಸ್ತುತಿಗಳೂ ಕೃತಿಕಾರ ವಾದಿರಾಜರನ್ನು ಕುರಿತವು. 'ವೃಂದಾವನಾಖ್ಯಾನ'ದ ಪ್ರಭಾವದಿಂದಲೇ ಅದರ ವ್ಯಾಖ್ಯಾನಗಳುದಿಸಿ ಬಂದುವು. ಪ್ರಸನ್ನವೆಂಕಟದಾಸರೂ 'ವಾದಿರಾಜ ಸಲಹೆನ್ನ' ಎಂಬ ಕೀರ್ತನದಲ್ಲಿ –

ಶ್ರೀಕರ ಗ್ರಂಥರಚನವನೇಕ ಪತ್ರಗಳಿಂದೆ
ಆ ಕರುಣಾ ಲೋಚನ ಕುಸುಮರಸವನುಂಡು
ರಸೀಕರಿಪ ಕವಿ ಮಧುಮಕರಂದ ರಾಜಿಸುವ ರಾಜಾ (2)

ಎಂದುದ್ಗರಿಸಿದ್ದಾರೆ (ಈ ಕೀರ್ತನೆ 'ವಾದಿರಾಜ ಗುರುವರ ಕೀರ್ತನ ಮಂಜರಿ'ಯಲ್ಲಿದೆ).

ವಿಜಯದಾಸರು 'ಯಮನು ನಿಮ್ಮನ್ನೂ ಆಖ್ಯಾನವನ್ನೂ ನಿಂದಿಸುವರ ಬಿಡುವುದಿಲ್ಲ' ಎಂಬ ಆಖ್ಯಾನ (18— 36) ಭಾವವನ್ನೇ ಪಡಿನುಡಿದಂತಿದೆ 'ವಾದಿರಾಜ ಮುನಿಯು ಸಾಮಾನ್ಯನೆಂದು ವರ್ಣಿಸಿದ ನರರಿಗೆ ಘನವಾದ ಶಿಕ್ಷೆ ಈವನು ಇನಸೂನು' ಎಂಬಲ್ಲಿ. ವೇಣುಗೋಪಾಲದಾಸರು ಅವರ ಕೃತಿಗಳನ್ನು ಕುರಿತು —

ಸಕಲ ವೇದ ಪುರಾಣ ಶಾಸ್ತ್ರಗಳೆಲ್ಲ
ಪ್ರಕಟಿಸಿದೆ ಕನ್ನಡದಿ ಪ್ರೇಮದಿಂದ (1)

ಗಣನೆಯಿಲ್ಲದೆ ಕೀರ್ತನೆ ಸುಳಾದಿಗಳನ್ನು
ಮನಪೂರಿದು ಮಾಡಿದ್ದು ಜನರು ಪಠಿಸಿ
ವನಜನಾಭನ ಕರುಣವನು ಪಡೆದು ತಾ
ವನುಭವಿಸಲಾನಂದವೆನುತಲಿ (2)

ಎಂದಿರುವುದೂ ಇಲ್ಲಿ ಗಮನಾರ್ಹ. ಜಗನ್ನಾಥದಾಸರೂ 'ತೀರ್ಥಪ್ರಬಂಧವ ಕೀರ್ತನೆಗೈದೆ' ಎಂದು, 'ಹರಿಕಥಾಮೃತಸಾರ' ರಚಿಸಲು ವಾದಿರಾಜರಿಂದ ಪ್ರೇರಿತರಾಗಿದ್ದಾರೆ (ಪು. 70ರ ಅಡಿಟಿಪ್ಪಣಿ 2ರಲ್ಲಿ ವಿವರಿಸಿದಂತೆ). ಶ್ರೀದವಿಠಲಾಂಕಿತ ಕರ್ಜಗಿ ದಾಸರು 'ಬುಧಜನಕೊಪ್ಪುವ ಪದ ಸುಳಾದಿ ಖಳರೆದೆಗಿಚ್ಚೆನಿಸುವ ಚತುರತೆ'ಯನ್ನು ಕೊಂಡಾಡಿದ್ದಾರೆ. ಕಮಲೇಶ ವಿಠಲಾಂಕಿತ ಸುರಪುರದ ಆನಂದದಾಸರು 'ನಿಜಕೈರವ ದ್ವಿಜರಾಜ ಜಯತು' ಎಂಬ ಕೀರ್ತನದಲ್ಲಿವರ ಮುಖ್ಯ ಕೃತಿಗಳನ್ನೆಲ್ಲ ಸ್ಮರಿಸಿದ್ದಾರೆ (ವಾದಿರಾಜ ಗುರುವರ ಕೀರ್ತನ ಮಂಜರಿ, ಪು. 33). 'ಹರಿತತ್ತ್ವ ತಿಳಿಯದೆ ತುಸಮಯ ತಮ ಕಳೆಯಲು ನೀ ಸರಸಭಾರತಿ ಮೊದಲಾದ ಗ್ರಂಥಗಳನು ವಿರಚಿಸಿ ತಮ ಹರಿಸಿದ ದಿನಕರನೆ' ಎಂದವರು ವೆಂಕಟ ವಿಠಲಾಂಕಿತದಾಸರು. ಅಣ್ಣಿಗೇರಿಯ ಗೋಪತಿ ವಿಠಲಾಂಕಿತರೂ, ಹರಪನಹಳ್ಳಿಯ ಶ್ರೀಪತಿವಿಠಲಾಂಕಿತರೂ 'ತೀರ್ಥ ಪ್ರಬಂಧ, ರುಕ್ಮಿಣೀಶ ವಿಜಯ ರಚಿಸಿ ಕವಿಕುಲಮಾನ್ಯನೆನಿಸಿಕೊಂಡ ಹರಿದಾಸ ಪ್ರಚಂಡ' ಎಂದರೆ, ನಂಜನಗೂಡಿನ ಬಾದರಾಯಣ ವಿಠಲಾಂಕಿತರು 'ವೃಂದಾವನಾಖ್ಯಾನವ ಸ್ವಪ್ನದಿ ಮಂದಮತಿಗೆ ಬೋಧಿಸಿ ದೇವೇಂದ್ರ ಪದವಿ ಕೊಡುವೆನೆಂದು ಪೇಳಿದ ··· ಕುಂದು ಎಣಿಸುವರ ಕುಂದಿಸುವನು ಯಮ' ಎನ್ನುವಲ್ಲಿ ವಿಜಯದಾಸರಿಗೂ ಪ್ರತಿಧ್ವನಿಸಿದ್ದಾರೆ; ಅಭಿನವ ಜನಾರ್ದನ ವಿಠಲಾಂಕಿತರು 'ಪಾಪಿಯಾದ ಎನ್ನ ಪಾಲಿಪುದಕೆ ಸ್ವಪ್ನದೊಳಗೆ ನಿನ್ನ ರೂಪವ ತೋರ್ದೆ' ಎನ್ನುವುದರಿಂದ ಆಖ್ಯಾನೋಕ್ತ ವ್ಯಕ್ತಿಗಳಲ್ಲೊಬ್ಬರಾಗಿರಬಹುದು. ಪ್ರಾಣಪತಿ ವಿಠಲಾಂಕಿತ ಶಹಾಪುರಾಚಾರ್ಯರು 'ವಾದಿರಾಜ ಗುಣರತ್ನಮಾಲಾ'ದಲ್ಲಿ ಅನೇಕ ಕೃತಿಗಳನ್ನುಲ್ಲೇಖಿಸಿ, ವಾದಿರಾಜರ ಪ್ರಾಸಪೂರ್ಣ

ಶೈಲಿಯಿಂದ ಪ್ರಭಾವಿತರಾಗಿ ಅನುಕರಿಸಿದ್ದಾರೆ — 'ಮುಕುಂದಾತ್ಮವೈಕುಂಠಪ್ರಿಯಂ ವೈಕುಂಠ ವರ್ಣನಂ' ಎಂಬಂತೆ. ಇಂತು ವಾದಿರಾಜರ ವ್ಯಕ್ತಿತ್ವ— ಕೃತಿಗಳ ಪ್ರಭಾವ ಅವರ ಕಾಲಾನಂತರದ ಇತರ ಕೃತಿಕಾರರ ಮೇಲೆ ಉದ್ದಕ್ಕೂ ಉಂಟೆನ್ನಲು ಆಧಾರಗಳಿವೆ.

ಇನ್ನು ಕೃತಿಗಳ ಮೇಲೇನಾದರೂ ಪ್ರಭಾವ ಉಂಟೇ ಪರಿಶೀಲಿಸುವ. ನೀರು ನೈಸರ್ಗಿಕವಾಗಿ ಇಳುಕಲತ್ತ ಹರಿಯುವ ಹಾಗೆ, ಉನ್ನತ ಪ್ರತಿಭೆಯ ವಾದಿರಾಜರ ಕೃತಿಗಳಿಂದ ಇತರರ ಕೃತಿ ಪ್ರಭಾವಿತವಾಗುವ ಸಾಧ್ಯತೆ ಹೆಚ್ಚು. ಅವರ ಸಮಕಾಲೀನ ಪುರಂದರದಾಸರ ಹಾಡುಗಳನೇಕ ಭಾಗಗಳಲ್ಲಿ ಸಮಾನ ಭಾವ— ಉಕ್ತಿ ತೋರಿದರೂ, ಅವರ ಪ್ರತಿಭೆ ಕೂಡ ಕಿರಿದಲ್ಲವಾಗಿ ಒಟ್ಟು ಕೃತಿ ಸ್ವತಂತ್ರವೇ ಎನಿಸುತ್ತದೆ. ಉದಾ — 'ಮಾತು ಮಾತಿಗೆ ಕೇಶವ ಎನಬಾರದೇ — ಕೃಷ್ಣ ಎನಬಾರದೇ, ಹೋಗುತಿದೆ ಹೊತ್ತು ಬರಿದೆ — ಬರಿದೆ ಹೋಯಿತು ಹೊತ್ತು, ದಾರಿಯ ತೋರೋ ಗೋಪಾಲ — ದಾರಿಯ ತೋರೋ ಮುಕುಂದ, ಹರಿಭಜನೆ ಮಾಡೋ ನಿರಂತರ — ಹರಿಸ್ಮರಣೆ ಮಾಡೋ ನಿರಂತರ (ಹರಿಕಥಾಶ್ರವಣ ಮಾಡೋ ನಿರಂತರ) ಮೊದಲಾದ ಸೊಲ್ಲು ಏಕಪ್ರಕಾರವೆನಿಸಿದರೂ ಕೃತಿ ಭಿನ್ನ; ವಾದಿರಾಜರು 'ಏನು ಶಪಥವ ಮಾಡಲೀ ಮತವು ಹಿರಿದೆಂದೂ ಹರಿಯ ನಾಮವನು ಹಿಡಿಯಲೀ' ಎಂದರೆ, ಪುರಂದರರು 'ವಿಧಿ ಭವಾದಿಗಳೆಲ್ಲ ವಿಷ್ಣುವಿನ ಹಿಂದೆ ಉರಗನ ಹೆಡೆಯನ್ನು ಹಿಡಿದು ಪೇಳುವೆನಯ್ಯ' ಎನ್ನುವರು. ಇತರ ಹಾಡುಗಳ ಒಡಲು ನೋಡಿದರೂ ಇದೇ ಅಂಶ ವಿದಿತವಾಗುವುದು. ಉದಾ — ವಾದಿರಾಜರು 'ಏನು ಸುಕೃತವ ಮಾಡಿದಳೋ ಯಶೋದೆ' ಎಂಬುದರಲ್ಲಿ 'ಗಂಗಾಜನಕನಿಗೆ ಗಡಿಗೆ ನೀರೆರೆವಳಂತೆ, ಮಂಗಳಾಂಗಗೆ ಶೃಂಗರಿಸುವಳಂತೆ, ತುಂಗ ಭೂಧರನ್ನ ತೊಟ್ಟಿಲೊಳು ತೂಗುವಳಂತೆ, ಕಂಗಳಿಗಗೋಚರನ ಕರೆದಪ್ಪಿಕೊಳ್ಳುಳಂತೆ, ಮಿಗೆ ನಿತ್ಯತೃಪ್ತಗೆ ಪಾಲನೆರೆವಳಂತೆ, ಗತಭೀತನಿಗೆ ಭಾಮೆ ರಕ್ಷೆಯ ಕಟ್ಟುವಳಂತೆ' ಎಂದರೆ, ಪುರಂದರದಾಸರು 'ಗೋಪಿಯ ಭಾಗ್ಯವಿದು' ಎಂಬುದರಲ್ಲಿ ನಿತ್ಯನಿರ್ಮಲನಿಗೆ ನೀರನೆರೆದು ತಂದು, ಅಂಗಜಪಿತಗೆ ಸಿಂಗರ ಮಾಡಿ ನೋಡುವಳು, ಪಾಲುಗಡಲು ಮನೆಯಾಗಿ ಪಾಲಿಸುತಿಪ್ಪನ ಹಾಲು ಕುಡಿಸಿ ಸಂತೈಸುವಳೋ, ನಿತ್ಯತೃಪ್ತನೆಂದರಿಯದೆ ನೊರೆ ಹಾಲುಣಿಸಿ ತೃಪ್ತಿಬಡಿಸುವಳೋ, ಗುಮ್ಮ ಬಂದಿದೆ ಎನುತ ಅಮರರಾಳ್ದನ ರಮಿಸಿ ಮುದ್ದಾಡುವಳೋ' ಎಂದೂ, ಸುಳಾದಿಯೊಂದರ ಮೊದಲಲ್ಲಿ 'ಗಂಗಾಜನಕನಿಗೆ ಹೊಂಗಲಶಗಳಿಂದ

ಮಂಗಳ ಮಜ್ಜನ ಮಾಡಿಸುವಳು, ಅಂಗಜನಯ್ಯನ ಅನರ್ಘ್ಯ ರತ್ನಾಭರಣಗಳಿಂದ ಸಿಂಗರಿಪಳು' ಎಂದೂ, 'ಮಗನೆಂದಾಡಿಸುವಳು' ಎಂಬುದರಲ್ಲಿ 'ಆಗಮ ತತಿಗಳಿಂದರಸಿ ಕಾಣದವನ ತೂಗಿ ಪಾಡುವ ಪುಣ್ಯವೆಲ್ಲ ಪಡೆದಳೊ, ರಕ್ಕಸಿಕೊಂಡಿಹ ಬಲವಂತನ ರಕ್ಷೆಯಿಡುವ ಪುಣ್ಯವೆಲ್ಲ ಪಡೆದಳೊ, ಎಂದೂ ನುಡಿದಿರುವಲ್ಲಿ ಪ್ರಭಾವ ವಿಶೇಷವಿಲ್ಲ. ಇಂಥ ಭಾವಸಾಮ್ಯದ ಇತರ ಕೃತಿಗಳು 'ಹಾಕ್ಯಂಗೆ ಕೊಟ್ಟರೂ ಹೊನ್ನ ಸಾಗರನು — ಇವಗೇಕೆ ಪರಿಮಳ, ಜೋಜೋ ಕಂದರ್ಪ ಕೋಟಿ ಲಾವಣ್ಯ ಪ್ರಳಯ ಜಲದಿ — ಪ್ರಳಯೋದಕದಲ್ಲಿ. ವಾದಿರಾಜರು 'ವೈಕುಂಠದ ವಾಪಿಕೂಪ ಮನೆಗೋಪುರಗಳಾಗಿ ರಮೆ ನಲ್ಲನ ಚಿತ್ತವ ಒಲಿಸಬೇಕೆಂದಿಹಳು, ಆಲದೆಲೆ ಛತ್ರ ಚಾಮರ ಬಹುರೂಪವಾಗಿ ಶ್ರೀಧರನ ಸೇವಿಸುವಳು' (ವೈ.ವ.1—54, ಬಾಲಲೀಲೆ ಉ.437) ಎಂದಿರುವುದು, ಪುರಂದರದಾಸರ 'ಏನು ಧನ್ಯಳೋ' ದಲ್ಲಿಯ 'ಛತ್ರಚಾಮರ ವ್ಯಜನಪರ್ಯಂಕ ಪಾತ್ರರೂಪದಲ್ಲಿ ನಿಂತು, ಚಿತ್ರಚರಿತನಾದ ಹರಿಯ ನಿತ್ಯಸೇವೆ ಮಾಡುತಿಹಳು' ಎಂಬ ನುಡಿಯನ್ನು ನೆನಪಿಸುತ್ತದೆ. ಬಾಲಲೀಲೆ ಉ.455ರಲ್ಲಿ 'ಪುರಂದರವಿಠಲ' ಉಲ್ಲೇಖಗೊಂಡಿರುವಂತೆ, ವಾದಿರಾಜರ 'ದಶಾವತಾರ ಸ್ತುತಿ'ಯ ಅಶ್ವಧಾಟಿ ಪುರಂದರದಾಸರ 'ಆವದಂ ನೆನೆ ಮನವೆ ಸಕಲ ಚಿಂತೆಯ ಕಡಿದು ಕಾವುದಿದು ದಿವ್ಯನಾಮ' ಎಂಬುದರಲ್ಲಿದೆ. ಇವಾವುವೂ ಹೇಳಿಕೊಳ್ಳುವ ಪ್ರಭಾವಗಳಲ್ಲ.

ಇದೇ ಮಾತು ಕನಕದಾಸರ ಬಗ್ಗೆ ಅನ್ವಯಿಸದು. ಅವರು ವಾದಿರಾಜರ ವ್ಯಕ್ತಿತ್ವ ಕೃತಿ ರಚನೆಗಳಿಂದ ಪ್ರಭಾವಿತರೆನ್ನಲು ಕೆಲವು ಆಧಾರಗಳಿವೆ. ಅವರು ಉಡುಪಿಯಲ್ಲಿದ್ದಾಗ ವಾದಿರಾಜರೇ ನೆರವು ನೀಡಿದ ಸಂಗತಿ ಚರಿತ್ರ ಭಾಗದಲ್ಲಿ ಬಂದಿದೆ. 'ಮೋಹನ ತರಂಗಿಣಿ' 26—1ರಲ್ಲಿ 'ತ್ರಿವಿಕ್ರಮದಾಸಸ್ಯದಾಸ' ಎಂದ ಕನಕದಾಸರು, ಬಂಟನಾಗಿ ಬಾಗಿಲ ಕಾಯ್ವೆ' ಎನ್ನುತ್ತ 'ವೈಕುಂಠ ವರ್ಣನೆ ಬಾಲಲೀಲೆ'ಗಳ 'ಚಿತ್ರದ ಚಾವಡಿ' ಪದ ಪ್ರಯೋಗಿಸಿದ್ದಾರೆ. ವಾದಿರಾಜರ 'ನಿದ್ರೆ ಮಾಡಿದ ರಂಗ' ಎಂಬುದು ದಶಾವತಾರಿಯ ದಣಿವು ವರ್ಣಿಸಿದಂತೆ, 'ಏಕೆ ನೀನಿಲ್ಲಿ ಪವಡಿಸಿದೆ' ಎಂದು ರಂಗನಾಥನ ಪ್ರಶ್ನಿಸಿ ದಶಾವತಾರಾದಿ ಭಾವ ಬಣ್ಣಿಸಿದ್ದಾರೆ; ವಾದಿರಾಜರು 'ಇಷ್ಟುದಿನ ಈ ವೈಕುಂಠ ಎಷ್ಟು ದೂರವೆನುತಿದ್ದೆ, ದೃಷ್ಟಿಯಿಂದಲಿ ನಿಮ್ಮ ಕಂಡೆ ಸೃಷ್ಟಿಪತಿ ಶ್ರೀ ರಂಗೇಶ' ಎಂದರೆ, ಕನಕದಾಸರೂ 'ಇಷ್ಟುದಿನ ಈ ವೈಕುಂಠ ಎಷ್ಟು ದೂರವೊ ಎನ್ನುತಲಿದ್ದೆ, ದೃಷ್ಟಿಯಿಂದಲಿ ನಾನು ಕಂಡೆ ಸೃಷ್ಟಿಗೀಶನ ಶ್ರೀರಂಗರಾಯ'

ಎಂದು ಅದೇ ರಂಗನಾಥನನ್ನು ಸಂದರ್ಶಿಸಿ ಹಾಡಿದ್ದಾರೆ. ವಾದಿರಾಜರ 'ಕೇಶವ ಜಗದೀಶ' ಎನ್ನುವ ಕೇಶವನಾಮ ಕನಕದಾಸರ ಅದೇ ಛಂದದ 'ಈಶ ನಿನ್ನ ಚರಣ ಭಜನೆ' ಎಂಬ ಕೇಶವನಾಮದ 3 ನುಡಿಗಳಲ್ಲಿ ಪ್ರಭಾವ ಬೀರಿದ್ದನ್ನು 257ನೆಯ ಪುಟದಲ್ಲಿ ತೌಲನಿಕವಾಗಿ ಬರೆದಿದ್ದೇವೆ; ಹಾಗೆಯೇ ವಾದಿರಾಜರ 'ಎಲ್ಲಮ್ಮ ದೇವಿ ನಮ್ಮ ದೇವರು ಬಂದರು ಕಾಣ' ಎಂಬ ತ್ರಿಪದೀ ಲಯದ ಪದ ಕನಕದಾಸರ ಅದೇ ಲಯದ 'ದೇವಿ ನಮ್ಮ ದೇವರು ಬಂದರು ಬನ್ನಿರೆ' ಎನ್ನುವುದರ 4 ನುಡಿಗಳಲ್ಲಿ ಪ್ರಭಾವ ಬೀರಿದ್ದನ್ನು 273ನೆಯ ಪುಟದಲ್ಲಿ ನೋಡಿದ್ದೇವೆ; ಅಲ್ಲದೆ ಈ ಹಾಡಿನ ಅಂತ್ಯ ನುಡಿಯಲ್ಲಿ ಕನಕದಾಸರು —

ಡೊಳ್ಳಿನ ಮೇಲೆ ಕೈಯ ಭರಮಪ್ಪ ಹಾಕ್ಯಾನು
ತಾಳವ ಶಿವನಪ್ಪ ತಟ್ಟ್ಯಾನ್ರಿ
ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು
ಚೆಲುವ ಕನಕಪ್ಪ ಕುಣಿದಾನ್ರಿ (11)

ಎನ್ನುವುದರ ಮೂಲ 'ರುಕ್ಮಿಣೀಶ ವಿಜಯ' 4—68 ರಲ್ಲಿ —

ಅನೀನದತ್ ಪದ್ಮಭವೋ ಮೃದಂಗಂ
ಜಗೌ ಘನಾನಾನೆ ಜಗತಾಮಧೀಶಂ।
ಅದರ್ಶಯತ್ತಾಲಗತಿಃ ಕಪರ್ದೀ
ನನರ್ತ ಗೋಪಾಲಕ ಬಾಲ ಮೌಲಿಃ ॥

ಎಂದಿದ್ದು, ಬಾಲಲೀಲೆ ಪು.478 — ಭ್ರಮರಗೀತೆ 25, ಕನ್ನಡ ನಿರ್ಣಯ 2—60 ರಲ್ಲಿ ಪ್ರಸಿದ್ಧಿಗೊಂಡುದನ್ನು ಕಂಡಿದ್ದೇವೆ. (ಭಾಗವತ, ತಾತ್ಪರ್ಯನಿರ್ಣಯ ಮೂಲ ಹೀಗಿಲ್ಲ). ಕಾರಣ, ಕನಕದಾಸರ ಕೃತಿ ವಾದಿರಾಜರ ರಚನೆಗಳಿಂದ ಪ್ರಭಾವಿತವೆಂಬುದು ನಿರ್ವಿವಾದ್ಯ.

ಇನ್ನುಳಿದ ದಾಸರ ಕೃತಿಗಳಲ್ಲಿಷ್ಟು ಪ್ರಭಾವವಿರದಿದ್ದರೂ ಕೆಲ ಉಕ್ತಿ— ಭಾವ ಸಾಮ್ಯ ಮಾತ್ರ ಉಂಟು. ಉದಾ — ಪು.283ರಲ್ಲಿ ಸೂಚಿಸಿದಂತೆ 'ವಾಣಿ ಪರಮಕಲ್ಯಾಣಿ' 'ವಿಜಯದಾಸರ ಕೃತಿಗೆ ಪ್ರೇರಕ, 'ನಾಗಶಯನನು ಬಂದಿಹ ಬಾಗಿಲ ತೆಗೆಯೆ ಭಾಮೆ' ವಿಜಯದಾಸರಲ್ಲಿ 'ನೀಲವರ್ಣ ಶ್ರೀ ಲೋಲನಲ್ಲೆ ಭಾಮೆ' ಎಂದು ತಿರುಗಿದೆ, 'ಚಿನುಮಯ ಮೂರುತಿ'ಯಂತೆ 'ಆದಿಮೂರುತಿ' ಎಂಬ ಸುಳಾದಿ ವಿಜಯದಾಸರಲ್ಲಿದೆ. 'ಗೋದೆ ಸಮಸ್ತ ಫಲದೆ' ಎಂಬಂತೆ ಜಗನ್ನಾಥದಾಸರು 'ವರದೆ ಕಾರುಣ್ಯ ಶರಧೆ' ಎಂದು ಹಾಡಿದ್ದಾರೆ. 'ಎಂದು ಕಾಂಬೆನು' ಎಂದು ವಾದಿರಾಜರು ವೆಂಕಟೇಶನನ್ನು ಕುರಿತು ಹಾಡಿದರೆ ಪ್ರಸನ್ನವೆಂಕಟರು ಕೃಷ್ಣನ ಕುರಿತು ಹಾಡಿದ್ದಾರೆ.

'ಆನಂದತೀರ್ಥರೆಂಬ ಅಗ್ರಿಂತು ಪೆಸರುಳ್ಳ' ಪಲ್ಲವಿಯ ವಾದಿರಾಜ-ಪ್ರಾಣೇಶ ದಾಸರ ಕೃತಿಗಳಿಗೆ ಸಾಮಾನ್ಯವೆನಿಸಿದೆ.

ಇಂತು ದೈವಾಂಶ ಸಂಭೂತರಾದರೂ ನಮ್ಮ ನಡುವೆ ಅವತರಿಸಿದ ವಾದಿರಾಜರು ತಾವೆಷ್ಟೇ ಪ್ರತಿಭಾವಂತರಾದರೂ ಹಿಂದಿನ ಕೃತಿ-ಕೃತಿಕಾರರ ಪ್ರಭಾವಕ್ಕೆ ಹೊರತಾಗದೆ, ಮುಂದಿನ ಕೃತಿ-ಕೃತಿಕಾರರ ಮೇಲೂ ತಮ್ಮ ಪ್ರಭಾವ ಬೀರಿದ ಈ ಹಿನ್ನೋಟ-ಮುನ್ನೋಟಗಳು ಅವರ ಕೃತಿಗಳನ್ನೇ ಕೇಂದ್ರವಾಗಿರಿಸಿಕೊಂಡುದರಿಂದ, ಬಹಿರಂಗದ ಪ್ರಭಾವಗಳನ್ನು ತಾಲನಿಕವಾಗಿ, ಸೂಕ್ಷ್ಮದಲ್ಲಾದರೂ ಸ್ಪಷ್ಟಗೊಳಿಸಿವೆ ಎನ್ನಬಹುದು. ಇನ್ನು ಈ ಸಮಾಲೋಚನೆಂತು ಸಾಧನೆಗಳನ್ನು ಸಂಗ್ರಹಿಸಬಹುದು.

## 7. ಸಮಾಲೋಚನೆಯ ಸಾಧನೆ

ಈ ಅಧ್ಯಯನದ ಆದಿಯಲ್ಲಿ ಅರಿಕೆ ಮಾಡಿಕೊಂಡಂತೆ, ಕನ್ನಡ ಸಾಹಿತ್ಯದ ಹರಿದಾಸರಲ್ಲಿ ಹಿರಿಯರಾದ ವಾದಿರಾಜರ ಕೃತಿಗಳ ಬಗ್ಗೆ ಅಗತ್ಯವಾದೊಂದು ಅಭ್ಯಾಸವನ್ನಿಲ್ಲಿ ಕೈಕೊಂಡು ಪೂರೈಸಿದೆ. ಸಕೃದವಾ ನೋಡಿದಂತೆ ಅವರ ಕೃತಿ ಬಹಳವಾಗಿರುವುದರಿಂದ ಇದನ್ನು ಕನ್ನಡ ಕೃತಿಗಳಿಗೆ ಸೀಮಿತಗೊಳಿಸಿದ್ದರೂ, ಹಿನ್ನೆಲೆಯಲ್ಲಿ ಅವರ ಸಾಹಿತ್ಯ ಸೃಷ್ಟಿಗೆ ಅವಶ್ಯವಾಗಿ ವ್ಯಕ್ತಿಮಹತ್ವ — ಸಂಸ್ಕೃತ ಕೃತಿಗಳನ್ನೂ ಸಂಗ್ರಹವಾಗಿ ಸಮೀಕ್ಷಿಸಿದೆ. ಅದರಲ್ಲಿಯೂ, ನಂತರದ ಕನ್ನಡ ಕೃತಿಗಳ ಸಮಾಲೋಚನೆಯಲ್ಲಿಯೂ ಸಾಂಪ್ರದಾಯಿಕ ಸಂಗತಿಗಳೊಡನೆ ಐತಿಹಾಸಿಕ ವಿಮರ್ಶಾತ್ಮಕ, ತೌಲನಿಕ ದೃಷ್ಟಿಕೋನ ಇರಿಸಿಕೊಂಡುದರಿಂದ ಸಂಶೋಧನೆಯನ್ನು ಸಾಧ್ಯವಾದಷ್ಟು ಸಮಗ್ರಗೊಳಿಸಲೆತ್ನಿಸಿದೆ. ಇಂಥ ಅಧ್ಯಯನವೇ ಒಂದು ಸಾಧನೆ. ಇದರ ಫಲವಾಗಿ ಈ ಕೆಳಗಿನ ಅಂಶಗಳೂ ಸಾಧಿತವಾಗಿವೆ:

(1) ಪರಂಪರೆಯ ಕೊಂಡಿ

ವಾದಿರಾಜರು ಅನುಗ್ರಹಿಸಿದ ಕನ್ನಡ ಕೃತಿ ಹರಿದಾಸ ವಾಙ್ಮಯಕ್ಕೆ ಸಂದ ವಿಶೇಷ ಕೊಡುಗೆಯಾದ್ದರಿಂದ, ಅಧ್ಯಯನಾರಂಭದಲ್ಲಿ ದಾಸಸಾಹಿತ್ಯದ ಹಿನ್ನೋಟ ಬೀರಿದೆ. ಮಧ್ವರು ಮೊದಲ ಹರಿದಾಸರಾದರೂ ಹರಿತತ್ತ್ವ ಕನ್ನಡಿಸುವಲ್ಲಿ ಪ್ರೇರಕಮಾತ್ರರೆಂಬುದನ್ನು ಮರೆಯುವಂತಿಲ್ಲ. ನರಹರಿತೀರ್ಥರೇ ದಾಸ ಸಾಹಿತ್ಯದ ಆದ್ಯ ಕೃತಿಕಾರರಾದರು. ನಂತರದ 14ನೆಯ ಶತಮಾನ ದಾಸ ಪರಂಪರೆ ಹರಿಗಡಿದವಧಿ ಎಂದು ಕೆಲವರೆಂದರೂ, ಇನ್ನು ಕೆಲವರೂಹಿಸಿದಂತೆ ಅಚಲಾನಂದಾದಿ ಆದ್ಯ — ಆರಾಧ್ಯ ದಾಸರು ಈ ಅಂತರದಲ್ಲಿದ್ದುದಕ್ಕೆ ಕೆಲ ಆಂತರಿಕ ಪ್ರಮಾಣಗಳಿವೆ. ಮಧ್ವರ ಮುಖ್ಯ ಪೀಠಗೆ ಇಟ್ಟುದ ಮೇಲೇರಿ ಉತ್ತರಾದಿ ಮಠವೆನಿಸಿ ನರಹರಿತೀರ್ಥರು ವಿಜಯನಗರದಲ್ಲಿ ವೃಂದಾವನಸ್ಥರಾದರೂ, ವಿದ್ಯಾರಣ್ಯರ ಪ್ರಾಬಲ್ಯದಿಂದ ಮಾಧವ, ಅಕ್ಷೋಭ್ಯ, ಜಯತೀರ್ಥರ ಚಟುವಟಿಕೆ ಪಂಢರಿಗೆಯತ್ತ ಸರಿದು, ಆದ್ಯ ಆರಾಧ್ಯ ದಾಸರು ಅತ್ತ ಆಕರ್ಷಿತರಾದರು. ಅಂತೆಯೇ ಅಚಲಾನಂದ ವಿಠಲ, ಮುದ್ದು ವಿಠಲ, ಪಾಂಡುರಂಗಾದ್ಯಂಕಿತ ಹೊಂದಿದರು. ಅವರ ಕೃತಿ ಮಧ್ವ ಮತವನ್ನುಲ್ಲೇಖಿಸಿದ್ದರಿಂದ ಅವರು ಮಧ್ವರ ನಂತರದವರು. ಮಹಿಪತಿಸುತ ಕೃಷ್ಣರಾಯರು 'ಆದ್ಯರು ಸಿರಿಪಾದಾದಿಗಳ ನೆನೆ' ಎಂದರೆ, ವಿಜಯದಾಸರು 'ವಿಜಯವಿಠಲನ

ಸ್ಮರಣೆ ಮಾಡಿದರು ಆದ್ಯರು' ಎಂದರಲ್ಲಿ, ಇದೇ ಆದ್ಯರ ಅಭಿಪ್ರಾಯವೆನಿಸುತ್ತದೆ. ಆದರಿಂದ 14ನೆಯ ಶತಮಾನದಲ್ಲಿ ದಾಸಪರಂಪರೆಗೆ ವಿಚ್ಛಿತ್ತಿ ಒದಗಿದಂತಿಲ್ಲ. ಶ್ರೀಪಾದರಾಯರು ದಾಸ ಸಾಹಿತ್ಯದ ಪುನರಾವಿರ್ಭಾವಕ್ಕೆ ಕಾರಣ ಪುರುಷರೆನಿಸಿ ಶ್ರೀಕಾರ ಹಾಕಿದವರು. ವ್ಯಾಸಕೂಟದಂತೆ ದಾಸಕೂಟವನ್ನು ಕಟ್ಟಿಹಾಡಿದವರು ವ್ಯಾಸರಾಯರು. ಕಿರಿಯರು ಹಿರಿಯರನ್ನು ಹೊಗಳುವುದು ಸಹಜ; ಆದರೆ ಶ್ರೀಪಾದರಾಯರಂಥ ಹಿರಿಯರು 'ಶೇಷನೆ ಕೊಂಡಾಡಬೇಕು ವ್ಯಾಸರ ಸನ್ಯಾಸದಿರವ' ಎಂದಂತೆ, ವ್ಯಾಸರಾಯರು 'ವಾದಿಗಳ ಗೆದ್ದ ವಾದಧೀರನೇ ನಿನಗೆಣೆಗಾಣೆ ಮಧ್ವಮುನದೊಡೆಯ' ಎಂದು ವಾದಿರಾಜರನ್ನು ಕೊಂಡಾಡಿದ್ದು ವಿಶೇಷ; 'ದಾಸರೆಂದರೆ ಪುರಂದರದಾಸರು' ಎಂದು ಅವರು 'ಕನಕದಾಸನ ಮೇಲೆ ದಯೆ ಮಾಡಿ'ದ್ದು ಕಿರಿಯರ ಅಂತಸ್ಸತ್ವಕ್ಕೆ ಸಾಕ್ಷಿ. ಇಂತಹ ಪ್ರತಿಭಾವಂತರಿಂದ ಭಕ್ತಿ ಪಂಥ ಕರ್ನಾಟಕದಲ್ಲಿ ಬೆಳೆಯಿತು. ಇದೇ ಹರಿದಾಸ ವಾಙ್ಮಯದ ಉಚ್ಛ್ರಾಯ ಕಾಲ.

"16ನೆಯ ಶತಮಾನದಲ್ಲಿ ಭಾರತದಾದ್ಯಂತ ಪ್ರಚಲಿತವಾಗಿದ್ದ ಭಕ್ತಿಪಂಥ ಕರ್ನಾಟಕದಲ್ಲಿ ಸಾರವತ್ತಾದ ಫಲ ನೀಡಿತು. ವ್ಯಾಸರಾಯರ ಪ್ರಭಾವದಿಂದ ಗುರುಮನೆ– ಅರಮನೆಗಳ ಬೆಂಬಲ ಪಡೆದ ಈ ಆಂದೋಲನ ಪುರಂದರ– ಕನಕ– ವಾದಿರಾಜ ಮೊದಲಾದ ಕವಿಹೃದಯದ ಭಕ್ತಶ್ರೇಷ್ಠರ ಉತ್ಕೃಷ್ಟ ಕಾಣಿಕೆಗಳ ಕಾರಣ ತುಂಬು ಪ್ರವಾಹವಾಗಿ ಮೊರೆಯಿತು" (ಎಚ್.ಎಸ್.ಪಿಂ.ಮೂರ್ತಿ, ಕೀರ್ತನಕಾರರು, ಪು.15). 'ವೃದ್ಧಿಂ ಕರ್ಣಾಟ ಕೇ ಗತಾ' ಎಂಬ ಪದ್ಮಪುರಾಣದ ಉಕ್ತಿ (1,48) ಉಚಿತವೇ, ಭಕ್ತಿಯ ಬೆಳವಣಿಗೆಯ ಬಣ್ಣನೆಯಲ್ಲಿ. ಆದರೆ "1564ರಲ್ಲಿ ಪುರಂದರದಾಸರು ವಿಜಯನಗರದಲ್ಲಿ ನಿರ್ಯಾಣಗೊಂಡ ನಂತರ ಹರಿದಾಸ ಪರಂಪರೆ ಸುಮಾರು ಒಂದು ಶತಮಾನದ ದೀರ್ಘಕಾಲ ಇತಿಹಾಸದ ಕತ್ತಲಲ್ಲಿ ಮುಳುಗಿಹೋಯಿತು" (ಕೀರ್ತನಕಾರರು, ಪು.6); "ಮುಂದೆ ನೂರಾರು ವರ್ಷಗಳ ವರೆಗೆ ಹರಿದಾಸಕೂಟ ಎಲ್ಲಿ ಹೇಗೆ ಯಾರಿಂದ ಜೀವ ಹಿಡಿದುಕೊಂಡಿದ್ದಿತೆಂಬುದನ್ನು ತಿಳಿಸಿಕೊಡುವಂತಹ ಐತಿಹಾಸಿಕ ಪ್ರಮಾಣಗಳಾವವೂ ಸಿಕ್ಕುವುದಿಲ್ಲ" (ಬೆಟಗೇರಿ ಕೃಷ್ಣಶರ್ಮ, ಸಂಕೀರ್ಣ, ಪು.23); "ಈ ಅಜ್ಞಾತತೆಗೆ ವಿಜಯನಗರ ಸಾಮ್ರಾಜ್ಯದ ಅಳಿವಿನ ರಾಜಕೀಯ ಕಾರಣವನ್ನು, ಅಪರೋಕ್ಷ ಜ್ಞಾನಿಗಳ ಅಭಾವದ ಸಂಭವವನ್ನು ಸೂಚಿಸಲಾಗಿದೆ" (ದಾಸ ಸಾಹಿತ್ಯದ ದ್ವಿತೀಯ ಘಟ್ಟ, ಹಿನ್ನೆಲೆ, ಪು.19) — ಎಂಬಂತಹ ಉಕ್ತಿಗಳನ್ನು ಮಾತ್ರ ಪುನಃ ಪರಿಶೀಲಿಸುವುದಗತ್ಯ. ಏಕೆಂದರೆ, ಪುರಂದರದಾಸರು ದೀಕ್ಷೆಗೊಳ್ಳುವ ಮೊದಲೇ

ಮೊದಲಾಗಿದ್ದ ವಾದಿರಾಜರ ಸೃಜನಾತ್ಮಕ ಚಟುವಟಿಕೆ ಈ ಶತಮಾನಾಂತ್ಯದ ವರೆಗೂ ಅಬಾಧಿತವಾಗಿ ಸಾಗಿದೆ. ಅವರು ಅಪರೋಕ್ಷ ಜ್ಞಾನಿಗಳೆಂಬುದನ್ನು ಅಲ್ಲಗಳೆಯುವಂತಿಲ್ಲ. ಅಲ್ಲದೆ, ಪುರಂದರ ದಾಸಾತ್ಮಜರು ಹಾಗೂ ಕನಕದಾಸರಿಂದ ಮುಂಬರಿದಿದ್ದ ಈ ಪರಂಪರೆಗೆ, ಗುರುಗಳಿಂದಂಕಿತರಲ್ಲದ ಕಾರಣದಿಂದ ಬಿಟ್ಟು ಹೋದ ಮಹಿಪತಿರಾಯ (1611—81) ಹಾಗೂ ಮಹಿಪತಿಸುತ ಕೃಷ್ಣರಾಯ (1663— 1703) ಇವರಡು ಹೆಸರೂ ಸೇರಿಸಿಕೊಂಡರೆ ಸಾಂಪ್ರದಾಯಿಕವಾಗಿ ಹೇಳುವ ತಟಸ್ಥ ಕಾಲದ ಬಿರುಕು ತುಂಬಿಕೊಳ್ಳುವುದೆನಿಸುತ್ತದೆ. ಅದಕ್ಕೆ ಆಗಿನ ಸಾಹಿತ್ಯ ಕೃಷಿಯು ಅರಿವಾಗಬೇಕು, ಅಷ್ಟೆ.

ಪುರಂದರ— ಕನಕದಾಸರಷ್ಟು ವಾದಿರಾಜರ ಪರಿಚಯ ಕನ್ನಡಿಗರಿಗೆ ಒದಗಿಲ್ಲ; ಇನ್ನು ಅವರ ಕೃತಿ ರಚನಾ ಪರಿಚಯಕ್ಕೆಡೆ ಎಲ್ಲಿ? ಅಂತೆಯೇ, ಮೇಲಿನಂಥ ಹೇಳಿಕೆ ಬಂದಿವೆ. ಆದರೆ ವಾದಿರಾಜರ ಜೀವನ— ಕೃತಿ ಪರಿಚಯಗಳಿಂದ ಇವನ್ನು ಪುನರ್ವಿಮರ್ಶಿಸಬೇಕಾಗುವುದು. ಏಕೆಂದರೆ ಪುರಂದರ— ಕನಕದಾಸರ ಸಾಹಿತ್ಯ ಸೃಷ್ಟಿ ಮೊದಲಾದ್ದು 1520ರ ಆಚೀಚೆ. [illegible] 1480 ರಿಂದ 120 ವರ್ಷ [illegible]ಪೂರ್ಣಾಯುಷ್ಯ ಪಡೆದಿದ್ದ ವಾದಿರಾಜರಾದರೋ 1500ರ ಹೊತ್ತಿಗೇ ತೀರ್ಥಾಟನ ತೊಡಗಿ ರಚಿಸಿದ ಶ್ಲೋಕಗಳೇ ಪ್ರಬಂಧಿತವಾದುವು 'ತೀರ್ಥಪ್ರಬಂಧ'ದಲ್ಲಿ. ಸಂಚಾರದಲ್ಲಿ ಮದುವಣಿಗನನ್ನುದ್ದೀಪಿಸಲು 'ಲಕ್ಷ್ಮೀಶೋಭಾನೆ' ಪ್ರಯುಕ್ತವಾಯಿತು. ಪುಣೆಯಲ್ಲಿ ಮಹಾಕಾವ್ಯ ಪೂರಿಸಿದ 'ರುಕ್ಮಿಣೀಶ ವಿಜಯ' ರಚಿತವಾಯಿತು. ಬದರಿಯಲ್ಲಿ ಭಾರತಕ್ಕೆ 'ಲಕ್ಷಾಲಂಕಾರ' ಏರಿತು. ದ್ವಾರಕೆಯಲ್ಲಿ ಪ್ರಾದುರ್ಭವಿಸಿದ್ದು 'ಮಧ್ವಾಷ್ಟಕ'. ಇಂಥ ನೂರಾರು ಸಂಸ್ಕೃತ— ಕನ್ನಡ ಕೃತಿ ಹೊಮ್ಮಿದುವು 16ನೆಯ ಶತಮಾನದಲ್ಲಿ. 1526 ಹಾಗೂ 1556ರ ಪಾಣಿಪತ್ ಯುದ್ಧ, 1564ರ ರಕ್ಕಸತಂಗಡಿ ಕಾಳಗದಂಥ ರಾಜಕೀಯ ವಿಪ್ಲವಗಳಾವುವೂ ವಾದಿರಾಜರ ಪ್ರತಿಭಾಸೃಷ್ಟಿಗೆ ಅಡ್ಡಿ ಒಡ್ಡಿದಂತಿಲ್ಲ. ಆ ಮಹಾಯೋಗಿ ಅಪರೋಕ್ಷ ಜ್ಞಾನಿಗಳೆಂಬುದನ್ನು ಅಲ್ಲಗಳೆಯುವಂತಿಲ್ಲ. ಅಭಿನವ ಮಧ್ವರಂತೆ ಅವರು ಸಾಧಿಸಿದ ವಿಶೇಷ ಕಾರ್ಯಗಳಲ್ಲಿ ಪರ್ಯಾಯ ಸುಧಾರಣೆ ಒಂದು ಉದಾಹರಣೆ. ಅಚ್ಯುತರಾಯನ ರೋಗ ನಿವಾರಿಸಿ 'ಹತ್ತಿದೆ ಮುತ್ತಿನ ಗದ್ದಿಗೆಯನ್ನು' ಎಂದು ವ್ಯಾಸರಾಯರಿಂದ ಕೀರ್ತಿತರಾದ ಅವರತ್ತ ಬಂದ ಕನಕದಾಸರು ಕೃಷ್ಣದರ್ಶನಕ್ಕೆ ಕಿಂಡಿ ಹೊಂದಿದ್ದು ಆಶ್ಚರ್ಯವಲ್ಲ. ನಾಲ್ಕು ಪರ್ಯಾಯಗಳ ನಡುವೆಯೂ 'ಯುಕ್ತಿಮಲ್ಲಿಕಾ'ದ್ಯನೇಕ ಶಾಸ್ತ್ರಗ್ರಂಥ,

ಸ್ತೋತ್ರ, ಕನ್ನಡ ಕೃತಿ, ಕಾವ್ಯ,ಕೀರ್ತನೆ ಮಾಡಿಸಿದ ಅವರ ಪ್ರತಿಭೆ ಯಾರನ್ನೂ ಬೆರಗುಗೊಳಿಸುವಂಥದು. ದಾಸ ಸಾಹಿತ್ಯದ ಶಿಖರೋಪಮ ಪುರಂದರದಾಸರ ಪೂರ್ವ, ಸಮಾನ, ಉತ್ತರ ಕಾಲದಲ್ಲಿ ವಾದಿರಾಜರು ಮಾಡಿದನುಗ್ರಹ ಮರೆತರೆ ನಾವೇ ರಂಡತರೆನಿಸುತ್ತೇವೆ. "He brought the wisdom of his prededessors within the reach of all and in this respect his works mark a new and necessary phase of development in the history of Dwaita literature and philosophy, breathing the spirit of renaissance which produced such great champions as Purandara and Kanakadasa"(-B.N.K.Sharma, Shruti Tatwa Prakashika, p.6).

1564ರಲ್ಲಿ ವಿಜಯನಗರ ನಾಶವಾಗಿ ಸೋದೆಯ ಮಾಂಡಲಿಕ ಅರಸಪ್ಪನಾಯಕ ಪ್ರಬಲಿಸಿದರೂ, ಆತ 'ಸದ್ಧರ್ಮ ಸಿಂಹಾಸನಾಧೀಶ್ವರನೆ'ಂದಿದೆ 1566ರ ಸ್ವರ್ಣವಲ್ಲಿ ಶಾಸನ. 1571ರಲ್ಲಿ ಕೃಷ್ಣಮಠ ವಾದಿರಾಜರಿಗೆ ದಾನವಿತ್ತ ಕೆಳದಿಯ ಚಿಕ್ಕಸಂಕಣ್ಣನಾಯಕ 1582ರಲ್ಲಿ ಸೋದೆಯನ್ನಾಕ್ರಮಿಸಿದ (E.C. VII, 5b, 55, 301). ಆಗಲೇ ಸೋದೆಯ ತಪೋವನಸ್ಥರಾಗಿದ್ದ ವಾದಿರಾಜರು ಸೋತು ಬಂದ ಅರಸಪ್ಪನಿಗೆ ನೆರವಾಗಿ ತ್ರಿವಿಕ್ರಮಾಲಯ ಕಟ್ಟಿಸಿದರು. ಅದರ ದಕ್ಷಿಣಸ್ಥ 1593ರ ಶಾಸನದಲ್ಲಿದು ಸ್ಪಷ್ಟೋಕ್ತ — 'ಶಾ.ವಾ.ಶ.1504 ಚಿತ್ರಭಾನು ವೈಶಾಖ 15 ತ್ರಿವಿಕ್ರಮ ಪ್ರತಿಷ್ಠೆ ಮಾಡಿದ ಮುಹೂರ್ತ.' ಅದರಿಂದ ಕನಕದಾಸರು 'ತ್ರಿವಿಕ್ರಮದಾಸಸ್ಯದಾಸ' ಎಂದುಕೊಂಡುದು (ಮೋಹನತರಂಗಿಣಿ, 26,1) 1582ರ ನಂತರ ಎನಿಸುತ್ತದೆ. ವಾದಿರಾಜರ ಕೆಲವು ಕೃತಿ ಕೂಡ ಅನಂತರ ರಚಿತವೆನ್ನಲು ಆಂತರಿಕ ಆಧಾರಗಳಿವೆ. 'ಅಧ್ವರಸಿದ್ಧಸತ್ಕ್ರಿಯಂ'ದು ಮುಗಿದ 'ತೀರ್ಥಪ್ರಬಂಧ' ಪಶ್ಚಿಮ ಶ್ಲೋಕ 75–6 ರಲ್ಲಿ 'ತ್ರಿವಿಕ್ರಮ ವಾದಿರಾಜ ಪ್ರತಿಷ್ಠಿತಂ ನೌಮಿ' ಎನ್ನುವುದರಿಂದಲೂ, 'ರುಕ್ಮಿಣೀಶ ವಿಜಯ'ದ ಕಾಲಿಂದೀ ವರ್ಣನೆಯ ಶ್ಲೋಕ (7–35) ಉತ್ತರ ಪ್ರಬಂಧದಲ್ಲಿ ಪುನರುಕ್ತವಾದ್ದರಿಂದಲೂ (12), 1582ರ ನಂತರ ಪ್ರಬಂಧಿತವೆನಿಸುತ್ತದೆ; 1595ರ ಸುಮಾರು ಬಂದ 'ವೃತ್ತರತ್ನ ಸಂಗ್ರಹ' ಈ ಕೃತಿಯನ್ನುಲ್ಲೇಖಿಸಿದೆ. 'ವಿದಾರಿತಾರಿ ಸಂಘಾತಂ ··· ಸೋದಾಪುರನಿವಾಸಿನಂ' ಎಂಬ ತ್ರಿವಿಕ್ರಮ ಸ್ತೋತ್ರ, 'ದೇವೋಪದೇವಾಃ ಚಿತರೋ' ಎನ್ನುವ ತ್ರಿವಿಕ್ರಮ

ಸಪ್ತ ರಾತ್ರೋತ್ಸವ ಪ್ರಕಾರ ಸ್ತೋತ್ರವೂ 1582ರ ತರುವಾಯದ್ದು. 'ಉಪ್ಪವಡಿಸಯ್ಯ ತ್ರಿವಿಕ್ರಮ, ಕಾಯಬೇಕು ಶ್ರೀತ್ರಿವಿಕ್ರಮ, ತ್ರಿವಿಕ್ರಮರಾಯನ ನಂಬಿಗೋ .. ಸೋದೆಯ ಪುರದಲ್ಲಿ ನಿಂದನ, ದಯಮಾಡೊ ಕಾಶಿ ಬಿಂದುಮಾಧವ ಸೋದೆಯ ಪುರವಾಸ, ಧವಳ ಗಂಗೆಯ ಗಂಗಾಧರ ಮಹಲಿಂಗ' ಮೊದಲಾದ ಹಾಡೂ ನಂತರದ್ದೇ; ಸೋದೆಯ ತ್ರಿವಿಕ್ರಮನನ್ನುಲ್ಲೇಖಿಸಿದ 'ಜಯಮತ್ಸ್ಯಕೂರ್ಮವರಾಹ .. ಜಯ ಸ್ವಾದೆಯಲಿ ಮೆರೆವ ತ್ರಿವಿಕ್ರಮರಾಯ, ಕೋಲು ಕೋಲೆನ್ನ ಕೋಲು .. ವಾದಿರಾಜನಿಗೊಲಿದು ಸೋದೆಪುರದಿ ನಿಂದು, ದಿಬ್ಬಸಾಲೆ ... ವಾದಿರಾಜಗೊಲಿದು ಬಂದು ಸೋದೆಪುರದಲ್ಲಿ ನಿಂದ ಮೋದಿ ಹಯವದನ' ಎಂಬುವೂ, ಸೋದೆಯ ಹನುಮನನೆನೆದ 'ಎದ್ದುನಿಂತ ಖಳರ ಕೃತಾಂತ ಹೊಂದಿದವರ ಪೊರೆವ ಧವಳ ಗಂಗೆ ಹನುಮಂತ, ರಾಮಪದ ಸರಸೀರುಹಭೃಂಗ ... ಧರೆಯೊಳತ್ಯಧಿಕ ಸೋದೆಪುರ ನಿವಾಸ' ಎಂಬುವೂ ಆಗಿವೆ. ಪಾಮಂಜೆಯವರ ಸಂಗ್ರಹದ 'ಯದುಪತಿಯ ತೋರಮ್ಮ ... ಸೋದೆಪುರವಾಸನ ವಾದಿರಾಜ ಯತೀಶನ' (ಪು.79) ಎಂಬುದೂ, ಸೋದೆಯ ಸನಿಹದ ಮಂಜುಗುಣಿಯ ವೆಂಕಟೇಶನನ್ನು ತೀರ್ಥಪ್ರಬಂಧದಲ್ಲಿ ಚಿತ್ರಿಸಿದ್ದಲ್ಲದೆ ಮನ್ನಿಸೋ ಶ್ರೀ ವೆಂಕಟೇಶ ಮಂಜುಗುಣಿಪುರವಾಸ' ಎಂಬುದೂ ಸೋದಾವಾಸದ ದಶಕಗಳಲ್ಲೇ ರಚಿತ. 'ಜಯ ಜಯ ದಯಾಕರನೆ' ಎಂದು ಮೊದಲಾದ ನಾರದ ಕೊರವಂಜಿ 'ಸೋದೆ ತ್ರಿವಿಕ್ರಮ ಮೊದಲಾದ ದೇವತೆ ಎನ್ನ ವಾಕ್ಯದಲಿದ್ದು ಪೇಳಿರಯ್ಯಾ' (ವಾ.ಕೃ.ಪು.466) ಎನ್ನುವುದರಿಂದ 1582ರ ಬಳಿಕ ಬಂದುದು. 'ನಾರಾಯಣ ನಾರಾಯಣ ನಾರಾಯಣ ನಾರಾಯಣ! ನಾರಾಯಣ ನಾರಾಯಣ ನರಹರಿಯೆ! ನಾರಾಯಣ ನಾರಾಯಣ ನರಹರಿಯೆ ಹಯವದನ! ಸ್ವಾಮಿ ನೀ ಎನಗೆ ದಯವಾಗೊ' ಎಂಬ ಪಲ್ಲವಿಯಲ್ಲಿ ಹಯವದನ ಸೇರಿ 9 ಸಲ ಬರುವ ನಾರಾಯಣನಾಮ ಮತ್ತೆ 11 ನುಡಿಗಳಿಗೂ ಪುನರಾವರ್ತಿತವಾಗಿ 108ರ (ಅಷ್ಟೋತ್ತರ) ಕೀರ್ತನವೆನಿಸುವುದರಿಂದ 'ವಾದಿರಾಜ ಗುರುಚರಿತಾಮೃತ' 6—33 ತಿಳಿಸಿದಂತೆ ಅರಸಪ್ಪನಾಯಕ ನಳಿಯನನ್ನುದ್ದೇಶಿಸಿದ ಕೃತಿಯಾಗಿ ಕೊನೆಯ ದಶಕಗಳಲ್ಲಿ ರಚಿತವಾಗಿರಬೇಕು.

ಆದೇ ಸಂಸ್ಕೃತ ಚರಿತ್ರದ ಜೊತೆಗೆ 'ವೃತ್ತರತ್ನ ಸಂಗ್ರಹ'ವೂ ಸೂಚಿಸಿದಂತೆ (3—3, 1—47) ವಾದಿರಾಜರು ಪೆನುಗೊಂಡೆಯಲ್ಲಿ ವೆಂಕಟಪತಿರಾಯನಿಂದ 'ಪ್ರಸಂಗಾಭರಣತೀರ್ಥ'ರೆನಿಸಿದ್ದು ವಾಕ್ಪಟುತ್ವಕ್ಕಾಗಿ; ಎಂದರೆ 1585ರಲ್ಲಿ ಶತಾಯುಷ್ಯ ದಾಟಿದ್ದರೂ ಅವರ ವಾದಪಟುತ್ವ

ಕುಗ್ಗಿರಲಿಲ್ಲ! ಆದರೆ ದೃಷ್ಟಿ ತಗ್ಗಿದಂತೆ ಕೆಲ ಕೃತಿ ಕುರುಹುದೋರಿವೆ. 'ಯದಿ ದಿಶಸಿ ನಯನ ಪಟುತಾಂ' ಎಂಬ ಕೃಷ್ಣಸ್ತುತಿ, 'ಆರಾಕ್ಯವೃತ್ತಂ ವಿಚಿತ್ರ ನಾರಾಯಸಾ ... ಉನ್ಮೀಲಯ ಮನ್ನಯನೇ' ಎಂಬ ಲಕ್ಷ್ಮೀಸ್ತುತಿ, 'ಈಗಲೋ ಇನ್ನಾವಾಗಲೋ ಈ ತನುವು ಪೋಗದಿರದು ... ವೃದ್ಧನಾದೆನು ... ಕಣ್ಣು ಕಾಣಬಾರದು' ಎಂಬ ಹಾಡು, 'ಕರುಣಾವ ಬೇರು ಚೆನ್ನ ... ಕರಣ ಎನ್ನಿಚ್ಛೆಯೊಳಿಲ್ಲ' ಎಂಬ ಕೃತಿ, 'ಎನಗೆ ನೀನೇ ಬಂಧು ... ಎನಗಿರ್ದ ಅಖಿಳದೋಷವ ಕಳೆದು ರಕ್ಷಿಸಿಕೊಡು' ಎಂಬ ರಚನೆ, 'ಕಣ್ಣು ಕಾಣದ ಬಲು ಜೀರ್ಣದೇಹದವನ' ಎನ್ನುವ ವೈಕುಂಠ ವರ್ಣನೆ (4— 106) ಇದಕ್ಕೆ ನಿದರ್ಶನ. ಇದರಿಂದ ಇವೆಲ್ಲ ಕೊನೆಗಾಲದ ಸೃಷ್ಟಿ ಎಂಬುದೂ ಸ್ಪಷ್ಟ. 'ಪುರಂದರವಿಠಲ'ನನ್ನುಲ್ಲೇಖಿಸಿದ ಬಾಲಲೀಲೆಯೂ (ಉ. 455) ಶತಕಾಂತ್ಯದ ಪರಿಪಕ್ವ ಕಾವ್ಯ. ಅಲ್ಲದೆ ಬೇಲೂರಿಗೆ ಹೋದಾಗ 'ಬೇಗ ಬಾರೊ' ಎಂದು ಚೆನ್ನಕೇಶವನ ರಥವೆಳೆದು, ವೃದ್ಧ ವೈಕುಂಠದಾಸರ ತೊಡೆಯ ಬಾಲಕೃಷ್ಣನ ಕಂಡು 'ದಾಸೋತ್ತಮ ನೀನೆ' ಎಂದು ಅವರು 'ಕೊಂಡಾಡಬಹುದೆ' ಎನಲು ಉಚ್ಛಿಷ್ಟ ಸಿಡಿಯಿತೆಂದವರಿಗೆ 'ಎಂಜಲೆನ್ನಲಿಬಹುದೆ' ಎಂದು ಕೇಳಿದ್ದೂ ಶತಕಾಂತ್ಯದಲ್ಲಿಯೇ. ತಮ್ಮಂತೆ ವಯಸ್ಸಾದ ವೇದವೇದ್ಯರಿಗೆ 1596— 7ರ ಪರ್ಯಾಯ ಒಪ್ಪಿಸಿ 'ಮನ್ನಿಸೆನ್ನ ಮಧುಸೂದನ' ಎಂದು ಪ್ರಾರ್ಥಿಸಿ ಸೋದೆಗೈತಂದರು. ಹೀಗೆ ವೃಂದಾವನಸ್ಥರಾಗುವ ವರೆಗೂ ಅವರ ಸಾಹಿತ್ಯಸೃಷ್ಟಿ ಸಾಗಿಯೇ ಇತ್ತು.

ವಾದಿರಾಜರೊಡನೆ ಕನಕದಾಸರೂ ಪುರಂದರಪುತ್ರರೂ 1564ರ ನಂತರ ಕೂಡ ದಾಸ ಸಾಹಿತ್ಯದ ಭಂಡಾರ ತುಂಬುತ್ತಲೇ ಇದ್ದರಲ್ಲವೇ? ವಾದಿರಾಜರ ಬೆನ್ನಲ್ಲಿಯೇ 1611 ರಲ್ಲಿ ಬಂದ ಮಹಿಪತಿದಾಸರು 600ಕ್ಕೂ ಹೆಚ್ಚು ಕೃತಿ ರಚಿಸಿದರು. ಅವರು ಗುರ್ವಂಕಿತರಲ್ಲೆಂದು ದಾಸ ಕೂಟಕ್ಕೆ ಹೊರತಲ್ಲ. ವಾದಿರಾಜ ಕನಕದಾಸರೂ ಪ್ರತ್ಯಕ್ಷ ಗುರ್ವಂಕಿತರಲ್ಲ. ಮಹಿಪತಿ ಯವರ ಕಾಲದ ದಾಸ ಸಾಹಿತ್ಯ ಕೃಷಿಯ 'ಅರಿವು ನಮಗೆ ಆಗಿರಲಿಲ್ಲ. ಇದೀಗ ಮಹಿಪತಿರಾಯರು, ಅವರ ಮಗ ಕೃಷ್ಣರಾಯರು (1663— 1804) ಈ ಅವಧಿಯಲ್ಲಿ ಸಾಕಷ್ಟು ಕೃಷಿ ಮಾಡಿ ರುವರೆಂಬಂಶ ತುಂಬ ಪ್ರಶಸ್ತವಾದುದು. ಕಾರಣಾಂತರ ಹರಿದಾಸ ಪೀಳಿಗೆಯಲ್ಲಿ ಈ ಮಹನೀಯರ ಹೆಸರು ಸೇರದೆ ಹೋದುದರಿಂದ ಈ ಅವಧಿಯನ್ನು ತಟಸ್ಥ ಕಾಲವೆಂದು ಈ ವರೆಗೆ ಭಾವಿಸಿರುವುದುಂಟು. ಕೀರ್ತನ ಪರಂಪರೆಯ ದೃಷ್ಟಿಯಿಂದ ಪ್ರಕೃತ ರಚನೆಗಳನ್ನು ಪರಿಗಣಿಸುವುದು

ಸಾಕ್ಷ್ಯ (ಬಿ.ವರದರಾಜರಾವ್, ಮಹೀಪತಿದಾಸರ ಕೃತಿಗಳು, ಪೀಠಿಕೆ 46). ಈ ರೀತಿ ನರಹರಿ ತೀರ್ಥ, ಪುರಂದರದಾಸರ ಉತ್ತರಾವಧಿಗಳೆರಡೂ ತಾವೇ ತುಂಬಿಕೊಂಡು ದಾಸರ ಪರಂಪರೆ ಅವಿಚ್ಛಿನ್ನವೆಂದು ತೋರಿಸಿಕೊಡುವಲ್ಲಿ, ಅದನ್ನು ಹಟದಿಂದ ಸಾಧಿಸಬೇಕಾದ ಪ್ರಶ್ನೆಗೆ[1] ಎಡೆ ಎಲ್ಲಿ? ಅದರಲ್ಲೂ ಪುರಂದರೋತ್ತರ ಕಾಲದಲ್ಲಿ ವಾದಿರಾಜರು 1600ರ ವರೆಗೂ ಕೃತಿಕಾರರಾಗಿ ಮೆರೆದುದು ಕನ್ನಡಿಗರ ಕಣ್ಮುಂದೆ ಇದ್ದರೂ, ಅನಧ್ಯಯನದಿಂದಾಗಿ ಅನವಧಾನದ ವಾಕ್ಯ ಉಳಿಸಿದವು. ಈ ಸತ್ಯಾಂಶವನ್ನು ಅನಾವರಣಗೊಳಿಸಿದುದು ಪ್ರಸ್ತುತ ಸಂಶೋಧನೆಯು ಒಂದು ಆನುಷಂಗಿಕ ಸಾಧನೆ. ವಾದಿರಾಜರು ದಾಸಪರಂಪರೆಯ ಕೊಂಡಿ ಎಂಬುದೀಗ ಸಿದ್ಧವಾಯಿತು.

(2) ಋಜುತ್ವದರ್ಶನ

ವಾದಿರಾಜರ ವ್ಯಕ್ತಿ ಮಹತ್ವ, ಮಹೋನ್ನತಿಗಳಡಗಿರುವುದು ಅವರ ಋಜು ಸ್ವರೂಪದಲ್ಲಿ. ಅವರ ಮಹತಿಯನ್ನರಿತರೂ ವ್ಯಕ್ತಿತ್ವದ ಈ ಕೇಂದ್ರಬಿಂದುವನ್ನು ಹೊಂದಲು ಸಮಕಾಲೀನ 'ವೃತ್ತರತ್ನ ಸಂಗ್ರಹ'ಕ್ಕೆ ಸಾಧ್ಯವಾಗಲಿಲ್ಲ. ಆದರೆ ಅನತಿಕಾಲದಲ್ಲುದಿಸಿದ 'ವಾದಿರಾಜ ಗುರು ಚರಿತಾಮೃತ'ವು ಸ್ವವ್ಯಾಖ್ಯಾನ ಸಾರಿದ ಋಜು ಸ್ವರೂಪಯುಕ್ತವಾದ್ದರಿಂದ ವಾದಿರಾಜರ ವ್ಯಕ್ತಿತ್ವದ ಸಮಗ್ರ ದರ್ಶನಕ್ಕೆ ಸಹಾಯಕವೆನಿಸಿದೆ. ಭರತನ ರಸತತ್ವ ಕಾವ್ಯಂದಿದ್ದರೂ ಅಲಂಕಾರ ತತ್ವ ಲಾಕ್ಷಣಿಕರನ್ನು ಮೋಹಿಸಿದಂತೆ, 'ವಾದಿರಾಜ ಗುಣರತ್ನಮಾಲಾ' ಇತ್ತೀಚಿನ ಚರಿತ್ರಕಾರರನ್ನು ಆಕರ್ಷಿಸಿದೆ; ಅದರಿಂದ ಅಡ್ಡ ವೇದವ್ಯಾಸಾಚಾರ್ಯರ 'ಭಾವಿಸಮೀರ ಶ್ರೀ ವಾದಿರಾಜ ಗುರುಸಾರ್ವಭೌಮರು,' ಕೊರಟಿ ಶ್ರೀನಿವಾಸರಾಯರ 'ಶ್ರೀ ವಾದಿರಾಜರು' ಅಧಿಕೃತ ಚಿತ್ರ ಕೊಡಲಿಲ್ಲ. ಅಂತೆಯೆ ಈ ಸಾಂಪ್ರದಾಯಿಕ ಕೃತಿಗಳಲ್ಲಿ ಸೋದೆಯನ್ನು ಮುತ್ತಿದ ಶತ್ರುಗಳಾರೆಂಬುದನ್ನೂ ಕಾಣಲಾರೆವು; ಐತಿಹಾಸಿಕ ಅನ್ವೇಷಣೆಯಿಂದ ಅದು ಕೆಳದಿಯ ಚಿಕ್ಕ ಸಂಕಣ್ಣನಾಯಕನ ದಾಳಿ ಎಂದು ತಿಳಿಯುತ್ತದೆ.[2] ಇದರಂತೆ ಸಂದರ್ಭ ಸಾಮ್ಯದಿಂದ ಸೋದರಿಯ ಪತಿಯನ್ನೂ ಅರಸಪ್ಪನಳಿಯನನ್ನೂ ಉಳಿಸುವಲ್ಲಿ 'ಲಕ್ಷ್ಮೀಶೋಭಾನೆ'

---

1. ದಿವಾಣಜಿ, ಪ್ರಸಾದಯೋಗ, 187.

2. K.N.Chitnis, Keladi Polity, p.14.

ಪ್ರಯುಕ್ತವೆಂಬುದು ಸಾಂಪ್ರದಾಯಿಕ; ಸಂಶೋಧನೆಗೆ ವಿದಿತವಾಗುವುದು 'ನಾರಾಯಣಾ ನಾರಾಯಣಾ' ಎನ್ನುವ ಅಷ್ಟೋತ್ತರ ಕೀರ್ತನೆ ಅರಸಪ್ಪನಳಿಯನನ್ನುಳಿಸಿರಬೇಕೆಂದು. ಹೀಗೆಯೇ ತೌಲನಿಕವಾಗಿ ವಿಮರ್ಶಿಸಿದಲ್ಲಿ ವೇದ್ಯವಾಗುತ್ತವೆ 'ರುಕ್ಮಿಣೀಶ ವಿಜಯ' ನೋದೆಯಲ್ಲಿ ರಚಿತವಾಗಲಿಲ್ಲ, ವಾದಿರಾಜರ ಪುನರ್ದರ್ಶನ ಲಕ್ಷ್ಮೀಪತಿಗಾಗಲಿಲ್ಲ ('ವಾದಿರಾಜ ಗುಣರತ್ನಮಾಲಾ' ಕಲ್ಪಿಸಿದಂತೆ) ಎಂಬಂಶ. ವಾದಿರಾಜರ ವ್ಯಕ್ತಿತ್ವವನ್ನು ಸಮಗ್ರವಾಗಿ ಗ್ರಹಿಸುವ ಪೂರ್ಣದೃಷ್ಟಿಗೆ ಅವರು ಸಾಹಿತ್ಯ ಕ್ಷೇತ್ರದಲ್ಲಿ 'ಕವಿಕುಲ ತಿಲಕ' — ಧಾರ್ಮಿಕ ಕ್ಷೇತ್ರದಲ್ಲಿ 'ಗುರುಸಾರ್ವಭೌಮ' — ಸಾಮಾಜಿಕ ಕ್ಷೇತ್ರದಲ್ಲಿ 'ಸರ್ವಜನ ಕಲ್ಪ' ಎಂಬುದೂ, ಇವೆಲ್ಲವುಗಳ ತಿರುಳು ಅವರ ಋಜು ಯೋಗಿತ್ವದ ದರ್ಶನವೆಂಬುದೂ ಸುಸ್ಪಷ್ಟ. ಆದ್ದರಿಂದ ಇದನ್ನು ಗಮನದಲ್ಲಿಟ್ಟುಕೊಂಡೇ ಸರ್ವಸಂಗ್ರಾಹಕವಾಗಿ ವಾದಿರಾಜರ ವ್ಯಕ್ತಿಮಹತ್ವವನ್ನಿಲ್ಲಿ ಪ್ರತಿಪಾದಿಸಲಾಗಿದೆ. ಪಂಡಿತರು ಲಕ್ಷಿಸದ ಕನ್ನಡ ಕೃತಿಗಳನ್ನೂ ಆಧರಿಸಿ, ಈ ವಿವಾದ್ಯ ವಿಷಯವನ್ನು ಆದಷ್ಟು ನಿರ್ವಿವಾದ್ಯಗೊಳಿಸಲೆತ್ನಿಸಿದ್ದೂ ಒಂದು ಸಾಧನೆ ಎನಿಸದೇ?

(3) ಸಂಸ್ಕೃತ ಕೃತಿ ಸಿಂಹಾವಲೋಕನ

ಋಜು ವಾದಿರಾಜರ ಕನ್ನಡ ಕೃತಿಗಳ ಸಮಾಲೋಚನೆಗೆ ಪರಿಪೂರ್ಣತೆ ಪಡೆಯಲೆಂದೇ ಅವರ ಸಕ್ಕದ ಕೃತಿಗಳನ್ನು ಸ್ಥೂಲವಾಗಿ ಸಮೀಕ್ಷಿಸಿದೆ. ಅವು ಧಾರ್ಮಿಕವಾದರೂ ಕಾವ್ಯಧರ್ಮವನ್ನೆಂತು ಒಳಗೊಂಡಿವೆ ಎಂಬಂಶ ಇದರಿಂದ ಸುವಿದಿತ. 'ಯುಕ್ತಿಮಲ್ಲಿಕಾ'ದ ಹೆಸರಿನಲ್ಲೇ ಇದು ಸೂಚಿತ; 'ನ್ಯಾಯರತ್ನಾವಳಿ' ಇದರ ಅನುರೂಪ. 'ಕಲ್ಪಲತಾ — ಹರಿಭಕ್ತಿಲತಾ, ಸರಸಭಾರತೀವಿಲಾಸ' ಅನ್ವರ್ಥಕ ಶಾಸ್ತ್ರಕಾವ್ಯ. ಇತರವೂ ಈ ಸಮನ್ವಯದೋರುತ್ತವೆ. ಟೀಕೆ — ಟಿಪ್ಪಣಿಗಳಲ್ಲಿ ಸಹಜವಾಗಿ ಶಾಸ್ತ್ರಭಾವವೂ ಕಾವ್ಯಕೃತಿಗಳಲ್ಲಿ ಕಾವ್ಯಭಾವವೂ ಹೆಚ್ಚಿರುವುದು ಕಾಣುತ್ತದೆ. 'ರುಕ್ಮಿಣೀಶ ವಿಜಯ'ವು ಇತರ ಮಹಾಕಾವ್ಯಗಳೊಡನೆ ಅಧ್ಯಯನಾರ್ಹವೆಂದೂ, 'ತೀರ್ಥಪ್ರಬಂಧ'ವು ಸರ್ವ ಯಾತ್ರಿಗಳಿಂದ ಆದರಣೀಯ ವಿಶಿಷ್ಟ ಕೃತಿ ಎಂದೂ ಕಂಡುಬರುತ್ತದೆ. 'ಸ್ವಪ್ನವೃಂದಾವನಾಖ್ಯಾನ' ಅಪೂರ್ವ ಕೃತಿಯಾಗಿ ಧರ್ಮ — ಕಾವ್ಯಧರ್ಮ ಮೇಳವಿಸಿಕೊಂಡಿದೆ. 'ಉಪನ್ಯಾಸ ರತ್ನಮಾಲೆ' ಗದ್ಯ ಶೈಲಿಗೆ ಉದಾಹರಣೆ. 60ಕ್ಕೂ ಅಧಿಕ ಸ್ತೋತ್ರಗಳೂ ಕಾವ್ಯಮಯವಾಗಿ, ಕನ್ನಡದ ವೈಶಿಷ್ಟ್ಯವೆನಿಸುವ ಪ್ರಾಸಪೂರ್ಣ ವಾದಿರಾಜೀಯ ಶೈಲಿಗೆ ನಿದರ್ಶನವೆನಿಸಿವೆ. ಈ ಸಮೀಕ್ಷೆ ಬಹು ಸಂಕ್ಷಿಪ್ತವಾದರೂ, ತೌಲನಿಕವಾಗಿ ಅಲ್ಲಲ್ಲಿ ಕನ್ನಡ

ಕೃತಿಗಳ ಅಧ್ಯಯನಕ್ಕೆ ಉಪಯುಕ್ತವಾದಂಶಗಳನ್ನು ಗುರುತಿಸಿದೆ. ಇದೊಂದು ಸಣ್ಣ ಸಾಧನೆ, ಅಷ್ಟೇ.

(4) <u>ಕನ್ನಡ ಕೃತಿಗಳ ಅನುಗ್ರಹ</u>

ವಾದಿರಾಜರ ಅಪ್ರತಿಮ ಪ್ರತಿಭೆ ಪಂಡಿತರಿಗೆ ನೀಡಿದ ಸಂಸ್ಕೃತ ರಚನೆಗಳಿಂದ ತೃಪ್ತವಾಗದೆ, ಪಾಮರರನ್ನೂ ಅನುಗ್ರಹಿಸಲು ನಾಡನುಡಿ— ತಾಯ್ನುಡಿಗಳಲ್ಲೂ ಅನೇಕ ಕೃತಿ ನಿರ್ಮಿಸಿತು. ಮಧ್ವರಿಂದ ದೇವವಾಣಿಗಾದ ಅನುಗ್ರಹ ವಾದಿರಾಜರಿಂದ ಜನವಾಣಿಗೂ ಒದಗಿತು. ಕನ್ನಡ ನುಡಿ ರುಜುವಾಣಿಯಿಂದನುಗ್ರಹೀತವಾಗಿ ಕೃತಾರ್ಥವೆನಿಸಿತು, ದೇವವಾಣಿಗೆ ಕಡಿಮೆಯಿಲ್ಲೆಂದು ಸಿದ್ಧಪಡಿಸಿತು, ಎಂಥ ಶಾಸ್ತ್ರ — ಸಾಹಿತ್ಯ ಸಮನ್ವಯಕ್ಕೂ ಸಿದ್ಧವೆಂದು ರುಜುವಾತುಗೊಳಿಸಿತು.

ಪವಾಡ— ಪೂಜೆಗಳಿಗೆ ಮಂತ್ರಸದೃಶವೆನಿಸಿದ 'ಲಕ್ಷ್ಮೀಶೋಭಾನೆ' ಶಾಸ್ತ್ರವನ್ನೇ ಸಾಂಗತ್ಯ ಕಾವ್ಯವಾಗಿ ತೋರಿಸಿದೆ. 'ಸ್ವಪ್ನ' ತಂತ್ರದ 'ಪದ ಘಾ ಭಾಮಿನೀ ಷಟ್ಪದಿಯ ರೂಪದಾಳಿದೆ. 'ಹರಿಸರ್ವೋತ್ತಮಸಾರ' ಕೂಡ ಷಟ್ಪದಗಳಲ್ಲಿ ತತ್ತ್ವ ನಿರೂಪಿಸಿದ ಚಾತುರ್ಯ ದೋರಿದೆ. 'ತತ್ತ್ವಸುವ್ವಾಲಿ— ಬರುದಿನ ಸುವ್ವಾಲಿ' ತ್ರಿಪದೀ ಲಯದಿಂದ ಜನಸಾಮಾನ್ಯರಿಗೆ ತತ್ತ್ವ ತಿಳಿಸಿವೆ. 'ಗುಂಡಕ್ರಿಯೆ' ದಶಪದ ಪ್ರಯೋಗಿಸಿದ ಸರ್ವದರ್ಶನ ಸಂಗ್ರಹ. 'ವೈಕುಂಠ ವರ್ಣನೆ' ಸಾಂಗತ್ಯರೂಪದ 'ಸೊಬಗಿನ ಸೋನೆ — ತತ್ತ್ವಸಾರ' ಎನಿಸಿದೆ, ವಸ್ತುವಿನ ದೃಷ್ಟಿಯಿಂದಲೂ ಕನ್ನಡಕ್ಕೆ ಹೊಸ ಬಗೆಯ ಶಾಸ್ತ್ರಕಾವ್ಯವಾಗಿದೆ.

ನಮ್ಮ ವಿದ್ವಾಂಸರು ಈ ಶಾಸ್ತ್ರಕಾವ್ಯ ಗಮನಿಸಿದ್ದರೂ ಕೆಲವು ಕಾವ್ಯಕೃತಿ ಅವರ ಕಣ್ತಪ್ಪಿಸಿಕೊಂಡಿವೆ. ವಾದಿರಾಜರ 'ಗಜೇಂದ್ರಮೋಕ್ಷ' 50 ನುಡಿಗಳಿಂದ ಕೂಡಿ ಪುರಂದರ ದಾಸರ ಹಾಡಿಗಿಂತ ನಿಡಿದೆನಿಸಿದೆ. 'ಕೀಚಕವಧೆ' ಮಾತ್ರ ಅಷ್ಟಪದಗಳ ಸೊಗಸಾದ ನಾಟಕೀಯ ಕಾವ್ಯವೆಂದು ಪರಿಗಣಿತವಾಗಿದೆ. ಶ್ರೀಪಾದರಾಯರ 'ಮಧ್ವನಾಮ'ಕ್ಕಿಂತ ಹಿರಿದಾಗಿ, ಭೋಗ ಷಟ್ಪದಿಯ ಉತ್ಸಾಹ ಲಯವನ್ನು ಅಂಶಗಣದ ದ್ವಿಪದಿಗೆ ತಿರುಗಿಸಿಕೊಂಡ 'ಅವತಾರತ್ರಯ ಸುವ್ವಾಲಿ' ಕೂಡ ಕೇವಲ ಹೆಣ್ಣುಮಕ್ಕಳ ಹಾಡಾಗಿ ಉಳಿದುದಚ್ಚರಿ! ಇದಕ್ಕಿಂತ ಆಶ್ಚರ್ಯಕರ ವಾದುದು ಇದೇ ಛಂದದ 1421 ನುಡಿಗಳಲ್ಲಿ ಭಾಗವತ ದಶಮಸ್ಕಂಧವನ್ನು ಕನ್ನಡಿಸಿದ

‘ಶ್ರೀಕೃಷ್ಣ ಬಾಲಲೀಲೆ’ ವಿಮರ್ಶಕರ ಲಕ್ಷ್ಯಕ್ಕೆ ಬಾರದ್ದು! 1930ರಲ್ಲಿ ಪ್ರಕಟವಾದರೂ, ಹಿಂದಿನವರ ಪುಸ್ತಕಗಳ ಪಟ್ಟಿಯನ್ನೇ ಉದ್ಧರಿಸುವ ಪ್ರವೃತ್ತಿಯವರಿಂದಾಗಿ ಇದು ಬೆಳಕಿಗೆ ಬಾರದುಳಿದಿದೆ. ಆದರಿಂದ ‘ವೈಕುಂಠ ವರ್ಣನೆಯೇ ದೊಡ್ಡದು, ಕನ್ನಡದಲ್ಲಿ ಹೆಸರು ಪಡೆಯುವ ಕಾವ್ಯ ವಾದಿರಾಜರು ಬರೆದಿಲ್ಲ’ ಎಂಬಂಥ ಅಭಿಪ್ರಾಯ ವ್ಯಕ್ತವಾಗಿವೆ. ದೀಪದ ಕೆಳಗೆ ಕತ್ತಲೆಂಬಂತೆ ಅದು ಪ್ರಕಟವಾದ ಉಡುಪಿಯವರೇ ‘ಈ ಪರಿಸರದಲ್ಲಿದು ಉಪಲಬ್ಧವಿಲ್ಲ, ವಾದಿರಾಜರದೆನ್ನಲು ಖಂಡಿತ ಆಧಾರಗಳಿವೆಯೆ?’ ಎಂದು ಪ್ರಶ್ನಿಸಿದ್ದಾರೆ. ವಾದಿರಾಜರ ಹೆಸರು, ಅಂಕಿತ, ಅನ್ಯ ಕೃತಿಯ ಛಂದ– ನುಡಿ– ಪದಪ್ರಯೋಗಗಳಿಂದೊಡಗೂಡಿದ ಈ ಲಲಿತ ಖಂಡಕಾವ್ಯ, ಪ್ರಥಮತಃ ಪ್ರಸ್ತುತ ಸಂಶೋಧನೆಯಲ್ಲಿ ಸಮಾಲೋಚಿತವಾದುದೊಂದು ಸಾಧನೆಯೇ ಸೈ. ಇದೇ ರೀತಿ ಶ್ರೀಪಾದರಾಯರಿಗಿಂತ ಭಿನ್ನ ಬಗೆಯಲ್ಲಿ, ‘ಭ್ರಮರಗೀತೆ’ಯನ್ನು ರಾಗ–ತಾಳಯುಕ್ತ ಹಾಡುಗಳಿಂದ ಕೂಡಿದ ಸಂಗೀತ ರೂಪಕವಾಗಿ ಅನುಗ್ರಹಿಸಿದ ವಾದಿರಾಜರ ಪ್ರತಿಭಾ ವೈಶಿಷ್ಟ್ಯ ನಮ್ಮ ವಿಮರ್ಶಕರ ಲಕ್ಷ್ಯಕ್ಕೆ ಬಂದಿಲ್ಲ; ನಾಟಕಗಳೇ ಇಲ್ಲದ ಕನ್ನಡ ಮಾರ್ಗ ಸಾಹಿತ್ಯಕ್ಕೆ ಸಂಗೀತ ರೂಪಕವನ್ನಿತ್ತ ಸೋಜಿಗದಂಶ ಈ ಸಮಾಲೋಚನೆಗೆ ಗೋಚರಿಸಿದೆ. ಹೀಗೆಯೇ ವಾದಿರಾಜರ 4 ಕೇಶವನಾಮಗಳನ್ನು ಒಟ್ಟಾಗಿ ಪರಿಭಾವಿಸಿದಾಗ, ಅವುಗಳ ದೇಸೀ ಛಂದೋವೈವಿಧ್ಯ– ಕನಕದಾಸರ ಕೇಶವನಾಮದ ಮೇಲಣ ಪ್ರಭಾವಾದ್ಯಂಶ ಪ್ರಸ್ತುತಗೊಂಡಿವೆ. ‘ನಾರದ ಕೊರವಂಜಿ’ (ತೆಲುಗು ಮಿಶ್ರಿತವಾಗಿ) ಸೋದೆಯ ತ್ರಿವಿಕ್ರಮನ ನೆನೆದ ಕೊನೆಗಾಲದ ಕೃತಿ ಎಂದು ವ್ಯಕ್ತವಾಗಿದೆ.

ವಾದಿರಾಜರ ಹಾಡು, ಸುಳಾದಿ ಉಗಾಭೋಗಗಳ ಸಂಖ್ಯೆ 300ಕ್ಕೂ ಮೀರಿದ್ದು, ಅನೇಕವು ಬೆಳಗಾವಿ, ಧಾರವಾಡ, ಉಡುಪಿ, ಬೆಂಗಳೂರು, ಮೈಸೂರುಗಳಿಂದ ಪ್ರಕಟವಾಗಿವೆ. ಆದರೂ ಅನುಬಂಧಿತ ಕೃತಿಗಳಂತೆ ಇನ್ನೂ ಕೆಲವು ಸಿಕ್ಕುತ್ತಿರುವುದರಿಂದ ಈ ನಿಟ್ಟಿನಲ್ಲಿ ಸಾಂಘಿಕ ಪ್ರಯತ್ನ ಅಗತ್ಯವಾಗಿದೆ. ಉಪಲಬ್ಧವಾದವುಗಳಿಂದಾಯ್ದುವನ್ನು ಕೆಲವು ಮುಖಗಳಲ್ಲಿ ಸಮಾಲೋಚಿಸಿದಾಗ, ಋಜುವಾದಿರಾಜರೂ ಮಾಡಿಕೊಂಡ ಆತ್ಮನಿವೇದನ, ವಿವಿಧ ಹರಿರೂಪದ ಸ್ತುತಿ ಮಾಲೆ, ಕೃಷ್ಣದರ್ಶನ, ದಶಾವತಾರದ ವಿಶೇಷ ಚಿತ್ರಣ, ವಾಯು ಅವತಾರತ್ರಯ ನಿರೂಪಣ, ಇತರರ ಸ್ತುತಿ, ವರ್ಣನಾವೈಖರಿ, ಕಥನ ಹಾಗೂ ಸಂವಾದ ಕೌಶಲ, ತತ್ತ್ವಪ್ರತಿಪಾದನ, ನೀತಿ ನಿರೂಪಣ, ಹಾಸ್ಯಪೂರ್ಣ ಶೈಲಿಯ ಸೊಗಸು ಎಲ್ಲ ಒಡೆದು ತೋರಿವೆ. ಇವುಗಳಲ್ಲಿ

ದಶಾವತಾರ ಚಿತ್ರಣ, ಪ್ರಾಸಮಯ ಶೈಲಿಗಳಂತೂ ವಾದಿರಾಜೀಯವೆಂಬಷ್ಟು ವಿಶಿಷ್ಟವೆನಿಸಿವೆ. ಅವರ ಎಲ್ಲ ಕೃತಿಗಳಲ್ಲಿ ಧರ್ಮ— ಕಾವ್ಯಧರ್ಮ ಸಮನಿಸಿವೆ. ಆದ್ದರಿಂದ ಅವನ್ನು ಕೇವಲ ಮತೀಯ ಶಾಸ್ತ್ರ ಎನ್ನಲಾಗದು. ಅಂಥ ವಿಮರ್ಶೆ ಅವರ ಕೃತಿಗಳ ಮೌಲ್ಯ ಕುಗ್ಗಿಸದು, ನಮ್ಮ ಆತ್ಮ ವಂಚನೆ ಎನಿಸುವುದು, ಅಷ್ಟೆ. ಈ ಹಾಡುಗಳ ಸಂಖ್ಯೆ ಪುರಂದರದಾಸರಷ್ಟಿರದಿದ್ದರೂ, ಘನ ವಾಣಿಯ ಸತ್ವಪೂರ್ಣವು.

ವಾದಿರಾಜರ ಸಕ್ಕದ ರಚನೆಗಳಲ್ಲಿ ಸ್ವಾಪ್ನಕೃತಿ ತನ್ನ ಸ್ವರೂಪದಿಂದಲೇ ಪ್ರತ್ಯೇಕವೆನಿಸಿದಂತೆ 'ಕನ್ನಡ ತಾತ್ಪರ್ಯ ನಿರ್ಣಯ' ಕೂಡ ಬೇರೆ ನಿಂತಿದೆ. ಇವೆರಡನ್ನೂ ಹೇಳಿ ಬರೆಯಿಸಿದ ಕಾರಣ ಅನೇಕರಿಗೆ ಕರ್ತೃತ್ವದಲ್ಲಿ ಶಂಕೆಯೊದಗಿದೆ. ಆದರೆ ಸ್ವಪ್ನದಲ್ಲಿ ಹೇಳಿ ಬರೆಯಿಸಿದ ಶಿಷ್ಯಯೋಗಿಗಳ ಸಾಮರ್ಥ್ಯಕ್ಕೆ ಪ್ರಮಾಣಗಳಿರುವಾಗ, ಪ್ರತ್ಯಕ್ಷ ಹೇಳಿ ಬರೆಸಿದ್ದಿದ್ದರಿಯಲ್ಲ. ಯುಕ್ತಿಮಲ್ಲಿಕಾ ವ್ಯಾಖ್ಯಾನ ತಾವೇ ಪೂರೈಸಿ, ಆರಂಭಿಸಿದ ಸೋದರನ ಹೆಸರು ಹಾಕಿದ್ದರು. ಕನ್ನಡ ನಿರ್ಣಯ ಅನುಗ್ರಹಿಸಲು ಈ ಅಭಿನವ ಮಧ್ವರು ಸಮುಚಿತರು. ಆದ್ಯಂತ ಅವರ ಹೆಸರಿದ್ದರೂ, ಗದ್ಯ ಶೈಲಿ ಉತ್ತರ ಕರ್ನಾಟಕದ ಆಡುನುಡಿಯ ಸೊಗಡೇ ಪಡೆದಿರುವುದರಿಂದ ಇತ್ತಣವರಿಂದ ಹೇಳಿ ಬರೆಸಿದ್ದಕ್ಕೆ ಕುರುಹು, ಅವರದಲ್ಲ ಎಂಬುದಕ್ಕಲ್ಲ. ಇಂಥ ಬೃಹತ್ತು— ಮಹತ್ತಿನ ಕೃತಿ ಬೇರಾವ ವಾದಿರಾಜ ಯತಿಗಳದೆಂದು ಸಿದ್ಧಿಸುವನಕ ಪ್ರಸಿದ್ಧ ವಾದಿರಾಜರ ಕರ್ತೃತ್ವಕ್ಕೆ ಬಾಧೆಯಿಲ್ಲ. ಕೃತಿಯೊಳಗಿನ ಇತರ ವಾದಿರಾಜ ರಚನೆಗಳ ಭಾವ— ಭಾಷಾ ಸಾಮ್ಯ, ದಕ್ಷಿಣ ಕನ್ನಡದ ಪ್ರಯೋಗಾವಶೇಷಗಳು ಕೃತಿ ವಾದಿರಾಜೀಯವೆಂಬತ್ತ ತೂಗಿವೆ. ಕಾರಣ, ಕನ್ನಡದ ವಿರಳಗದ್ಯ ಕ್ಷೇತ್ರಕ್ಕೆ ಇಂಥ ಮಹತ್ವದ ಕಾಣಿಕೆ ಸಲ್ಲಿಸಿದ ಕೀರ್ತಿ ವಾದಿರಾಜರದೆಂದೇ ತೋರುವುದು, ಈ ಸಮಾಲೋಚನೆಯ ಇನ್ನೊಂದು ಸಾಧನೆ.

(5) ತೌಲನಿಕ ಅಧ್ಯಯನ

ವಾದಿರಾಜರು ಸಂಸ್ಕೃತದಲ್ಲೂ ಕೃತಿ ರಚಿಸಿದ್ದರಿಂದ ಕನ್ನಡ ಕೃತಿಗಳೊಡನೆ ಸಾಮ್ಯ ಪ್ರಭಾವ ತೋರುವುದು ಸಹಜ. ಅಂತೆಯೇ ಅವರ ಸಮಗ್ರ ಕೃತಿಗಳಲ್ಲಿ ಕಾಣುವ ಸಮಾನಾಂಶ, ಕನ್ನಡ ಕೃತಿಗಳ ಭಾವಪ್ರಭಾವಗಳನ್ನು ಸಹ ಸಮಾಲೋಚಿಸಿ, ಇವು ಏಕಕರ್ತೃತ್ವಕ್ಕೆ ಆಂತರಿಕ ಪ್ರಮಾಣವಾಗುವುದನ್ನು ಸಮರ್ಥಿಸಲಾಗಿದೆ.

ಇದರಂತೆ ಕಾಲಪ್ರವಾಹದಲ್ಲಿ ಸಾತತ್ಯವಿರುವುದರಿಂದ, ವಾದಿರಾಜರ ಕೃತಿಗಳ ಮೇಲಾದ ಹಿಂದಿನವರ ಪ್ರಭಾವ, ಇಂತಹ ಪ್ರತಿಭಾವಂತರಿಂದ ಮುಂದಿನವರ ಕೃತಿಗಳ ಮೇಲಾದ ಪ್ರಭಾವಗಳ ಪರಿಶೀಲನೆಗೆ ಬಹಿರ್ಮುಖವಾದ ಹಿನ್ನೋಟ– ಮುನ್ನೋಟ ಬೇರಿದೆ. ಇದರಿಂದ ಇವರ ಶಾಸ್ತ್ರ ಕೃತಿಗಳ ಮೇಲಾದ ಹಿಂದಣವರ ತಾತ್ವಿಕ ಪ್ರಭಾವ, ಕಾವ್ಯ–ಕೀರ್ತನೆಗಳ ಮೇಲಾದ ಕಥನಾತ್ಮಕ ನೈತಿಕ ಪ್ರಭಾವ, ಇವರಿಂದ ಕನಕದಾಸರಂಥ ಸಮಕಾಲೀನ ಹಾಗೂ ವಿಜಯದಾಸರಂಥ ಉತ್ತರ ಕಾಲೀನರ ಮೇಲಾದ ಪ್ರಭಾವ ಗುರುತಿಸಲು ಬೇಕಾಗಿದೆ.

ಈ ಅಂತರಂಗ– ಬಹಿರಂಗ ದೃಷ್ಟಿಯ ತೌಲನಿಕ ಅಧ್ಯಯನ, ವಾದಿರಾಜರ ಸಕ್ಕದ ಕನ್ನಡ ಕೃತಿಗಳ ಸಮಾಲೋಚನೆಗೆ ನೆರವೆಯಾಗಿ, ಪೂರಕವೆನಿಸಬಲ್ಲ ಸಂಗತಿಗಳನ್ನು ಬೆಳಕಿಗೆ ತಂದ ಸಾಧನ.

(6) <u>ಹೊಸ ಹೆಜ್ಜೆ</u>

ಪ್ರಸ್ತುತ ಅಧ್ಯಯನದಿಂದಾಗಿ ಕೆಲವು ಸಂಗತಿ ಹೊಸದಾಗಿ ಬೆಳಕಿಗೆ ಬಂದಿದ್ದು, ಇನ್ನು ಕೆಲವು ಅನ್ಯೋಕ್ತವಾದುದನ್ನು ಹೊಸದಾಗಿ ಹೊಂದಿಸಲು ಸಾಧ್ಯವಾಗಿದೆ. ವಾದಿರಾಜರ ಅನುಬಂಧಿತ ಕೃತಿ ಕೆಲವು ಇನ್ನೂ ಇರಬಹುದಾದ ಅವರ ಕೃತಿಗಳಿಗೆ ತೋರ್ಬೆರಳು. ಮುದ್ರಿತ ಕೃತಿಗಳಲ್ಲೇ ನಮಗರಿಯದಂತಿದ್ದ 'ಶ್ರೀಕೃಷ್ಣ ಬಾಲಲೀಲೆ', 'ಗಜೇಂದ್ರಮೋಕ್ಷ'ದಂತಹವು ಬೆಳಕಿಗೆ ಬಂದುವು; 'ಭ್ರಮರ ಗೀತೆ' ಸಂಗೀತರೂಪಕವೆಂದು ಸ್ಪಷ್ಟವಾಯಿತು. ಇವುಗಳ ಪರಿಚಯಾತ್ಮಕ ವಿಮರ್ಶೆ ಈ ಸಮಾಲೋಚನೆಯ ಸ್ವತಂತ್ರ ಭಾಗವೆನಿಸಿ, ಕನ್ನಡ ಸಾಹಿತ್ಯದ ತಿಳಿವಳಿಕೆಯಲ್ಲಿ ಹೊಸ ಹೆಜ್ಜೆ ಮೂಡಿಸಿದೆ.

ಈ ಅಧ್ಯಯನದಲ್ಲಿ ಅನುಷಂಗಿಕವಾಗಿ ಬೆಳಕಿಗೆ ಬಂದ ಇನ್ನೊಂದು ಮುಖ್ಯ ಸಂಗತಿ, ಪುರಂದರೋತ್ತರ ದಾಸ ಸಾಹಿತ್ಯದಲ್ಲಿ ನೂರಾರು ವರ್ಷಗಳ ಬಿರುಕು ಇಲ್ಲವೆಂಬುದು. 16ನೆಯ ಶತಮಾನದುದ್ದಕ್ಕೂ ಸಾಹಿತ್ಯ ಸೃಜಿಸುತ್ತಿದ್ದ ವಾದಿರಾಜರು ಕನಕ– ಪುರಂದರ ಪುತ್ರರೊಡನೆ 17ನೆಯ ಶತಕದ ಮಹಿಪತಿ ಹಾಗೂ ಅವರ ಸುತರಿಗೆ ದಾಸ ಸಾಹಿತ್ಯ ಪರಂಪರೆ ಸಾಗಿ ಹೋಗಿದೆ. ವಾದಿರಾಜರ ಕೃತಿಗಳ ಅಧ್ಯಯನ ಮಾಡದ ನಮಗೆ ಕಣ್ಣೆದುರಿದ್ದರೂ

ಅದರ ಅರಿವಿರಲಿಲ್ಲ. ಇದರಿಂದ ಅನ್ಯರದಾದ ಸಂಗತಿಗಳನ್ನು ಹೊಸದಾಗಿ ಹೊಂದಿಸಲು ಸಾಧ್ಯವಾಗಿದೆ. ಈ ಸಾಧನ ಸಂಗ್ರಹ ಭಾಗದಲ್ಲಿ 'ಪರಂಪರೆಯ ಕೊಂಡಿ' ಎನ್ನುವುದು ಈ ಅಂಶವನ್ನು ಸ್ವತಂತ್ರವಾಗಿ ಸಮಾಲೋಚಿಸಿದೆ. ಇದರಂತೆ ಆನುಷಂಗಿಕವಾಗಿ ಹೊಸವೆಂದು ಕಂಡುಬಂದ ಹಲವು ಅಂಶಗಳನ್ನು ಈ ಸಮಾಲೋಚನೆಯ ಒಡಲು ಹಾಗೂ ಅಡಿ ಟಿಪ್ಪಣಿಗಳಲ್ಲಿ ಸೇರಿಸಲಾಗಿದೆ. ಉದಾ — 'ಆನೆ ಬರುತ್ತಿದೆ' ಎಂಬ ಕೃತಿ ವ್ಯಾಸರಾಯರನ್ನೇ ವರ್ಣಿಸಿದ್ದು, ವ್ಯಾಸರಾಯರು 'ಹತ್ತಿದೆ ಮುತ್ತಿನ ಗದ್ದಿಗೆ' ಎಂದು ಕೃತಿ ವಾದಿರಾಜರನ್ನು ಬಣ್ಣಿಸಿದ್ದು, ವಾದಿರಾಜರಿಗೆ ವೈಕುಂಠದಾಸರೇ ಕೃಷ್ಣನ ತೋರಿಸಿ ಹಾಡಿದ್ದು, ಕನಕದಾಸರ ಕೇಶವನಾಮ— ದೊಳ್ಳಿನ ಪದ ವಾದಿರಾಜರ ಕೃತಿಗಳಿಂದ ಪ್ರಭಾವಿತವಾದದ್ದು ಇತ್ಯಾದಿ. ಇವು ಸಂಶೋಧನೆಯ ಉಪಫಲಗಳಾದರೂ ಜ್ಞಾನಾಭಿವೃದ್ಧಿಗೆ ಅಮೂಲ್ಯವೆನಿಸಿವೆ.

ಒಟ್ಟಿನಲ್ಲಿ, ಕನ್ನಡ ಸಾಹಿತ್ಯದಲ್ಲಿ ಅಗತ್ಯವಾಗಿದ್ದ ವಿಷಯ ಒಂದನ್ನು ಸಂಶೋಧಿಸಿ, ವಾದಿರಾಜರ ದಿವ್ಯ ಪ್ರತಿಭೆ ಅನುಗ್ರಹಿಸಿದ ಕೃತಿಗಳನ್ನು ಸಮಾಲೋಚಿಸಿ, ಅವರು ದಾಸಸಾಹಿತ್ಯ ಪರಂಪರೆಗೆ ಕೊಂಡಿಯಾಗಿದ್ದುದನ್ನು ಸಾಧಿಸಿ, ಪ್ರಸ್ತುತ ಪ್ರಬಂಧ ಜ್ಞಾನ ಪ್ರಪಂಚದಲ್ಲಿನ್ನೊಂದಡಿಯ ಮುನ್ನಡೆ ಸಾಧಿಸಿದ್ದನ್ನು ನಮ್ರವಾಗಿ ನಿವೇದಿಸಿಕೊಳ್ಳುತ್ತದೆ.

## 8. ಅನುಬಂಧಗಳು

### (1) ಸೋದೆಯ ಮಠದ ಪೀಳಿಗೆ

1) ವಿಷ್ಣುತೀರ್ಥ
2) ವೇದವ್ಯಾಸತೀರ್ಥ
3) ವೇದವೇದ್ಯತೀರ್ಥ
4) ವೇದಗರ್ಭತೀರ್ಥ
5) ವರೇಶತೀರ್ಥ
6) ವಾಮನತೀರ್ಥ
7) ವಾಸುದೇವತೀರ್ಥ
8) ವೇದವ್ಯಾಸತೀರ್ಥ
9) ವರಾಹತೀರ್ಥ
10) ವೇದಾತ್ಮತೀರ್ಥ
11) ವಿಶ್ವವಂದ್ಯತೀರ್ಥ
12) ರತ್ನಗರ್ಭತೀರ್ಥ
13) ವೇದಾಂಗತೀರ್ಥ
14) ವಿದ್ಯಾಪತಿತೀರ್ಥ
15) ವಿಶ್ವವಂದ್ಯತೀರ್ಥ
16) ವಿಶ್ವತೀರ್ಥ
17) ವಿಮಲತೀರ್ಥ
18) ವರದರಾಜತೀರ್ಥ
19) ವಾಗೀಶತೀರ್ಥ
20) ವಾದಿರಾಜತೀರ್ಥ
21) ವೇದವೇದ್ಯತೀರ್ಥ
22) ವಿದ್ಯಾನಿಧಿತೀರ್ಥ
23) ವೇದನಿಧಿತೀರ್ಥ
24) ವರದರಾಜತೀರ್ಥ
25) ವಿಶ್ವಾಧಿರಾಜೇಂದ್ರತೀರ್ಥ
26) ವಾದಿವಂದ್ಯತೀರ್ಥ
27) ವಿಶ್ವವೇದತೀರ್ಥ
28) ವಿಬುಧವರ್ಯತೀರ್ಥ
29) ವಿಶ್ವನಿಧಿತೀರ್ಥ
30) ವಿಶ್ವಾಧೀಶತೀರ್ಥ
31) ವಿಶ್ವೇಶತೀರ್ಥ
32) ವಿಶ್ವಪ್ರಿಯತೀರ್ಥ
33) ವಿಶ್ವಾಧೀಶತೀರ್ಥ
34) ವಿಶ್ವೇಂದ್ರತೀರ್ಥ
35) ವಿಶ್ವೋತ್ತಮತೀರ್ಥ

1ನೆಯ ವಿಷ್ಣುತೀರ್ಥರೇ ಮಧ್ವರ ಸಹೋದರರು, 20ನೆಯ ವಾದಿರಾಜತೀರ್ಥರೇ ಈ ಪ್ರಬಂಧದ ವಿಷಯತುಕರು. ಇವರೆಲ್ಲರ ಹೆಸರು ಸಾಮಾನ್ಯತಃ ವಕಾರದಿಂದಾರಂಭ. 12ನೆಯ ರತ್ನಗರ್ಭರೂ, 22ನೆಯ ವಿದ್ಯಾನಿಧಿಗಳೂ ಬಹುಬೇಗ ದೇಹವಿಟ್ಟರು. 3– 21, 18 – 24, 30– 33ನೆಯ ಹೆಸರು ಒಂದೇ, ವ್ಯಕ್ತಿ ಬೇರೆ. ಭಾರತ ತಾತ್ಪರ್ಯ ನಿರ್ಣಯಾದಿ ವ್ಯಾಖ್ಯಾನ ರಚಿಸಿದ 13ನೆಯ ವೇದಾಂಗತೀರ್ಥರ ವೃಂದಾವನ ಬಳಗಿಂತು ಸೋಮನದೀ ತೀರದಲ್ಲಿದುಂ,

ಲಕ್ಷ್ಮೀನಾರಾಯಣ ದೇವಾಲಯದಡಿ ವಾದಿರಾಜರ ಕೃತಿ ನಿಕ್ಷಿಪ್ತವೆಂದು ಐತಿಹ್ಯ. 23ನೆಯ ವೇದನಿಧಿಗಳೇ ಸ್ವಪ್ನಾಖ್ಯಾನ ಕೇಳಿಕೊಂಡು ರಾಮಚಂದ್ರಾಚಾರ್ಯರಿಂದ ಬರೆಯಿಸಿದವರು. 32ನೆಯ ವಿಶ್ವಪ್ರಿಯತೀರ್ಥರೇ 'ಸ್ವಪ್ನವೃಂದಾವನಾಖ್ಯಾನ ವಿಷಯಕ ವೃಂದಾವನಾಚಾರ್ಯರು.

## (2) ವಾದಿರಾಜರ ಕೆಲವು ಅಪ್ರಕಟಿತ ರಚನೆ

1) ಆರತಿ ಬೆಳಗೋಣು ಬಾರೆ ಶ್ರೀಹರಿಗೆ
ಆರತಿ ಬೆಳಗೋಣು ವಾರಿಜನಾಭಗೆ (ಪ)

ನಾರಿಯರೆಲ್ಲರು ತೀವ್ರದಿಂದಲೆ ಮುತ್ತಿ
ನಾರತಿ ಬೆಳಗೋಣು ಬಾರೆ (ಅ.ಪ.)

ಮತ್ಸ್ಯ ಕೂರ್ಮನಿಗೆ ಸ್ವಚ್ಛ ವರಹನಿಗೆ
ವತ್ಸ ಪ್ರಹ್ಲಾದನ ಸಲಹಿದ ನರಹರಿಗೆ (1)

ಪುಟ್ಟ ವಾಮನನಿಗೆ ದಿಟ್ಟ ಭಾರ್ಗವನಿಗೆ
ಶಿಲೆಯನುದ್ಧರಿಸಿದ ಶ್ರೀರಾಮಚಂದ್ರಗೆ (2)

ಉದ್ಧವ ಒಲಿದಂಥ ಮುದ್ದು ಕೃಷ್ಣನಿಗೆ
ಬೌದ್ಧಾವತಾರ ಕಲ್ಕಿ ಮುದ್ದು ಹಯವದನಗೆ (3)

— (ಅಕ್ಕನ ಸಂಗ್ರಹ)

2) ಗಳಿಲನಿನ್ನು ಪಂಚಕ್ಲೇಶ ಮಲವನೆ ತೊಳೆದು
ತಿಳಿವಿಕಿ ಜಲದಲ್ಲಿ ವ್ಯಕ್ತಿಕಾ ಶಾಟವ ಮಾಡಿ
ಬಿಳಿ ಹಲ್ಲನೆ ಸುಳಿದು ಮುಖವನೆ ತೊಳೆದು
ಶ್ರೀಹರಿ ಆನಂದ ಶುಭ ಪ್ರೇಮದಿ ಕುಂಕುಮವನಿಟ್ಟು
(ಆಹ)[1] ರಿಗೆ ಒಂಬತ್ತು ಬಾಗಿಲ ತೆಗೆದು
ಕಾಮ ಮೋಹದ ಕಸವನೆ ಬಳಿದು
ಆನಂದ ಜಲದಿಂದ ಸಾರಿಸಿ ಕಾರಣ ತೆಗೆದು
ಪ್ರೇಮದಿಂದ ಪಂಚರಂಗವಲಿಯನಿಟ್ಟು
ಮಾನಸ ಕುಸುಮವ ಕೊಯ್ದು ತಂದಿರಿಸು
(ಕರ)[2]ಣ ವಾರಿಧಿ ಎಂಬ ಉಪಕರಣ ತೊಳೆದು

---

1. ವಾವ?
2. ಅರು.

ಹರಿಯು ಮನಸು ಪಂಚಗಂಗೆಯು ಪೊಕ್ಕು
ಪರಮಾನಂದದಿ ಹರವಿಯು ತುಂಬಿ
(ಹರಿಯು) ಧ್ಯಾನದಲ್ಲಿ ಗಂಗೆಯು ಪೊಕ್ಕು
ನಿಧಾನದಿ ಸ್ನಾನವ ಮಾಡಿ
ಜ್ಞಾನ ವಸ್ತ್ರವನೆ ಉಡು ಕಂಚುಕವನೆ ತೊಡು
ನಿಧಾನದಿ ಕಸ್ತೂರಿಯನಿಡು ನೀ ನಲಿದಾಡು
ಮೂರು ಗುಣಗಳೆಂಬೊ ಒಲೆಯು ಶೀಘ್ರದಿ ಹೂಡು
ತಾರಕ ಅಗ್ನಿ ಹುತವನೆ ಮಾಡು
ಆರು ಜನರ ಅಡಿಗೆ ಒಬ್ಬಳೆ ಮಾಡು
ಅಷ್ಟಮದದ ಹಿಟ್ಟು ಕುಟ್ಟಿ ಕಡುಬನೆ ಮಾಡು
ದುಷ್ಟ ಜನರ ಸುಟ್ಟು ಭಜ್ಜಿಯು ಮಾಡು
ಥಟ್ಟನೆ ತಂದಿರಿಸು ಅನೆಯು ಅಮುಟೆಕಾಯಿ
ಸುಮಾನನೆ ಬಾಳೆಕಾಯಿ ಕ್ಲೇಶ ಮೋಹವಾದದ ಮೆತ್ಯೆಕಾಯಿ
ದೋಷವ ಕಳೆದು ತೊಳೆದು ತಂದಿರಿಸು
ವಾದ ಭೇದಗಳೆಂಬೊ ಗೋದಿ ನಚ್ಚಿಗೆ ತಂದು
ನಾದಿ ಉರುಳಿಯು ಮಾಡಿ ನಾಕು ವ್ಯಾಖ್ಯದಲ್ಲಿ
ಷಡ ದ್ರವ್ಯಗಳೆಂಬೊ ಎರಡು ಉರುಳಿಯು ತೆಗೆದು
ಸದಮುದವೆಂಬೊ ಸಕ್ಕರೆಯು ಬೆರೆಸಿ
ಅದು ಇದು ಎನ್ನದೆ ಅಳೆದು ಪಲ್ಲ(ಟ)ಸಿ
ಭಕ್ತಿ ಉಳ್ಳ ಯಮಾಲಕ್ತಿ ವಿರಕ್ತಿ ಎಂಬೊ ಸಕ್ಕರೆ ಬೆರೆಸಿ
ಕಕುಲಾತಿ(ರ) ದುರ್ಜನರ ಖಂಡಿಸಿ
ಉಕ್ಕ್ಯವ ವಿಷಯದಿ ಶಿಕ್ಷ ಹದವಿಳಿಸಿ
ಮನವ ಮುಂಡಿಗೆ ಮಾಡು ಘನ ಪರಾ(ತ)[3]ದಲ್ಲಿಡು
ತನುವಿದ್ದಂದದಿ ಶಾವಿಗೆಯು ತೆಗೆದು
ಪರಮಾನ್ನವ ಮಾಡು ಶ್ರೀ ಹರಿ ಪರಮಾತ್ಮಗೆ
ಶಾಕಪಾಕದ ವಿವೇಕದ ಅಡಿಗೆಯು ಮಾಡು
ಮಮಕಾರವ ತೆಗೆದು ಜ್ಯೋತಿರ್ಮಯಗೆ ಏಕಾರತಿಯು ಬೆಳಗು
ಘನ ಪುಷ್ಪಾಂಜಲಿ ಎನೆಯು ತನುವ ಕಾಣಿಕೆ ಇತ್ತು
ಮನ ಬಂದೊದಗಿದ ನಿತ್ಯಾತ್ಮನ ಕೂಡು
ನಿತ್ಯಾನಿತ್ಯ ನಿರ್ಮಲದ ನಿಜಮಂಚವನು ಹಾಕು
ಸತ್ಯ ಸರ್ವೋತ್ತಮನೆಂಬ ತಲೆದಿಂಬು ತಂದಿಡು

---

3. ಕ?

ರಘೂತ್ತಮ ಪೋವಾಳಿಸಿದ ರಾಜವದನ ಕಂಗಳ ದರ್ಪಣ ಮಾಡು
ಪನ್ನಂಗವೇಣಂತೆ (ವೀಣೆಯು) ನುಡಿಸು
ಹಿಂಗದೆ ಸುಖ ಚಾಮರಂಗಳ ಬೀಸು
ಗಂಗಾ ಜಲವ ತುಂಬಿ ತಂದಿರಿಸು
ಆನಂದ ಜಲದಿಂದ ಕ್ಷೀರಪಾನವ ಮಾಡು
ನಾನು ನೀನೆಂಬೊ ವೇದವ ಪಾಡು
ಅದ್ವೈತ ಮತವೆಂಬೋ (ದುಬುದ್ಧಿ)[4] ಉಳ್ಳ ಕ್ರಮವಾ
ಮಧ್ವಶಾಸ್ತ್ರದ ಸುಖದಿ ನೀ ಬಾಳು
ಮುದ್ದು ಹಯವದನನ ದಾಸನೆಂದೆನಿಸೊ[5]

— (ರಾಧಾಬಾಯಿ ಪುರಾಣಿಕರಲ್ಲಿ)

3) ಜಯಮಂಗಳಂ ನಿತ್ಯ ಶುಭಮಂಗಳಂ (ಪ)

ಅಶ್ವಿನ ಮಾಸದಲಿ ಶ್ರೀನಿವಾಸ ಮದುವೆಯಾದನು ಆ
ಕಾಶರಾಜನ ಮಗಳ ತಂದು
ದೇಶ ದೇಶದರಿದ್ರ ಹೂದ ರಾಶಿಗಳೆಲ್ಲ
ಭೂಪಾಲರೆಲ್ಲರು ತಂದು
ಪಾಲಗಾಣಿಕೆಯನಿತ್ತರು (ಅ.ಪ.)

ಕಂಕಣ ಕಟ್ಟಿದನು ವೆಂಕಟರಮಣ ತಾನು
ಪಂಕಜಮುಖಿ ಪದ್ಮಾವತಿಯು ಅರಸು
ಶಂಕೆಯಿಲ್ಲದೆ ತನ್ನ ಭಜಿಸುವ ದಾಸರಿಗೆ
ಶಂಖ ಚಕ್ರ ಧರಿಸಿದ ಶ್ರೀ ವೆಂಕಟೇಶಗೆ (1)

ಭೋಗ ಮಂಟಪದೊಳಗೆ ಸ್ವಾಮಿ ತಾ ಕುಳಿತಿರಲು
ಶ್ರೀದೇವಿಯರಸು ಶ್ರೀನಿವಾಸಗೆ
ಭೋಗ ಮಂಟಪದೊಳಗೆ ಲಾಜ ಹೋಮವ ಮಾಡಿ
ಸ್ವಾಮಿಗಾರತಿ ಮಾಡುವರು (2)

ವೇದಘೋಷಣೆಯಿಂದ ಬ್ರಾಹ್ಮಣರು ಸ್ತುತಿ ಮಾಡಿ
ಎನ್ನ ನಾಲಗೆ ಶ್ರೀಹರಿಯ ಕೊಂಡಾಡಲಿ
ವಾದಿರಾಜರಿಗೆ ಶ್ರೀವೆಂಕಟ ಒಲಿದ
ವೇದಪರ್ವತದ ಶ್ರೀಹಯವದನಗೆ (3)

— (ಅಕ್ಕನ ಸಂಗ್ರಹ)

---

4. ದುರ್ಬುದ್ಧಿ

5. 'ಮುದ್ದು' ಪ್ರಾಸಾರ್ಥ ಬಂದಂತಿದೆ ಈ 'ಮಾನಸಪೂಜಾ' ಪದದಲ್ಲಿ.

4) ನಂದಗೋಕುಲದ ಗೋಪಿ ಕಂದನೆಂದು ಮೋಹಿಸಲು
ಮುಕುಂದನ ಪಾಡಿದಳು ಹರುಷದಿಂದಲಿ (1)

ವೃಂದಾವನ ಸಾರಿಸಿ ಗೋವಿಂದನ ಕೆಳಗೆ ಇಳಿಸಿ
ಭಂಗಾರದ ಗಿಂಡಿಲಿ ತಂದಳು ಗಂಗೆಯುದಕವ (2)

ಪೀತಾಂಬರದ ಸೆರಗು ಹಿಡಿದಿದ್ದ ಲಕ್ಷ್ಮೀಪತಿ
ಗಂಗಾಯಮುನಾ ಸ್ನಾನ ಮಾಡಿ ಬನ್ನಿ ವಿಪ್ರರು (3)

ಸಂಭ್ರಮದಿಂದಲೆ ಗಂಗಾಯಮುನಾ ಸ್ನಾನ ಮಾಡಿ
ಬಂದು ನಿಂತ ಬ್ರಾಹ್ಮಣ ನಂದನ ಮನೆಯಲಿ (4)

ಬಂದ ಬ್ರಾಹ್ಮಣನ ಕಂಡು ವಂದಿಸಿ ಚರಣಕೆರಗಿ
ಛಂದದಿಂದ ಅರ್ಘ್ಯಪಾದ್ಯ ಪೂಜೆ ಮಾಡಲು (5)

(ಸ್ವರ್ಣ)[6] ಪಾತ್ರೆಯೊಳಗೆ ನಾನಾ ಪದಾರ್ಥವ ತುಂಬಿ
ಬ್ರಾಹ್ಮಣನ ಎಡೆಗೆ ತಂದು ಇಟ್ಟಳು ಯಶೋದೆ (6)

ಶೀಘ್ರದಿಂದ ಬ್ರಾಹ್ಮಣ ಸ್ನಾನವನ್ನು ಮಾಡಿಕೊಂಡು
ನರನ ಸ್ಮರಣೆ ಮಾಡುತ ಕುಳಿತ ಅರಸ ಇದ್ದಲ್ಲಿ (7)

ಪುರುಷೋತ್ತಮನು ತೊಟ್ಟಿಲೊಳಗೆ ಅಳುತಿದ್ದ ಗೋಪಿನಾಥ
ನರಸ ಸ್ಮರಣೆ ಕೇಳಿ ಲಕ್ಷ್ಮೀ ಅರಸನೆದ್ದನು (8)

ಹಿಂದೆ ತಿರುಗಿ ನೋಡಲು ಗೋವಿಂದ ಬೆನ್ನುಹಿಡಿದಿದ್ದ
ಮಂದಮತಿ ಆದನು ನುಮಯಂತಕಾಗಲೆ (9)

ಗೊಲ್ಲರ ಮಗ ಮುಟ್ಟಿದನೆಂದು ಅನುಮಾನಗೊಳದಿರಿ
ಲಕ್ಷ್ಮೀವಲ್ಲಭನೆಂದು ಮಹಿಮೆಯು ತಿಳಿಯಲಿಲ್ಲವೊ (10)

ಫುಲ್ಲವದನೆ ಗೋಪಿದೇವಿ ತನ್ನ ಮಗ ಮುಟ್ಟಿದನೆಂದು
ತಲ್ಲಣಿಸಿ ಎದೆಯೊಳಗೆ ತಪಸಿರದ್ದಳು (11)

ಬ್ರಾಹ್ಮಣರ ಶೋಭತವು ಬಾಹೋದು ದೋಷ ನಮಗೆ
ದಾವ ಕಡೆಗೆ ಬಿಟ್ಟುಬರಲೆ ಕೃಷ್ಣನೆಂದಳು (12)

ವಿಪ್ರರ ಶೋಭತವು ಹತ್ತೋದು ದೋಷ ನಮಗೆ
ಎತ್ತ ಕಡೆಗೆ ಬಿಟ್ಟು ಬರಲೆ ಕೃಷ್ಣನೆಂದಳು (13)

ಕೋಲು ಕೊಂಡು ಗೋಪಿದೇವಿ ಬಾಲಕನಹಿಡಿಯು ಬರಲು
ಬಾಗಿಲ ಸಂದಿಲಿ ಅಡಗಿದ ಕೃಷ್ಣನು (14)

---

6. ಮಾನ?

ಅಡಗಿದ್ದ ಕೃಷ್ಣನ ಸೆಳೆದುಕೊಂಡು ಗೋಪಿದೇವಿ
ಮಗನ ಕಟ್ಟಿದಳು ವಜ್ರದ ಕಂಬಕಾಗಲೆ (15)

ಬಾಲಕನ ಸೆಳೆದು ಕಟ್ಟಿ ಬ್ರಾಹ್ಮಣನನ್ನು ಬೇಡಿಕೊಂಡು
ಮಾಧವ ದುರುಳ ನಾವು ಸ್ನಾನವ ಮಾಡಿರೆಂದಳು (16)

ಶೀಘ್ರದಿಂದ ಬ್ರಾಹ್ಮಣ ಸ್ನಾನವನ್ನೆ ಮಾಡಿಕೊಂಡು
ದೇವರ ನೈವೇದ್ಯ ಕೊಟ್ಟು ಕೃಷ್ಣಾರ್ಪಣ ಎನ್ನಲು (17)

ಕೃಷ್ಣಾರ್ಪಣ ಎನ್ನಲು ಕಟ್ಟಿದ ಕಂಬದಿಂದ
ವಿಪ್ರನ ಎಡೆಗೆ ಬಂದ ಭಕ್ತವತ್ಸಲ (18)

ಇಟ್ಟಂಥ ಪಾತ್ರೆಗಳ ಮುಟ್ಟಿಕೊಂಡ ಲಕ್ಷ್ಮೀಪತಿ
ಸಿಟ್ಟಿನಿಂದ ನೋಡಿದ ಬ್ರಾಹ್ಮಣ ಕೃಷ್ಣನ ಕಡೆಯಲಿ (19)

ನಂದಗೋಪ ತನ್ನ ಮಗನ ಬಗಲೊಳಗೆ ಎತ್ತಿಕೊಂಡು
ಬಡೆದವರು ಯಾರು ಎಂದು ಕೇಳಿದನಾಗ (20)

ಅನ್ಯಾಯದಿಂದಲೆ ಅಮ್ಮ ಎನ್ನ ಬಡೆದಳು
ದುರುಳ ಕೃಷ್ಣ ಚೊಣಿಸಿ ಅಳುತಲಿದ್ದನು (21)

ದಶಮಸ್ಕಂಧ ಭಾಗವತ ಪರೀಕ್ಷಿತರಾಜನೆ ಕೇಳೊ
ಪರಮ ಭಾಗವತರಿಗೆ ಹರಿಯು ಜ್ಞಾನ ಅರಿಯದೊಲ್ಲದೊ (22)

ಯಶೋದೆ ನಂದರ ಸುತ ಹರಿ ಅಲ್ಲ ........
........... ವೈಕುಂಠ ಪ್ರಾಪ್ತಿ ಆಗೋದೊ (23)[7]

ವಾದಿರಾಜರು ಮಾಡಿದಂಥ ಬಾಲಲೀಲೆ ಹೇಳಿದವರಿಗೆ
ಸಾಯುಜ್ಯ ಮುಕ್ತಿ ಕೊಡುವ ಪುರಂದರ ವಿಠಲ (24)[8]

— (ರಾಧಾಬಾಯಿ ಪುರಾಣಿಕರಲ್ಲಿ)

5) ಪದ್ಮನಾಭನ ಪಾದಪದ್ಮಗಳಿಗೆ ನಮೋ ಎಂಬೆ
ವಿದ್ಯಾಬುದ್ಧಿ ಕೊಡುವ ಪಾದಪದ್ಮಕೆರಗುವೆ (1)[9]

ಬ್ರಹ್ಮ ವಾಯು ಸರಸ್ವತಿ ಭಾರತಿ ಉಮಾಪತಿ
ಗರುಡ ಶೇಷಾದಿಗಳಿಗೆ ನಮೋ ಎಂಬೆನು (2)

---

7. ನುಡಿ ತ್ರುಟಿತ.

8. ಇದೂ 'ಬಾಲಲೀಲೆ'ಯೇ; ಅಂತ್ಯ ನುಡಿ (ಹಾ.908, ಉ.511). 'ಹಯವದನಾರ್ಕಿತಕ್ಕೆ' ಬದಲು 'ಪುರಂದರವಿಠಲ' ಪ್ರಕ್ಷಿಪ್ತ (ಹೊ. ಬಾ.ಲೀ. ಉ.455).

9. ಹೊ. 'ಬಾಲಲೀಲೆ'ಯ ಆರಂಭ.

ಲೀನ ಕೊಡುವ ಗುರುಗಳಿಗೆ ಅಶೇಷರಿಗೆ ವಂದಿಸುವೆ
ವಾಸುದೇವನ ಕಥೆಯು ಹೇಳುವೆ ಧೃತಿಯ ನ್ಯಾಯದದಿ (3)

ರಾಯ ಪ್ರಶ್ನೆ ಮಾಡಿದ ಉಪಾಯ ಬಂಧ ಮೋಕ್ಷಗಳಿಗೆ
ಧ್ಯೇಯ ವಸ್ತುದಾವುದು ಜಪ ದಾವುದು (4)

ಪ್ರಶ್ನವದನ ಕೇಳಿ ಶುಕನು ಬಹಳ ಸಂತೋಷದಿಂದ
ಉತ್ತರವನಾಡಲು ಉದ್ಯುಕ್ತನಾದನು (5)

ಅನುರೂಪಿ ಪರಮಾತ್ಮ(ನ) ಗುಣಗಳನರಿಯದೆ
ಸಾರಭೂತನಾದ ಪರಕೆ ಪರರಿಗೆ ಸಂಭೂತ (6)

ನಿದ್ರೆ ಭಾಗದಿಂದ ಅರ್ಧ ಆಯುಷ್ಯ ಹೋಯಿತು
ಹಗಲು ಹೋಯಿತು ವ್ಯರ್ಥ ಉದರಂಭರಣದಿ (7)

ತನಗೆ ದೈನ್ಯ ಧೈರ್ಯ ತಂದು ಕೊಡುವ ದೇಹ ಅಪತ್ಯ
ದಾರರಲ್ಲಾಸಕ್ತನಾಗಿ ಇಹೋದು ಕಂಡು ಕಾಣದಿದ್ದನು (8)

ಸರ್ವಾಂತರ್ಯಾಮಿ ಸರ್ವೈಶ್ವರ್ಯ ಸಂಪನ್ನ
ಸರ್ವರಿಗೆ ಬಂಧಮೋಕ್ಷ ಕಾರಣ (9)

ಬಂಧಮೋಕ್ಷ ಇವುಗಳಿಗೆ ಸೇವ್ಯ ಕೀರ್ತಿ ಸ್ಮರ್ತವ್ಯವ
ಶ್ರವಣದಿಂದ ಸಕಲ ದೋಷವನ್ನು ಕಳೆವುದು (10)

ಶ್ರೀಹರಿ ಅನುಗ್ರಹವಿಲ್ಲದೆ ಬಂಧ ಹರಿದು ಹೋಗದು
ಭಕ್ತರಿಗೆ ಶ್ರೀಹರಿ ಅನುಗ್ರಹವೆಂಬೋದು ಸಿದ್ಧವು (11)

ಶಾಸ್ತ್ರ ತತ್ವಜ್ಞಾನ ಯೋಗನಿಷ್ಠ ಉಳ್ಳವರಿಗೆ
(ಕೇಳು ರಾಯ) ಜನ್ಮ ಸಫಲವಾಗುವುದು (12)

ಶ್ರೀಹರಿ ಸ್ಮರಣೆಯ ಮುನಿಗಳು ಬಹಳ
ವೈರಾಗ್ಯದಿಂದ ಯುಕ್ತರಾಗಿ ಕಥೆ(ಯ) ಕೇಳಿ (13)

ದ್ವಾಪರ ಯುಗದಲ್ಲಿ ಶ್ರೀ ಕೃಷ್ಣಾವತಾರ ಹೊಕಲು
ಕೃಷ್ಣ ದ್ವೈಪಾಯನರಿಂದ ಈ ಭಾಗವತ ಓದಿದ್ದೆ (14)

ಎಷ್ಟು ಓದಿದ್ದೆ ರಾಯ ಅಷ್ಟು ನಿನಗೆ ಹೇಳುವೆನು
ಭಕ್ತಶ್ರೇಷ್ಠನೆಂದು ತಿಳಿದು ಮಹಾಭಕ್ತಿಯಿಂದಲಿ (15)

ಎಂತಹ ಶಾಸ್ತ್ರ ಹೇಳುವೆ ಆಲಸ್ಯವಿಲ್ಲದೆ ಕೇಳುರಾಯ
ಅಂತ್ಯಕಾಲ ಸ್ಮರಣೆಗೆ ಕಾರಣವೆಂದು ತಿಳಿದುಕೋ (16)

ಖಟ್ವಾಂಗ ರಾಯನು ನಷ್ಟ ಆಯುಷ್ಯ ತಿಳಿದು
ಎರಡು ಘಳಿಗೆ ಸಾಧನ ಮಾಡಿ ಮೋಕ್ಷೈದಿದ (17)

ರಾಯ ನಿನಗೆ ಸಪ್ತ ದಿನದ ಕ್ಲಪ್ತ ಆಯುಷ್ಯ ಉಂಟು
ಮುಕ್ತಿ ಪಥಕೆ ಸಾಧನ ಆಗುವುದನ್ನು ಮಾಡಿಕೋ (18)

ಅಂತ್ಯ ಕಾಲ ತಿಳಿದು ದೇಹಾಂತಕೆ ಅಂಜದೆ
ವೈರಾಗ್ಯ ಶಾಸ್ತ್ರ ವಿಷಯದಿಂದ ಹರಿಯನ್ನೈದಿದನು (19)

ಸನ್ಯಾಸ ಧರ್ಮದಿಂದ ಚೆನ್ನಾಗಿ ಧೀರನಾಗಿ
ಪುಣ್ಯ ಜಲದಲಿ ಪೂತ ದೇಹವ (20)

ಏಕಾಂತದಲ್ಲಿ ಏಕಾಸನವ ಸೇವಿಸಿ
ಏಕಚಿತ್ತನಾಗಿ ಏಕಭಕ್ತಿಯಿಂದಲಿ (21)

ಶ್ರವಣಜನ್ಯ ಜ್ಞಾನದಿಂದ ಶುದ್ಧವಾದ ಮನಸನ್ನು
ವಿಷಯಗಳಿಗೆ ಎರಗಿದ ಇಂದ್ರಿಯ ನಿಗ್ರಹಿಸಿ (22)

ಬಾಹ್ಯ ವಿಷಯದಿಂದ ಬಹು ಚಂಚಲವಾದ ಮನಸನ್ನು
ಶ್ರೀಹರಿಯ ಅಂಗದಲ್ಲಿ ಇಡಬೇಕು (23)

ಶ್ರೀಹರಿಯ ಅಂಗಗಳ ಒಳಗೆ ಧ್ಯಾನ ಮಾಡಬೇಕು
ಅನ್ಯಮನಸ್ಕನಾಗದೆ ನಿಶ್ಚಿಂತ ಇರಬೇಕು (24)

ಮನಸು ವಿಷ್ಣುಪಾದದಲ್ಲಿ ನಿಲಿಸಿ ಶ್ವಾಸ ನಿಗ್ರಹಿಸಿ
ಶ್ರೀಕಾರ ಬ್ರಹ್ಮವೇದ್ಯನ ಒಳಗೆ ಸೇವಿಸಿ (25)

ಹೀಗೆ ಹೇಳಲು ರಾಯನು ಮತ್ತೆ ಪ್ರಶ್ನೆ ಮಾಡಿದ
ಹ್ಯಾಗೆ ವಿಷ್ಣುಪದದಲಿ ಮನಸು ನಿಲುವುದೊ (26)

ಧ್ಯಾನ ಹೇಗೆ ಮಾಡುವುದೊ ಎಂದು ಪ್ರಶ್ನೆ ಮಾಡಿದ
ಶುಕರು ಉತ್ತರ ಕೊಡಲು ಉದ್ಯುಕ್ತವಾದರು (27)

ಆಸನ ಶ್ವಾಸ ಜಯ ಇಂದ್ರಿಯ ಜಯಗಳಿಗೆ
ಸ್ಥೂಲ ಭಗವದ್ರೂಪದಲ್ಲಿ ಮನಸು ನಿಲುವುದು (28)

ಸ್ಥೂಲಕಿಂತ ಸ್ಥೂಲ ಬ್ರಹ್ಮಾಂಡ ಶರೀರವು
ಶಿಲಾಪ್ರತಿಮೆಯಂತೆ ಶ್ರೀ ಹರಿಯ ಶರೀರ (29)

ಪಂಚಮಹಾಭೂತ ಮಹತ್ತತ್ವ ಅಹಂಕಾರ ತತ್ವ
ವಿಕೃತವಾದ ದೇಹ ವಿರಾಟ ದೇಹವು (30)

ವಿರಾಟ ಮೂರ್ತಿ ಧ್ಯಾನ ಹೇಳಿದವರಿಗೆ
ವೈಧವ್ಯ ದೋಷ ಹೋಗುವುದು ಮುಕ್ತಿ ಬಾಹೋದು (31)

ಪಾದಮೂಲದಲ್ಲಿ ಪಾತಾಳಲೋಕ ಹುಟ್ಟಿತು
ಪಾದ ಅಗ್ರದಲ್ಲಿ ಮಹಾತಳ ಹುಟ್ಟಿತು (32)

ರಸಾತಳ ಹುಟ್ಟಿತು ಪಾದದ್ವಯಗಳಿಂದ
ತಳಾತಳ ಹುಟ್ಟಿತು ಶ್ರೀಹರಿಯ ಜಂಘಯಿಂದ (33)

ಸುತಳವು ಹುಟ್ಟಿತು ಜಾನುದ್ವಯಗಳಿಂದ
ತೊಡೆಗಳಿಂದ ಹುಟ್ಟಿದವು ಅತಳ ವಿತಳವು (34)

ಭೂಪ ಅವನ ಜಘನದಿಂದ ಮಹಾತಳವು ಹುಟ್ಟಿತವು
ನಾಭಿಯಿಂದ ರಸಾತಳ ಒಂದೆ ಹುಟ್ಟಿತು (35)

ಶ್ರೀ ಹರಿ ವಕ್ಷದಿಂದ ಜ್ಯೋತಿರ್ಲೋಕ ಹುಟ್ಟಿತು
ಕಂಠದಿಂದ ಹುಟ್ಟಿತು ಮಹರ್ಲೋಕವು (36)

ಶ್ರೀಹರಿ ವದನದಿಂದ ಜನೋಲೋಕ ಹುಟ್ಟಿತು
ಲಲಾಟದಿಂದ ಹುಟ್ಟಿತು ತಪೋಲೋಕವು (37)

ಸತ್ಯಲೋಕ ಶ್ರೀಹರಿಯ ಶಿರಸ್ಸಿನಿಂದ ಹುಟ್ಟಿತು
ಲೋಕಪಾಲಕರು ಹುಟ್ಟಿದರು ಬಾಹುಗಳಿಂದಲಿ (38)

ಕರ್ಣಗೋಳಕದಿಂದ ದಿಕ್ಕುಗಳು ಹುಟ್ಟಿದವು
ಶ್ರೋತ್ರದಿಂದ ಹುಟ್ಟಿದವು ಬಹಳ ಶಬ್ದಗಳು (39)

ಅಶ್ವಿನಿಗಳು ಹರಿಯ ನಾಸಿಕದಿಂದ ಹುಟ್ಟಿದರು
ಗಂಧಗಳು ಹುಟ್ಟಿದವು ಘ್ರಾಣದಿಂದಲಿ (40)

ಶ್ರೀವಿಷ್ಣು ಮುಖದಿಂದ ಇಂದ್ರಾಗ್ನಿ ಜನಿಸಿದರು
ಚಕ್ಷುರ್ಗೋಲಕದಿಂದ ದ್ಯಾಲೋಕ ಹುಟ್ಟಿತು (41)

ಚಕ್ಷುರಿಂದ್ರಿಯದಿಂದ ಸೂರ್ಯ ತಾ ಜನಿಸಿದ
ಯುವಿಗಳಿಂದ ದೇವ ಮನುಷ್ಯಾದಿಗಳು ಜನಿಸಿದರು (42)

ಭ್ರೂಭ್ರಮಣದಿಂದ ಬ್ರಹ್ಮ ಸ್ಥಾನ ಹುಟ್ಟಿತು
ತಾಲುವಿನಿಂದ ಹುಟ್ಟಿದವು ಸಕಲ ಉದಕವು ಅ (43)

ಜಿಹ್ವೇಂದ್ರಿಯದಿಂದ ರಸಗಳು ಹುಟ್ಟಿದವು
ದಂತದಿಂದ ಹುಟ್ಟಿದವು ನಕ್ಷತ್ರಗಳು (44)

ದಂಷ್ಟ್ರದಿಂದ ಆ ಯಮಾದಿ ದೇವತೆಗಳು ಜನಿಸಿದರು
ಶ್ರೀಹರಿ ವಾಕ್ಯದಿಂದ ಜನಿಸಿದವು ವೇದವಾಕ್ಯವು (45)

ಹಾಸದಿಂದ ಜನರ ಉನ್ಮಾದ ಶಕ್ತಿ ಹುಟ್ಟಿತು
ಅಪಾಂಗದಿಂದ ವಿಶ್ವಸೃಷ್ಟಿ ಆಯಿತು (46)

ಉತ್ತರೋಷ್ಠದಿಂದ ಲಜ್ಜೆ ಅಧರದಿಂದ ಲೋಭವು
ಧರ್ಮವೆಂಬುದು ಶ್ರೀಹರಿಯ ಸ್ತನದಿಂದಾಯಿತು (47)

ಅಧರ್ಮ ಮಾರ್ಗಗಳು ಹಿಂಭಾಗದಿಂದ ಹುಟ್ಟಿದವು
ಗುಹ್ಯೇಂದ್ರಿಯದಿಂದ ದಕ್ಷ ಪ್ರಜಾಪತಿ ಹುಟ್ಟಿದರು (48)

ಹರಿಯ ವೃಷಣದಿಂದಲಿ ಮಿತ್ರ ತಾ ಹುಟ್ಟಿದನು
ಶಬ್ದದಿಂದ ವೈದಿಕ ಲೌಕಿಕ ವಾಕ್ಯ ಹುಟ್ಟಿತು (49)

ಅದ್ರಿಗಳು ಹುಟ್ಟಿದವು ಅಸ್ಥಿ ಸಮುದಾಯದಿಂದ
ನದಿಗಳು ಹುಟ್ಟಿದವು ನಾಡಿಯಿಂದಲಿ (50)

ಶ್ರೀ ಹರಿಯ ರೋಮಗಳಿಂದ ವೃಕ್ಷಗಳು ಹುಟ್ಟಿದವು
ಅನ್ನಗಳು ಹುಟ್ಟಿದವು ವೀರ್ಯದಿಂದಲಿ (51)

ಶ್ವಾಸದಿಂದ ವಾಯುವು ಗಮನದಿಂದ ಆಯುಷ್ಯ
ಕರ್ಮದಿಂದ ಗುಣತ್ರಯ ಪ್ರವಾಹ ಹುಟ್ಟಿದವು (52)

ಕುಕ್ಷಿಯಿಂದ ಹುಟ್ಟಿದವು ಸಪ್ತಸಮುದ್ರಗಳು
ವಿಹಾರದಿಂದ ಸ್ವಯಂಭು ಮನು ಹುಟ್ಟಿದ (53)

ಶ್ರೀಹರಿ ಕೇಶಗಳಿಂದ ಮೇಘಗಳು ಹುಟ್ಟಿದವು
ಸಂಧ್ಯಾ ಕಾಲಗಳು ಶ್ರೀ ಹರಿಯ ವಸನದಿಂದಲಿ (54)

ಶ್ರೀಹರಿಯ ಹೃದಯದಿಂದ ಅವ್ಯಕ್ತ ತತ್ವ ಹುಟ್ಟಿತು
ದೇವ ಮನಸಿನಿಂದ ಚಂದ್ರಮನು ಹುಟ್ಟಿದ (55)

ಶ್ರೀ ಹರಿ ಬುದ್ಧಿಯಿಂದ ವಿಜ್ಞಾನ ತತ್ವ ಹುಟ್ಟಿತು
ಅಂತಃಕರಣದಿಂದ ರುದ್ರನು ಹುಟ್ಟಿದ (56)

ಶ್ರೀಹರಿಯ ನಖಗಳಿಂದ ಗಜ ಅಶ್ವ ಹುಟ್ಟಿದವು
ಸಿಂಹ ಮೊದಲಾದ ಸರ್ವ ಮೃಗ ಪಶು ಹುಟ್ಟಿದವು (57)

ಗಂಧರ್ವರು ವಿದ್ಯಾಧರರು ಚಾರಣ ಅಪ್ಸರರು
ಶ್ರೀ ಹರಿಯ[illegible] ಸ್ಮರಣೆಯಿಂದ ಜನಿಸಿದರು (58)

ಶ್ರೀಹರಿ ಮುಖದಿಂದ ಬ್ರಾಹ್ಮಣ ಜಾತಿ ಹುಟ್ಟಿತು
ಬಾಹುದ್ವಯಗಳಿಂದ ಕ್ಷತ್ರಿಯ ಜಾತಿ ಹುಟ್ಟಿತು (59)

ಶ್ರೀಹರಿಯ ತೊಡೆಗಳಿಂದ ವೈಶ್ಯ ಜಾತಿ ಹುಟ್ಟಿತು
ಹರಿಯ ಮಧ್ಯದೇಹದಿಂದ ಹವ್ಯಕವ್ಯ (60)

ಶ್ರೀಹರಿಯ ವೀರ್ಯದಿಂದ ಸ್ವಾಹಾಸ್ವಧಾ ಹುಟ್ಟಿದವು
ಹೀಗೆ ಹೇಳಿ ಶುಕರು ಪ್ರಥಮಾಧ್ಯಾಯ ಮುಗಿಸಿದರು (61)

ವಿರಾಟ ಮೂರ್ತಿ ಧ್ಯಾನಕಿಂತ ಉತ್ತಮವಾದದ್ದು ಇಲ್ಲ
ಎಂದು ನಾನು ನಿನಗೆ ಹೇಳುವೆನು ಕೇಳು ರಾಜನೆ (62)

ವಿರಾಟಮೂರ್ತಿ ಧ್ಯಾನವನ್ನು ಹೇಳಿ ಕೇಳಿದವರಿಗೆ
ಸಾಯುಜ್ಯ ಪದವಿ ಕೊಡುವ ಹಯವದನನು (63)[10]

— (ರಾಧಾಬಾಯಿ ಪುರಾಣಿಕರಲ್ಲಿ)

6) ವಟಪತ್ರದೆಲೆ ಮ್ಯಾಲೆ ವಟುವಾಗಿ ಮಲಗಿ ಉಂ
ಗುಷ್ಠ ಬಾಯೊಳಗಿಟ್ಟು ಚಪ್ಪರಿಸಿ
ಜಠರದೊಳಗೆ ಸರ್ವಲೋಕ ಇಂಬಿಟ್ಟು
ವಟಪತ್ರದಲಿ ಯೋಗ ನಿದ್ರೆ ಮಾಡಿದನು, ಜೋಜೋ (1)

ಕೆಲವು ದಿವಸ ಯೋಗನಿದ್ರೆಯೊಳಿದ್ದು
(ಇಳೆಯ)[11] ಸೃಷ್ಟಿಪೆನೆಂದು ತಿಳಿದು ಯೋಚಿಸಲು
ಲಲನೆ ಲಕುಮಿದೇವಿ ಸ್ತುತಿ ಕೇಳಿದಾಕ್ಷಣ
ಜಲಜನಾಭಿಯಿಂದ ಸುತನ ಪಡೆದನು, ಜೋ ಜೋ (2)

ಕ್ಷೋಣಿ ಭಾರವನೆಲ್ಲ ಇಳಿಯಲವತರಿಸಿ
ಪ್ರಾಣ ಮಾತ್ರರಿಗೆಲ್ಲ ಸುಖವ ನಿಶ್ಚಯಿಸಿ
ಜಾಣ ಯಶೋದೆಯ ಕಂದನೆಂದೆನಿಸಿ
ವಾಣಿಯ ಮಾವ ಗೋಕುಲದಲ್ಲಿ ಜನಿಸಿ, ಜೋ ಜೋ (3)

ಮಧುರ ಪಟ್ಟಣದಲ್ಲಿ ಬಿಲ್ಲು ಹಬ್ಬವನು
ಮುದದಿ ಕಂಸ ಕೃಷ್ಣನ ಕರೆಸಿದನು
ಒದಗಿ ಅಕ್ರೂರನು ಬರೆ ಕಂಡು ಶ್ರೀಧರನು
ಚದುರ ಗೋಕುಲದಿಂದ ತೆರಳಿ ನಡೆದನು, ಜೋ ಜೋ (4)

---

10. ಹರಿ ಶರೀರದ ಭೂಮಿ ವರ್ಣನೆಯುಳ್ಳ ಈ ಕೃತಿಗೆ 'ವಿರಾಟ ಮೂರ್ತಿಧ್ಯಾನ' ವೆಂದೇ ಹೆಸರು. ಈ ನುಡಿ ಕೂಡ 'ಬಾಲಲೀಲೆ' ಪು. 908, ಉ. 511ರಂತಿದ್ದು, ಹಿಂದಿನ ಕೃತಿಯಂತೆ ಅಂಕಿತ ಬದಲಾಗದೆ ಇರುವುದು ಗಮನಾರ್ಹ. ಇವೆರಡೂ ಕೃತಿ ವಾದಿರಾಜೀಯ ಶ್ರೈಯರಲ್ಲಿದ್ದು, ದಶಮಸ್ಕಂಧದಂತೆ ದ್ವಿತೀಯಾದಿ ಸ್ಕಂಧಗಳನ್ನೂ ಕನ್ನಡಿಸಿರಬಹುದೆನ್ನಲು ಆಧಾರವೆನಿಸಿವೆ.

11. ಜಗವ.

ಅರಸನ ವಸ್ತ್ರವ ನೈವ ರಜಕನ
(ಭ)[12]ರಿಸಿದಾ ಷಾ ಉಚ್ಚ ವಸ್ತ್ರವನ
ಸರಸಿಜಾಕ್ಷ ಕುಬ್ಜೆಯು ಮಾಲೆ ಗಂಧವನ
ಧರಿಸಿ ಅವಳ ಡೊಂಕ ತಿದ್ದಿದ ಕರುಣಿ, ಜೋ ಜೋ (5)

ಕುವಲಯಾಪೀಡೆಂಬೊ ಆನೆಯು ಕೊಂದ
ಶಿವನಿತ್ತ ಬಿಲ್ಲು ಮುರಿದನು ಗೋವಿಂದ
ಜವನ ಪುರಕೆ ಮಲ್ಲರನಟ್ಟಿದ ಆನಂದ
ಹವಣಿಯಿಂದಲಿ ಕಂಸ ಎದುರಾಗಿ ನಿಂದ, ಜೋ ಜೋ (6)

ಕ್ಷೀರಸಾಗರವೆಂಬೊ ತೊಟ್ಟಿಲು ಮಾಡಿ
ನಾಕು ವೇದವೆಂಬೊ ಸರಪಳಿಯು ಹೂಡಿ
ಶೇಷದೇವರು ಬಂದು ಹಾಸಿಗೆಯಾಗಲು
ಲಕ್ಷ್ಮೀವಾಸವಾಗಿ ಮಲಗಿದ ಹಂಸವದನ, ಜೋ ಜೋ (7)[13]

— (ಅಕ್ಕನ ಸಂಗ್ರಹ)

7) ಶೋಭಾನವೆನ್ನಿರಿ ಶ್ರೀದೇವಿಯರಸಗೆ
ನಾಭಿಯಿಂದಜನ ಪಡೆದನಿಗೆ
ನಾಭಿಯಿಂದಜನ ಪಡೆದ ಶ್ರೀಕೃಷ್ಣಗೆ
ಶೋಭನವೆನ್ನಿರಿ ನಾರೆರಲ್ಲ (ಪ)[14]

ಸಿರಿ ತನ್ನ ರಮಣಗೆ ಕಮಲದಾರತಿ
ಪರಿಪರಿ ಪುಷ್ಪ ರಚಿಸಲು
ಪರಿಪರಿ ಪುಷ್ಪ ರಚಿಸಲು ಕೈಕೊಂಬ
ನರಹರಿಗಾರತಿಯ ಬೆಳಗಿರಿ (1)

ಹೊನ್ನ ಹರಿವಾಣದಲ್ಲಿ ರನ್ನದಾರತಿಯನಿಟ್ಟು
ಕನ್ಯೆ ಸೌಪರ್ಣಿ ವಾರುಣಿ
ಕನ್ಯೆ ಸೌಪರ್ಣಿ ವಾರುಣಿ ಉಮಾದೇವಿ
ಬ್ರಹ್ಮಾಂಡದೊಡೆಯನ ಚರಣಕ್ಕೆ (2)

---

12. ಧ?

13. ಆದಿಪ್ರಾಸಯುತ ನುಡಿ ಪಾ·ಕೃ·ಪು·213ರಲ್ಲಿದೆ — ಚಾರುವೇದ, ಧೀರಶೇಷ, ನಾರಿಯೊಡನೆ ಎಂಬಂತೆ-ಈ ಜೋಗುಳದ ಆದ್ಯಂತ ನುಡಿ ಮೂಲರೂಪವನ್ನು ನಡುವಿನ ಕೃಷ್ಣರೂಪವನ್ನು ಬಣ್ಣಿಸುವುದೂ, ಆದ್ಯಂತ ಪ್ರಾಸಗಳೂ ಗಮನಾರ್ಹ·

14. ತ್ರಿಪದಿ, ಪುನರಾವರ್ತಿತ ಚರಣದಿಂದ ದಾಕ·

ಆವರಣ ಪೂಜೆ ಅವರವರ ಮನದಿಂದ
ತಾರತಮ್ಯ ಭಾವದಿಂದ ರಚಿಸಲು
ತಾರತಮ್ಯ ಭಾವದಿಂದ ರಚಿಸಲು ಕೈಕೊಂಬ
ನರಹರಿಗಾರತಿಯನು ಬೆಳಗಿರಿ (3)

ಇಂದ್ರ ಮಾಣಿಕ ಬಿಗಿದ ಪೊನ ಕುಂದಣದಾರತಿ
ಇಂದ್ರನ ರಾಣಿ ಶಚಿದೇವಿ
ಇಂದ್ರನ ರಾಣಿ ಶಚಿದೇವಿ ಆರತಿ ಎತ್ತ
ಇಂದಿರಾಪತಿಯನು ಚರಣಕ್ಕೆ (4)

ಇಂಥ ಹಂಸುವದನನ ಎಂತು ನಾ ಪೊಗಳುವೆ
ಸಂತೋಷದಿಂದ ಸುರರೆಲ್ಲ
ಸಂತೋಷದಿಂದ ಸುರರೆಲ್ಲ ಪಾಡಿದರು
ಕಾಂತೆಯುರಿಗ್ಯೆದೆ ತನವಂದು (5)

— (ರಾಧಾಬಾಯಿ ಪುರಾಣಿಕರಲ್ಲಿ)

8) ಸತ್ಯ ಎಂಬೊ ಕೆಡಿ ನೀ ಅಸ್ತಿತ್ವ ಅಗಲದಿರು
ನಿತ್ಯ ಪರಮಾತ್ಮಗಾತಣ
ನಿತ್ಯ ಪರಮಾತ್ಮಗಾತಣ ನೀ ನಮ್ಮ
ಚಿತ್ತದಿಂದಗಲದಿರು ಕಂಡ್ಯ (1)

ಅದ್ವೈತ ಅಡಿಗಲ್ಲು ಉದ್ದೊಂಬೊ ಮೇಗಲ್ಲು
ಸಿದ್ಧಾಂತವೆಂಬ ನಡುಗಂಬ
ಸಿದ್ಧಾಂತವೆಂಬ ನಡುಗಂಬ ದುರ್ಮತಿ
ಪದ್ಧತಿ ಕೈಯನು ಹಿಡಿಸುವೆ (2)

ತೊಳಸಿ ಬೇಗಾಗಿ ನಿರ್ಜಂಯಿಸಿ ನಿರ್ಮಲ ಮಾಡಿ
ಒಳಗಿದ್ದ ತಿರುಳ ತೆಗೆವನು
ಒಳಗಿದ್ದ ತಿರುಳ ತೆಗೆವನು ಗುಣವಂತೆ
ತೊಳಸಲಸುವಾದ ಗೋದಿಯನು (3)

(ಅರಿಸಿ)[15] ಹೊಟ್ಟು ಬ್ಯಾರೆ ವಿಂಗಡಿಸುವೆ
ತೋರಿತೆ ಗೋದಿ ಉದಂತುಕ್ಕೆ
ತೋರಿತೆ ಗೋದಿ ಉದಂತುದ ಬಿಸಿಲಿಗೆ
ತೋರಿ ಕೈ ಮುಗುಡಿ ಹರಹುವೆ (4)

---

15. ಆರಿಬಾರು?

ಭಕ್ತಿ ಎಂಬೊ ಒರಳಿಗೆ ಮುಕ್ತಿ ಎಂಬೊ ಒನಕೆಯು
ಮುತ್ತು ಕೆತ್ತಿಸಿದ ಹೊಸ ಮರ
ಮುತ್ತು ಕೆತ್ತಿಸಿದ ಹೊಸ ಮರದಿ ಕಣಕವ
ಕುಟ್ಟಿ ಸಜ್ಜಿಗೆಯ ತೆಗೆವೆನು (5)

ತರಳ ಕೇಳೆನ್ನ ತೋರಕಲ್ಲಿನ ಮ್ಯಾಲೆ ಸಂ
ಸಾರದ ಕಣಕವ ಕಲಸುವೆ
ಸಾರದ ಕಣಕವ ಕಲಸಿ ಭಕ್ತಿಯಿಂದ
ಕ್ಷೀರ ಘೃತ ಎರೆದು ಇರಿಸುವೆ (6)

ಉರುಳಿ ವೇದಾಂತನ ಉರುಳಿ ಶ್ರುತಿ ಸಾಧನೆ
ಉರುಳಿ ಪರಮಾತ್ಮನೆನಿಸಿದ
ಉರುಳಿ ಪರಮಾತ್ಮನೆನಿಸಿದ ಉರುಳಿಯ
ಉರುಳಿಸಿ ಬಿಟ್ಟು ಹರಹುವೆ (7)

ಹುಟ್ಟು (ಹೊಂದುಗಳನ್ನು ನೆಟ್ಟು ನೀ ಕೆಡದಿರು)[16]
ಬೆಟ್ಟದಂತೆ ಬೆಳೆದ ಒಲಗುಪ್ಪ
ಬೆಟ್ಟದಂತೆ ಬೆಳೆದ ಒಲಗುಪ್ಪ ತಂದು ನಾ
ಮುಟ್ಟದಂತೆ ಮಾರ ಇರಿಸುವೆ (8)

ಅಟ್ಟಿ ಬಂದ ದುರಿತಗಳ ಅಡಿಗೊಟ್ಟನೆ ಮಾಡಿ
ಕಾಷ್ಟವ ತಂದು ಇರಿಸುವೆ
ಕಾಷ್ಟವ ತಂದು ಇರಿಸುವೆ ಭಕ್ತಿಯಿಂದ
ಪಾವಕನ ಬೇಗ ತೊಡಗುವೆ (9)

ಜನ್ಮ ಮರಣವೆಂಬೊ ಎಣ್ಣೆಯ ಕಾಯಲಿಟ್ಟು
ತನು ಬುದ್ಧಿಯಿಂದ ಗಳಗುಟ್ಟಿ
ತನು ಬುದ್ಧಿಯಿಂದ ಗಳಗುಟ್ಟಿ ಹಸನಾದ
ಎಣ್ಣೋರಿಗೆಯ ಅಟ್ಟು ತೆಗೆವೆನು (10)

ಒಂಬತ್ತು ಬಾಗಿಲು ಶಂಬುದಿಸುವವನಿಗೆ
ಗಂಧದಪ್ಪರಿಗೆ ಮಣಿ ಮಾಡ
ಗಂಧದಪ್ಪರಿಗೆ ಮಣಿಮಾಡ ಇದು ನಮ್ಮ
ತಂದೆ ಹಯವದನನರಮನೆಯು (11)

---

16. ಹೊಂದುಗಳೆಂಬೊ ನೆಟ್ಟನೀಗೊಳದಿರು?

ಗುಜ್ಜಣಗೆ ಪೇಳಿದಂ ಇದಂ ಬಿಡುವ್ವಣಗಳು
ಮುದ್ದು ಮುಂಡಿಗೆಯು ಘನವಾದ
ಮುದ್ದು ಮುಂಡಿಗೆಯು ಘನವಾದ ಸವ್ಯ
ಮುದ್ದು ಹಯವದನ ಉಣ ಬಂದ (12)

ಗೋದಿಯ ಕಥೆಯಲ್ಲಿ ಪಾದಿಯ ಕಥೆಯಿದು
ಈ ಧರೆಯೊಳಗೆ ವಾದಿರಾಜ
ಈ ಧರೆಯೊಳಗೆ ವಾದಿರಾಜ ಮಾಡಿದ ಅತ್ಯ
ಸಾಧನೆ ಕೇಳಿ ಕಿವಿಗೊಟ್ಟು (12)

— ( ಉ·ಲ·ಹಯವದನಾಚಾರ್ಯ, ದಿವಾನ ಗೋವಿಂದಣ್ಣ ಅವರಲ್ಲಿ)

9) ಹಡಗಿನೊಳಗಿಂದ ಬಂದ ಕಡು ಮುದ್ದು ಶ್ರೀಕೃಷ್ಣ
ಕಡಗೋಲು ನೇಣ ಹಿಡಿದನೆ
ಕಡಗೋಲು ನೇಣ ಹಿಡಿದನೆ ದೇವಕಿಯ
ತನಯಗಾರತಿಯ ಬೆಳಗಿರಿ (1)

ಆಚಾರ್ಯರ ಕೈಯಿಂದ ಅಧಿಕ ಪೂಜೆಯ ಕೊಂಬ
ಕಾಂತೆ ಲಕ್ಷ್ಮಿಯ ಅರಸನೆ
ಕಾಂತೆ ಲಕ್ಷ್ಮಿಯ ಅರಸನೆ ಶ್ರೀಕೃಷ್ಣ
ಕಾಂಚನದಾರತಿಯ ಬೆಳಗಿರಿ (2)

ಮಧ್ವ ಸರೋವರದಿ ಶುದ್ಧ ಪೂಜೆಯಕೊಂಬ
ಮುದ್ದು ರುಕ್ಮಿಣಿಯ ಅರಸನೆ
ಮುದ್ದು ರುಕ್ಮಿಣಿಯ ಅರಸನೆ ಶ್ರೀಕೃಷ್ಣ
ಮುತ್ತಿನಾರತಿಯ ಬೆಳಗಿರಿ (3)

ಪಾಂಡವರ ಪ್ರಿಯನೆ ಚಾಣೂರಮರ್ದನನೆ
ಸತ್ಯಭಾಮೆಯ ಅರಸನೆ
ಸತ್ಯಭಾಮೆಯ ಅರಸನೆ ಶ್ರೀಕೃಷ್ಣ
ನವರತ್ನದಾರತಿಯ ಬೆಳಗಿರಿ (4)

ಸೋದರ ಮಾವನ ಮಧುರೆಲಿ ಮಡುಹಿದ
ತಾಯಿಯ ಸೆರೆಯ ಬಿಡಿಸಿದ
ತಾಯಿಯ ತೆರೆಯ ಬಿಡಿಸಿದ ಹಯವದನ
ದೇವಾಗಾರತಿಯ ಬೆಳಗಿರಿ (5)[17]

---

17· ಇದೂ ಸಹ ತ್ರಿಪದಿ ಜಾಕಂಗೊಂಡಾದುದು, ಆರತಿ ಪದ·

## (3) ವಾದಿರಾಜರ 'ಪ್ರಶ್ನೋತ್ತರಾವಳಿ'ಯ ಮಾದರಿ

(ಪು·     ರಲ್ಲಿ ಉಕ್ತ)

| | |
|---|---|
| 10 | |
| 20 | 2 |
| 30 | 3 |
| 40 | 4 |
| 50 | 5 |

ಪ್ರಶ್ನೆ ನೋಡುವವರು ಭಕ್ತಿಯುಕ್ತರಾಗಿ ಎಡಸಾಲಿನ ಒಂದು ಮನೆಯನ್ನೂ ಬಲ ಸಾಲಿನ ಒಂದು ಮನೆಯನ್ನೂ ಬೀಳ್ಯದೆಲೆಯ ಮೊನೆಯಿಂದ ಗುರುತಿಸಿ ಆ ಎರಡು ಸಂಖ್ಯೆ ಕೂಡಿಸಿ ಬಂದ ಮೊತ್ತದ ಸಂಖ್ಯೆಯ ಫಲ ನೋಡುವುದು·

11· ಬೇರೆಯ ಸ್ಥಳದಲ್ಲಿ ಕಾರ್ಯವಹುದು, ಹೊರಡುವುದರಿಂದ ಕಾರ್ಯಸಿದ್ಧಿ· (ಇದರಂತೆ 12– 14)·

15· ಮನೋರಥ ಸಿದ್ಧಿಸುವುದು, ಸರ್ವ ಕಾರ್ಯಗಳಲ್ಲಿಯೂ ಸಿದ್ಧಿಯುಂಟು, ಸಂಶಯ ಪಡಬಾಗದು, ಉತ್ಸಾಹವಿರಲಿ·

21· ಮನದಲ್ಲಿ ಚಿಂತೆಯುಂಟು, ಅದು ಪರಿಹರಿಸುವುದು, ಸರ್ವಕಾರ್ಯಗಳಲ್ಲಿಯೂ ಜಯ, ವೃದ್ಧಿ ಮಂಗಳವುಂಟು· (ಇದರಂತೆ 22– 25, 31– 35, 41– 45, 51– 55ರ ಫಲ ಉಕ್ತವಾಗಿವೆ· ಉದಾ–)

55· ಉತ್ಸಾಹ ಮಾಡಿದಲ್ಲಿ ಕಷ್ಟವಿಲ್ಲದೆ ಕೆಲಸವಾಗುವುದು, ಗರ್ಭದಲ್ಲಿ ಪುತ್ರಸಂತಾನವುಂಟು, ಕೃಷಿ ಮೊದಲಾದುದರಲ್ಲೂ ಕೊಂಡು ಮಾರುವುದರಲ್ಲೂ ಪ್ರಶಸ್ತ, ಗ್ರಾಮಾಂತರಕ್ಕೆ ಹೋಗುವುದರಿಂದ ಲಾಭ, ಪ್ರಯಾಣದಿಂದ ಕಾರ್ಯಸಿದ್ಧಿ, ವಿವಾದದಲ್ಲಿ ಜಯ, ಕೈಕೊಂಡ ಕಾರ್ಯವೆಲ್ಲ ಸಿದ್ಧಿಸುವುದು)·

— (ಶ್ರೀಕೃಷ್ಣ ಪಂಚಾಂಗ, ಉಡುಪಿ, 69– 70)·

## (4) ತುಳು ಪಾಡ್ದನ (ರಾಗ ಷಣ್ಮುಖಪ್ರಿಯ, ಮಠ್ಯ ತಾಳ)

ಲೇಲೇಲೇ ಲೇಲೇಲೇ ಲೇಲೇಲೇಲೇ ಗಾ
ಲೇಲೇಲೇ ಲೇಲೇಲೇ ಕಂಡ ಲೇಲ ಗಾ    (ಪ)

ಕಣ್ಣ್ ಬುಡ್ಪ ನೀರಡ ತೂಪಿನಾರ್ ಏರ ಗಾ
ಅಣ್ಣಪಣ್ಣ ಕೇಣ್ಣ ಮತ್ಸ್ಯದೇವೆರೆತ್ತ ಗಾ    (1)

ಪರ್ವತೋನ ಬೆರಿಟ್ದೀದ್ ದೆರ್ತಿನೇರ ಗಾ
ಸರ್ವಲೋಕದೊಡೆಯ ಕೂರ್ಮ ದೇವರತ್ತ ಗಾ (2)

ರಕ್ಕಸನ ಕೆರ್ದ್ ಭೂಮಿ ದೆರ್ತಿನೇರ ಗಾ
ರಕ್ಕಸಾರಿ ಭೂ ವರಾಹ ದೇವರತ್ತ ಗಾ (3)

ಕರುಳ ಮಾಲೆ ಕಂಟಲಡ ಧರಿಸಿನೇರ ಗಾ
ಮುರಳದಾನಿಶೂರೆ ನಾರಸಿಂಹರತ್ತ ಗಾ (4)

ಚಕ್ರವರ್ತಿ ಬಲಿಟ ಭೂಮಿ ನಟ್ಟಿನೇರ ಗಾ
ಚಕ್ರಪಾಣಿ ಅದಿತಿ ಪುತ್ರ ವಾಮನತ್ತ ಗಾ (5)

ಕ್ಷತ್ರಿಯರನ ಭಾರಿ ನರ್ಕಿಕೆರ್ತಿನೇರ ಗಾ
ಸತ್ಯವರ್ಣ ಕೇಣ್ಣ ಪರಶುರಾಮರತ್ತ ಗಾ (6)

ಉಪ್ಪುನೀರ ಕಡಲ ಕಟ್ಟ ಕಟ್ಟಿನೇರ ಗಾ
ಸರ್ವಶಾಂತಿ ರಾಮರೆನಿಪ ದೇವರತ್ತ ಗಾ (7)

ಅರ್ಜುನಾಗ ಸಾರಥಿತ್ವ ಮಾಲ್ತಿನೇರ ಗಾ
ನಿರ್ಜರಾದಿ ಬಲತಿ ಕೃಷ್ಣ ದೇವರತ್ತ ಗಾ (8)

ವಸ್ತ್ರ ಬುಡ್ದ್ ಬತ್ತಲೆಡ ಉಂತಿನೇರ ಗಾ
ಸೂತ್ರಧಾರೆ ಬೌದ್ಧರೆನಿಪ ದೇವರತ್ತ ಗಾ (9)

ಕುದುರೆಮಿತ್ತ್ ಮಿತ್ತೇರದ್ ಸಿರಗಿನಾರ ಗಾ
ಭದ್ರಕಾಂತಿ ರಾಜರೆನಿಪ ದೇವರತ್ತ ಗಾ (10)

(ಈ ದಶಾವತಾರ ಚಿತ್ರಣದ ಕೃತಿಯೂ ಕೃಷ್ಣಾಷ್ಟಕದ ಧಾಟಿಯಲ್ಲಿರುವುದೂ, ಎಲ್ಲ ಜಾನಪದರಿಗೂ ಹೇಳಲಧಿಕಾರವಿರಲೆಂದು ಹಯವದನಾಂಕಿತದ ಬದಲು ರಾಜರಂಕಿತವಿರುವುದೂ ಗಮನೀಯ; ಆದರೆ 'ಭದ್ರ ಕಲ್ಕಿ ಹಯವದನ' ಎಂಬ ಪಾಠಾಂತರವೂ ಉಂಟು).

## (5) ವಾದಿರಾಜರ ಕೆಲ ಸೂಕ್ತಿಗಳು

1. ಅನಲವು ತುಹಿನವು ಒಂದಾಗುವುದುಂಟೆ (ಎಲುಚರ್ಮಚೀಲದೊಳಗೆ)
2. ಅನ್ಯರೊಡವೆಯು ತನಗೆ ಬಂದರೆ ಸಂತೋಷ
   ತನ್ನೊಡವೆ ಒಬ್ಬರಿಗೆ ಕೊಡಲು ಕ್ಲೇಶ (ದಾನವಿಲ್ಲ ಧರ್ಮವಿಲ್ಲ)
3. ಕಂಬಳಿಯ ಬುತ್ತಿಯಂತೀ ದೇಹದೊಳಗೆ ಸುಖವೆಂಬುದಿಲ್ಲವು ( ಗುರುಹಿರಿಯರನುಸರಿಸಿ)

4· ತಾಂಡು ಮಾರಿ ತೊತ್ತು ಕೊಂಬ ಪಾಮರನಂತೆ (ಗುರುಹಿರಿಯರನುಸರಿಸಿ)

5· ಈ ಗಾಳಿದೀಪ ಸ್ಥಿರವಲ್ಲ ,,

6· ಹಿಳ್ಳರಾಯನ ಕಂಡು ಮಲ್ಲಿಗೆಯ ಬೇಡುವರೆ (ಅರಳಿದ ಕೆಂದಾವರೆ)

7· ಲೇಸಾಗಿ ನಾಯಿ ಬಾಲಕೆ ನಾರಾಯಣ ತೈಲ
ಏನು ಬಾರಿ ತೀಡಿದರೆ ನೀಟಾಗುವುದೆ (ಏನು ಹೇಳಲಿ)

8· ಉಂಡು ಸುಖ ಅಲ್ಲ ಉಟ್ಟು ತೊಟ್ಟು ಪರಿಣಾಮ ಇಲ್ಲ( ಏನು ಬಂದ್ಯೋ ಜೀವ)
ದುಂಡು ನಾಯಿಯಂತೆ ಮನೆ ಮನೆಗಳ ತಿರುಗಿ ಕೆಟ್ಟೆ ,,

9· ಮರುಳರ ಸೇವೆ ವ್ಯರ್ಥವೊ ದೇವೇಶ (ಧರೆಯೊಳಗೆ ಬಹು ದೀನನಾಗಿ)

10· ಮಾರಿ ಹಬ್ಬದ ಕುರಿಯು ತೋರಣವ ಮೆಲುವಂತೆ (ನೀ ಕರುಣದಿಂದ)
ಜಲದ ಮೇಲಿನ ಗುಳ್ಳೆಯಂತಿಪ್ಪ ಈ ದೇಹ ನೆಲೆ ಎಂದು ನೆಚ್ಚಿಹೆನೊ (ನೀ ಕರುಣದಿಂದ)

11· ಓದುವುದು ವೇದ ಹಾಕುವುದು ಗಾಳ (ಓದುವುದು ವೇದ)

12· ಓದಿದೆನು ಎಲ್ಲಣ್ಣ ಕಲ್ಲಣ್ಣ ಎನುತಲಿ (ಸಕಲ ಸಾಧನವೆನಗೆ)

13· ಎತ್ತು ಹೊತ್ತಿಗೆಯು ಹೊರೆ ಹೊತ್ತುದದಕೆ ಸಂಪತ್ತೇನೊ (ಕಾಲಮದ ವೈಭವಮದ)

14· ಚಿಪ್ಪಿನೊಳಗ್ಹುಟ್ಟಿದ ಮುತ್ತಿನ ಮಹಿಮೆಗೆ ತಪ್ಪೇನೊ (ಕುಲಮದ ವೈಭವಮದ)

15· ಸ್ಥಿರವಲ್ಲ ಸಂಪತ್ತು ,,

16· ಹಣವೇ ನಿನ್ನಿಂದು ಗುಣವೇನು ಬಣ್ಣಿಪೆನೊ (ಹಣವೇ ನಿನ್ನಿಂದು)

17· ಹಣವಿಲ್ಲದವನೊಬ್ಬ ಹೆಣವೇ ಸರಿ ,,

18· ಬಲಿಯರಾಗದವರನೆಲ್ಲ ಬಲಿಯ ಮಾಡಿಸುವಿ ,,

19· ಮಂಗನಾದರೂ ಅನಂಗನೆನಿಸುವಿ ,,

20· ಅರಿಯದ ಶುಂಠನ ಅರಿತವನೆನಿಸುವಿ ,,

21· ಮುದಿದು ಕಳೆ ಕ್ರೋಧವನು, ಮಾಡದಿರು ಲೋಭವನು ( ಯಾಕೆ ಮೈಮರೆದೆ)

22· ಗುರು ಹಿರಿಯರಾದವರಿಗೆರಗೊ
ಅನಾಥರಿಗೆ ಚನ್ನಾಗಿ ಮರುಗೊ ,ಇದೆ ಪರಮಗತಿಯು ಸರಗೊ ,,

23·

23· ಬಿರಾಶಿಯು ತೋರಿ ಬಂಟನಾಳನೆ, ಕಳ್ಳನವ ತೋರಿ ಸೂಳೆ ಉಳೆ (ಕಂಡದ ನುಡಿದೆ)

24· ಏನು ಬಂದರೈಸರೊಳಿರು, ಆಸೆ ಎಂಬ ಪಾಶವ ಬಿಡು ,,

25· ಹಾಸು ಮಂಚವ ಬಯಸಿ ಹೇಸರಗತ್ತೆಯಂತೆ ಪರರಿಗಾ ಶರೀರ ಮಾರಬೇಡ,
ದೇಶ ದೇಶಕೆ ಹಾರಬೇಡ ,,

26. ಗಾಳದ ಹುಳುವಿನಾಸೆಯಂತೆ ವಿಟಾಸ್ನ್ಯಳಂತೆ ಮುಂದುಗಾಣರು (ಗಾಳದ ಹುಳುವಿನಾಸೆಯಂತೆ)

27. ತಾಳದ ಮರನ ನೆಳಲಿಗೆಂದು ಬಂದು ಕುಳಿತರೆ ಬೋಳು ತಲೆಯಲಿ ಅದರ ಫಲ ಬಿದ್ದು ಸಾಯುವೆ, ಮಾಳಿಗೆಯು ತೊಲೆ ಮುರಿದು ಮರಣ ಬಂದೀತೆಂದು ತೋಲಾಕಿರುವರ ಸಂಗಡ ಮಲಗಿದವ ಬಲ್ಲನೆ

28. ತಾಳುವಿಕೆಗಿಂತ ತಪವು ಇಲ್ಲ (ತಾಳುವಿಕೆಗಿಂತ)

29. ದುಷ್ಟ ಮನುಜರು ಪೇಳ್ವ ನಿಷ್ಠುರದ ನುಡಿ ತಾಳು, ಕಷ್ಟಬಂದರೆ ತಾಳು, ಕಂಗೆಡದೆ ತಾಳು

30. ನೆಟ್ಟ ಸಸಿ ಫಲ ಬರುವ ತನಕ ಶಾಂತಿಯು ತಾಳು. (ತಾಳುವಿಕೆಗಿಂತ)

31. ಕಟ್ಟು ಬುತ್ತಿಯು ಮುಂದೆ ಉಣಲುಂಟು ತಾಳು. "

32. ಹಳಿದು ಹಂಗಿಸುವ ಹಗೆಯು ಮಾತನು ತಾಳು. "

33. ಹಲಧರಾನುಜನನ್ನು ಹೃದಯದಲಿ ತಾಳು "

34. ಅಕ್ಕಸವ ಮಾಡುವರ ಅಕ್ಕರದಿ ತಾಳು. "

35. ಉಕ್ಕೊ ಹಾಲಿಗೆ ನೀರನಿಕ್ಕು ಮಡದಿ ತಾಳು. "

36. ಮೊದಲೆ ತೋರುತಿದೆ ಮಧುರ ವಿಷಯು ಸುಖ ಕಡೆಯಲಿ ದುಃಖ ಅನೇಕ (ಹರಿಭಜನೆ ಮಾಡೊ)

37. ಕುಸುಮವೆತ್ತ ಕಡಗವೆತ್ತ, ಹಸುಗೂಸು ಎತ್ತ ಪರ್ವತವೆತ್ತ (ತಂಗಿ ಮೊಸರು ಸುತ್ತ ಚೆಲ್ಲಿದ)

38. ಕೆಸರೊಳಕ್ಕುಳುಗಿದವ ಪರರ ಬಾಧಿಪ ಕೆಸರ ಬಿಡಿಸುವನೆ (ಲಕ್ಷ್ಮೀಶೋಭಾನೆ 32)

39. ಆನೆಯು ಮಾನದಲಿ ಅಡಗಿಸಿದವರುಂಟೆ " 34

40. ಜನನ ಮರಣಾದಿಗಳು ಸರ್ವರಿಗೆ ಸರಿ (ಗುಂಡಕ್ರಿಯೆ 5)

41. ದೇವ ಮಾನವರ ಮಾತಿನೊಳು ಶ್ರದ್ಧೆಯು ಮಾಡುವರು ಲೋಕದವರು (ಗುಂ·ಕ್ರಿ·7)

42. ಹೊನ್ನು ಹೆಣ್ಣು ಮಣ್ಣು ತೊರೆದು ಬಾಳುವನಾವ (ಗುಂ·ಕ್ರಿ·10)

43. ಕಾನನ ಮರದ ನೆಳಲು ಜನಪದದೊಳಗಣ ತಾಪವ ಕಳೆವುದೆ " 11

44. ತನ್ನ ನಾಲಗೆ ಕತ್ತರಿಸುವವ ಇನ್ನೇನ ನುಡಿವನೊ, ಕೊಡಲಿ ಮೊನೆ ಮುರಿದವ ಮನತರುಗಳ ಕಡಿವನೆ (ಗುಂಡಕ್ರಿಯೆ 14)

45. ಅರಸು ತಾನೆಂಬವಗೆ ನೆರೆಮನೆಯುಲಿಕ್ಕೆಂಬ ಕ್ಲೇಶ " 17

46. ನರರೊಳು ಪರನಿಂದೆ ಸಲ್ಲದು " 23

47. ಆ ದೇವ ಈ ದೇವನೆಂದ್ಯಾಕೆ ಕಲಹ " 30

48· ತಾ ಉಡಿಸಿ'ತಾಯಿಯಲ್ಲ (ನಾನು ಮೂಕನೆಂದಂತೆ) (ಗುಂಡಕ್ರಿಯೆ 31)

49· ಎಲ್ಲ ಬೀಜಕೆ ಸಲ್ಲದು ಸರ್ಗಿಕೆ " 37

50· ಹರಿಗೆರಗದ ನರ ವಾನರ (ವೈಕುಂಠ ವರ್ಣನೆ 1,38)

51· ಕಲ್ಲೆಂದು ಬಿಡುವರೆ ಮಾಣಿಕ್ಯ ರತ್ನ " 86

52· ಲೋಲಾಕ್ಷಿಯರ ನೋಳ್ಪ ಸುಖಕಿಂದ ಅವರ ಆಲಿಂಗನದ ಸುಖ ಮೇಲು (ವೈ·ವ·137)

53· ಅರಸಿನ ಮನೆ ಸಂಕೋಲೆ ಆತನ ಕಾಲ ಕಟ್ಟುವುದು (ವೈ·ವ· 3,38)

54· ತಾಯಿ ಮಾರಿ ತೊತ್ತ ಕೊಂಬುವರೆ (ವಾಕ್ಯ 4 ರಂತೆ) " 4,25)

55· ದೂತನ ಕೊಲ್ಲುವುದು ನೀತಿಯಲ್ಲ (ಹನುಮ ಸುವ್ವಾಲಿ 56)

56· ಹೋದ ನಿಧಿ ಕೈ ಸೇರಿತು· (ಮಧ್ವ ಸುವ್ವಾಲಿ 21)

57· ಕಣ್ಣು ಹೋದ ಹುಬ್ಬು ಬೇಡ (ಬಾಲಲೀಲೆ ಪು·32)

58· ಹೆಣ್ಣಿನಿಂದ ಹಲವು ಉಂಟು, ಹೆಣ್ಣಿನಿಂದ ಲಯವು ಉಂಟು " 108

59· ಎಲ್ಲರು ಸವಿಯುವ ಹಾಲು ಕರುವಿನ ಎಂಜಲು (ಭ್ರಮರಗೀತೆ, 10,5)

60· ಲೇಸಿನ ಮಾತ್ಯಲಿ ಆಸೆಯುಳ್ಳವ ಮೋಸ ಹೋಹನೆ " 10,10

61· ನಲ್ಲನಿಲ್ಲದ ಸತಿ ಚೆಲುವಿದ್ದು ಫಲವೇನು
ಬಲ್ಲವರಿಲ್ಲದ ಸಭೆಯು ಫಲವೇನು
ಸಲ್ಲದ ಫಲಗಳಿಗೆ ಸವಿಯಿದ್ದೂ ಫಲವೇನು " 13,8

62· ಶ್ರುತಿಯು ಬಿಟ್ಟ ಕಥಕನ ಬಾಳು ಗೋಳಲ್ಲವೆ
ವ್ರತವ ಬಿಟ್ಟ ಯತಿಗಳ ಬಾಳು ಗೋಳಲ್ಲವೆ
ಪಥವ ಬಿಟ್ಟ ಪಥಿಕನ ಬಾಳು ಗೋಳಲ್ಲವೆ " 14,11

63· ಜೀವದೊಡೆಯನಾಗಬಲ್ಲನೆ ಭಾವ " 22,13

64· ಸ್ವಾರ್ಥ ಉಳ್ಳವ ಕಾರ್ಯ ಸಾಧಿಸಿಕೊಂಡ ಮ್ಯಾಲೆ ಪ್ರತ್ಯುಪಕಾರ ಮಾಡೋದಿಲ್ಲ
(ಭಾ·ತಾ·ನಿ· 1,95)

65· ಒಬ್ಬ ಮಗ ಮಗನಲ್ಲ, ಒಂದು ಕಣ್ಣು ಕಣ್ಣಲ್ಲ " 2,46

66· ಭೀಮ ದೈತ್ಯರ ಹಲ್ಲು ಮುರಿದು ಕೈಲಿ ಕೊಡುವಂಥಾತ "

67· ಹಿರೇರು ತಪ್ಪಿದರೆ ವಚನದಲ್ಲಿ ಶಿಕ್ಷಿಸಬೇಕು, ಸರೀಕರು ಅನ್ಯಾಯ ಮಾಡಿದರೆ ವಿತ್ತಾಪಹಾರ ಮಾಡಬೇಕು, ಅಧಮ ಅನ್ಯಾಯ ಮಾಡಿದರೆ ದೇಹ ದಂಡನೆ ಮಾಡಬೇಕು
(ಭಾ·ತಾ·ನಿ·216)

68. ಕ್ಷಮೆ ಎಂಬ ಖಡ್ಗ ಹಿಡಕೊಂಡ ಮ್ಯಾಲೆ ವೈರಿಗಳು ಏನು ಮಾಡ್ಯಾರು, ಬರೇ ನೆಲದ ಮ್ಯಾಲೆ ಬೆಂಕಿ ಬಿದ್ದು ತನಗೆ ತಾನೇ ಆರಿಹೋಗೋದೀತಲ್ಲದೆ ಏನು ಆಗುವುದು? (ಭಾ.ತಾ.ನಿ.218)

69. ದೇಹ ಸಂಪಾದಿಸಿರಲಿಕ್ಕೆ ಕೀರ್ತಿ ಯಾತರಿಂದ ನಿಂದರತದೆಂದರೆ ವಿದ್ಯೆ, ಮಕ್ಕಳು ಬಹು ಪರಾಕ್ರಮದಿಂದ (ಭಾ.ತಾ.ನಿ.219)

70. ಅರಸರಲ್ಲಿ ಕ್ಷಮಾಗುಣ ಬಹಳ ಇರಬಾರದು, ಪಾಪಿಗಳ ಅನ್ಯಾಯವು ತಾಳಬಾರದು. ದಂಡನಿ ಇಲ್ಲದ ಭೂಪಾಲಕನ ಕೊಂಡು ಏನು ಮಾಡಬೇಕು (ಭಾ.ತಾ.ನಿ.232)

71. ಜ್ಞಾನೋಪದೇಶ ಸನ್ಮಾರ್ಗ ತೋರಿಸಿಕೊಟ್ಟವನೇ ತಾಯಿ ತಂದಿ ” 235

72. ಕ್ಷತ್ರಿಯರು ಬಾಹುಬಲದಿಂದ ಯಶ ಸಂಪಾದಿಸದಿದ್ದರೆ ದಿವ್ಯಗತಿ ಐದೋದಿಲ್ಲ ” 258

73. ಗಾರ್ದಪಕ್ಕೆ ದೊಣ್ಣೀ ಪೆಟ್ಟೀಲೆ ಹೊಡದರೆ ಮಾರ್ಗಕ್ಕೆ ಬರತದೆ (ಭಾ.ತಾ.ನಿ.3,4)

74. ಪಾಪಿಗಳ ಕೊಂಡದ್ದರಿಂದ ಧರ್ಮಕ್ಕೆ ಸಾಧನವಾಗತಾರೆ ” 5

75. ದೋಷ ಮಾಡಿ ಜ್ಞಾನದಿಂದ ದೋಷ ಪರಿಹರಿಸಲಿಕ್ಕೆ ವಶವಲ್ಲ ” 6

76. ದುಷ್ಟರ ಕೊಲ್ಲೋದೆ ನರಧರ್ಮ ” 13

77. ಸಕಲ ಲಾಭದೊಳಗೆ ಬದುಕೋಣವೇ ದೊಡ್ಡ ಲಾಭ ” 52

78. ಸಜ್ಜನರಿಗೆ ಹಿತವಾಗೊಂಥ ಪ್ರತಿಜ್ಞೆ ಮಾಡಬೇಕು, ಸತ್ಯವಾಡಬೇಕು, ಧರ್ಮಮಾಡಬೇಕು ” 68

79. ದೇಹ ನಾಶ ಬುದ್ಧಿಪೂರ್ವಕ ಮಾಡಿಕೊಂಡರೆ ಮಹಾಪಾಪ (ಭಾ.ತಾ.ನಿ.69)

80. ಆತ್ಮಸ್ತುತಿ ಗುರುಹಿರೇರ ನಿಂದಾ ಅನರ್ಥ ಸಾಧನ ”

81. ಅಧರ್ಮದಿಂದ ಪಾಪಿಗಳ ಕೊಂದರೆ ದೋಷವಿಲ್ಲ. ” 87

82. ಪಾಪಿಗಳು ಸತ್ತರೆ ಜ್ಞಾನಿಗಳು ದುಃಖಪಡಬಾರದು ” 89

83. ಅತ್ಯುತ್ಕಟ ಪಾಪ ಬಹಳ ದಿವಸ ಜಯಿಸೋದಿಲ್ಲ. ” 99

84. ಕಪಟದಿಂದಲೇ ಕಪಟಿಗಳನ್ನು ಕೊಲ್ಲಬೇಕು. ”

85. ಆಯುಷ್ಯ ನಿಶ್ಚಯಿಸಲಿಕ್ಕೆ ಶಕ್ಯವಲ್ಲ, ಧರ್ಮಕ್ಕೆ ತ್ವರಿತ ಇರಬೇಕು ” 133

86. ದೇವರ ಸ್ಮರಣ ಎಂಬೋದೆ ಬಹಳ ಸಂಪತ್ತು, ಇಲ್ಲದೇ ಇಹೋದು ವಿಪತ್ತು ” 150

87. ದೇವರ — ಗುರು ವಚನದಲ್ಲಿ ವಿಶ್ವಾಸವುಳ್ಳವನಾಗಿರಬೇಕು ” 156

## (6) ಆಕರ ಸಾಹಿತ್ಯ

### ದಾಸ ಸಾಹಿತ್ಯಿಕ ಗ್ರಂಥ


1. ಕರ್ನಾಟಕ ಭಕ್ತವಿಜಯ — ಬೇಲೂರು ಕೇಶವದಾಸ (1932)
2. ಹರಿದಾಸ ಸಾಹಿತ್ಯ — " (1946)
3. ಕರ್ನಾಟಕ ಹರಿದಾಸ ಸಾಹಿತ್ಯ — ರಾ.ಸ್ವಾ.ಪಂಚಮುಖಿ (1952)
4. ಕರ್ನಾಟಕದ ಹರಿದಾಸರು — ಎಚ್.ಕೆ. ವೇದವ್ಯಾಸಾಚಾರ (1965)
5. ಕವಿ ಕನಕದಾಸರು — ಕಟ್ಟಿ ಶೇಷಾಚಾರ್ಯ (1939)
6. ಪ್ರಸನ್ನ ವೆಂಕಟದಾಸರು — ಎ.ಬಿ. ಪಾಟೀಲ (1956)
7. ಜಗನ್ನಾಥದಾಸರು — ಕೆ.ಎಂ.ಕೃಷ್ಣರಾವ್ (1956)
8. ಪ್ರಸಾದಯೋಗ — ವ.ಅ.ದಿವಾಣಜಿ (1972)
9. ವಿಜಯದಾಸರು — ಕೆ.ಗೋಕುಲನಾಥ (1978)
10. ಪುರಂದರದಾಸರ ಸಾಹಿತ್ಯ (ಪೂಜಾತತ್ವ, ಆರ್ತಭಾವ, ಮಹಾತ್ಮ್ಯಜ್ಞಾನ, ಕೃಷ್ಣಲೀಲೆ, ಲೋಕನೀತಿ, ಸಂಕೀರ್ಣ ಸಂಪುಟಗಳು) — ಬೆಟಗೇರಿ, ಬೆಂಗೇರಿ (1963–6)
11. ದಾಸ ಸಾಹಿತ್ಯ ದ್ವಿತೀಯ ಘಟ್ಟದ ಸಾಧನೆ (ಕ.ವಿ.ವಿ.ಸಂಕಲನ), (1970)
12. ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ 8 (ಕೀರ್ತನಕಾರರು) — ಎಚ್.ಎಸ್.ವೆಂಕಟೇಶಮೂರ್ತಿ, (1975)
13. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ 4:2 (ಬೆಂ.ವಿ.ವಿ.)
14. ಹರಿದಾಸ ಸಾಹಿತ್ಯ ಸಮೀಕ್ಷೆ (ಮೈ.ವಿ.ವಿ.ಸಂಕಲನ) (1980)
15. ಹರಿದಾಸ ಹೃದಯ — ಜಿ. ವರದರಾಜರಾವ್ (1967)
16. Mystic Teachings of Dasas – N.B.Kalamdani, A.P.Karmarkar (1939)
17. History of Dwaita School of Thought (II) – B.N.K.Sharma (1961)
18. Vyasayogi Charita – (Introduction) – B.Venkobarao (1926)


### ಲೇಖನ


1. ದಾಸರ ಕಾಲದ ಸಾಮಾಜಿಕ ಜೀವನ — ಎಂ.ಗೋವಿಂದರಾವ (ಸುಬೋಧ, 24,5)
2. ದಾಸ ಸಾಹಿತ್ಯ ಕರ್ನಾಟಕದ ಜನತೆ — ಎಸ್.ಪ್ರಹ್ಲಾದರಾವ್ ( " 26,4)
3. ಕರ್ನಾಟಕ ಹರಿದಾಸ ಸಾಹಿತ್ಯದ ಕಾಣಿಕೆ — ಆರ್.ಕೃಷ್ಣಮೂರ್ತಿ ( " 32,6)

4. ದಾಸಕೂಟದ ಸಂಕ್ಷಿಪ್ತ ಇತಿಹಾಸ — ಎಚ್.ಜಿ.ಬೆಂಗೇರಿ (ಜಯಕರ್ನಾಟಕ, 4,11–12)

5. ದಾಸರ ಅಂಕಿತ (ಮುದ್ರಿಕೆ)ಗಳು — ಗುರುರಾವ ಬೆಂಗೇರಿ ( " 6,11)

6. ಕೀರ್ತನ ಪದ್ಧತಿ, ಹರಿದಾಸರು — ಬೇಲೂರ ಕೇಶವದಾಸ ( " 1,10)

7. ಮಾಧ್ವರು, ಕನ್ನಡ ಸಾಹಿತ್ಯ — ಮುಕ್ತಾಫಲ ( " 4,10)

8. ದಾಸ ಕೀರ್ತನೆಗಳ ಪ್ರಾಶಸ್ತ್ಯ — ಮುತ್ಯ ನಾಗೇಶರಾವ ( " 3,4)

9. ದಾಸಕೂಟ ಶಬ್ದದ ಜಾತಕ — ಬೇಲೂರ ಕೇಶವದಾಸ ( " 2,3)

10. ಅಚಲಾನಂದದಾಸರು — ಬೇಲೂರ ಕೇಶವದಾಸ ( " 2,11)

11. 16ನೆಯ ಶತಮಾನದ ವೈಕುಂಠದಾಸರು — ಬೇಲೂರ ಕೇಶವದಾಸ ( " [illegible],5)

12. ಕರ್ನಾಟಕ ಸಾಹಿತ್ಯ, ಸಂಗೀತ — ವೇ.ಕೃಷ್ಣಾಚಾರ್ಯ ( " 6,8)

13. ವೈಷ್ಣವದಾಸರ ಕೀರ್ತನೆಗಳು — ಮಾಸ್ತಿ ವೆಂಕಟೇಶ ಅಯ್ಯಂಗಾರ (ವಿಮರ್ಶೆ, 1)

14. ಹರಿದಾಸರು — ಕೆ.ಎಂ.ಕೃಷ್ಣರಾವ (ಹರಿದಾಸ ಭಾರತಿ, 7,3)

15. ಹರಿದಾಸ ಸಾಹಿತ್ಯ — ಎಂ.ರಾಮರಾವ್ (ಕನ್ನಡ ನುಡಿ, 1)

16. " " " ( " 26,12)

17. ದಾಸ ಸಾಹಿತ್ಯ ಕುರಿತು ಬಂದ ಕೃತಿಗಳು — ಕೆ.ಎಂ.ಕೃ." (ಕನ್ನಡ ನುಡಿ, 26,12)

18. 15ನೆಯ ಶತಮಾನದ ಕನ್ನಡ ಸಾಹಿತ್ಯ — ಸ.ಸ.ಮಾಳವಾಡ (ಪ್ರಬುದ್ಧ ಕರ್ನಾಟಕ,23,2)

19. ವಚನಕಾರರು, ಹರಿದಾಸರು — ಸು.ಮಂ.ಅರಗ (ಬಾಗಿನ)

20. ಉಗಾಭೋಗ, ವಚನಗಳು — ಎಂ.ಚಿದಾನಂದಮೂರ್ತಿ (ಸಂಶೋಧನ ತರಂಗ)

21. ದಾಸಕೂಟ ಎಷ್ಟು ಪ್ರಾಚೀನ — ಗುಂಡ್ಮಿ ಚಂದ್ರಶೇಖರ ಐತಾಳ (ಪ್ರ.ಕ.51,3)

22. ದಾಸ ಸಾಹಿತ್ಯದ ನಡೆನುಡಿಯ ವಿನ್ಯಾಸ — " ( " 52,3)

23. ಹರಿದಾಸ ಸಾಹಿತ್ಯದಲ್ಲಿ ಮಧುರಭಾವ — ಟಿ.ಎನ್.ನಾಗರತ್ನ ( " 49,1)

24. ಹರಿದಾಸರ ಕೀರ್ತನೆಗಳಲ್ಲಿ ಮಹಾಭಾರತ — ಪಿ.ಎನ್.ಲೀಲಾವತಿ ( " 52,2)

25. ಈ ಪರಿಯ ಸೊಬಗು, ದಾಸರು ಶರಣರು ದರ್ಶಿಸಿದ ದಿವ್ಯ ಸೌಂದರ್ಯ — ಜಿ.ಎಸ್.ಶಿವರುದ್ರಪ್ಪ (ಪರಿಶೀಲನ)

26. On the Karnataka Vaishnav Dasas - F.Kittel (Ind.Ant.2)

27. Haridasa Movement in Karnataka - N.B.Kalamdani (Ind.Hist.Qly. IV,1-2)

28. The Devotional Movement of Haridaskuta - B.N.K.Sharma (Madhvas Teachings)

<u>ವಾದಿರಾಜರ ಬಗೆಗಿನ ಗ್ರಂಥ</u>


1. ವೃತ್ತರತ್ನ ಸಂಗ್ರಹ — ರಾಘವಾಚಾರ್ಯ (1590)
2. ವಾದಿರಾಜ ಗುರು ಚರಿತಾಮೃತ — ರಾಮಚಂದ್ರಾಚಾರ್ಯ (1645)
3. ವಾದಿರಾಜ ಗುಣರತ್ನಮಾಲಾ — ಸುಬ್ಬರಾಚಾರ್ಯ (1900)
4. ಋಜುತ್ವ ಸಮರ್ಪಣ — ಕೋವೆತ್ತೂರ ಮಧ್ವರಾಯಾಚಾರ್ಯ (1880)
5. ಋಜುತ್ವ ಪ್ರಮಾಣ ಸಂಗ್ರಹ — ಎಳಂದೂರ ಸೇತುಮಾಧವಾಚಾರ (1884)
6. ವಿರೋಧಿ ಕಪೋಲ ಚಪೇಟಿಕಾ — ಜಮಖಂಡಿ ವಾದಿರಾಜಾಚಾರ್ಯ (1885)
7. ವಾದಿರಾಜ ಋಜುತ್ವ ಮಲ್ಲಿಕಾ — ಆನಂದತೀರ್ಥಾಚಾರ್ಯ (1886)
8. ಋಜುತ್ವ ಚಂದ್ರೋದಯ — ಲಕ್ಷ್ಮೀನಾರಾಯಣಾಚಾರ್ಯ ( " )
9. ಸಮಪೂಜಾದಿ ಕಲ್ಪಪಂಚಕ ಖಂಡನೆ — ಪದ್ಮನಾಭ ಉಪಾಧ್ಯಾಯ (1886)
10. " " — ಅತ್ತೂರ ವೆಂಕಟರಾಯಾಚಾರ್ಯ (1886)
11. " " — ದೂಷಣ — ನಾರಾಯಣಾಚಾರ್ಯ ( " )
12. ಶ್ರೀ ವಾದಿರಾಜ ಗುರುವರ ಚರಿತ್ರೆ — ಬಿ.ಶ್ರೀನಿವಾಸ ಭಟ್ಟ (1924)
13. ಋಜುತ್ವ ಮಂಡನ — ಶಿರೂರು ಲಕ್ಷ್ಮೀಂದ್ರತೀರ್ಥ (1953)
14. ಶ್ರೀ ವಾದಿರಾಜರು — ಹಂಡೆ ಶ್ರೀಪಾದದಾಸ (1954)
15. ಭಾವಿ ಸಮೀರ ಶ್ರೀ ಮದ್ವಾದಿರಾಜಗುರುಸಾರ್ವಭೌಮರು — ಅಷ್ಟೆ ವೇದವ್ಯಾಸಾಚಾರ್ಯ (1965)
16. ವಾದಿರಾಜ ಋಜುತ್ವ ಪ್ರಕಾಶಿಕಾ — ಗುರು ಗೋವಿಂದ ವಿಠಲದಾಸ (1966)
17. ಹರಿಭಕ್ತಿ ವಿಜಯ 1 — ಗುರು ಗೋವಿಂದ ವಿಠಲದಾಸ (1968)
18. ವಾದಿರಾಜರ ಋಜುತ್ವ ವಿಚಾರ (1969)
19. ಶ್ರೀ ವಾದಿರಾಜ ವಿಜಯ — ಎಚ್.ಎನ್. ಗುರುರಾಜಾಚಾರ್ಯ (1971)
20. ವಾದಿರಾಜ ಋಜುತ್ವ ಸಿದ್ಧಾಂತ — ಎಚ್.ಸುಬ್ಬರಾವ್ (1972)
21. ಸ್ವಾಪ್ನ ವೃಂದಾವನಾಖ್ಯಾನ ಕೈಪಿಡಿ — " (1980)
22. ಮಾಧ್ವ ವಾಙ್ಮಯ ತಪಸ್ವಿಗಳು — ಪಂಢರೀನಾಥಾಚಾರ್ಯ ಗಲಗಲಿ (1980)
23. ಭಾವಿ ಸಮೀರ ಶ್ರೀ ವಾದಿರಾಜರು — ಜಿ.ಜಿ. ಪುರಾಣಿಕ (1981)
24. ರಜತಪೀಠ — (ಸಂಗ್ರಹ) (1960)

25· ಶ್ರೀ ವಾದಿರಾಜ ಗುರುವರ ಕೀರ್ತನ ಮಂಜರಿ — (ಸೋದೆಮಠ) (1963)

26· ಶ್ರೀ ವಾದಿರಾಜ ಸ್ತೋತ್ರಮಂಜರಿ — ವಿ·ಪ್ರಭಂಜನ (1980)

27· ಶ್ರೀ ವಾದಿರಾಜರು — ಕೊರಟಿ ಶ್ರೀನಿವಾಸರಾವ್ (1983)

28· " — ಎಂ·ವಿ·ನಾಗರಾಜರಾವ್ (1983)

29· Thus Sang Vadiraja - U.V.K.Rao (1970)

30· Vadiraja - C.R.Rao (1978)

<u>ಲೇಖನ</u>

1· ತತ್ವವಾದ 10— 1970 (ಪರ್ಯಾಯ ಸಂಚಿಕೆ)

2· " 21 — 1980 (

3· ಲಕ್ಷಾಲಂಕಾರ 1980 (ಪರ್ಯಾಯ ಸಂಪುಟ)

4· ಹೂವಿನಕೆರೆ (ಸಚಿತ್ರ) — ಉ·ಲ·ಹ· ಆಚಾರ್ (ಉದಯವಾಣಿ, 30,3,75)·

5· ವಾದಿರಾಜರಿಗೊಲಿದ ಉಡುಪಿ ಕೃಷ್ಣ — " " 23,8,81)

6· The Date of Vadirajatirtha - B.N.K.Sharma (Annals of B.O.R. I.37)

7· Vadirajathrtha - B.N.K.Sharma (Poona Orientalist Jan.38)

<u>ವಾದಿರಾಜರ ಕನ್ನಡ ಕೃತಿಗಳ ಕೆಲವು ಪ್ರತಿ</u>

1· ಲಕ್ಷ್ಮೀಶೋಭಾನೆ — ಮದ್ರಾಸ ಮುದ್ರಣ (1895)

2· " — ದಾವಣಗೆರೆ ಭೀಮರಾಯರ ವ್ಯಾಖ್ಯಾನ ಸಹ (1980)

3· ಸ್ವಪ್ನಪದ — ಮದ್ರಾಸ ಮುದ್ರಣ (1895)

4· " — ಮಧ್ವಸಿದ್ಧಾಂತ ಗ್ರಂಥಾಲಯ (1912)

5· " — ಭೀಮರಾಯರ ವ್ಯಾಖ್ಯಾನ ಸಹ (1974)

6· ಹರಿಸರ್ವೋತ್ತಮ ಸಾರ — " ( " )

7· ಗುಂಡ ಕ್ರಿಯೆ — ಮಧ್ವಸಿದ್ಧಾಂತ ಗ್ರಂಥಾಲಯ (1928)

8· " — ಭೀಮರಾಯರ ವ್ಯಾಖ್ಯಾನ ಸಹ (1972)

9· ವೈಕುಂಠ ವರ್ಣನೆ — ಮಧ್ವಸಿದ್ಧಾಂತ ಗ್ರಂಥಾಲಯ (1927)

10· " — ಭೀಮರಾಯರ ವ್ಯಾಖ್ಯಾನ ಸಹ (1972)

11. ಶ್ರೀಕೃಷ್ಣ ಬಾಲಲೀಲೆ — ಮಧ್ವಸಿದ್ಧಾಂತ ಗ್ರಂಥಾಲಯ (1930)

12. " (ಪೂ) — ಲ.ಭಿ.ಮುರಗೋಡ, ಬೆಂಗಳೂರು (1985)

13. ಭ್ರಮರಗೀತ — ಮಧ್ವಸಿದ್ಧಾಂತ ಗ್ರಂಥಾಲಯ (1922)

14. ಅವತಾರತ್ರಯ ಸುವ್ವಾಲಿ — "ಪ್ರಬೋಧಿನಿ" ಪುಸ್ತಕ ಭಂಡಾರ, ಉಡುಪಿ

15. " (ಕೆಲ ಸ್ತೋತ್ರಗಳಲ್ಲಿ) — ಲ.ಭಿ.ಮುರಗೋಡ (1984)

16. ಗಜೇಂದ್ರ ಮೋಕ್ಷ — ಹೊಂಬಾಳೆ ಪ್ರಕಾಶನ (1971)

17. ಕೀಚಕವಧೆ — ಭೀಮರಾಯರ ವ್ಯಾಖ್ಯಾನ ಸಹ (1974)

18. ಹರಿಭಜನ ಕೀರ್ತನೆ (ತೆಲುಗು ಲಿಪಿ) — ಮುದಕವಿರ ಬಾಲಕೃಷ್ಣರಾವ್, ಮದ್ರಾಸ (1873)

19. ಪುರಂದರದಾದಿಗಳ ಪದ ( " ) " (1895)

20. ಸುಳಾದಿಗಳು ( " ) " (1898)

21. ದಾಸರ ಪದ ಸಂಗ್ರಹ (4) — ರಾಮತತ್ವ ಪ್ರಕಾಶನ, ಬೆಳಗಾವಿ (1894)

22. " " (1) " (1910)

23. ಶ್ರೀಪಾದರಾಯರು, ವ್ಯಾಸರಾಯರ ಕೃತಿಗಳು — ಸುಬೋಧ ರಾಮರಾವ (1930)

24. " " ಕೀರ್ತನೆ— ಸುಳಾದಿ — ಪಾವಂಜೆ (1924)

25. ದಾಸರ ಪದ ಸಂಗ್ರಹ 1 — ಪಾವಂಜೆ (1925)

26. " 2 — " (1929)

27. ದಾಸರ ಪದಗಳು — ವಾದಿರಾಜರ ಕೀರ್ತನೆ 1 — ಮಧ್ವಸಿದ್ಧಾಂತ ಗ್ರಂಥಾಲಯ (1920)

28. ಶ್ರೀವಾದಿರಾಜರ ಕೀರ್ತನೆಗಳು 1 — ಪಾವಂಜೆ (1925)

29. ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ 4 — ಸುಬೋಧ (1929)

30. ಸೃಷ್ಟಿ ಪ್ರಕರಣ ಸುಳಾದಿಗಳು — ಗೊರಬಾಳ (1948)

31. ತೀರ್ಥಕ್ಷೇತ್ರ ಮಹಿಮಾ ಪದ ಸುಳಾದಿಗಳು — ಗೊರಬಾಳ (1948)

32. ಶ್ರೀಪಾದರಾಜಾದಿ ದಾಸವರ್ಯರ ಸ್ತೋತ್ರ ಪದ — " (1958)

33. ಮಾಧ್ವ ಭಜನ ಮಂಜರಿ — ಕೌಜಲಗಿ ಬಂಡಾಚಾರ್ಯ (1973)

34. ತುಳಸೀ ಸಂಕೀರ್ತನ — ಮಧ್ವಸಿದ್ಧಾಂತ ಗ್ರಂಥಾಲಯ (1966)

35. ಗುರು ವಾದಿರಾಜರ ಕೀರ್ತನೆಗಳು — ಅಪ್ಪಿಂಬಳ ಶನಕರನಾರಾಯಣ (1970)

36. " " " — ಸಾರಳಮಠ ಅನಂತ ಉಪಾಧ್ಯಾಯ (1971)

37. ವಾದಿರಾಜರ ಹಾಡುಗಳು — ಕಾವ್ಯಪ್ರೇಮಿ (1977)

38. ಶ್ರೀ ವಾದಿರಾಜರ ಕೀರ್ತನೆಗಳು — ಎಂ. ರಾಜಗೋಪಾಲಾಚಾರ್ಯ (1979)

39. ವಾದಿರಾಜರ ಕನ್ನಡ ಕೃತಿಗಳು — ವ್ಯಾ. ವಿ. ವಿ. (1980)

40. ಕನ್ನಡ ಭಾರತ ತಾತ್ಪರ್ಯ ನಿರ್ಣಯ — ರಾಮತತ್ತ್ವ ಪ್ರಕಾಶನ (1894)

41. " " " — ತ್ರೈಲೋಕ್ಯಾಚಾರ್ಯ ಸೇವಕ ವೃಂದ (80—3)

— — —

## ಸಂಕೇತಗಳು

| | | |
|---|---|---|
| ಪು. ನಾ. ಚೂ. | — | ಪುರಾಣ ನಾಮ ಚೂಡಾಮಣಿ |
| ಕ. ಹ. ಸಾ. | — | ಕರ್ನಾಟಕ ಹರಿದಾಸ ಸಾಹಿತ್ಯ (ಪಂಚಮುಖಿ) |
| ಕ. ಹ. | — | ಕರ್ನಾಟಕದ ಹರಿದಾಸರು (ವೇದವ್ಯಾಸಾಚಾರ್ಯ) |
| ವೃ. ರ. ಸಂ. | — | ವೃತ್ತ ರತ್ನ ಸಂಗ್ರಹ (ರಾಘವಾಚಾರ್ಯ) |
| ವಾ. ಗು. ಚ. | — | ವಾದಿರಾಜ ಗುರುಚರಿತಾಮೃತ (ರಾಮಚಂದ್ರಾಚಾರ್ಯ) |
| ವಾ. ಗು. ರ. ಮಾ. | — | ವಾದಿರಾಜ ಗುಣರತ್ನಮಾಲಾ (ಪುಟ್ಟೂರಾಚಾರ್ಯ) |
| ಯು. ಮ. | — | ಯುಕ್ತಿಮಲ್ಲಿಕಾ (ವಾದಿರಾಜರು) |
| ರು. ವಿ. | — | ರುಕ್ಮಿಣೀಶ ವಿಜಯ ( " ) |
| ತೀ. ಪ್ರ. | — | ತೀರ್ಥಪ್ರಬಂಧ ( " ) |
| ಸ್ವಾ. ವೃ. ಆ. | — | ಸ್ವಾಪ್ನವೃಂದಾವನಾಖ್ಯಾನ ( " ) |
| ಶೋಭಾನೆ | — | ಲಕ್ಷ್ಮೀಶೋಭಾನೆ ( " ) |
| ಸ್ವ. ಪ. | — | ಸ್ವಪ್ನ ಪದ ( " ) |
| ಹ. ಸ. ಸಾ. | — | ಹರಿಸರ್ವೋತ್ತಮ ಸಾರ |
| ವೈ. ವ. | — | ವೈಕುಂಠ ವರ್ಣನೆ |
| ಮ. ಭಾ. ತಾ. ನಿ. | — | ಮಹಾಭಾರತ ತಾತ್ಪರ್ಯ ನಿರ್ಣಯ |
| H.D.S.T. | — | History of Dvaita School of Thought |

(ಮುಖ್ಯವಾದವುಗಳನ್ನು ಮಾತ್ರ ಇಲ್ಲಿ ಕಾಣಿಸಲಾಗಿದೆ).

• • •

study table No.5 helps us in understanding the inter-relation of these two factors.

TABLE No.5

The relation between age at marriage, age at first & last delivery and the onset of Cancer in female respondents.

| Sl.No. | Age of the respondents ( years) | Age at marriage F (%) | Age at 1st Del. F(%) | Age at last Del. F(%) |
|---|---|---|---|---|